# ಕುವೆಂಪು ಸಾಹಿತ್ಯ ಸಮೀಕ್ಷೆ

ಅಮೆರಿಕದ 'ಕನ್ನಡ ಸಾಹಿತ್ಯರಂಗ'ದಿಂದ ಅರ್ಪಿತ

ಸಂಪಾದಕ: ಆಹಿತಾನಲ



ಕುವೆಂಪು ಜನ್ಮಶತಾಬ್ದಿ ಸಂದರ್ಭದಲ್ಲಿ

ಅಮೆರಿಕದ 'ಕನ್ನಡ ಸಾಹಿತ್ಯ ರಂಗ'ದಿಂದ ಅರ್ಪಿತ

# ಕುವೆಂಪು ಸಾಹಿತ್ಯ ಸಮೀಕ್ಷೆ


ಪ್ರಧಾನ ಸಂಪಾದಕ

ಆಹಿತಾನಲ

ಸಹ ಸಂಪಾದಕರು

ಮೈ.ಶ್ರೀ. ನಟರಾಜ

ನಳಿನಿ ಮೈಯ

ಎಚ್.ಕೆ. ಚಂದ್ರಶೇಖರ್

ಎಚ್.ವೈ. ರಾಜಗೋಪಾಲ್



ವಸಂತ ಪ್ರಕಾಶನ

ನಂ. 10, ತುಳಸಿ ವನಂ, ಬೆಂಗಳೂರು-560 053

**Kuvempu Sahitya Sameekshe :** Edited by Naga Aithal (Ahithanala) and published by Vasantha Prakashana, No. 10, Tulasivanam, Bangalore-560 053.

Pages : 353

Price : **Rs. 220/-**

First Edition : May 2004



ರಕ್ಷಾಪುಟ ವಿನ್ಯಾಸ : ಮೋನಪ್ಪ

ಪ್ರಕಾಶಕರು :
ವಸಂತ ಪ್ರಕಾಶನ
ನಂ. 10, ತುಳಸಿವನಂ, ಬೆಂಗಳೂರು-560 053

ಅಕ್ಷರ ವಿನ್ಯಾಸ :
ಲಕ್ಷ್ಮೀ ಗ್ರಾಫಿಕ್ಸ್, ಬೆಂಗಳೂರು-50.
✆ : 26756696

ಮುದ್ರಕರು :
ನೇತ್ರಾ ಪ್ರಿಂಟರ್ಸ್
6ನೇ ಮುಖ್ಯರಸ್ತೆ, ಚಾಮರಾಜಪೇಟೆ, ಬೆಂಗಳೂರು-18

# ಅರ್ಪಣೆ

## ಕಾವ್ಯರ್ಷಿಗೆ ವಿದೇಶಿ ಕನ್ನಡಿಗರ ನಮನ

ಹುಟ್ಟಿದ್ದು ಮಲೆನಾಡ ಕೊಂಪೆಯೊಳಗಂತೆ
ಬೆಳೆದದ್ದು ಮಹಿಷೂರು ಪೇಟೆಯಲಿ ಸಂತೆ
ಹೆಸರಿಗೆ 'ಪುಟ್ಟಪ್ಪ' ನಿಲುವು ತ್ರಿವಿಕ್ರಮನಂತೆ
ಗಗನವನೆ ಮುಟ್ಟಲು ಕೈಯ ಚಾಚಿದಿರಂತೆ !

ಸತ್ತಂತಿರುವರನು ಬಡಿಬಡಿದು ಎಚ್ಚರಿಸಿ
ಹೊಟ್ಟೆಯ ಕಿಚ್ಚಿಗೆ ಅತ್ತು ಕಣ್ಣೀರ್ ಸುರಿಸಿ
ಕರುನಾಡ ಶಿವನೆದೆಯ ಹೊಕ್ಕು ಹೂಂಕರಿಸಿ
ಕನ್ನಡದ ಡಿಂಡಿಮವ ಬಾರಿಸಿದರಂತೆ

ಕಾವ್ಯರ್ಷಿ ಕುವೆಂಪು ನಿಮ್ಮ ಹೆಸರೇ ಇಂಪು
ಕಾನನದ ಕವಿಯಾಗಿ ಪಸರಿಸಿದ ಕಂಪು
ಜ್ಞಾನಪೀಠವನೇರಿ ಮನುಜಮತವನು ಸಾರಿ
ಹಳೆಯ ರಾಮನ ಕತೆಯ ಹೊಸತು ಮಾಡಿದಿರಿ

'ಎಲ್ಲಾದರು, ಎಂತಾದರು ಇರು' ಎಂದಿರಿ ನೀವು
ಹಾರಾಡುತ ಹೊರಬಂದೆವು ಕಡಲೀಚೆಗೆ ನಾವು
ಎಂತಿದ್ದರು ಉಂಡಿದ್ದರು ಕೊನೆಯಿಲ್ಲದ ನೋವು
ನಿಂತಿಲ್ಲ ನಮ್ಮೆದೆಯೊಳು ನುಡಿತುಡಿತದ ಕಾವು

ನಾಡಗಡಿ ಬಿಡದೆ ನೀವ್ ವಿಶ್ವಮಾನವರಾಗಿ
ಚೇತನಕೆ ಬಿಡುಗಡೆಯ ಸಾರಿಬಿಟ್ಟಿರಿ ಕೂಗಿ
ನಾವು ಅನಿಕೇತನರು ನಿಮ್ಮಾಣತಿಗೆ ತಲೆಬಾಗಿ
ಬಾಳುವೆವು ಎಂದೆಂದು ಕನ್ನಡವೆ ಆಗಿ!

- ಮೈ.ಶ್ರೀ. ನಟರಾಜ

# ಅನುಕ್ರಮಣಿಕೆ

# ಪ್ರಸ್ತಾವನೆ

ಕಲೋಪಾಸನೆಯೇ ಶಿವೋಪಾಸನೆ - ಎಂದು ನಂಬಿದವರು ಶ್ರೀ ಕುವೆಂಪು. ಶಿಲ್ಪಿಯೊಬ್ಬನ ಕಲೆಯು ಅವನು ನಿರ್ಮಿಸಿದ ಶಿಲ್ಪದಲ್ಲಿ ವ್ಯಕ್ತವಾಗುವುದು. ಜಡವೆಂದು ತಿಳಿದಿದ್ದ ಒಂದು ಬಂಡೆಯನ್ನು ಕೊರೆದು ಅದರಲ್ಲಿ ಚೈತನ್ಯ ಮೂಡಿಸುವ ಕಲಾಶಕ್ತಿ ಅವನದು. ಸಾಹಿತಿ ತನ್ನ ಲೇಖನಿಯಿಂದ ಕೆತ್ತಿ ನಿರ್ಮಿಸುವ ಕಾವ್ಯವೂ ಒಂದು ವಿಶಿಷ್ಟ ಶಿಲ್ಪಕಲೆ. ಪರಿಣಾಮವಾಗಿ ಮೂಡಿ ಬರುವುದೇ 'ಸಾಹಿತ್ಯ ದೇಗುಲ'! ಆ ಗುಡಿಯಲ್ಲಿ ಅವನು ಹರಡಿದ 'ಕಲೆಯ ಬಲೆ'ಯನ್ನು ನೋಡಲು, ಅದು ಪಸರಿಸುವ ಚೈತನ್ಯವನ್ನು ಅನುಭವಿಸಲು ನಮ್ಮ ದೃಷ್ಟಿ ಸೂಕ್ಷ್ಮವಾಗಿರಬೇಕು; ಮನಸ್ಸು ಪಕ್ವವಾಗಿರಬೇಕು. ನಾವು 'ಬಾಗಿಲೊಳಿ ಕೈಮುಗಿದು' ಆ ಗುಡಿಯನ್ನು ಪ್ರವೇಶ ಮಾಡಬೇಕು. ಈ ನಮ್ರತೆ ಸಾಹಿತ್ಯ ಕೃತಿಯ ಸೌಂದರ್ಯವನ್ನು ಅನುಭವಿಸಲು ನಮ್ಮನ್ನು ಅಣಿಮಾಡುತ್ತದೆ. ಆಗಲೇ ನಮ್ಮ ಸಾಹಿತ್ಯೋಪಾಸನೆ ನಿಶ್ಚಲವಾಗಿ ಸಾಗಲು ಅನುಕೂಲವಾಗುವುದು. ಕನ್ನಡ ಸಾರಸ್ವತ ಲೋಕದಲ್ಲಿ ಅಂಥ 'ಸಾಹಿತ್ಯ ದೇಗುಲ' ನಿರ್ಮಿಸಿದವರಲ್ಲೊಬ್ಬರಾದ ದಿಗ್ಗಜ, ಕುವೆಂಪುರವರಿಗೆ ಮೊದಲಿಗೆ ನಮ್ಮ ನಮ್ರ ನಮನ ಸಲ್ಲಿಸಿ ನನ್ನ ಮಾತುಗಳನ್ನು ಮುಂದುವರಿಸುತ್ತಿದ್ದೇನೆ.

ಕಳೆದ ಶತಮಾನದ ಶ್ರೇಷ್ಠ ಸಾಹಿತಿಗಳಲ್ಲಿ ಕುವೆಂಪುರವರ ಸ್ಥಾನ ಮಹತ್ತರವಾದುದು. ಅವರ ಸಾಹಿತ್ಯಸೃಷ್ಟಿ ಕನ್ನಡ ಸಾರಸ್ವತ ಲೋಕದ ರಸತೃಷೆಯನ್ನು ತಣಿಸಿದೆ; ಕನ್ನಡ ಸಾಹಿತ್ಯಕ್ಕೆ ಒಂದು ಅಪೂರ್ವ ಕಳೆ ಕೊಟ್ಟಿದೆ. ಪ್ರಸಿದ್ಧ ಪಾಶ್ಚಾತ್ಯ ಸಾಹಿತಿಗಳಾದ ಹೋಮರ್, ಮಿಲ್ಟನ್, ವರ್ಡ್ಸ್‌ವರ್ತ್, ಷೆಲ್ಲಿ, ಕೀಟ್ಸ್ ಮುಂತಾದವರು ಗಳಿಸಿದ ಸ್ಥಾನಕ್ಕೆ ಏರಿ ಕುವೆಂಪುರವರು ಕನ್ನಡಿಗರ ಎದೆಯುಬ್ಬುವಂತೆ ಮಾಡಿದ್ದಾರೆ. ನವೋದಯ ಸಾಹಿತ್ಯಕ್ಕೆ ರೂಪುಕೊಟ್ಟ ಶ್ರೇಷ್ಠ ಶಿಲ್ಪಿಗಳಲ್ಲಿ ಕುವೆಂಪುರವರ ಕೈವಾಡ ಅದ್ಭುತವಾದುದು. ಬಿಎಂಶ್ರೀ, ಟಿ.ಎಸ್. ವೆಂಕಣ್ಣಯ್ಯ, ಎ.ಆರ್. ಕೃಷ್ಣಶಾಸ್ತ್ರಿ ಮೊದಲಾದ ಹಿರಿಯ ಅಧ್ಯಾಪಕರಿಂದ ಶಿಕ್ಷಣ ಪಡೆದ ಅವರು ತಮ್ಮ ಪ್ರತಿಭೆ ಸಾಹಿತ್ಯದ ಮೂಲಕ ಮೈಪಡೆದಿದೆ. ಬೇಂದ್ರೆಯವರು ಅವರನ್ನು 'ಜಗದ ಕವಿ; ಯುಗದ ಕವಿ' ಎಂದು ಕರೆದುದು ಸುಮ್ಮನೆಯೆ ?

ನನಗೆ ಅವರ ಕೃತಿಯಲ್ಲಿ ಎದ್ದು ಕಂಡುದು ಮುಖ್ಯವಾಗಿ ಎರಡು ವಿಷಯಗಳು. ಒಂದು, ಅವರ ಪ್ರಕೃತಿ ಉಪಾಸನೆ; ತನ್ಮೂಲಕ ಶಿವೋಪಾಸನೆ. ಇನ್ನೊಂದು ಜನಸಾಮಾನ್ಯರ ಬದುಕಿನ ಬಗ್ಗೆ ಅವರು ತೋರಿದ ಆಸಕ್ತಿ, ಕಾಳಜಿ. ಇವೆರಡೂ ಅಂಶಗಳು ಅವರ ಎಲ್ಲ ಕೃತಿಗಳಲ್ಲೂ ಸಹಜವಾಗಿ ಮೂಡಿ ಬಂದಿವೆ.

ಪುಟ್ಟಪ್ಪನವರನ್ನು 'ನಿಸರ್ಗದ ಕವಿ' ಎಂದೇ ಕರೆಯುತ್ತಾರೆ. ಅವರ ಕೃತಿಯಲ್ಲೆಲ್ಲ ನಿಸರ್ಗದ ವರ್ಣನೆಗೇ ಮಹತ್ತರ ಪಾತ್ರ. ನಿಸರ್ಗದ ಮಡಿಲಲ್ಲಿ ಹುಟ್ಟಿ-ಬೆಳೆದ ಅವರಿಗೆ ಪ್ರಕೃತಿ ಒಡ್ಡಿದ ಅನುಭವಗಳು ಮನಸ್ಸಿನಲ್ಲಿ ಸೆರೆಯಾಗಿ ಕುಳಿತು ಅವರ ರಸಸಿದ್ಧಿಗೆ ಅನುಕೂಲ ಮಾಡಿಕೊಟ್ಟಿತು. ಮಲೆನಾಡ ಪರ್ವತಶ್ರೇಣಿ, ಸುತ್ತಲಿನ ನಿಸರ್ಗದಲ್ಲಿ ಚೈತನ್ಯ ಕಂಡವರು ಕುವೆಂಪು. ಆ ಚೈತನ್ಯಮಯ ಸೌಂದರ್ಯವನ್ನನುಭವಿಸುವ ಹಂತದಲ್ಲೆ ಜಡ-ಚೈತನ್ಯಗಳ ನಿಕಟ ಸಂಬಂಧವನ್ನೂ ಅರಿತರು. ಇವನ್ನೆಲ್ಲ ಅನುಭವಿಸಲು ಬೇಕಾದ ಬೇರೆಯೇ ಒಂದು ಒಳನೋಟ ಅವರಲ್ಲಿತ್ತು. ಅವರೊಂದು ಕಡೆ, 'ಮನಸ್ಸಿಗೆ ಜೀವನದ ಅನುಭವಗಳನ್ನು ಆಯ್ದುಕೊಳ್ಳುವ ಶಕ್ತಿಯಿದೆ' ಎಂದು ಹೇಳಿದ್ದಾರೆ. ಅಂತಹ ಸಂಪತ್ತು ತುಂಬಿದ ಅನುಭವಗಳನ್ನು ಅವರ ಮನಸ್ಸು ಆಯ್ದುಕೊಂಡು, ಅವುಗಳೇ ಅವರ ಲೇಖನಿಯಿಂದ ಸಾಹಿತ್ಯಧಾರೆಯಾಗಿ ಹರಿದು ಬಂದಿದೆ. 'ಮಲೆನಾಡಿನ ಕವಿಶೈಲ, ನವಿಲುಕಲ್ಲಿನ ನೆತ್ತಿಯ ಚೇತೋಹಾರಿಯಾದ ವಾತಾವರಣ'ದಲ್ಲಿ ರಸಋಷಿಗಳಾದವರು. ಅವರು. ಮನುಷ್ಯ ನಿರ್ಮಿತ ದೇವಾಲಯಗಳ ಅಗತ್ಯ ಅವರಿಗಿಲ್ಲ! ಕಾರಣ, ನಿಸರ್ಗದ ಭವ್ಯಸುಂದರ ದೃಶ್ಯಗಳೇ ಅವರ ಕಲ್ಪನೆಯಲ್ಲಿ ಸೆರೆಯಾಗಿರುವುದರಿಂದ, ಬಯಸಿದಾಗಲೆಲ್ಲ ದೈವದ ದರ್ಶನ ಪಡೆಯುವ ಸುಯೋಗ ಅವರದು! 'ವೈಕುಂಠವಿಹುದೆಲ್ಲಿ ಈ ದಿವ್ಯ, ಭವ್ಯ ಸುಂದರ ದೃಶ್ಯದಲ್ಲಿರದೆ?' ('ಪ್ರಕೃತಿ ಉಪಾಸನೆ') ಎಂದು ಕೇಳುತ್ತಾರೆ ಅವರು, ಆ ನಿಸರ್ಗದ ಸೌಂದರ್ಯದ ಮಧ್ಯೆ ನಿಂತು.

ಇಲ್ಲಿ ನಾನು ಕುವೆಂಪು 'ಶ್ರೀ ರಾಮಾಯಣ ದರ್ಶನಂ'ದಲ್ಲಿ ಉಲ್ಲೇಖಿಸಿದ ಸಾಲುಗಳನ್ನು ನೆನೆಯುತ್ತಿದ್ದೇನೆ. ಪಂಚವಟಿಯಲ್ಲಿ ಸೂರ್ಯೋದಯವಾದಾಗ ನಡೆದ ವೈಭವವನ್ನು ವರ್ಣಿಸುತ್ತ

ರಾಮನ ಕಿರೀಟದಾ
ರನ್ನವಣಿಯೋಲೆ ರಮ್ಯಂ, ಪಂಚವಟಿಯೊಳ್
ದಿನೇಶೋದಯದ ಶಾದ್ವಲದ ಪಸುರ್'ಗರುಕೆಯೊಳ್
ತೃಣಸುಂದರಿಯ ಮೂಗುತಿಯ ಮುತ್ತುಪನಿಯಂತೆ
ಮಿರುಮಿರುಗಿ ಮೆರೆವ ಹಿಮಬಿಂದುವುಂ......

ಎನ್ನುವಲ್ಲಿ ಕುವೆಂಪು ಗರಿಕೆ ಹುಲ್ಲಿನ ಮೇಲೆ ಹೊಳೆಯುತ್ತಿರುವ ಹಿಮಮಣಿಗೂ, ಶ್ರೀರಾಮನ ಕಿರೀಟದಲ್ಲಿ ಹೊಳೆಯುವ ರತ್ನದ ಮಣಿಗೂ ಸಾದೃಶ್ಯ ಕಂಡಿದ್ದಾರೆ. ಇದಕ್ಕೆ ಮೂಲಕಾರಣ ಸೂರ್ಯೋದಯ. ನಿಸರ್ಗ ಒಡ್ಡಿದ ಈ ಚೈತನ್ಯಮಯ ಸೌಂದರ್ಯದಲ್ಲಿ ಸುಂದರಾಂಗನೆಯೊಬ್ಬಳ ಮೂಗುತಿಯ ಹರಳು ಬೀರುವ ಶೋಭೆಯನ್ನು ಗುರುತಿಸಿ, ಆ ಶೋಭೆಯನ್ನು ಇನ್ನೂ ಒಂದು ಹಂತ ಮೇಲಕ್ಕೆ ಕೊಂಡೊಯ್ದು, ಶ್ರೀರಾಮನ ಕಿರೀಟದಲ್ಲಿ ಹೊಳೆಯುತ್ತಿರುವ ರತ್ನದ ಶೋಭೆಗೆ ಹೋಲಿಸಿದಾಗ 'ಸೊಬಗಿನಲಿ ಶಿವನಿಹನು; ಶಿವನೆ

ಸೊಬಗಾಗಿಹನು' ಎಂದು ಹೇಳಿದ ಅವರ ಮಾತಿಗೆ ಒಂದು ವಿಶೇಷ ಅರ್ಥ ದೊರಕುವುದಲ್ಲವೆ? 'ಸುಗ್ಗಿಯ ಬನದಲಿ ಹಸಿರಿನ ಮೇಲೆ..... ಮಂಜಿನ ಮಣಿಗಳ ಮಾಗಿಯ ಲೀಲೆ', 'ಕುಂಕುಮ ಧೂಳಿಯ ದಿಕ್ತಟವೇದಿಯೊಳೋಕುಳಿಯಲಿ ಮಿಂದು', ಹೊನ್ನಿನ ಹೊಳೆ ಹರಿಸಿದ ರವಿಯ 'ರಸನೈವೇದ್ಯ', ಸುಂದರಾಂಗನೆಯೊಬ್ಬಳ ಸೌಂದರ್ಯ – ಇವೆಲ್ಲದರೊಳಗಿನ ನಿಕಟ ಸಂಬಂಧವನ್ನು ಕಾಣುವ ಕುವೆಂಪುರವರ ಆಧ್ಯಾತ್ಮಿಕತೆ ಅವರ ರಸಪ್ರಜ್ಞೆಯ ಫಲ. ನಿಸರ್ಗವನ್ನು ಭೌತಿಕ ಸ್ತರದಿಂದ ದೈವಿಕ ಸ್ತರಕ್ಕೆ ಏರಿಸಿದ ಕವಿವರ್ಯ ಅವರು.

ಕವನ, ಮಹಾಕಾವ್ಯಗಳಲ್ಲದೆ ನಾಟಕ, ಸಣ್ಣ ಕಥೆ, ಜೀವನ ಚರಿತ್ರೆ, ಆತ್ಮವೃತ್ತ ಪ್ರಬಂಧ, ವಿಮರ್ಶೆ, ಕಾವ್ಯ ಮೀಮಾಂಸೆ, ಬಾಲ ಸಾಹಿತ್ಯ, ವಿಚಾರ ಸಾಹಿತ್ಯ – ಹೀಗೆ ಸಾಹಿತ್ಯದ ಎಲ್ಲ ಕವಲುಗಳಲ್ಲೂ ಕಂಪು ಬೀರಿದ್ದಾರೆ, ಕುವೆಂಪು. 'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಗಳಂತಹ ಕಾದಂಬರಿಗಳಲ್ಲೂ, ಅವರ ಹಲವು ಕಥನ-ಕವನಗಳಲ್ಲೂ, ಹುಟ್ಟಿ ಬೆಳೆದ ಮಲೆನಾಡಿನ ನಡೆ-ನುಡಿ, ಸೊಗಸು-ವೈಭವಗಳನ್ನು ಜೀವಂತಗೊಳಿಸಿದ್ದಾರೆ. ಅಲ್ಲಿ ಹಳೆಪೈಕದ ತಿಮ್ಮ, ಡೊಳ್ಳುಹೊಟ್ಟೆ ಬಾಡುಗಳ್ಳ ಸೋಮ, ಗುತ್ತಿ ಚೆನ್ನಿ, ಪೀಂಚಲು, ಅಣ್ಣಯ್ಯ ಗೌಡ, ಕರಿಸಿದ್ದ, ಕಥೆ ಹೇಳುವ ಮಂಜಣ್ಣ, ಬೇಟೆಗಾರ ಪುಟ್ಟಣ್ಣ, ನಾಗಿ, ತಿಮ್ಮಿ – ಇವರೇ ಮುಂತಾದ ಶ್ರೀಸಾಮಾನ್ಯರ ದರ್ಶನವಾಗುತ್ತದೆ. ಕೂಲಿ ಮಾಡುವವರನ್ನು, ನಿಷ್ಠೆಯಿಂದ ದುಡಿದು ದೇಶದ ಸಂಪತ್ತಿಗೆ ಕಾರಣರಾದವರನ್ನು ಅವರು 'ಶ್ರೀಸಾಮಾನ್ಯರು' ಎಂದು ಕರೆದರು. ರೈತರನ್ನು 'ನೇಗಿಲ ಯೋಗಿ'ಯಾಗಿ ಕಂಡರು. ಊರ ತೋಟಿಗೆ ಶಿವದರ್ಶನ ಮಾಡಿಸಿದರು. ನಿಸರ್ಗದೊಡನೆ ಸಂಪರ್ಕ ಬೆಳೆಸಿದಂತೆಯೇ, ಜನಸಾಮಾನ್ಯರೊಡನೆಯೂ ಸಂಪರ್ಕ ಬೆಳೆಸಿದರು. ಅಂಥವರ ಜೀವನದಲ್ಲಿ, ಅವರ ಮುಗ್ಧತೆಯಲ್ಲಿ, ಅವರ ಪ್ರಾಮಾಣಿಕತೆಯಲ್ಲಿ ವಿಶಿಷ್ಟ ಹಿತ ಅನುಭವಿಸಿದವರು ಕುವೆಂಪು. ತಮ್ಮ ಬದುಕನ್ನು ಕಡೆಗಣಿಸದ ಅವರು ಇನ್ನೊಬ್ಬರ ಪ್ರಾಮಾಣಿಕ ಬದುಕನ್ನು ತೆರೆದ ಹೃದಯ, ತೆರೆದ ಕಣ್ಣಿಂದ ವೀಕ್ಷಿಸಿದವರು.

* * * *

ಕ್ಷಣ-ಕ್ಷಣಕ್ಕೂ ಬದಲಾಗುತ್ತಿರುವ ಅಮೆರಿಕದ ಸಂಸ್ಕೃತಿಯ ಮಧ್ಯೆ ಬದುಕು ಸಾಗಿಸಿಕೊಂಡು ಬಂದರೂ, 'ಬಿಟ್ಟು' ಬಂದ ಸಂಸ್ಕೃತಿ, ಭಾಷೆ, ನಡೆ-ನುಡಿ, ಎಲ್ಲವೂ ನಮ್ಮ ಮನಸ್ಸಿನಿಂದ ಬೇರಾಗದೆ, ಬದಲಾಗದೆ ಉಳಿದುಬಂದಿದೆ. ಬಂದು ಮೂರು ದಶಕಗಳ ಮೇಲಾಗಿದ್ದರೂ ನಮ್ಮ ಕನ್ನಡತನವನ್ನು ನಾವು ಉಳಿಸಿಕೊಂಡೇ ಬಂದಿರುತ್ತೇವೆ. ತವರು ಬಿಟ್ಟುಬಂದುದು ನಮಗೆ ವೇದನೆ ಕೊಡುವುದರ ಜೊತೆಗೇ ಒಂದು ವಿಶಿಷ್ಟ ಹಿತ ಭಾವನೆಯನ್ನೂ ಮೂಡಿಸುತ್ತಿದೆ. ಹುಟ್ಟೂರಿನಿಂದ ದೂರ ಸರಿದು ಬಂದೆವೆಂಬ ವೇದನೆಗಿಂತ ಅಲ್ಲಿನ ಸಂಸ್ಕೃತಿಯನ್ನು ಹೊತ್ತು ತಂದಿರುವೆವೆಂಬ ಭಾವನೆಯೇ ಇದಕ್ಕೆ ಕಾರಣವಿರಬೇಕು.

'ಎಲ್ಲಾದರು ಇರು; ಎಂತಾದರು ಇರು; ಎಂದೆಂದಿಗು ನೀ ಕನ್ನಡವಾಗಿರು' ಎಂಬ ಕುವೆಂಪು ಕವನವನ್ನು ಎಲ್ಲ ಕಡೆಯಲ್ಲೂ ಕೇಳುತ್ತಿದ್ದೇವೆ. ಈ ಕವನದ ಶೀರ್ಷಿಕೆ 'ಮೆಟ್ಟುವ ನೆಲ ಕರ್ನಾಟಕ' ಎಂದು. ಆ ಕವನದಲ್ಲಿ ಬರುವ 'ಎಲ್ಲಿದ್ದರೆ ಏನ್? ಎಂತಿದ್ದರೆ ಏನ್?', 'ನೀ ಮೆಟ್ಟುವ ನೆಲ - ಅದೆ ಕರ್ನಾಟಕ;' ಎಂಬ ಸಾಲುಗಳನ್ನು ಕುವೆಂಪು ನಮ್ಮಂತಹ ಅನಿವಾಸಿಗಳಿಗಾಗಿಯೇ ಬರೆದಂತಿದೆ. ನಾವಿಲ್ಲಿ 'ಮೆಟ್ಟಿದ ನೆಲ'ವೇ ನೆಲೆಸಿದ ಈ ನಾಡು. ಅದನ್ನು ಕರ್ನಾಟಕವನ್ನಾಗಿ ನಿರ್ಮಿಸುವ ಪ್ರಯತ್ನ ನಮ್ಮದು. ಈ ಪ್ರಯತ್ನವೇನೋ ಆದರ್ಶವಾದುದು; ಅದು ಸಫಲವಾದಷ್ಟೂ ನಾವು ಇಲ್ಲಿಗೆ ವಲಸೆ ಬಂದುದು ಸಾರ್ಥಕವಾಗುವುದು. ಈ ನಾಡಿನಲ್ಲಿ ನಮ್ಮ ಸಂಸ್ಕೃತಿಯನ್ನು ಸ್ಥಾಪಿಸುವ ಪ್ರಯತ್ನ ಸಫಲವಾದಲ್ಲಿ, ಆಗ ಅದು ನಾವು ನೆಲೆಸಿದ ಈ ನಾಡಿಗೆ ನೀಡುವ ಒಂದು ಅಮೂಲ್ಯ ಕೊಡುಗೆಯಾದೀತಲ್ಲವೆ ?

ನಮ್ಮ ಸಂಸ್ಕೃತಿಯನ್ನು ಈ ಪರಕೀಯ ಪರಿಸರದಲ್ಲಿ ಉಳಿಸಿ, ಬೆಳಸಿಕೊಂಡು ಬರುವ ಪ್ರಯತ್ನದ ಸುಳಿವನ್ನು ಈ ಗ್ರಂಥ ನಿರ್ಮಾಣದಲ್ಲಿ ಕಾಣಬಹುದೇನೊ! ಈ ಗ್ರಂಥ ಪ್ರಕಟಿಸುವಲ್ಲಿ ನಮ್ಮ ಉದ್ದೇಶ ಎರಡು. ರಸಋಷಿಯೆಂದೇ ಖ್ಯಾತರಾದ ನಮ್ಮ ನಾಡಿನ ಒಬ್ಬ ಚೈತನ್ಯಮಯಿ, ಪ್ರತಿಭಾಶಾಲಿ ಸಾಹಿತಿಗೆ ಅನಿವಾಸಿ 'ಅಮೆರಿಕನ್ನಡಿಗ'ರ ನಮ್ರ ಶ್ರದ್ಧಾಂಜಲಿಯನ್ನು ಅರ್ಪಿಸುವುದು ಮೊದಲನೆಯದು. ಪುಟ್ಟಪ್ಪನವರು ಈಗ ನಮ್ಮ ಮಧ್ಯೆ ಇಲ್ಲದಿರಬಹುದು. ಇರುತ್ತಿದ್ದರೆ ಅವರಿಗೀಗ ನೂರು ವರ್ಷಗಳಾಗುತ್ತಿದ್ದುವು. ಆದರೆ, ಸಾಹಿತಿಗಳಿಗೆ ಸಾವೆಂಬುದಿಲ್ಲ. ಅವರ ಕೃತಿಗಳು ಅವರನ್ನು ಅಮರರನ್ನಾಗಿ ಮಾಡುತ್ತವೆ. ಅಂಥ ಅಮರ ಸಾಹಿತಿ ಪುಟ್ಟಪ್ಪನವರಿಗೆ ಅರ್ಪಿಸಿದ ಶ್ರದ್ಧಾಂಜಲಿ ಇದು.

ಇನ್ನು ಎರಡನೆಯ ಉದ್ದೇಶ: ತಾಯ್ನಾಡಿನಿಂದ ದೂರವಾಗಿ ಮೂರು ದಶಕಗಳಿಗೂ ಮೇಲಾಗಿದ್ದರೂ ನಮ್ಮ ಸಂಸ್ಕೃತಿ, ನಮ್ಮ ಭಾಷೆಯ ಮೇಲಣ ಅಭಿಮಾನ ನಮ್ಮನ್ನು ಬಿಟ್ಟುಹೋಗಿಲ್ಲ; ಬಿಟ್ಟುಹೋಗುವುದೂ ಇಲ್ಲ. ಮಾನ್ಯ ಶಿವರುದ್ರಪ್ಪನವರೊಂದು ಕವನ ಬರೆದು ನಮ್ಮ ಕಳಕಳಿಯನ್ನು ಈ ರೀತಿ ವರ್ಣಿಸಿದ್ದಾರೆ;

ಬಿಗಿದುಕೊಂಡರೂ ಬಿಡುವಿಲ್ಲದ ದುಡಿಮೆಯ
ಚಕ್ರ ಚಲನೆಗಳ ಜತೆಗೆ
ಇಲ್ಲೂ ಇದೆ ತುಡಿಯುವ ಎದೆ
ಕನ್ನಡ ನಾಡಿಗೆ, ನುಡಿಗೆ

ಇದು ಎಷ್ಟೊಂದು ನಿಜ! ಆ ಅಭಿಮಾನ, ತುಡಿತಗಳನ್ನು ಈ ಗ್ರಂಥದ ಮೂಲಕ ಹೊರಹೊಮ್ಮಿಸುವ ಪ್ರಯತ್ನ ಇಲ್ಲಿ ನಡೆದಿದೆ. ಇದೊಂದು ನಮ್ಮ ಕಿರುಸೇವೆ ಕನ್ನಡಮ್ಮನಿಗಾಗಿ.

ಈ ಗ್ರಂಥಕ್ಕೆ ಲೇಖನ ಬರೆದುಕೊಟ್ಟವರಾರೂ ವೃತ್ತಿಪರ ಸಾಹಿತಿಗಳಲ್ಲ. ಆದರೆ, ಹೃದಯದಲ್ಲಿ ಕುದಿಯುತ್ತಿರುವ ಸಾಹಿತ್ಯಾಭಿಮಾನ ಇಲ್ಲಿನ ಲೇಖನದ ಮೂಲಕ ಅಭಿವ್ಯಕ್ತಿ ಪಡೆದಿದೆ. ಕನ್ನಡ ಸಾಹಿತ್ಯ ಅಮೆರಿಕದಲ್ಲಿ ಇನ್ನೂ ಬಾಲ್ಯಾವಸ್ಥೆಯಲ್ಲಿದೆ ಎಂಬುದನ್ನು ನಾವು ಗುರುತಿಸಿಯೇ ಇದ್ದೇವೆ. ಆದರೆ, ಮಗುವೊಂದು ಹಾಕಿದ ಕೇಕೆ, ಆಡಿದ ತೊದಲು ನುಡಿಯಲ್ಲಿ ಒಂದು ವಿಶಿಷ್ಟ ನವ ಸಾಹಿತ್ಯವನ್ನು ಸಹೃದಯ ಸಾಹಿತಿಗಳು ಗುರುತಿಸಿದ್ದಾರೆ. ನಮ್ಮದೂ ಇಲ್ಲಿ 'ತೊದಲು ನುಡಿ'ಯಂತಿರಬಹುದು. ಆದರೆ, ಓದುಗರು ಈ ತೊದಲು ನುಡಿಯನ್ನು ಕೇಳಿ, ಮೆಚ್ಚುಗೆ ವ್ಯಕ್ತಪಡಿಸಿಯಾರೆಂಬ ಆಶಯ ನಮ್ಮದು. ಇಲ್ಲಿ 'ಹೊಸತು' ಏನು? - ಎಂಬ ಪ್ರಶ್ನೆ ಬಂದಲ್ಲಿ, ಅದಕ್ಕೆ ಉತ್ತರ ನಮ್ಮ 'ತೊದಲು ನುಡಿ' ಮಾತ್ರ. ಆದರೆ ಅವು ಪ್ರಾಮಾಣಿಕವಾದವುಗಳೆಂದು ಧೈರ್ಯವಾಗಿ ಹೇಳುತ್ತೇವೆ. ಅದನ್ನು ಓದುಗರು ತುಂಬು ಮನಸ್ಸಿನಿಂದ ಗಮನಿಸಿಯಾರೆಂಬ ನಂಬಿಕೆ ನಮಗಿದೆ. ಕರ್ನಾಟಕದಿಂದ ಬಂದ ಹಲವು ಹಿರಿಯ ಸಾಹಿತಿಗಳು ನಮ್ಮ ಪ್ರಯತ್ನಗಳನ್ನು ಗಮನಿಸಿ, ಉತ್ತೇಜನ ನೀಡುತ್ತಿರುವುದು ನಮಗೆ ಹಿತ ಭಾವನೆಯನ್ನು ಕೊಡುತ್ತಿದೆ. ಈಚೆಗೆ ಹೆಚ್ಚಿನ ಪ್ರಮಾಣದಲ್ಲಿ ಅಮೆರಿಕನ್ನಡಿಗರು ಗ್ರಂಥಗಳನ್ನು ಪ್ರಕಟಿಸುತ್ತಿರುವುದೇ ಈ ಉತ್ತೇಜನಕ್ಕೊಂದು ಸಾಕ್ಷಿ. ಅಂತಹ ಹಿರಿಯ ಸಹೃದಯ ಸಾಹಿತಿಗಳಿಗೆ ನಾವು ಕೃತಜ್ಞರು.

ನಾಲ್ಕು ವರ್ಷಗಳ ಹಿಂದೆ (೨೦೦೦ ದಲ್ಲಿ) ಅಮೆರಿಕನ್ನಡಿಗರ ಪ್ರಯತ್ನದ ಫಲವಾಗಿ 'ಕಾರಂತ ಚಿಂತನ - ಕಡಲಾಚೆಯ ಕನ್ನಡಿಗರಿಂದ' ಎಂಬ ಗ್ರಂಥವೊಂದು ಪ್ರಕಟವಾಗಿತ್ತು. ಓದುಗರು ಆ ಬಗ್ಗೆ ಮೆಚ್ಚುಗೆಯನ್ನು ವ್ಯಕ್ತಪಡಿಸಿದುದು ನಮಗೆ ಹೆಮ್ಮೆ ತರುತ್ತಿದೆ; ಒಂದು ವಿಶಿಷ್ಟ ತೃಪ್ತಿಯನ್ನೂ ಕೊಟ್ಟಿದೆ. ಅದರ ಸಂಪಾದಕತ್ವ ಹೊತ್ತು ನಾನು ಹಿತ ಪಡೆದಿದ್ದೆ. ಈಗ ಕುವೆಂಪುವಿಗೆ ಅವರ ಜನ್ಮ ಶತಾಬ್ದಿಯ ಸಮಯ ಶ್ರದ್ಧಾಂಜಲಿ ಕೊಡಲೆಂದು ಈ ಗ್ರಂಥವನ್ನು ಅರ್ಪಿಸುತ್ತಿದ್ದೇವೆ. ಈ ಗ್ರಂಥವನ್ನು ಅಮೆರಿಕದಲ್ಲಿ ನೂತನವಾಗಿ ಸ್ಥಾಪಿತವಾದ 'ಕನ್ನಡ ಸಾಹಿತ್ಯರಂಗ'ದ ಆಶ್ರಯದಲ್ಲಿ ಪ್ರಕಟಿಸುತ್ತಿದ್ದೇವೆ. ಮುಂದಿನ ಪುಟಗಳಲ್ಲಿ ಈ ಸಾಹಿತ್ಯರಂಗದ ವಿಚಾರವಾಗಿ ಹೆಚ್ಚಿನ ಮಾಹಿತಿ ದೊರಕುತ್ತದೆ. ಅಮೆರಿಕನ್ನಡಿಗರ ಅಭಿಮಾನ, ಸಹಕಾರಗಳಿಂದಲೇ ಈ ಗ್ರಂಥವನ್ನು ಹೊರತರುವುದು ಸಾಧ್ಯವಾಯಿತು. ತಮ್ಮ ಬಿಡುವಿಲ್ಲದ ಸಮಯದಲ್ಲೂ ಬಿಡುವು ಮಾಡಿಕೊಂಡು ಲೇಖನ ಬರೆದುಕೊಟ್ಟ ಎಲ್ಲ ಲೇಖಕರಿಗೂ ನಮ್ಮ ಹೃತ್ಪೂರ್ವಕ ಅಭಿನಂದನೆಗಳು. ಅಮೆರಿಕದಲ್ಲಿ ಇಲ್ಲಿ ಉಲ್ಲೇಖಿಸಿರುವುದಕ್ಕಿಂತ ಹೆಚ್ಚಿನ ಸಂಖ್ಯೆಯ ಲೇಖಕರಿದ್ದಾರೆ ಎಂಬ ಅರಿವು ನಮಗಿದೆ. ಆದರೆ, ಸಮಯದ ಕೊರತೆ, ಗಾತ್ರದ ಮಿತಿ, ಇವೇ ಮುಂತಾದ 'ಇತಿ-ಮಿತಿ'ಗಳಿಂದಾಗಿ ಬೇರೆ ಹಲವಾರು ಅಮೆರಿಕನ್ನಡಿಗರಿಂದ ಲೇಖನ ಪಡೆಯಲು ಸಾಧ್ಯವಾಗಲಿಲ್ಲ. ಮುಂದೆ ಪ್ರಕಟವಾಗುವ ಗ್ರಂಥಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಅಮೆರಿಕನ್ನಡಿಗರು ಭಾಗವಹಿಸುತ್ತಾರೆಂದು ಆಶಿಸೋಣ. ಇಲ್ಲಿ ಲೇಖಕರು ವ್ಯಕ್ತಪಡಿಸಿದ ಅಭಿಪ್ರಾಯಗಳು ಆಯಾ ಲೇಖಕರದ್ದೇ ವಿನಹ ಸಂಪಾದಕ ಮಂಡಳಿಯವರದ್ದು ಎಂದು ತಿಳಿಯಬಾರದಾಗಿ ವಿನಂತಿಸುತ್ತೇವೆ.

ಈ ಗ್ರಂಥದ ವಿಂಗಡಣೆಯ ಬಗ್ಗೆ ಎರಡು ಮಾತುಗಳು. ಗ್ರಂಥವನ್ನು ಮುಖ್ಯವಾಗಿ ನಾಲ್ಕು ವಿಭಾಗ ಮಾಡಿಕೊಂಡಿದ್ದೇವೆ. ಮೊದಲನೆಯ ಭಾಗ ಕುವೆಂಪುರವರ ಜೀವನ ಮತ್ತು ವೈಚಾರಿಕ ಲೇಖನಗಳನ್ನು ಕುರಿತದ್ದು. ಎರಡನೆಯದರಲ್ಲಿ ಅವರ ಕವನ, ಕಥನ ಕವನಗಳ ಬಗ್ಗೆ ನಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿದ್ದೇವೆ. ಮೂರನೆಯ ಭಾಗದಲ್ಲಿ ಅವರ ಕಾದಂಬರಿ, ಸಣ್ಣ ಕಥೆ, ನಾಟಕ ಮೊದಲಾದ ವಿಷಯಗಳನ್ನು ಕುರಿತು ನಮ್ಮ ವಿಚಾರಗಳಿವೆ. ನಾಲ್ಕನೆಯ ಭಾಗದಲ್ಲಿ ಅವರ ಮಹಾಕಾವ್ಯ 'ಶ್ರೀ ರಾಮಾಯಣ ದರ್ಶನಂ' ಕುರಿತು ಲೇಖನಗಳಿವೆ. ಗ್ರಂಥದ ಕೊನೆಯಲ್ಲಿ ಇಲ್ಲಿ ಕಾಣಿಸಿದ ಅಮೆರಿಕನ್ನಡಿಗ ಲೇಖಕರ ಕಿರು ಪರಿಚಯ ಕೊಡಲಾಗಿದೆ.

ಇಲ್ಲಿನ ಕನ್ನಡ ಲೇಖನಗಳ ಮಧ್ಯೆ ಒಂದು ಇಂಗ್ಲಿಷ್ ಲೇಖನ ನಿಮ್ಮ ಗಮನ ಸೆಳೆದೀತು! ಅದನ್ನು ಪ್ರಕಟಿಸಲು ಒಂದು ಮುಖ್ಯ ಕಾರಣವಿದೆ. ಲೇಖಕ ಗುಂಡುಶಂಕರರು ಬೆಳೆದದ್ದು ಕರ್ನಾಟಕದ ಹೊರಗೆ; ಆದರೆ, ಅವರ ಹೃದಯದಲ್ಲಿ ಮಿಡಿಯುತ್ತಿರುವ ಕನ್ನಡತನ ಸ್ಪಷ್ಟವಾಗಿ ಕಾಣುತ್ತದೆ. ಮೂಲ ಕನ್ನಡ ಗ್ರಂಥವನ್ನು ಓದದೆ, ಅದರ ಇಂಗ್ಲಿಷ್ ಅನುವಾದವನ್ನು ಓದಿಯೇ ಲೇಖಕರು ಅದನ್ನು ಪಾಶ್ಚಾತ್ಯ ಗ್ರಂಥವೊಂದರೊಡನೆ ಹೋಲಿಸಿ ಬರೆದ ಲೇಖನ ಅವರ ಸಾಹಿತ್ಯಾಭಿಮಾನವನ್ನು ವ್ಯಕ್ತಪಡಿಸುತ್ತದೆ. ಈ ಸಂದರ್ಭದಲ್ಲಿ ನಾನು ನಮ್ಮ ಮುಂದಿನ ಪೀಳಿಗೆಯವರು ಎದುರಿಸುವಂತಹ ಸಮಸ್ಯೆಯನ್ನು ನೆನೆದುಕೊಳ್ಳುತ್ತಿದ್ದೇನೆ. ಅವರು ಆಳವಾದ ಕನ್ನಡ ಅಧ್ಯಯನ ಮಾಡುವ ಸಾಧ್ಯತೆ ಕಡಿಮೆ ಎಂದೇ ಹೇಳಬಹುದು. ಅಂತಹ ಸಂದರ್ಭದಲ್ಲಿ ಕನ್ನಡದ ಹಿರಿಯ ಕೃತಿಗಳ ಸಮರ್ಥ ಇಂಗ್ಲಿಷ್ ಅನುವಾದ ಅವರಿಗೆ ದೊರೆತಲ್ಲಿ, ಅವರಿಗೂ, ಮತ್ತಿತರ ಕನ್ನಡೇತರರಿಗೂ ನಮ್ಮ ಸಾಹಿತ್ಯದ ಹಿರಿಮೆಯ ಅರಿವು ಮಾಡಿಕೊಟ್ಟಂತಾಗುವುದು. ಶಾಸ್ತ್ರೋಕ್ತ ಕನ್ನಡ ಅಧ್ಯಯನವಿಲ್ಲದೆ, ಗುಂಡುಶಂಕರರು 'ಕಾನೂರು ಹೆಗ್ಗಡಿತಿ'ಯನ್ನು 'ಜಿವಾಗೋ'ಗೆ ಹೋಲಿಸಿದ ತುಲನಾತ್ಮಕ ಬರೆಹ ಒಂದು ವಿಶಿಷ್ಟತೆ ಪಡೆದಿದೆಯೆಂದು ಹೇಳಬಹುದು. ಅದು 'ಕನ್ನಡ ವೃತ್ತ'ದಿಂದ ಹೊರಗಿದ್ದು (ಗುಂಡುಶಂಕರರು ಕನ್ನಡಿಗರೇ ಎಂಬುದನ್ನು ಇಲ್ಲಿ ಮರೆಯಬಾರದು!), ಕನ್ನಡ ಸಾಹಿತ್ಯವನ್ನು ನೋಡುವ ಹೊಸ ದೃಷ್ಟಿಕೋನದಂತಿದೆ. ಆ ದೃಷ್ಟಿಯಿಂದ ಗುಂಡುಶಂಕರರ ಇಂಗ್ಲಿಷ್ ಲೇಖನದ ಪ್ರಕಟಣೆ ಇಲ್ಲಿ ಉಪಯುಕ್ತವೆಂದು ನಮ್ಮ ಅಭಿಮತ.

ಕುವೆಂಪುರವರ ಪ್ರೀತಿಯ ಶಿಷ್ಯರಲ್ಲೊಬ್ಬರಾದ ಪ್ರೊ. ಜಿ.ಎಸ್. ಶಿವರುದ್ರಪ್ಪನವರು ಈ ಗ್ರಂಥಕ್ಕೆ ಮುನ್ನುಡಿಯನ್ನು ಬರೆದುಕೊಟ್ಟುದು ನಮ್ಮ ಭಾಗ್ಯವೆಂದು ಎಣಿಸುತ್ತೇನೆ. ಅಳುಕಿನಿಂದಲೆ ಅವರನ್ನು ಸಂಪರ್ಕಿಸಿದಾಗ, ಚೂರೂ ಬಿಗುಮಾನವಿಲ್ಲದೆ, ತುಂಬು ಮನಸ್ಸಿನಿಂದ ಮುನ್ನುಡಿ ಬರೆಯಲು ಒಪ್ಪಿಕೊಂಡರು. ಅದರ ಜೊತೆಗೆ ಕುವೆಂಪು ಅವರನ್ನು ಕುರಿತ ಒಂದು ಲೇಖನವನ್ನೂ ಕೊಟ್ಟಿದ್ದಾರೆ. ಅವರ ಬರೆಹ ಈ ಗ್ರಂಥಕ್ಕೊಂದು ವಿಶಿಷ್ಟ ಕಳೆ ಕೊಟ್ಟಿದೆ. ಆ ಬಗ್ಗೆ ಸಂಪಾದಕ ಮಂಡಳಿಯ ಪರವಾಗಿ, ಶಿವರುದ್ರಪ್ಪನವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಪುಟ್ಟಪ್ಪನವರ ಇನ್ನೊಬ್ಬ ಪ್ರೀತಿಯ ಶಿಷ್ಯ, ಪ್ರೊ. ಪ್ರಭುಶಂಕರರು, ಕುವೆಂಪುರವರ 'ಮಾನಸ ಪುತ್ರ' ಎಂದೇ ಕರೆಸಿಕೊಂಡಿದ್ದಾರೆ. ಅವರು ನಮ್ಮ 'ವಸಂತ ಸಾಹಿತ್ಯೋತ್ಸವ'ದ ಸಂದರ್ಭದಲ್ಲಿ ಕುವೆಂಪು ಬಗ್ಗೆ ಮಾಡುವ ಭಾಷಣವನ್ನು ಮೊದಲೇ ಒದಗಿಸಿಕೊಟ್ಟು ಅದನ್ನು ಲೇಖನವಾಗಿ ಈ ಗ್ರಂಥದಲ್ಲಿ ಪ್ರಕಟಿಸಲು ಒಪ್ಪಿಗೆ ಕೊಟ್ಟಿರುತ್ತಾರೆ. ಅವರ ಲೇಖನವೂ ಈ ಗ್ರಂಥಕ್ಕೆ ವಿಶೇಷ ಅರ್ಥ ಕೊಟ್ಟಿದೆ. ಅವರಿಗೆ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತಿದ್ದೇನೆ.

ಪ್ರೊ. ಲಕ್ಷ್ಮೀನಾರಾಯಣ ಭಟ್ಟರೆಂದರೆ, ಅಮೆರಿಕನ್ನಡಿಗರಿಗೆಲ್ಲ ತುಂಬ ಅಭಿಮಾನ. ಕಾರಣ, ಅವರು ಅಮೆರಿಕನ್ನಡಿಗರ ಬಗ್ಗೆ ಇಟ್ಟುಕೊಂಡ ವಿಶ್ವಾಸ. ಅದರಿಂದಾಗಿ ಸಂಪರ್ಕಿಸಿದಾಗಲೆಲ್ಲ ಅವರು ತುಂಬು ಮನಸ್ಸಿನಿಂದ ಅಮೆರಿಕನ್ನಡಿಗರಿಗೆ ಸಹಾಯ ಮಾಡುತ್ತಿದ್ದಾರೆ. ಕುವೆಂಪು ಕುರಿತ ಒಂದು ಲೇಖನವನ್ನು ನೀಡಿ ಅವರು ನಮ್ಮ ಕೋರಿಕೆಯನ್ನು ನಡೆಸಿಕೊಟ್ಟಿದ್ದಾರೆ. ಅಲ್ಲದೆ ಈ ಗ್ರಂಥದ ಮುದ್ರಣದ ಬಗ್ಗೆ ಅವರು ನೀಡಿರುವ ಸಹಾಯ ಮತ್ತು ಸಹಕಾರ ಅಪಾರವಾದುದು. ನಮ್ಮ ಪರವಾಗಿ, ಬೆಂಗಳೂರಿನಲ್ಲಿ ಈ ಗ್ರಂಥದ ತಿದ್ದುಪಡಿಗೆ, ಮುದ್ರಣಕ್ಕೆ, ಪ್ರಕಟಣೆಗೆ – ಒಂದೇ ಎರಡೇ – ಎಲ್ಲದಕ್ಕೂ ಅವರ ಅಮೂಲ್ಯ ನೆರವು ದೊರೆತಿದೆ. ಆ ಬಗ್ಗೆ ಅವರಿಗೆ ಎಷ್ಟು ಕೃತಜ್ಞತೆಗಳನ್ನು ಸಲ್ಲಿಸಿದರೂ ಕಡಿಮೆಯೇ! ಶ್ರೀ ಭಟ್ಟರಿಗೆ ನಾವು ಸದಾ ಆಭಾರಿಯಾಗಿರುತ್ತೇವೆ.

ಈ ಗ್ರಂಥ ತಯಾರಿಯಲ್ಲಿ ಎಲ್ಲ ಸಹ-ಸಂಪಾದಕರೂ ನನಗೆ ಕೈಮೀರಿ ಸಹಕಾರ ನೀಡಿದ್ದಾರೆ. ಎಲ್ಲ ಹಂತದಲ್ಲೂ ಸಲಹೆ ಮತ್ತು ಉತ್ತೇಜನ ನೀಡಿದ ಶ್ರೀ ರಾಜಗೋಪಾಲರ ಸಹಾಯವನ್ನು ನಾನಿಲ್ಲಿ ನೆನೆಸಿಕೊಳ್ಳುತ್ತಿದ್ದೇನೆ. ಅಂತೆಯೇ ಶ್ರೀ ಚಂದ್ರಶೇಖರರು ಕೂಡ ಸಂಪರ್ಕಿಸಿದಾಗಲೆಲ್ಲ ನನಗೆ ಸಹಕಾರ ನೀಡಿದ್ದಾರಲ್ಲದೆ ಗ್ರಂಥದ ತಿದ್ದುಪಡಿಯಲ್ಲೂ ಭಾಗವಹಿಸಿದ್ದಾರೆ. ಶ್ರೀ ನಟರಾಜರು ಲೇಖನಗಳ ತಿದ್ದುಪಡಿ ಮತ್ತು ಪರಿಷ್ಕಾರಗಳಲ್ಲಿ ನೀಡಿದ ನೆರವನ್ನು ನಾನು ಯಾವಾಗಲೂ ಸ್ಮರಿಸುತ್ತಿರುತ್ತೇನೆ. ಶ್ರೀಮತಿ ನಳಿನಿ ಮೈಯ ಹಿಂದೆ 'ಕಾರಂತ ಚಿಂತನ' ಗ್ರಂಥದ ತಯಾರಿಯಲ್ಲಿ ನನಗೆ ಶಕ್ತಿ ಮೀರಿ ಸಹಾಯ ಮಾಡಿದವರು. ಈಗ ಅವರು ನೀಡಿರುವ ಸಹಕಾರವನ್ನೂ ನಾನು ಮರೆಯಲಾರೆ. ಇಂತಹ ಸಂಪಾದಕ ಮಂಡಳಿಯನ್ನು ಪಡೆದುದು ನನ್ನ ಸುಯೋಗವೆಂದೇ ಹೇಳಬೇಕು. ಅವರೆಲ್ಲರ ನೆರವು ನನ್ನ ಕಾರ್ಯವನ್ನು ಬಹಳಷ್ಟು ಸುಲಭ ಮಾಡಿಕೊಟ್ಟಿದೆ. ಆ ಬಗ್ಗೆ ಎಲ್ಲ ಸಹ ಸಂಪಾದಕರಿಗೂ ನಾನದೆಷ್ಟು ಕೃತಜ್ಞನಾಗಿದ್ದೇನೆಂಬುದನ್ನು ಕೇವಲ ಮಾತುಗಳಿಂದ ವ್ಯಕ್ತಪಡಿಸುವುದು ಸಾಧ್ಯವಿಲ್ಲ.

ವೈಯಕ್ತಿಕ ವಿಷಯವೊಂದನ್ನು ನಾನು ಇಲ್ಲಿ ತಿಳಿಸಲೇಬೇಕಾಗಿದೆ. ಅದು 'ತೆರೆಮರೆ'ಯಲ್ಲಿನ ಸಹಕಾರ. ಅದನ್ನು ನೀಡಿದವಳು ನನ್ನ ಸಹ-ಧರ್ಮಿಣಿ ಲಕ್ಷ್ಮಿ. ಬಂದ ಲೇಖನಗಳನ್ನೆಲ್ಲ ಪ್ರಾರಂಭದಿಂದ ಕೊನೆಯವರೆಗೂ ಓದಿ, ಸೂಕ್ತ ಸಲಹೆ, ತಿದ್ದುಪಡಿಗಳನ್ನು ಸೂಚಿಸಿದ ಅವಳ ಸಹಕಾರಕ್ಕೆ ನಾನು ಕೃತಜ್ಞ.

ಇನ್ನು, ಈ ಗ್ರಂಥವನ್ನು ಚೊಕ್ಕವಾಗಿ ಮುದ್ರಿಸಿದ ನೇತ್ರಾ ಪ್ರಿಂಟರ್ಸ್‌ನವರಿಗೂ, ಪ್ರಕಟಿಸಲು ಮುಂದೆ ಬಂದ ವಸಂತ ಪ್ರಕಾಶನದವರಿಗೂ ನಾನು, ಸಂಪಾದಕ ಮಂಡಳಿಯ ಪರವಾಗಿ ಧನ್ಯವಾದಗಳನ್ನು ಅರ್ಪಿಸುತ್ತಿದ್ದೇನೆ. ಅಲ್ಲದೆ ರಕ್ಷಾಪುಟ ವಿನ್ಯಾಸಕ್ಕಾಗಿ ಶ್ರೀ ಮೋನಪ್ಪನವರಿಗೂ ನಾವು ಆಭಾರಿಯಾಗಿರುತ್ತೇವೆ.

ಇಲ್ಲಿನ ಲೇಖನಗಳನ್ನು ಆಸ್ಥೆಯಿಂದ ಓದುವ ಎಲ್ಲ ಓದುಗರಿಗೂ ನಮ್ಮ ಹೃತ್ಪೂರ್ವಕ ನಮನಗಳು. ಲೇಖನಗಳ ಬಗ್ಗೆ ನಿಮ್ಮ ಅಭಿಪ್ರಾಯಗಳನ್ನು ತಿಳಿಸಿದಲ್ಲಿ ಮುಂದಿನ ಪ್ರಕಟನೆಗೆ ತುಂಬ ಸಹಾಯವಾದೀತು. ದಯವಿಟ್ಟು ಅಭಿಮಾನದಿಂದ ನಿಮ್ಮ ಅಭಿಪ್ರಾಯ, ಸಲಹೆಗಳನ್ನು ತಿಳಿಸುವಿರಾ ?

ಇಂತು,

ಆಹಿತಾನಲ

(ಸಂಪಾದಕ ಮಂಡಳಿಯ ಪರವಾಗಿ)

816, Othello Street,
Arcadia, California 91006
E-mail : nagaaithal@yahoo.com

# ಕನ್ನಡ ಸಾಹಿತ್ಯ ರಂಗ

ಉತ್ತರ ಅಮೆರಿಕದ ಸಂಯುಕ್ತ ಸಂಸ್ಥಾನಗಳಲ್ಲಿ ನೆಲಸಿರುವ ಸಹಸ್ರಾರು ಕನ್ನಡಿಗರ ಸಾಂಸ್ಕೃತಿಕ, ಸಾಮಾಜಿಕ ಆಸಕ್ತಿ ಅರಕೆ ಅವಶ್ಯಕತೆಗಳನ್ನು ಪೂರೈಸಲು ಹಲವಾರು ಕನ್ನಡ ಕೂಟಗಳು ಈ ಕಳೆದ ಮೂರು ನಾಲ್ಕು ದಶಕಗಳಲ್ಲಿ ಹುಟ್ಟಿವೆ, ಕೆಲಸಮಾಡುತ್ತಿವೆ. ಆದರೆ, ಕನ್ನಡ ಸಾಹಿತ್ಯಕ್ಕೇ ಮೀಸಲಾದ ಸಂಸ್ಥೆಗಳು ತೀರ ಕಡಿಮೆ. ಅವುಗಳ ವ್ಯಾಪ್ತಿಯೂ ತುಂಬ ಸೀಮಿತ. ಆದ್ದರಿಂದ, ಕನ್ನಡ ಸಾಹಿತ್ಯದಲ್ಲಿ ಒಲವುಳ್ಳ, ಕನ್ನಡದಲ್ಲಿ ಓದಿ ಬರೆಯುವ ಶ್ರದ್ಧೆಯನ್ನುಳ್ಳ ಇಲ್ಲಿನ ಕನ್ನಡಿಗರ ಹಿತಾಸಕ್ತಿಯನ್ನು ಮನಸ್ಸಿನಲ್ಲಿರಿಸಿಕೊಂಡು ಒಂದು ಹೊಸ ಸಂಸ್ಥೆಯನ್ನು ಸ್ಥಾಪಿಸುವುದು ಅವಶ್ಯಕವೆಂಬುದು ನಮ್ಮಲ್ಲಿ ಹಲವರಿಗೆ ಮನವರಿಕೆಯಾಯಿತು. ಅದರ ಫಲವಾಗಿ ಮೈತಾಳಿದ ಸಂಸ್ಥೆ ಕನ್ನಡ ಸಾಹಿತ್ಯರಂಗ.

ಇಲ್ಲಿ ನೆಲಸಿದ ನಮ್ಮ ಜನ ಕರ್ನಾಟಕದಲ್ಲಿ ಸೃಷ್ಟಿಯಾಗುತ್ತಿರುವ ವಿಪುಲವಾದ ಸಾಹಿತ್ಯದಲ್ಲಿ ಸ್ವಲ್ಪವನ್ನಾದರೂ ಓದಿ ಮನನ ಮಾಡಬೇಕು. ಅಷ್ಟೇ ಅಲ್ಲ, ಇಲ್ಲಿನ ಹೊಸ ಸಂಸ್ಕೃತಿಯ, ಹೊಸ ಜೀವನದ ಘರ್ಷಣೆಗಳನ್ನೂ, ಅನುಭವಗಳನ್ನೂ ರೂಪಿಸುವಂಥ, ಅವುಗಳಿಂದ ಉತ್ಪನ್ನವಾದ ಆಲೋಚನೆಗಳಿಗೆ ಒಂದು ಗಟ್ಟಿಯಾದ ಅಭಿವ್ಯಕ್ತಿ ಕೊಡುವಂಥ ಸಾಹಿತ್ಯವನ್ನು ರಚಿಸಬೇಕು. ಬರೆದದ್ದು ಪ್ರಾಮಾಣಿಕವಾಗಿದೆಯೆ, ಸ್ವೋಪಜ್ಞತೆಯಿಂದ ಕೂಡಿದೆಯೆ ಎಂಬ ಎಚ್ಚರ ವಹಿಸಬೇಕು. ತಮ್ಮ ಬರವಣಿಗೆಯ ಉತ್ಕೃಷ್ಟತೆಯ ಬಗ್ಗೆ ಹೆಚ್ಚು ಮುತುವರ್ಜಿ ವಹಿಸಬೇಕು. ಇಲ್ಲಿ ಬೆಳೆಯುತ್ತಿರುವ ತಮ್ಮ ಮಕ್ಕಳಿಗೆ ಕನ್ನಡ ಸಾಹಿತ್ಯದ ಪರಿಚಯ ಮಾಡಿಕೊಡಬೇಕು. ಅವರು ಕನ್ನಡ ಸಾಹಿತ್ಯವನ್ನು ಕನ್ನಡದಲ್ಲೇ ಓದಲಾರದೆ ಹೋದರೂ, ಇಂಗ್ಲಿಷ್ ಭಾಷಾಂತರಗಳ ಮೂಲಕವಾದರೂ ಅರಿಯಬೇಕು. ಇದು ಒಂದು ಎತ್ತರದ ಕಣಸು. ಅದನ್ನು ಸಾಧಿಸುವುದು ಸುಲಭವಲ್ಲ. ಇಂಥ ಕೆಲಸವನ್ನು ನಮ್ಮಲ್ಲಿ ಹಲವರು ವೈಯಕ್ತಿಕವಾಗಿ ಈಗಾಗಲೇ ಮಾಡಿರುವವರಾದರೂ, ಅದಕ್ಕೆ ಇಲ್ಲಿನ ಒಟ್ಟು ಕನ್ನಡ ಸಮಾಜದ ಬೆಂಬಲ, ಸಹಕಾರ, ಪ್ರೋತ್ಸಾಹ ಅಗತ್ಯ. ಅದನ್ನು ಸ್ವಲ್ಪ ಮಟ್ಟಿಗಾದರೂ ಒದಗಿಸುವುದು ತನ್ನ ಆದ್ಯ ಕರ್ತವ್ಯ ಎಂದು ಕನ್ನಡ ಸಾಹಿತ್ಯರಂಗ ನಂಬಿದೆ. ಅದಕ್ಕೆ ಅನುವಾಗುವಂತೆ, ಈ ರಂಗ ಹಲವಾರು ಕಾರ್ಯಕ್ರಮಗಳನ್ನು ನಿಯೋಜಿಸಿದೆ. ಅವುಗಳಲ್ಲಿ ಒಂದು ಈ ಕನ್ನಡ ಸಾಹಿತ್ಯ ವಸಂತೋತ್ಸವ, ನಮ್ಮ ಮೊದಲನೆಯ ಸಮ್ಮೇಳನ.

ಈ ನಮ್ಮ ಮೊದಲ ಸಮ್ಮೇಳನದ ಸಮಯದಲ್ಲೇ ಕುವೆಂಪು ಶತಮಾನೋತ್ಸವದ ಸುಸಂದರ್ಭವೂ ಒದಗಿಬಂದಿರುವುದರಿಂದ ಆ ಮಹಾಕವಿಗೆ ಇಲ್ಲಿನ ಕನ್ನಡಿಗರು ವಿವಿಧ ರೂಪದಲ್ಲಿ ತಮ್ಮ ಸ್ಮರಣೀಯ ಕಾಣಿಕೆ ಸಲ್ಲಿಸುವ ಅವಕಾಶ ಸಿಕ್ಕಿದೆ. ಆ ಕಾಣಿಕೆಯ ಒಂದು ರೂಪ ಈ ಹೊತ್ತಗೆ – ಕುವೆಂಪು ಸಾಹಿತ್ಯ ಸಮೀಕ್ಷೆ.

ನಾಲ್ಕು ವರ್ಷಗಳ ಹಿಂದೆ 'ಕಾರಂತ ಚಿಂತನ'ವೆಂಬ ಉತ್ತಮ ಗ್ರಂಥವೊಂದನ್ನು ಸಂಪಾದಿಸಿದ ಶ್ರೀ ನಾಗ ಐತಾಳರೇ (ಆಹಿತಾನಲ) ಈ ಗ್ರಂಥಕ್ಕೂ ಸಂಪಾದಕರಾಗಿರುವುದು ಮತ್ತು ಈ ಸಾಹಿತ್ಯ ರಂಗದ ಕಾರ್ಯವರ್ಗದಲ್ಲಿರುವುದು ಒಂದು ಸಂತೋಷದ ಸಂಗತಿ. ನಮ್ಮ ಉದ್ದೇಶ ನೆರವೇರುವಂತೆ, ಮುಖ್ಯವಾಗಿ ಇಲ್ಲಿನವರಿಂದಲೇ ಲೇಖನಗಳನ್ನು ಬಯಸಿ, ಲೇಖಕರನ್ನು ಆಹ್ವಾನಿಸಿ, ಬೇಡಿ, ಪ್ರೋತ್ಸಾಹಿಸಿ, ಹಲವಾರು ಬಗೆಯ ರೂಪ ರುಚಿಗಳನ್ನೊಳಗೊಂಡ ಲೇಖನಗಳನ್ನು ಒಟ್ಟುಗೂಡಿಸಿದ್ದಾರೆ. ದೃಷ್ಟಿದೋಷದ ಅನಾನುಕೂಲತೆಯನ್ನು ಸ್ವಲ್ಪವೂ ಲೆಕ್ಕಿಸದೆ, ಶ್ರದ್ಧೆ ಉತ್ಸಾಹಗಳಿಂದ ಈ ಕೆಲಸ ನಿರ್ವಹಿಸಿದ ಐತಾಳರಿಗೆ ನಮ್ಮ ಕೃತಜ್ಞತೆ ಸಲ್ಲುತ್ತದೆ. ಅವರ ಕರೆಗೆ ಓಗೊಟ್ಟು ಲೇಖನಗಳನ್ನು ಬರೆದುಕೊಟ್ಟ ಎಲ್ಲ ಲೇಖಕರಿಗೂ ನಮ್ಮ ವಂದನೆಗಳು. ನಮ್ಮ ಈ ಪ್ರಯತ್ನವನ್ನು ದೊಡ್ಡ ಮನಸ್ಸಿನಿಂದ ಕಂಡು ಅದಕ್ಕೆ ಬೇಕಾದ ಬೆಂಬಲವನ್ನು ಸರ್ವಮಾನ್ಯರಾದ ಡಾ. ಜಿ.ಎಸ್. ಶಿವರುದ್ರಪ್ಪನವರು, ಡಾ. ಪ್ರಭುಶಂಕರರು, ಮತ್ತು ಡಾ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟರು ನೀಡಿದ್ದಾರೆ. ಈ ಮೂವರಿಗೂ ನಮ್ಮ ಹೃತ್ಪೂರ್ವಕ ವಂದನೆಗಳು.

ಈ ನಮ್ಮ ಪ್ರಯತ್ನ ಇಲ್ಲಿನವರಿಗಷ್ಟೆ ಅಲ್ಲದೆ, ತಾಯ್ನಾಡಿನ ನಮ್ಮ ಕನ್ನಡ ಬಾಂಧವರಿಗೂ ಒಪ್ಪಿಗೆಯಾಗುವುದೆಂದು ಆಶಿಸುತ್ತೇವೆ.

ನಳಿನಿ ಮೈಯ
ಎಚ್.ವೈ. ರಾಜಗೋಪಾಲ್
ಕನ್ನಡ ಸಾಹಿತ್ಯರಂಗದ ಪರವಾಗಿ

# ಎರಡು ಮಾತು

ಸುಮಾರು ಎರಡು ತಿಂಗಳ ಹಿಂದೆ ಎಂದು ಕಾಣುತ್ತದೆ. ಅಮೆರಿಕಾದಿಂದ ನನಗೊಂದು ದೂರವಾಣಿಯ ಕರೆಬಂತು. ಹಾಗೆ ಕರೆದವರು ನನಗೆ ಪ್ರಿಯರಾದ ಶ್ರೀ ನಾಗ ಐತಾಳರು. ಅವರು ಹೇಳಿದರು: 'ಅಮೆರಿಕಾದ ಸಾಹಿತ್ಯಾಸಕ್ತ ಕನ್ನಡಿಗರಾದ ನಾವು ಕೆಲವರು, ಶ್ರೀ ಕುವೆಂಪು ಶತಮಾನೋತ್ಸವದ ನೆನಪಿಗೆ 'ಕುವೆಂಪು ಸಾಹಿತ್ಯ ಸಮೀಕ್ಷೆ' ಎಂಬ ಸಂಪುಟವನ್ನು ಪ್ರಕಟಿಸುತ್ತಿದ್ದೇವೆ. ನೀವು ಅದಕ್ಕೊಂದು ಮುನ್ನುಡಿ ಬರೆಯಬೇಕು.' ಈ ಪ್ರಿಯವಾದ ಕಾರ್ಯವನ್ನು ನಾನು ಸಂತೋಷದಿಂದ ಮಾಡುತ್ತೇನೆ - ಎಂದೆ.

ನಾನು ಅಮೆರಿಕಾಕ್ಕೆ ಮೊದಲ ಸಲ ಹೋದದ್ದು ೧೯೮೭ರಂದು. ಅನಂತರ ಇನ್ನೂ ಎರಡು ಸಲ ಹೋಗಿ ಬಂದಿದ್ದೇನೆ. ಅಲ್ಲಿನ ಅನೇಕ ಕನ್ನಡ ಬಂಧುಗಳ ಅತಿಥಿಯಾಗಿದ್ದೇನೆ; ಹಲವಾರು ಕನ್ನಡ ಕೂಟಗಳ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದೇನೆ; ಅನೇಕ ಅಭಿಮಾನಿಗಳ ಹಾಗೂ ಗೆಳೆಯರ ಪ್ರೀತಿ-ವಿಶ್ವಾಸಗಳನ್ನು ಗಳಿಸಿಕೊಂಡಿದ್ದೇನೆ. ಯಾವ ಸಲ ಹೋದರೂ 'ನಮ್ಮಲ್ಲಿಗೆ ಬರದೆ ನೀವು ಹೇಗೆ ಹೋಗುತ್ತೀರಿ?' - ಎಂದು ನನ್ನನ್ನು ತಾವಿದ್ದಲ್ಲಿಗೆ ಬರಮಾಡಿಕೊಂಡು, ನನ್ನನ್ನು ತಮ್ಮ ಪ್ರೀತಿ-ವಿಶ್ವಾಸದಲ್ಲಿ ಕಟ್ಟಿಹಾಕಿದ ಕೆಲವರಲ್ಲಿ ಶ್ರೀ ಐತಾಳರು ಮೊದಲಿಗರು. ಚಿಕಾಗೋದಲ್ಲಿ ಅವರಿದ್ದಾಗ ಹೀಗೆ ನಾನೂ ಅವರೂ ಗಂಟೆಗಟ್ಟಲೆ ಕೂತು ಏನೆಲ್ಲಾ ವಿಷಯಗಳನ್ನು ಕುರಿತು ನಡೆಯಿಸಿದ ಎಷ್ಟೋ ಸಂವಾದಗಳ ಸಂದರ್ಭಗಳು ಇನ್ನೂ ನನ್ನ ನೆನಪಿನಲ್ಲಿ ಹಸಿರಾಗಿವೆ. ಶಿವರಾಮ ಕಾರಂತರಿಂದ ಹಿಡಿದು, ಡಿ.ಆರ್. ನಾಗರಾಜ್‌ರವರೆಗೆ, ಕನ್ನಡದ ಅನೇಕ ಸಾಹಿತಿಗಳ ಹಾಗೂ ಕಲಾವಿದರ ಒಡನಾಟವಿದೆ ಐತಾಳರಿಗೆ. ನಾಲ್ಕು ವರ್ಷಗಳ ಹಿಂದೆ ಹೀಗೆ ಅಮೆರಿಕಾದ ಕನ್ನಡಿಗರಿಂದ ಕಾರಂತರನ್ನು ಕುರಿತು ಬರೆಯಿಸಿದ ಲೇಖನಗಳ ಒಂದು ಸಂಪುಟ 'ಕಾರಂತ ಚಿಂತನ' ಇವರ ಸಾಹಸದ ಪರಿಣಾಮವೇ. ಮತ್ತೆ ಅದೇ ಐತಾಳರೇ ಕುವೆಂಪು ಶತಮಾನೋತ್ಸವದ ನೆನಪಿಗೆ 'ಕುವೆಂಪು ಸಾಹಿತ್ಯ ಸಮೀಕ್ಷೆ' ಎಂಬ ಸಂಪುಟವೊಂದನ್ನು ಸಂಪಾದಿಸಿದ್ದಾರೆ. ಮುನ್ನುಡಿಯ ನೆಪಮಾಡಿಕೊಂಡು ನನ್ನನ್ನು ತಮ್ಮ ಜತೆಗೆ ಸೇರಿಸಿಕೊಂಡಿದ್ದಾರೆ.

'ಕುವೆಂಪು ಸಾಹಿತ್ಯ ಸಮೀಕ್ಷೆ', ಕುವೆಂಪು ಸಾಹಿತ್ಯದ ಹಲವು ಮುಖಗಳನ್ನು ಕುರಿತು, ಕಡಲಾಚೆಯ ಕನ್ನಡಿಗರು ಬರೆದ ಲೇಖನಗಳ ಒಂದು ಸಂಪುಟ. ಇಲ್ಲಿರುವ ಲೇಖನಗಳನ್ನು ಬರೆದ ಯಾರೂ ಮೂಲತಃ ಸಾಹಿತ್ಯದ ವಿದ್ಯಾರ್ಥಿಗಳಲ್ಲ; ಸಾಹಿತ್ಯವನ್ನು ಕಲಿಸುವ ಸಂಸ್ಥೆಗಳಿಗೆ ಸೇರಿದವರೂ ಅಲ್ಲ. ಅವರೆಲ್ಲ ಬಹುತೇಕ ವೈದ್ಯರು, ಎಂಜಿನಿಯರುಗಳು, ಸಮಾಜ ಶಾಸ್ತ್ರಜ್ಞರು, ವಿವಿಧ ವೈಜ್ಞಾನಿಕ ಹಾಗೂ ಔದ್ಯೋಗಿಕ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತ ಇರುವವರು. ಒಂದುವೇಳೆ ಇವರೇನಾದರೂ ಕರ್ನಾಟಕದಲ್ಲೆ ಇದ್ದಿದ್ದರೆ, ಇಲ್ಲಿರುವ ಎಷ್ಟೋ

ಇಂಜಿನಿಯರುಗಳ ಹಾಗೆ, ವೈದ್ಯರುಗಳ ಹಾಗೆ ತಮಗೂ ಕನ್ನಡ ಸಾಹಿತ್ಯಕ್ಕೂ ಏನೇನೂ ಸಂಬಂಧವಿಲ್ಲದವರ ಹಾಗೆ ಹಾಯಾಗಿ ಇದ್ದು ಬಿಡುತ್ತಿದ್ದರೇನೋ! ಆದರೆ ಇವರಿರುವುದು ದೂರದ ಅಮೆರಿಕಾದಲ್ಲಿ; ತಾವು ಹುಟ್ಟಿ ಬೆಳೆದು ಬದುಕಿದ ಕನ್ನಡ ನಾಡಿನ ಸಾಂಸ್ಕೃತಿಕ ಸ್ಮರಣೆಗಳನ್ನು ತಮ್ಮ ಅಂತರಾಳಗಳಲ್ಲಿ ಅಡಗಿಸಿಕೊಂಡ ಏಕಾಕಿತನಗಳಲ್ಲಿ. ಹೀಗಾಗಿ ಕೆಲವರಿಗಾದರೂ ಈ ಪರಿಸರದಲ್ಲಿ ತಮ್ಮನ್ನು ಹಿಡಿದು ಕೂಡಿಸಬಹುದಾದದ್ದು, ತಮ್ಮನ್ನು ತಾವು ಕಂಡುಕೊಳ್ಳಬಹುದಾದದ್ದು, ಮತ್ತು ತಮ್ಮ ಪರಂಪರೆಯೊಂದಿಗೆ ಅನುಸಂಧಾನ ನಡೆಯಿಸುತ್ತ ತಮ್ಮ ವ್ಯಕ್ತಿತ್ವವನ್ನು ಉಳಿಸಿಕೊಳ್ಳಲು ಸಾಧ್ಯವಾಗುವುದು ಕನ್ನಡ ಪರ ಕಾಳಜಿಗಳ ಮೂಲಕವೇ ಎಂದು ಅನ್ನಿಸುವುದು ಸಹಜವಾಗಿದೆ.

ಒಂದು ಕಾಲಕ್ಕೆ ಭಾರತೀಯರಿಗೆ 'ಸ್ವದೇಶೋ ಭುವನತ್ರಯಂ'. ಆದರೆ ಈಗ ಭುವನತ್ರಯವೇ ಸ್ವದೇಶ ಎಂಬ ಅರಿವಿಗೆ ಕಣ್ ತೆರೆದಿದ್ದೇವೆ. ಹೀಗಾಗಿ ಭಾರತದವರೂ ಸೀಮೋಲ್ಲಂಘನ ಮಾಡಿ ದೇಶ-ವಿದೇಶಗಳಲ್ಲಿ ನೆಲಸುವ ಧೈರ್ಯ ಮಾಡಿದ್ದಾರೆ.

ತಮ್ಮ ಅದೃಷ್ಟವನ್ನರಸಿಕೊಂಡು, ಯಾವತ್ತಿನಿಂದಲೋ ಅಮೆರಿಕಾಕ್ಕೆ ಬಂದು ನೆಲಸಿರುವ ಕನ್ನಡಿಗರು, ಬೇರೊಂದು ಸಾಂಸ್ಕೃತಿಕ ಸಂದರ್ಭದಲ್ಲಿ ಬದುಕಬೇಕಾಗಿ ಬಂದಿರುವುದರಿಂದ, ಲೌಕಿಕವಾಗಿ ಅತ್ಯಂತ ಆಕರ್ಷಕವೂ, ಪ್ರಬಲವೂ ಆದ ಜೀವನಕ್ರಮದೊಂದಿಗೆ ಮುಖಾಮುಖಿಯಾಗುವ ಅನಿವಾರ್ಯತೆ ಅವರಿಗೆ ಒದಗಿದೆ. ಹೀಗಾಗಿ ಇವರು ಒಂದು ಬಗೆಯ ಸಾಂಸ್ಕೃತಿಕ ಸಂಘರ್ಷಕ್ಕೆ ಒಳಗಾಗಿದ್ದಾರೆ ಎನ್ನಬಹುದು. ಈ ಸಂಘರ್ಷದಿಂದ ಲಾಭವೂ ಉಂಟು, ಭಯವೂ ಉಂಟು. ಲಾಭ, ಯಾಕೆಂದರೆ ನಮ್ಮ ಭಾರತೀಯ ಪರಿಸರದಿಂದ ಕಟ್ಟಿಕೊಂಡು ಬಂದ ಎಷ್ಟೋ ಸಾಂಪ್ರದಾಯಿಕವಾದ ಸಂಗತಿಗಳು, ವಿಚಾರಗಳು, ನಂಬಿಕೆಗಳು ಈ ಜೀವನ ಕ್ರಮದ ಸಂಪರ್ಕದಿಂದ ಒದಗುವ ಆಘಾತಗಳಿಂದ, ಚಿಕಿತ್ಸೆಗೆ ಒಳಗಾಗುತ್ತವೆ, ತಿದ್ದುಪಡಿಹೊಂದುತ್ತವೆ, ಹಾಗೂ ಬದುಕನ್ನು ನೋಡುವ ಮತ್ತು ಗ್ರಹಿಸುವ ನಿಲುವುಗಳು ಮಾರ್ಪಾಡು ಹೊಂದುತ್ತವೆ, ಇನ್ನೆಷ್ಟೋ ಅಸಂಗತಿಗಳು ವಿಮರ್ಶೆಗೆ ಗುರಿಯಾಗುತ್ತವೆ. ಇವು ವ್ಯಕ್ತಿತ್ವಕ್ಕೆ ಒದಗುವ 'ಲಾಭ' ಎನ್ನಬಹುದು. ಇನ್ನು 'ಭಯ' - ಯಾಕೆಂದರೆ, ಈ ನೂತನವೂ, ಪ್ರಬಲವೂ ಆಕರ್ಷಕವೂ ಆದ ಜೀವನವಿಧಾನ ಪ್ರವಾಹದೊಳಗೆ, ತಮ್ಮನ್ನು ತಾವು ಕಳೆದುಕೊಳ್ಳುವ ಆತಂಕದಿಂದ. ಇಲ್ಲಿನ ಪ್ರಶ್ನೆ, ಈ ಸಾಂಸ್ಕೃತಿಕ ಸಂಘರ್ಷದಲ್ಲಿ ಕನ್ನಡಿಗರಾದ ನಾವು ನಮ್ಮ ವ್ಯಕ್ತಿತ್ವವನ್ನು ಉಳಿಸಿಕೊಳ್ಳುವುದು ಹೇಗೆ - ಎನ್ನುವುದು. ಈ ಭಯ ಕೂಡಾ ಒಂದು ರೀತಿಯಲ್ಲಿ ಸಾಪೇಕ್ಷವಾದುದು ಎನ್ನಬಹುದು. ಅಮೇರಿಕಾದಲ್ಲಿರುವಾಗ ನಾವೂ ಅಮೆರಿಕನ್ನರಾಗುವುದರಲ್ಲಿ ತಪ್ಪೇನಿದೆ ಎಂದು ಕೆಲವರು ಕೇಳಬಹುದು. ಆದರೆ ಭಾರತದಂಥ ದೇಶದಿಂದ ಬಂದ, ಮತ್ತು ದಟ್ಟವಾದ ಸಾಂಸ್ಕೃತಿಕ ಸ್ಮರಣೆಗಳನ್ನು ಹುದುಗಿಸಿಕೊಂಡ, ಹಾಗೂ ವ್ಯಕ್ತಿತ್ವದಲ್ಲಿ ನಂಬಿಕೆಯುಳ್ಳ ಕೆಲವರಿಗಾದರೂ ತಮ್ಮತನವನ್ನು ಬಿಟ್ಟುಕೊಟ್ಟು ಬೇರೊಂದರಲ್ಲಿ ಕರಗಿ ಹೋಗುವುದು ಅಪೇಕ್ಷಣೀಯವೆಂದಾಗಲೀ,

ಅನಿವಾರ್ಯವೆಂದಾಗಲೀ ಅನ್ನಿಸಲಾರದು. ಆದಕಾರಣ ಅಮೆರಿಕಾದಲ್ಲಿದ್ದೂ ತಮ್ಮ ಕನ್ನಡ ವ್ಯಕ್ತಿತ್ವವನ್ನು ಉಳಿಸಿಕೊಳ್ಳುವ ಸಂರಕ್ಷಕ ಕವಚಗಳನ್ನು ಕಂಡುಕೊಳ್ಳುವುದು ಅಗತ್ಯವಾಗಿದೆ. (ಈ ಅನಿವಾರ್ಯತೆ ಕರ್ನಾಟಕದಲ್ಲಿ ಸಾಕಷ್ಟು ಕಾಲ ಇದ್ದು ಅನಂತರ ಅಮೆರಿಕಾದಲ್ಲಿ ಬಂದು ನೆಲಸಿದವರಿಗೆ ಇರುವಂತೆ, ಅಲ್ಲೇ ಹುಟ್ಟಿ ಬೆಳೆದ ತಲೆಮಾರಿನವರಿಗೆ ಇರುತ್ತದೆಯೆ ಎಂಬುದು ಅನುಮಾನಾಸ್ಪದವಾದ ಸಂಗತಿಯಾಗಿದೆ) ಹೀಗೆ ವ್ಯಕ್ತಿತ್ವವನ್ನು ಉಳಿಸಿಕೊಳ್ಳುವುದರಲ್ಲಿ ಒಂದು ಬಗೆಯ ಧೀರೋದಾತ್ತತೆ ಮತ್ತು ಸಂತೋಷ ಇದೆಯೆಂಬುದನ್ನು ಬಹುಮಂದಿ ಕಂಡುಕೊಂಡಿದ್ದಾರೆ. ಅದರ ಪರಿಣಾಮವಾಗಿ, ಕಡಲಾಚೆಯ ಈ ಕನ್ನಡಿಗರು – ಇವರನ್ನು ಭಾರತೀಯ ಕನ್ನಡಿಗರೆಂದು ಕರೆಯುವುದು ಹೆಚ್ಚು ಉಚಿತ – ತಮ್ಮ ಕನ್ನಡ – ಭಾರತದ ಪ್ರಾದೇಶಿಕ ಸಾಂಸ್ಕೃತಿಕ ಸ್ಮರಣೆಗಳನ್ನು ಪುನರಭಿನಯಿಸುವ, ಹಾಡು, ಕುಣಿತ, ಕತೆ, ಕವಿತೆ, ನಾಟಕ, ಹಬ್ಬ– ಹರಿದಿನ ಇತ್ಯಾದಿಗಳ ಮೂಲಕ ತಮ್ಮನ್ನು ತಾವು ಅಭಿವ್ಯಕ್ತಪಡಿಸಿಕೊಳ್ಳುತ್ತ ಮತ್ತು ತಮ್ಮನ್ನು ಹಿಡಿದು ಒಂದುಗೂಡಿಸುವ ಸಂಘ – ಸಂಸ್ಥೆಗಳನ್ನು ಕಟ್ಟಿಕೊಳ್ಳುತ್ತ, ಸಮ್ಮೇಳನಗಳನ್ನು ಏರ್ಪಡಿಸುತ್ತ, ಕರ್ನಾಟಕದಿಂದ ಬರುವ ಅಥವಾ ಬರಮಾಡಿಕೊಳ್ಳುವ ಸಾಹಿತಿ – ಕಲಾವಿದ – ಚಿಂತಕರೊಂದಿಗೆ, ಸಂವಾದಿಸುತ್ತ, ಸ್ಪಂದಿಸುತ್ತ – ಈ ಬಗೆಯ ಬಹುಮುಖೀ ಚಟುವಟಿಕೆಗಳ ಮೂಲಕ ತಮ್ಮೊಳಗಿನ ಕನ್ನಡತನವನ್ನು ತುಕ್ಕು ಹಿಡಿಯದಂತೆ ಕಾಪಾಡಿಕೊಂಡಿದ್ದಾರೆ. ಹೀಗೆ ತಮ್ಮ ಬಿಡುವಿಲ್ಲದ ಗಡಿಬಿಡಿಗಳ ನಡುವೆ, ತಮ್ಮ ಕನ್ನಡತನವನ್ನು ಈ ನಮ್ಮ ಕಡಲಾಚೆಯ ಕನ್ನಡಿಗರು ಉಳಿಸಿಕೊಂಡದ್ದರ ಸಂಕೇತವೇ, ಈ 'ಕುವೆಂಪು ಸಾಹಿತ್ಯ ಸಮೀಕ್ಷೆ'.

ಗಮನಿಸಬೇಕಾದ ಸಂಗತಿ ಎಂದರೆ ಶ್ರೀ ಕುವೆಂಪು ಅವರು ಹೊರನಾಡುಗಳಲ್ಲಿ ಬದುಕಬೇಕಾದ ಕನ್ನಡಿಗರಿಗೆ ಒಂದು ರೀತಿಯ ಮಾರ್ಗದರ್ಶಕ ಸೂಕ್ತಿಯೊಂದನ್ನು ಕೊಟ್ಟಿದ್ದಾರೆ. ಅದೆಂದರೆ : 'ಎಲ್ಲಾದರು ಇರು ಎಂತಾದರು ಇರು ಎಂದೆಂದಿಗು ನೀ ಕನ್ನಡವಾಗಿರು' – ಎನ್ನುವುದು. ನನ್ನ ಗಮನಕ್ಕೆ ಬಂದಂತೆ ಅಮೆರಿಕಾದ ಬಹುಸಂಖ್ಯೆಯ ಕನ್ನಡ ಕೂಟಗಳಲ್ಲಿ ಕಾರ್ಯಕ್ರಮಗಳ ಮೊದಲಿಗೆ ಕೇಳಿಬರುವುದು ಯಾವುದೇ ದೇವತಾ ಪ್ರಾರ್ಥನೆ ಅಲ್ಲ; 'ಎಲ್ಲಾದರು ಇರು ಎಂತಾದರು ಇರು ಎಂದೆಂದಿಗು ನೀ ಕನ್ನಡವಾಗಿರು' ಎಂಬ ಕುವೆಂಪು ಕವಿತೆಯ ಹಾಡುಗಾರಿಕೆ. ಯಾವತ್ತಿನಿಂದಲೋ ಅಮೆರಿಕಾದ ಕನ್ನಡಿಗರು ಕುವೆಂಪು ಅವರ ಈ ನಿರ್ದೇಶನವನ್ನು ಒಂದು ಮಂತ್ರದೀಕ್ಷೆಯಂತೆ ಒಪ್ಪಿಕೊಂಡು ತಾವು 'ಕನ್ನಡವಾಗಿರುವುದು' ಹೇಗೆ ಎಂಬುದನ್ನು – ಉಳಿದೆಲ್ಲ ವಿದೇಶೀ ಕನ್ನಡಿಗರಿಗಿಂತ ಭಿನ್ನವಾಗಿ, ಮತ್ತು ಅರ್ಥಪೂರ್ಣವಾಗಿ ತೋರಿಸಿಕೊಟ್ಟಿದ್ದಾರೆ. ತಾವು ನಿಂತ ನೆಲವನ್ನೆ ಕರ್ನಾಟಕವನ್ನಾಗಿ ಮಾಡಿಕೊಳ್ಳುವ ಅವರ ಕಾಳಜಿಗಳು, ಕರ್ನಾಟಕದ ನೆಲದಲ್ಲೆ ನಿಂತ ನಮ್ಮವರಿಗೆ ಇದೆಯೆ ಎಂದು ಕೇಳಿಕೊಳ್ಳುವಂಥ ಸ್ಥಿತಿಯಲ್ಲಿದ್ದೇವೆ ನಾವು – ಕಡಲೀಚೆಯ ಕನ್ನಡಿಗರು.

ಇಂಥ ಕಡಲಾಚೆಯ ಕನ್ನಡಿಗ ಬರೆಹಗಾರರು ಕುವೆಂಪು ಶತಮಾನೋತ್ಸವ ಸಂದರ್ಭದಲ್ಲಿ ಸಲ್ಲಿಸಿದ ನುಡಿಗೌರವ ಈ 'ಕುವೆಂಪು ಸಾಹಿತ್ಯ ಸಮೀಕ್ಷೆ', ಶ್ರೀ ಕುವೆಂಪು

ಅವರ ಸಾಹಿತ್ಯ ಅವರು ಹುಟ್ಟಿ ಬೆಳೆದು ಬದುಕಿದ ಸಹ್ಯಾದ್ರಿಯ ಪರ್ವತಾರಣ್ಯ ಪ್ರಪಂಚದಂತೆ ವಿಸ್ತಾರವೂ ವೈವಿಧ್ಯಮಯವೂ ದುಷ್ಪ್ರವೇಶ್ಯವೂ ಆಗಿ ಎಲ್ಲ ಕಾಲದ ವಿಮರ್ಶಕರಿಗೂ ಒಂದು ಸವಾಲಿನಂತಿದೆ. ಆದರೂ ಅದನ್ನು ಪ್ರವೇಶಮಾಡುವ ಸಾಹಸ ರಸಿಕರು ಕಡಮೆಯೇನೂ ಇಲ್ಲ. ನಮ್ಮ ಅಮೆರಿಕಾ ಕನ್ನಡ ಬರೆಹಗಾರರು ಹಿಂಜರಿಯದೆ, ಕುವೆಂಪು ಸಾಹಿತ್ಯದ ಅಧ್ಯಾತ್ಮಿಕ ಹಾಗೂ ತಾತ್ವಿಕ ಹಿನ್ನೆಲೆಗಳನ್ನು ಕುರಿತು, ಅವರ ನಿಸರ್ಗ ಪ್ರೀತಿಯನ್ನು ಕುರಿತು, ಅವರು ಕನ್ನಡಕ್ಕೆ ತಂದ ಸಾನೆಟ್ಟುಗಳ ರಚನಾಕ್ರಮವನ್ನು ಕುರಿತು, ಅವರ ವೈಜ್ಞಾನಿಕ ಹಾಗೂ ವೈಚಾರಿಕ ನಿಲುವುಗಳನ್ನು ಕುರಿತು, ಕತೆ-ಕಾದಂಬರಿ- ಲಲಿತ ಪ್ರಬಂಧ ನಾಟಕಗಳನ್ನು ಕುರಿತು, ಅವರ ಮಹಾಕಾವ್ಯವಾದ ಶ್ರೀ ರಾಮಾಯಣ ದರ್ಶನವನ್ನು ಕುರಿತು, ತಮ್ಮ ನೆನಪುಗಳಲ್ಲಿ ಮನೆ ಮಾಡಿಕೊಂಡಿರಬಹುದಾದ ಕುವೆಂಪು ಅವರ ವ್ಯಕ್ತಿತ್ವವನ್ನು ಕುರಿತು, ತಕ್ಕ ಪ್ರೀತಿ-ಗೌರವ-ಶ್ರದ್ಧೆಗಳಿಂದಲೇ ತಮ್ಮ ಕ್ರಿಯೆ-ಪ್ರತಿಕ್ರಿಯೆಗಳನ್ನು ದಾಖಲಿಸಿದ್ದಾರೆ. ಒಟ್ಟಾರೆಯಾಗಿ ಕುವೆಂಪು ಸಾಹಿತ್ಯ ನಿರ್ಮಿತಿಯನ್ನು ಕುರಿತ ಒಂದು ಒಳ್ಳೆಯ 'ಸಮೀಕ್ಷೆ' ಇದು. ಅದರಲ್ಲೂ ಪ್ರತ್ಯೇಕವಾಗಿ ಹೇಳಬೇಕಾದ ಮಾತೆಂದರೆ ಕುವೆಂಪು ಅವರ 'ಕಿಂದರಿಜೋಗಿ'ಯನ್ನು ಕುರಿತು ಬರೆಯುವಾಗ ಶ್ರೀ ಹೆಚ್.ವೈ. ರಾಜಗೋಪಾಲ್ ಅವರು, ಕುವೆಂಪು ಅವರ ಕವಿತೆಗೆ ಮೂಲವಾದ ಬ್ರೌನಿಂಗನ ಕಥಾವಸ್ತುವನ್ನು ಕುರಿತು ಇಂಟರ್‌ನೆಟ್ ಮೂಲಕ, ಅದರ ಜಾನಪದ-ಚಾರಿತ್ರಿಕ ಆಕರಗಳನ್ನು ಕಂಡುಹಿಡಿಯುತ್ತ ಈ ಕತೆಯ ಚರಿತ್ರೆಯ ಬಾಗಿಲುಗಳನ್ನು ತೆರೆಯುವ ಕ್ರಮ ಚೇತೋಹಾರಿಯಾಗಿದೆ ಮಾತ್ರವಲ್ಲ, ಅಧ್ಯಯನದ ಹೊಸ ಸಾಧ್ಯತೆಗಳನ್ನು ಸೂಚಿಸುತ್ತದೆ. ಹಾಗೆಯೆ ಕುವೆಂಪು ಅವರ ಕಾನೂರು ಹೆಗ್ಗಡಿತಿಯನ್ನು ಸಮಾಜ ಶಾಸ್ತ್ರೀಯ ಅಧ್ಯಯನಕ್ಕೆ ಗುರಿಪಡಿಸಿದ ವೈ.ಆರ್. ಮೋಹನ್ ಅವರ ಬರೆಹವೂ, ವಿವಿಧ ಜ್ಞಾನಶಾಖೆಗಳವರು ಸೃಜನ ಸಾಹಿತ್ಯದ ಅಧ್ಯಯನ ಹಾಗೂ ವಿಶ್ಲೇಷಣೆಗೆ ತೊಡಗುವುದರಿಂದ ಸಾಹಿತ್ಯದ ಅರ್ಥವಂತಿಕೆಗೆ ಒದಗುವ ಆಯಾಮಗಳೇನೆಂಬುದನ್ನು - ಸ್ಪಷ್ಟಪಡಿಸುತ್ತದೆ. ಇವರನ್ನೂ, ಇನ್ನಿತರ ಬರೆಹಗಾರರನ್ನೂ ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ಇದರ ಪ್ರಧಾನ ಸಂಪಾದಕರಾದ ಶ್ರೀ ನಾಗ ಐತಾಳರು ಇಷ್ಟೊಂದು ಬರೆಹಗಳನ್ನು ಸಂಗ್ರಹಿಸಿ - ಜತೆಗೆ ನಮ್ಮನ್ನೂ (ನಾನು - ಡಾ. ಪ್ರಭುಶಂಕರ - ಡಾ.ಎಸ್. ಎಸ್. ಲಕ್ಷ್ಮೀನಾರಾಯಣ ಭಟ್ಟ) ಸೇರಿಸಿಕೊಂಡು ಕವಿ ಕುವೆಂಪು ಅವರ ಶತಮಾನ ಸ್ಮರಣೆಗೆ ಗೌರವವನ್ನು ಸಲ್ಲಿಸುವ ಅವಕಾಶವನ್ನು ಕಲ್ಪಿಸಿಕೊಟ್ಟಿದ್ದಾರೆ. ಇದಕ್ಕಾಗಿ ಐತಾಳರಿಗೆ ಧನ್ಯವಾದಗಳು.

ಬೆಂಗಳೂರು

ಏಪ್ರಿಲ್ ೨೦೦೪

ಜಿ.ಎಸ್. ಶಿವರುದ್ರಪ್ಪ

# ಕನ್ನಡಕ್ಕೆ ಶ್ರೀ ಕುವೆಂಪು ನೀಡಿದ ಕಾಣಿಕೆ

## ಪ್ರಭುಶಂಕರ, ಕರ್ನಾಟಕ

ಒಂದು ಘಟನೆಯಿಂದ ಕುವೆಂಪು ಸಾಹಿತ್ಯ ಸಮೀಕ್ಷೆಯನ್ನು ಪ್ರಾರಂಭಿಸುವ ಇಚ್ಛೆ ನನ್ನದು. ಸುಮಾರು ಹದಿನೈದು ವರ್ಷಗಳ ಹಿಂದೆ ಯೂರೋಪಿನ ನೊಬೆಲ್ ಪ್ರಶಸ್ತಿ ಪ್ರದಾನ ಸಮಿತಿಯಿಂದ ನವದೆಹಲಿಯ ಕೇಂದ್ರ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಿಗೆ ಒಂದು ಪತ್ರ ಬಂತು. ಅದರಲ್ಲಿ ಆ ವರ್ಷದ ನೊಬೆಲ್ ಪ್ರಶಸ್ತಿಗೆ ಭಾರತೀಯ ಸಾಹಿತಿಯೊಬ್ಬರನ್ನು ನಾಮಕರಣ ಮಾಡುವಂತೆ ಕೋರಲಾಗಿತ್ತು. ಕೇಂದ್ರ ಸಾಹಿತ್ಯ ಅಕಾಡೆಮಿಯ ಸದಸ್ಯರೆಂದರೆ ಎಲ್ಲ ಭಾರತೀಯ ಭಾಷೆಗಳನ್ನು ಪ್ರತಿನಿಧಿಸುವ ಪ್ರಸಿದ್ಧ ಸಾಹಿತಿಗಳೆಂಬುದು ಎಲ್ಲರಿಗೂ ತಿಳಿದಿರುವ ವಿಷಯವೇ. ಪ್ರಥಮ ಬಾರಿಗೆ ನೊಬೆಲ್ ಪ್ರಶಸ್ತಿಪ್ರದಾನ ಸಮಿತಿಯಿಂದ ಬಂದ ಇಂಥದೊಂದು ಪತ್ರದಿಂದ ಸಹಜವಾಗಿಯೇ ಅಕಾಡೆಮಿಯ ಸದಸ್ಯರೆಲ್ಲರೂ ಹರ್ಷಪುಳಕಿತರಾಗಿದ್ದರು. ಸಮಿತಿಯಲ್ಲಿ ಈ ವಿಷಯ ಚರ್ಚೆಗೆ ಬಂತು. ಆಗ ಸ್ವಲ್ಪ ಮಟ್ಟಿನ ಗೊಂದಲ, ಕಸಿವಿಸಿಗಳು ಪ್ರಾರಂಭವಾದುವು. ಭರತಖಂಡದ ಯಾವ ಭಾಷೆಯ ಸಾಹಿತಿಯನ್ನು ನಾಮಕರಣ ಮಾಡುವುದು ಎಂಬ ಪ್ರಶ್ನೆ ಎಲ್ಲರನ್ನೂ ಕಾಡಿತು. ಭಾರತದ ಪ್ರತಿಯೊಂದು ಭಾಷೆಯಲ್ಲಿಯೂ ಹಿಂದಿನ ಕೆಲವು ವರ್ಷಗಳಲ್ಲಿ ಕಾವ್ಯ, ಕಾದಂಬರಿ, ಸಣ್ಣಕತೆ, ನಾಟಕ, ಸಾಹಿತ್ಯವಿಮರ್ಶೆ – ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಸಮೃದ್ಧವಾದ ಸಾಹಿತ್ಯ ಸೃಷ್ಟಿಯಾಗಿದ್ದದ್ದು ಹೌದು. ಆದರೆ ಎಲ್ಲ ಸಾಹಿತ್ಯ ಪ್ರಕಾರಗಳಲ್ಲಿಯೂ ಮೌಲಿಕವಾದ ಅನೇಕ ಕೃತಿಗಳನ್ನು ರಚಿಸಿದವರು ಯಾರೂ ಯಾರೊಬ್ಬರ ಶಿಫಾರಸ್ಸಿಗೂ ಅರ್ಹರಾದವರಂತೆ ತೋರಲಿಲ್ಲ. ಕೊನೆಗೆ ಸದಸ್ಯರೆಲ್ಲರೂ ಆಯ್ಕೆಯ ವಿಷಯವನ್ನು ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಿಗೆ ಬಿಟ್ಟರು. ಆಗ ಅಧ್ಯಕ್ಷರಾಗಿದ್ದರು ಡಾ. ವಿ.ಕೆ. ಗೋಕಾಕರು. ಆಗ ಅವರು ತಾವು ಕನ್ನಡಿಗರಾಗಿದ್ದೂ, ಮಹಾಕಾವ್ಯವನ್ನೂ, ಕವನಗಳನ್ನೂ, ದೊಡ್ಡ ಕಾದಂಬರಿಯನ್ನೂ ರಚಿಸಿದ್ದು ಹೌದಾದರೂ, ನೊಬೆಲ್ ಬಹುಮಾನಕ್ಕೆ, ಭಾರತೀಯ ಸಾಹಿತಿಗಳಲ್ಲಿ ಅರ್ಹರಾದವರು ಎಂದು ಡಾ. ಕೆ.ವಿ. ಪುಟ್ಟಪ್ಪನವರ ಹೆಸರನ್ನು, ಅವರ ಸಾಧನೆಗಳನ್ನು ವಿವರಿಸಿ, ಸೂಚಿಸಿದರು. ಸಭೆ ಅದನ್ನು ಸರ್ವಾನುಮತದಿಂದ ಅನುಮೋದಿಸಿತು. ಅದಕ್ಕೆ ಕಾರಣ, ಡಾ. ಗೋಕಾಕರು ಕುವೆಂಪು ಅವರ ಸಾಧನೆಗಳನ್ನು ಸಭೆಗೆ ನಿವೇದಿಸಿದ ರೀತಿ : ಕನ್ನಡ ಸಾಹಿತ್ಯದಲ್ಲಿ ಮೇರುಕೃತಿಯಾಗಿ ರಾರಾಜಿಸುತ್ತಿರುವ ಇಪ್ಪತ್ತೈದು ಸಾವಿರ ಪಂಕ್ತಿಗಳ ಮಹಾಕಾವ್ಯ ಶ್ರೀ ರಾಮಾಯಣ ದರ್ಶನಂ ಜೊತೆಗೆ ಎರಡು ಸಾವಿರ ಪುಟಗಳಷ್ಟು ಕಾವ್ಯ, ಎರಡು ಸಾವಿರ ಪುಟಗಳಷ್ಟು ಗದ್ಯ ಸಾಹಿತ್ಯ – ಇದರಲ್ಲಿ

ಸಾಹಿತ್ಯ ಮೀಮಾಂಸೆ, ದರ್ಶನ ವಿಮರ್ಶೆ, ವಿಚಾರ ಸಾಹಿತ್ಯ ಎಲ್ಲ ಸೇರಿವೆ. ಹದಿನಾಲ್ಕು ನಾಟಕಗಳು, ಹತ್ತಿರ ಹತ್ತಿರ ಎರಡು ಸಾವಿರ ಪುಟಗಳಷ್ಟಾಗುವ ಎರಡು ಬೃಹತ್ ಕಾದಂಬರಿಗಳು, ಸಾವಿರ ಪುಟಗಳಷ್ಟು ವಿಸ್ತಾರವಾದ ಆತ್ಮಕಥೆ - ಇತ್ಯಾದಿ ಇತ್ಯಾದಿಗಳನ್ನು ಅಂದರೆ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲೂ ಕೃತಿ ರಚನೆ ಮಾಡಿರುವ ಏಕೈಕ ಸಾಹಿತಿಯೆಂದರೆ - ಕುವೆಂಪು ಎಂದು ಗೋಕಾಕರು ಸುದೀರ್ಘವಾದ ತಮ್ಮ ನಿವೇದನೆಯಲ್ಲಿ ವರ್ಣಿಸಿದರು. ಅವರ ಕೃತಿಗಳಲ್ಲಿ ಸಾಕಷ್ಟು ಭಾಗ ಇಂಗ್ಲಿಷ್ ಅನುವಾದದೊಡನೆ ನೊಬೆಲ್ ಸಮಿತಿಗೆ ಸೇರಿತು. ಆ ಸಂದರ್ಭದಲ್ಲಿ ಅನುವಾದ, ಸಂಗ್ರಹಣೆ, ಕೊನೆಗೆ ಅವನ್ನೆಲ್ಲ ಕೇಂದ್ರ ಸಾಹಿತ್ಯ ಅಕಾಡೆಮಿಗೆ ತಲುಪಿಸುವ ಕಾರ್ಯದಲ್ಲಿ ನಾನು ಪಾಲ್ಗೊಂಡಿದ್ದೆನಾಗಿ ಈ ವಿವರಗಳೆಲ್ಲ ಕೂಲಂಕಷವಾಗಿ ತಿಳಿಯುವುದು ನನಗೆ ಸಾಧ್ಯವಾಯಿತು.

ತಮ್ಮ ಅನನ್ಯವೂ ಅಮೂಲ್ಯವೂ ಆದ ಕೃತಿಗಳಿಂದ ಬಾನೆತ್ತರಕ್ಕೆ ಬೆಳೆದು ಒಂದು ಇಡೀ ಶತಮಾನವನ್ನು ತುಂಬಿ ನಿಂತ ಸಾಹಿತ್ಯ ಗೊಮ್ಮಟ ಕುವೆಂಪು. ಅವರ ಶಕ್ತಿಮೂಲವನ್ನೂ ಉಕ್ತಿವೈವಿಧ್ಯವನ್ನೂ ಒಂದು ಗಂಟೆಯ ಕೇಳ್ವಿಕೆಯ ಅವಧಿಗೆ ಅಳವಡಿಸುವುದು ಎಷ್ಟು ಕಷ್ಟ ಎಂಬುದು ಸಹೃದಯರಿಗೆಲ್ಲ ಅರ್ಥವಾಗುವಂಥದು. ಅಂಥ ಸಾಹಸವನ್ನು ಔದಾರ್ಯದಿಂದ ಸಹಿಸುತ್ತೀರಿ ಎಂಬ ನಂಬಿಕೆಯಿಂದ ಮುಂದುವರಿಯುತ್ತಿದ್ದೇನೆ.

ಕುವೆಂಪುರವರ ಒಂದು ಕವನದಿಂದ ಪ್ರಾರಂಭಿಸುತ್ತೇನೆ : "ಬಾ ಫಾಲ್ಗುಣ ರವಿ ದರ್ಶನಕೆ" ಎಂಬುದು ಅದು :

ಶಿವ ಮಂದಿರ ಸಮ ವನ ಸುಂದರ ಸುಮ ಶೃಂಗಾರದ ಗಿರಿ ಶೃಂಗಕೆ ಬಾ;
ಬಾ ಫಾಲ್ಗುಣ ರವಿ ದರ್ಶನಕೆ!
ಕುಂಕುಮ ಧೂಳಿಯ ದಿಕ್ತಟ ವೇದಿಯೊಳೋಕುಳಿಯಲಿ ಮಿಂದೇಳುವನು;
ಕೋಟಿವಿಹಂಗಮ ಮಂಗಲರವ ರಸ ನೈವೇದ್ಯಕೆ ಮುದ ತಾಳುವನು;
ಚಿನ್ನದ ಚೆಂಡೆನೆ ಮೂಡುವನು; ಹೊನ್ನನೆ ಹೊಯ್‌ನೀರ್ ನೀಡುವನು.
ಸೃಷ್ಟಿಯ ಹೃದಯಕೆ ಪ್ರಾಣಾಗ್ನಿಯ ಹೊಳೆಹರಿಯಿಸಿ ರವಿ ದಯಮಾಡುವನು!

ತೆರೆತೆರೆಯಾಗಿಹ ನೊರೆನೊರೆ ಕಡಲೆನೆ ನೋಡುವ ಕಣ್ಣೋಡುವವರೆಗೆ
ಬನಸಿರಿ ತುಂಬಿದ ಕಣಿವೆಯ ಹಂಬಿರೆ ಧೂಳೀಸಮಹಿಮ ಬಾನ್‌ಕರೆಗೆ
ಪ್ರತಿಭೆಯ ಹೋಮಾಗ್ನಿಯ ಮೇಲೆ ಕವಿಮನ ತಾನುರಿದುರಿದೇಳೆ
ಮರಗಿಡದಲಿ ಜಡದೊಡಲಲಿ ಇದೆಕೋ ಸ್ಪಂದಿಸುತಿದೆ ಭಾವಜ್ವಾಲೆ !

ವರ್ಣನದಿಂದ್ರಿಯ ನಂದನವನು ದಾಂಟುತೆ ದರ್ಶನ ಮುಕ್ತಿಯ ಸೇರಿ
ವ್ಯಕ್ತಿತೆ ಮೈಮರೆವುದು ಸೌಂದರ್ಯ ಸಮಾಧಿಯೊಳಾನಂದವ ಹೀರಿ:
ಸರ್ವೇಂದ್ರಿಯ ಸುಖನಿಧಿ ಅಲ್ಲಿ; ಸರ್ವಾತ್ಮನ ಸನ್ನಿಧಿ ಅಲ್ಲಿ;
ಸಕಲಾರಾಧನ ಸಾಧನಬೋಧನದನುಭವ ರಸ ತಾನಹುಲ್ಲಿ!

ಕುವೆಂಪು ಅವರಿಗೆ ಪ್ರಕೃತಿ ದರ್ಶನದಿಂದ ದೊರಕುತ್ತಿದ್ದುದು ಬರಿಯ ಸೌಂದರ್ಯಾನುಭೂತಿಯಲ್ಲ, ಆಧ್ಯಾತ್ಮಿಕ ಅನುಭೂತಿ ಕೂಡ. ಶ್ರೀ ರಾಮಕೃಷ್ಣ ಪರಮಹಂಸರಿಗೆ, ಬಾಲ್ಯದಲ್ಲೇ ಸಮಾಧಿಯ ಅನುಭವವಾದದ್ದು ಪ್ರಕೃತಿ ಸೌಂದರ್ಯದ ಮೂಲಕ. ದಟ್ಟವಾದ ಕಪ್ಪುಮೋಡದ ಹಿನ್ನೆಲೆಯಲ್ಲಿ ಬೆಳ್ಳನೆಯ ಬಲಾಕ ಪಂಕ್ತಿ ಹಾರಿದುದನ್ನು ಕಂಡು, ಮುಂದೆ ರಾಮಕೃಷ್ಣ ಪರಮಹಂಸರಾದ ಬಾಲಕ ಗದಾಧರ ತಾನು ಮೊದಲ ಸಮಾಧಿಯನ್ನು ಪಡೆದುಕೊಂಡುದಾಗಿ ಹೇಳಿದ. ಆ ಸಂದರ್ಭವನ್ನು ವರ್ಣಿಸಿ ರಾಮಕೃಷ್ಣರ ಜೀವನ ಚರಿತ್ರೆಯನ್ನು ಬರೆಯುತ್ತಾ ಕುವೆಂಪು ಹೇಳುತ್ತಾರೆ : ''ಕಲೆ ನನ್ನಿಯ (=ಸತ್ಯದ) ನೆಲೆಗೆ ಹೆಬ್ಬಾಗಿಲು.'' ಮುಂದುವರಿದು ಹೇಳುತ್ತಾರೆ : ''ಅವ್ಯಕ್ತವೂ ನಿರ್ಗುಣ ನಿರಾಕಾರವೂ ಆಗಿರುವ ಪರತತ್ವವು ಪ್ರಕಾಶವಾಗಬೇಕಾದರೆ ವ್ಯಕ್ತವೂ ಸಗುಣ ಸಾಕಾರವೂ ಆಗಿರುವ ಸೌಂದರ್ಯವಾಗಬೇಕು. ಏಕವೂ ಅಖಂಡವೂ ಆಗಿರುವ ಬ್ರಹ್ಮವು ಬುದ್ಧಿಯ ದೃಷ್ಟಿಗೆ ಸತ್ಯದಂತೆಯೂ, ಭಾವದ ದೃಷ್ಟಿಗೆ ಸೌಂದರ್ಯದಂತೆಯೂ ತೋರುತ್ತದೆ. ಸತ್ಯ ಸೌಂದರ್ಯಗಳ ಸಂಗಮವೆ ಪರಮ ಸಿದ್ಧಿ. ಆ ಅನುಭವದಲ್ಲಿ ಸತ್ಯವೇ ಸೌಂದರ್ಯ, ಸೌಂದರ್ಯವೇ ಸತ್ಯ.''[೧]

ಮೇಲೆ ಉದ್ಧರಿಸಿದ ಪದ್ಯದ ವಿಶ್ಲೇಷಣೆಯನ್ನು ಈಗ ಮುಂದುವರಿಸೋಣ: ಸೂರ್ಯೋದಯದ ದಿವ್ಯಕ್ರಿಯೆ ಯಜ್ಞವೊಂದರ ಮಂಗಳ ಚಿತ್ರವನ್ನು ಮನಸ್ಸಿಗೆ ತರುತ್ತದೆ. ''ಸೃಷ್ಟಿಯ ಹೃದಯಕೆ ಪ್ರಾಣಾಗ್ನಿಯ ಹೊಳೆ ಹರಿಯಿಸಿ ರವಿ ದಯ ಮಾಡುವನು'' ಮತ್ತು ''ಪ್ರತಿಭೆಯ ಹೋಮಾಗ್ನಿಯ ಮೇಲೆ, ಕವಿ ಮನ ತಾನುರಿದುರಿದೇಳೆ'' ಎಂಬ ಪಂಕ್ತಿಗಳೂ ''ಸಕಲಾರಾಧನ ಸಾಧನ ಬೋಧನದನುಭವ ರಸ ತಾನಹುದಲ್ಲಿ'' ಎಂಬ ಪಂಕ್ತಿಯೂ ಸೂರ್ಯೋದಯದ ದಿವ್ಯ ಕ್ರಿಯೆಯು ಆಧ್ಯಾತ್ಮಿಕತೆಯಲ್ಲಿ ಪರ್ಯವಸಾನವಾಗುವ ಯಜ್ಞ ಕ್ರಿಯೆಯನ್ನು, ಸತ್ಯ ಸೌಂದರ್ಯಗಳ ಅನನ್ಯತೆಯನ್ನು ನಮಗೆ ಮನವರಿಕೆ ಮಾಡಿಕೊಡುತ್ತವೆ. ಕುವೆಂಪು ಸತ್ಯ ಸೌಂದರ್ಯಗಳ ಯಮಳತೆಯನ್ನು ಇನ್ನೂ ವಾಚ್ಯವಾಗಿ ಹೇಳಿರುವ ಕವನ ಪಂಕ್ತಿಗಳೂ ಉಂಟು:

> ಆನಂದಮಯ ಈ ಜಗ ಹೃದಯ ;
> ಏತಕೆ ಭಯ? ಮಾಣೋ!
> ಸೂರ್ಯೋದಯ ಚಂದ್ರೋದಯ
> ದೇವರ ದಯೆ ಕಾಣೋ!
>
> ★ ★ ★
>
> ರವಿ ವದನನೆ ಶಿವ ಸದನವೊ
> ಬರಿ ಕಣ್ಣದು ಮಣ್ಣೊ!

---

೧. ಶ್ರೀ ರಾಮಕೃಷ್ಣ ಪರಮಹಂಸ, ಪು. ೧೮-೧೯, ಶ್ರೀ ರಾಮಕೃಷ್ಣಾಶ್ರಮ, ಮೈಸೂರು ೧೯೬೬.

ಶಿವನಿಲ್ಲದೆ ಸೌಂದರ್ಯವೆ?
ಶವಮುಖದಾ ಕಣ್ಣೊ![೧]

ಕುವೆಂಪು ಅವರ ಚೇತನಕ್ಕೆ ಆಧ್ಯಾತ್ಮಿಕತೆ ಅವತರಿಸಿದ್ದು, ಅಲ್ಲಿ ಅದು ಸ್ಥಾಯಿಯಾಗಿ ನಿಂತಿದ್ದು, ಅನಂತರ ಅದು ಅವರ ಪ್ರಜ್ಞೆಯನ್ನು ಅರಳಿಸಿ ವಿಶ್ವ ಪ್ರಜ್ಞೆಯನ್ನಾಗಿ ಮಾಡಿದ್ದು - ಇವೆಲ್ಲವೂ ಪವಾಡಗಳನ್ನು ಸಾರಾಸಗಟಾಗಿ ತಿರಸ್ಕರಿಸಿದ್ದ ಕುವೆಂಪುರವರ ಜೀವನದಲ್ಲಿ ನಡೆದ, ಪವಾಡದಂತೆ ಕಾಣದ ಪವಾಡಗಳು!

೧೯೨೪ನೆಯ ಜನವರಿ ೨೫ರ ಸಂಜೆ ಬೆಂಗಳೂರಿನ ಮಿತ್ರರ ಆಹ್ವಾನದ ಮೇರೆಗೆ 'ಲೋಟಸ್ ಲೀಫ್ ಕ್ಲಬ್'ನ ಉದ್ಘಾಟನೆಗಾಗಿ ಹೋಗಿದ್ದ ಕುವೆಂಪು ಅಂದು ರಾತ್ರಿ - ಅವರ ಮಾತುಗಳಲ್ಲಿಯೇ ಮುಂದೆ ನಡೆದುದನ್ನು ಕೇಳೋಣ :- "ರಾತ್ರಿ ಸಮಾರಂಭದ ಕಾರ್ಯಕ್ರಮಗಳೆಲ್ಲ ಮುಗಿದ ಅನಂತರ ನಾನು (ಭೂಪಾಳಂ ಚಂದ್ರಶೇಖರಯ್ಯನವರ ಕೊಠಡಿಯಲ್ಲಿ ತಂಗಿದ್ದವನು) ಅವರ ಮೇಜಿನ ಮೇಲೆ ನನ್ನ ಜೀವನ ನೌಕೆಯ ಕರ್ಣಧಾರ (navigator) ಸ್ವರೂಪವಾಗಲಿದ್ದ ಒಂದು ಮಹಾ ಪೂಜ್ಯ ಅನರ್ಘ್ಯ ವಸ್ತುವನ್ನು ಸಂದರ್ಶಿಸಿದೆ : ('Life of Sri Ramakrishna': Compiled from various Authentic Sources. ಶ್ರೀ ರಾಮಕೃಷ್ಣ ಜೀವನ ಚರಿತ್ರೆ - ಅನೇಕ ಅಧಿಕೃತ ಮೂಲಗಳಿಂದ ಸಂಗ್ರಹಿಸಿದುದು.) .... ಡೆಮಿ ಆಕಾರದ ೭೬೫ ಪುಟಗಳ ಬೃಹತ್ ಗಾತ್ರದ ಹೆಬ್ಬೊತ್ತಗೆ : ನನ್ನ ಪ್ರಜ್ಞೆಗೆ ಅರಿಯದಂತೆಯೇ ಮಹಾದೇವನ ಪುಸ್ತಕ ರೂಪೀ ಕೃಪಾಹಸ್ತ ತನ್ನ ಕಂದನನ್ನೆತ್ತಿ ಎದೆಗಪ್ಪಿಕೊಳ್ಳಲು ಕೈಚಾಚಿದಂತಿತ್ತು! ಶ್ರೀ ತಾಯಿಯ ಕರುಣೆ ಮೈದಾಳಿದಂತಿತ್ತು."[೨]

ಪರಮಹಂಸರ ವಿಸ್ತಾರವಾದ ಜೀವನ ಚರಿತ್ರೆಯನ್ನು ಓದುವುದಕ್ಕೆ ಮುನ್ನವೇ ಕುವೆಂಪು ಸ್ವಾಮಿ ವಿವೇಕಾನಂದರ ಅಮೋಘವೂ, ಶಕ್ತಿಪೂರ್ಣವೂ ಆದ ಉಪನ್ಯಾಸಗಳಿಂದಲೂ ಬರವಣಿಗೆಗಳಿಂದಲೂ ಪ್ರಭಾವಿತರಾಗಿದ್ದರು. ಸರ್ವಧರ್ಮ ಸಮನ್ವಯಾಚಾರ್ಯರಾದ ಶ್ರೀ ರಾಮಕೃಷ್ಣ ಪರಮಹಂಸರೂ, ತಮ್ಮ ವಿದ್ಯುದ್ವಾಣಿಯಿಂದ ತಮಸ್ಸಿನಲ್ಲಿ ಮುಳುಗಿ ಮೃತಪ್ರಾಯರಾಗಿದ್ದ ಭಾರತೀಯರನ್ನು ಎಚ್ಚರಗೊಳಿಸಿದ ಸ್ವಾಮಿ ವಿವೇಕಾನಂದರೂ ಕುವೆಂಪು ಅವರ ಸಾಹಿತ್ಯ ಸೃಷ್ಟಿಯ, ಪೂರ್ಣದೃಷ್ಟಿಯ ಪ್ರೇರಕ ಶಕ್ತಿಗಳಾಗಿದ್ದರು. ಪರಮಹಂಸರ ಮತ್ತು ಸ್ವಾಮೀಜಿಯ ಶ್ವಾಸೋಚ್ಛ್ವಾಸ ಸ್ವರೂಪಳಾಗಿದ್ದ ದಕ್ಷಿಣೇಶ್ವರದ ಭವತಾರಿಣೀ ದೇವಿ ತಮ್ಮ ಸಲುವಾಗಿಯೇ ದಕ್ಷಿಣಕ್ಕೆ ಬಂದದ್ದು ಎಂಬುದು ಕವಿಯ ನಂಬಿಕೆ. "ವಿಶ್ವವಿದ್ಯಾನಿಲಯೆ ಭಗವತಿ ಶ್ರೀ ಸರಸ್ವತಿಗೆ" ಎಂಬ ಕವನದಲ್ಲಿ ಅವರು ಹೀಗೆ ಹಾಡಿದ್ದಾರೆ :

---

೧. ಕುವೆಂಪು ಸಮಗ್ರಕಾವ್ಯ, ಸಂ. ೧. ಪು. ೬೨೮

೨. ನೆನಪಿನ ದೋಣಿಯಲ್ಲಿ, ಪು. ೪೫೮-೯

ಚಿದ್ರೂಪಿಣಿ ಭವತಾರಿಣಿ ಉತ್ತರೋತ್ತರೆ
ಕವಿಯನೆತ್ತಿ ರಕ್ಷಿಸಲ್ಕೆ
ಬಂದಳಿತ್ತ ದಕ್ಷಿಣಕ್ಕೆ
ಶ್ರೀ ವಿವೇಕ ಪರಮಹಂಸ ದಕ್ಷಿಣೇಶ್ವರೆ;

ಕನ್ನಡಕ್ಕಾಗಿ, ಕನ್ನಡಿಗರಿಗಾಗಿ ಕುವೆಂಪು ಅವರನ್ನು ವಾಸ್ತವವಾಗಿ, ಅಕ್ಷರಶಃ ಉಳಿಸಿಕೊಟ್ಟ ಸಂಸ್ಥೆ ಶ್ರೀ ರಾಮಕೃಷ್ಣ ಮಹಾ ಸಂಘ, ಅದೂ ತನ್ನ ಒಬ್ಬ ಅತ್ಯಪರೂಪದ ಸನ್ಯಾಸಿವರೇಣ್ಯರ ಮೂಲಕ. ಈ ಜೀವದಾನದ ಪ್ರಸಂಗವನ್ನು ಕುವೆಂಪು ತಮ್ಮ ಆತ್ಮಕಥೆಯಾದ ''ನೆನಪಿನ ದೋಣಿ''ಯಲ್ಲಿ ವಿವರವಾಗಿ ನಿರೂಪಿಸಿದ್ದಾರೆ.[೧]

೧೯೨೬ರಲ್ಲಿ, ಎಂದರೆ ಕವಿ ೨೨ರ ತರುಣರಾಗಿದ್ದಾಗ, ತೀವ್ರ ಅನಾರೋಗ್ಯಕ್ಕೆ ತುತ್ತಾದರು. ಆಗ ಅವರು ವಾಸಿಸುತ್ತಿದ್ದುದು ಮೈಸೂರಿನ ಸಂತೇಪೇಟೆಯ 'ಆನಂದ ಮಂದಿರ'ವೆಂಬ ಹೊಟೇಲಿನ - ಅಲ್ಲಿ ಆನಂದವೂ ಇರಲಿಲ್ಲ, ಅದು 'ಮಂದಿರ'ವೂ ಆಗಿರಲಿಲ್ಲ - ಅತ್ಯಂತ ಕೊಳಕಾದ, ಅವರೇ ಹೇಳಿರುವಂತೆ ''ಚಟ್ಟದಷ್ಟಗಲದ'' ಕೊಠಡಿಯಲ್ಲಿ! ದಿನವೂ ರಾಮಕೃಷ್ಣಾಶ್ರಮಕ್ಕೆ ಬರುತ್ತಿದ್ದ ತರುಣ ಮೂರು ನಾಲ್ಕು ದಿನ ಬಾರದೆ ಹೋದುದರಿಂದ ಸಹಜವಾಗಿಯೇ ಕಳವಳಗೊಂಡು ತಮ್ಮ ಆಪ್ತರೂ, ಆಶ್ರಮದ ಕಾರ್ಯದರ್ಶಿಯವರೂ, ಮಹಾರಾಜ ಕಾಲೇಜಿನ ಇತಿಹಾಸದ ಅಧ್ಯಾಪಕರೂ ಆಗಿದ್ದ ನಾ. ಕಸ್ತೂರಿಯವರನ್ನು 'ಅನ್ವೇಷಣೆ'ಗೆಂದು ಕಳುಹಿಸಿದರು. ಅವರು ಬಂದು ನೂರನಾಲ್ಕೋ ನೂರೈದೋ ಡಿಗ್ರಿ ಜ್ವರದಿಂದ ಬೇಯುತ್ತಾ, ಕೊಳಕಾದ ಕೊಠಡಿಯಲ್ಲಿ, ಕೊಳಕಾದ ಹಾಸಿಗೆಯಲ್ಲಿ ಮಲಗಿದ್ದ ಪುಟ್ಟಪ್ಪನವರನ್ನು ಕಂಡರು. ಅವರು ದಿಗ್ಭ್ರಾಂತರಾಗಿ ಸ್ವಾಮಿ ಸಿದ್ದೇಶ್ವರಾನಂದರನ್ನೂ ಕರೆದುತಂದರು. ಸ್ವಾಮೀಜಿ ಪುಟ್ಟಪ್ಪನವರನ್ನು ಆಸ್ಪತ್ರೆಗೆ ಸಾಗಿಸುವ ನಿರ್ಣಯ ಮಾಡಿ ಅದನ್ನು ರೋಗಿಗೂ ತಿಳಿಸಿದರು. ಅವರ ತೀರ್ಮಾನಕ್ಕೆ ಬದ್ಧರಾಗಲು ಸುತರಾಂ ಒಪ್ಪದಿದ್ದ ತರುಣನನ್ನು ಹೆಚ್ಚು ಕಡಿಮೆ ಬಲಾತ್ಕಾರದಿಂದಲೇ ಎಂಬಂತೆ, ಆಸ್ಪತ್ರೆಗೆ ಸಾಗಿಸಿದರು. ಅಲ್ಲಿ ಸ್ವಲ್ಪ ಮಟ್ಟಿಗೆ ಗುಣಮುಖರಾದ ಮೇಲೆ ಮತ್ತೆ ಒತ್ತಾಯದಿಂದಲೇ ಅವರು ಕೊಠಡಿಗೆ ಹೋಗಲು ಬಿಡದೆ, ಆಶ್ರಮಕ್ಕೇ ಕರೆದುಕೊಂಡು ಹೋಗಿ ಅಲ್ಲಿ ಊಟ ವಸತಿಗಳಿಗೆ ಏರ್ಪಾಟು ಮಾಡಿದರು. ಕೇರಳದ ರಾಜಮನೆತನದಿಂದ ಬಂದಿದ್ದ ಸ್ವಾಮೀಜಿ, ಆಶ್ರಮದ ಬಡಸ್ಥಿತಿಯಿಂದಾಗಿ, ಗುಡಿಸುವ ಕೆಲಸದಿಂದ ಅಡುಗೆಯವರೆಗೆ ಎಲ್ಲವನ್ನೂ ತಾವೇ ಮಾಡುತ್ತಿದ್ದರು. ಆಶ್ರಮದ ಇಂಥ ಸ್ಥಿತಿಯಲ್ಲೂ ತರುಣ ಕವಿಯನ್ನು ರಕ್ಷಿಸಿ ಕನ್ನಡ ಸಾಹಿತ್ಯಕ್ಕೆ ಕಾಣಿಕೆಯಾಗಿ ನೀಡಿದರು. ಪುಟ್ಟಪ್ಪನವರ ಆಶ್ರಮವಾಸ ಸುಮಾರು ಹನ್ನೆರಡು ವರ್ಷಗಳ ಕಾಲ ಮುಂದುವರಿಯಿತು! ಶ್ರೀ ಸ್ವಾಮಿ ಸಿದ್ದೇಶ್ವರಾನಂದರಿಗೆ ಕುವೆಂಪು ಕೃತಜ್ಞತೆಯನ್ನು ಕಾವ್ಯಮಯವಾಗಿ ಹೀಗೆ ಸಲ್ಲಿಸಿದ್ದಾರೆ :

---

೧. ನೆನಪಿನ ದೋಣಿಯಲ್ಲಿ, ಉದಯರವಿ ಪ್ರಕಾಶನ, ೧೯೯೮ (ನಾಲ್ಕನೆಯ ಮುದ್ರಣ) ೬೯೮-೭೧೮

ನಿಮಗೆ ನಾನಾವ ರೀತಿಯಿಂದೆನಿತು ಋಣಿ
ಎಂದು ಕಳೆದ ಕಾಲದ ಪುಸ್ತಕದ ಪುಟಗಳನ್,
ಒಂದೊಂದನೆಯ ಮಗುಚಿ ನೋಡಿದರೆ ಪಟಗಳನ್,
ಥಳಿಸುವುದು ವಜ್ರ ವೈಡೂರ್ಯಮಯ ನೆನಹು ಗಣಿ,
ಕೃತಜ್ಞತೆಯ ಕಣ್ ಕೋರೈಸುವೋಲ್! ದೇಹಮಂ
ಕಾಣ್ಕೆಗೈದಿರಿ ದೇವ ಧನ್ವಂತರಿಯ ಗುಡಿಗೆ;
ಪ್ರಾಣಮಂ ಕೊಂಡೊಯ್ದು ಭಾಗೀರಥಿಯ ತಡಿಗೆ
ಮೀಯಿಸಿದಿರದನು ಗುರುಮಂತ್ರದಿಂ. ಸ್ನೇಹಮಂ
ಸವಿಯೊಡ್ಡಿ ಶಿವಲಲಾಟಾಕ್ಷಿಯೊಳ್ ಅಭೀತಿಯಿಂ
ಚರಿಸುವಂತೆಸಗಿಹಿರಿ. ಸನ್ಯಾಸಯೋಗದಿಂ
ಧರ್ಮಗರ್ವದ ಸೋಂಕು ಸುಳಿಯದಾ ಪ್ರೀತಿಯಿಂ
ಸಾಮಾನ್ಯತೆಯನಾಂತು, ಕಲೆಗಳನುರಾಗದಿಂ
ರಸಯೋಗಿಯಾಗಿಪ ನೀಮೆ ಶಾಂತಿಯ ಭಟಂ,
ಮೇಣ್ ಆತ್ಮದಾನಂದ ಸಿದ್ಧೇಶ್ವರನೆ ದಿಟಂ!''[೧]

ಶ್ರೀರಾಮಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದರು ಮತ್ತು ಶ್ರೀ ರಾಮಕೃಷ್ಣ ಮಹಾಸಂಘ - ಈ ಮೂರರ ಪ್ರಭಾವವು ಮಲೆನಾಡಿನ ಕಿರುಹಳ್ಳಿಯಾದ ಕುಪ್ಪಳಿಯಲ್ಲಿ ಬೆಳೆದ ಬಾಲಕನೊಬ್ಬನು ವಿಶ್ವಮಾನವ ಪ್ರಜ್ಞೆಯನ್ನು ಬೆಳೆಸಿಕೊಂಡು, ವಿಶ್ವಮಾನವನಾಗಲು ನೆರವಾಯಿತು. ಕುವೆಂಪು ಮುಂದೆ, ತಮ್ಮ ಜೀವಮಾನದ ಉತ್ತರಾರ್ಧದಲ್ಲಿ ವಿಶ್ವಮಾನವ ಸಂದೇಶವನ್ನು ರೂಪಿಸಿ, ಅದು ಈ ಲೋಕ ಪರಿಸ್ಥಿತಿಯಲ್ಲಿ ಅನುಷ್ಠಾನಯೋಗ್ಯವಲ್ಲ ಎಂದು ಯಾರು ಎಷ್ಟೇ ಹೇಳಿದರೂ, ಕಿವಿಗೊಡದೆ ಜಗತ್ತು ಈ ಸಂದೇಶವನ್ನು ಮೈಗೂಡಿಸಿಕೊಂಡರೆ ಮಾತ್ರ ಅಸ್ತಿತ್ವದಲ್ಲಿರುವುದು ಸಾಧ್ಯ ಎಂದು ಉಗ್ರವಾಗಿ, ಮಾಹೇಶ್ವರ ನಿಷ್ಠೆಯಿಂದ ಅದನ್ನು ಪ್ರಸಾರ ಮಾಡುತ್ತಾ ಹೋದರು. ಅದು ಕಾರ್ಯಯೋಗ್ಯವೋ ಅಲ್ಲವೋ ಆದರೆ ಅದರ ತಿರುಳು ಮಾತ್ರ ತರ್ಕಬದ್ಧವಾದದ್ದು, ಜಗತ್ತಿನ ಉದ್ಧಾರಕ್ಕೆ ಅಡಿಗಲ್ಲಾಗಬಲ್ಲದು. ಅದನ್ನು ಅವರದೇ ಮಾತುಗಳನ್ನು ಬಳಸಿ ಹೀಗೆ ಸಂಕ್ಷೇಪಿಸಬಹುದು:

ತಮ್ಮ ವಿಶ್ವಮಾನವ ಸಂದೇಶ : ಪಂಚಮಂತ್ರ ಮತ್ತು ಸಪ್ತಸೂತ್ರ ಎಂಬ ಕಿರು ಪುಸ್ತಿಕೆಯ ಆರಂಭದಲ್ಲಿ ಕುವೆಂಪು ಸ್ವಾಮಿ ವಿವೇಕಾನಂದರ ಒಂದು ವಾಣಿಯನ್ನು ಉದ್ಧರಿಸಿದ್ದಾರೆ :

No man is born to any religion; every man has a religion in his soul. Let there be as many religions as there are human begins.

---

೧. ಕುವೆಂಪು ಸಮಗ್ರಕಾವ್ಯ, ಸಂ. ೧. ಪು. ೪೮೯

ಅನಂತರ ಅವರ ಸಂದೇಶ ಹೀಗೆ ಪ್ರಾರಂಭವಾಗುತ್ತದೆ :

''ಪ್ರತಿಯೊಂದು ಮಗುವೂ ಹುಟ್ಟುತ್ತಲೇ ವಿಶ್ವಮಾನವ. ಬೆಳೆಯುತ್ತಾ ನಾವು ಅದನ್ನು ''ಅಲ್ಪ ಮಾನವ''ನನ್ನಾಗಿ ಮಾಡುತ್ತೇವೆ. ಮತ್ತೆ ಅದನ್ನು 'ವಿಶ್ವಮಾನವ'ನನ್ನಾಗಿ ಮಾಡುವುದೇ ವಿದ್ಯೆಯ ಕರ್ತವ್ಯವಾಗಬೇಕು.

''ಹುಟ್ಟುವಾಗ 'ವಿಶ್ವಮಾನವ'ನಾಗಿಯೇ ಹುಟ್ಟಿದ ಮಗುವನ್ನು ನಾವು ದೇಶ, ಭಾಷೆ, ಮತ, ಜಾತಿ, ಜನಾಂಗ, ವರ್ಣ ಇತ್ಯಾದಿ ಉಪಾಧಿಗಳಿಂದ ಬದ್ಧನನ್ನಾಗಿ ಮಾಡುತ್ತೇವೆ. ಅವೆಲ್ಲವುಗಳಿಂದ ಪಾರಾಗಿ ಅವನನ್ನು 'ಬುದ್ಧ'ನನ್ನಾಗಿ, ಅಂದರೆ ವಿಶ್ವಮಾನವನನ್ನಾಗಿ, ಪರಿವರ್ತಿಸುವುದೇ ನಮ್ಮ ವಿದ್ಯೆ, ಸಂಸ್ಕೃತಿ, ನಾಗರಿಕತೆ ಎಲ್ಲದರ ಆದ್ಯ ಕರ್ತವ್ಯವಾಗಬೇಕು. ಪ್ರಪಂಚದ ಮಕ್ಕಳೆಲ್ಲ 'ಅನಿಕೇತನ'ರಾಗಬೇಕು, ಲೋಕ ಉಳಿದು, ಬಾಳಿ ಬದುಕಬೇಕಾದರೆ!''

ಅವರ ಈ ದೃಷ್ಟಿಯನ್ನು - ಮನುಜಮತ, ವಿಶ್ವಪಥ, ಸರ್ವೋದಯ, ಸಮನ್ವಯ, ಪೂರ್ಣ ದೃಷ್ಟಿ - ಈ ಪಂಚಮಂತ್ರಗಳ ಸಾರವನ್ನು ಅವರ ಸಾಹಿತ್ಯದ ತುಂಬ ಕಾಣಬಹುದು.

ಕುವೆಂಪು ಅವರು, ಕನ್ನಡ ಸಾಹಿತ್ಯಕ್ಕೆ, ಕನ್ನಡ ನಾಡಿಗೆ, ಭಾರತಕ್ಕೆ, ವಿಶ್ವಕ್ಕೆ ನೀಡಿದ ಕಾಣಿಕೆಯೇನು ಎಂಬುದನ್ನು ಈಗ ಪರಿಶೀಲಿಸಬಹುದು.

ಕುವೆಂಪು ಅವರ ಸಾಹಿತ್ಯ ಕೃಷಿ ಆರಂಭವಾದದ್ದು ಅವರು ಕವನಗಳನ್ನು ಬರೆಯಲು ಆರಂಭಿಸಿದಾಗಿನಿಂದ. ಆದರೆ ಅವರು ಕವನಗಳನ್ನು ಬರೆದದ್ದು ಇಂಗ್ಲಿಷ್ ಭಾಷೆಯಲ್ಲಿ, ಅದು ಅವರು ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗ. ೧೯೨೨ರಲ್ಲಿ, ಹದಿನೆಂಟು ವರ್ಷದ ತರುಣ, ಮಿತ್ರರ ಪ್ರೋತ್ಸಾಹದಿಂದ ತನ್ನ ಏಳು ಕವನಗಳನ್ನು ''Beginner's Muse'' ಎಂಬ ಹೆಸರಿನಲ್ಲಿ ಅಚ್ಚುಮಾಡಿಸಿ ಪ್ರಕಟಿಸಿದರು. ಆ ವೇಳೆಗೇ ಅವರು ಇಂಗ್ಲಿಷ್ ಸಾಹಿತ್ಯದ ಅನೇಕ ಕೃತಿಗಳನ್ನು ಓದಿದ್ದರು. ಇಂಗ್ಲಿಷ್ ಕಾವ್ಯದ ಛಂದೋವಿಧಾನ ಅವರಿಗೆ ಕರಗತವಾಗಿತ್ತು. ಇಂಗ್ಲಿಷ್ ಭಾಷೆಯ ಮೇಲೆ ಒಳ್ಳೆಯ ಪ್ರಭುತ್ವ ಸಾಧಿತವಾಗಿತ್ತು. ಕನ್ನಡ ನಾಡಿನ ಮಲೆನಾಡು ಒದಗಿಸಿದ್ದ ಲಲಿತ - ರುದ್ರ ಮನೋಹರ ದೃಶ್ಯಗಳಿಂದ ಪ್ರಭಾವಿತರಾಗಿದ್ದ ಕವಿ ನೂರಾರು ಇಂಗ್ಲಿಷ್ ಕವನಗಳನ್ನು ರಚಿಸಿದ್ದರು. ಅವುಗಳಿಂದ ಆಯ್ದ ಕೆಲವು ಕವನಗಳನ್ನು ಹಿಡಿದುಕೊಂಡು ಹೋಗಿ, ಆಗ ಮೈಸೂರಿಗೆ ಬಂದಿದ್ದ ಐರಿಷ್ ಕವಿ ಜೇಮ್ಸ್ ಕಸಿನ್ಸ್ ಅವರಿಗೆ ತೋರಿಸಿದರು. ಅವರು ಸಜ್ಜನಿಕೆಯಿಂದ ಕವನಗಳನ್ನು ತಿರುವಿ ಹಾಕಿದರು. ಅನಂತರ ಪುಟ್ಟಪ್ಪನವರನ್ನು ನಖಶಿಖಾಂತ ನೋಡಿದರು. ಖಾದಿ ವಸ್ತ್ರಧಾರಿಯಾಗಿದ್ದ ಅವರನ್ನು ಉದ್ದೇಶಿಸಿ ಹೇಳಿದರು:

''ಏನಿದೆಲ್ಲ ಕಗ್ಗ? (What is all this stuff ?) ನಿಮ್ಮ ಮೈಮೇಲೆ ನೋಡಿದರೆ ತಲೆಯಿಂದ ಕಾಲಿನವರೆಗೂ ಸ್ವದೇಶೀ ವಸ್ತ್ರಗಳೇ ಕಾಣುತ್ತವೆ. ಇದು ಮಾತ್ರ ಸ್ವದೇಶಿಯಲ್ಲ. ನಿಮ್ಮ ಭಾಷೆಯಲ್ಲಿ ಏನಾದರೂ ಬರೆದಿದ್ದೀರಾ?''

ಕಸಿನ್ಸ್ ಅವರ ಧ್ವನಿಗೂ ಭಂಗಿಗೂ ಮುಳಿದ ತರುಣ ಪುಟ್ಟಪ್ಪ ಉತ್ತರಿಸಿದರು: ''ಇಲ್ಲ, ಕನ್ನಡದಲ್ಲಿ ಇಂಗ್ಲಿಷಿನಲ್ಲಿ ಸಾಧ್ಯವಾಗುವಂತೆ, ಉದಾತ್ತ ಭಾವಗಳನ್ನು, ಉನ್ನತ ಆಲೋಚನೆಗಳನ್ನು ಹೇಳಲು ಸಾಧ್ಯವಾಗುವುದಿಲ್ಲ. ಆ ಭಾಷೆಯ ಮಟ್ಟ ಬಹಳ ಕೀಳು. ಅಲ್ಲದೆ ಅದರಲ್ಲಿರುವ ಛಂದಸ್ಸೂ ಹಳೆಯ ಕಂದಾಚಾರದ ಛಂದಸ್ಸು, ವೃತ್ತ, ಕಂದ ಇತ್ಯಾದಿ. ಇಂಗ್ಲಿಷಿನಲ್ಲಿರುವ ಛಂದೋವೈವಿಧ್ಯ ಇಲ್ಲವೇ ಇಲ್ಲ.''

ಕುವೆಂಪು ತಮ್ಮ ಈ ಸಂದರ್ಶನವನ್ನು ದಾಖಲು ಮಾಡುತ್ತಾ ಹೇಳುತ್ತಾರೆ: ''ಈಗ ನನಗೆ ಅತ್ಯಂತ ಅವಿವೇಕವಾಗಿಯೂ ಹಾಸ್ಯಾಸ್ಪದವಾಗಿಯೂ ಧೂರ್ತವಾಗಿಯೂ ತೋರುವ ನನ್ನ ಆ ಉತ್ತರವನ್ನು ಆಲಿಸಿ ಪರಿಣತ ವಯಸ್ಸಿನವರೂ ಅನುಭವಶಾಲಿಯೂ ಆಗಿದ್ದ ಅವರು ಸೌಮ್ಯ ಸಾಂತ್ವನಕರ ಧ್ವನಿಯಿಂದ ಹೇಳಿದರು: ''ಹಾಗಲ್ಲ, ಯಾವ ಭಾಷೆಯೂ ತನಗೆ ತಾನೇ ಅಸಮರ್ಥವಲ್ಲ. ಸಮರ್ಥನೊಬ್ಬನು ಬರುವ ತನಕ ಮಾತ್ರ ಅದು ಅಸಮರ್ಥವೆಂಬಂತೆ ತೋರಬಹುದು, ಅಸಮರ್ಥರಿಗೆ. ಸಮರ್ಥನು ಬಂದೊಡನೆ ಅವನ ಕೈಯಲ್ಲಿ ಅದು ಎಂತಹ ಅದ್ಭುತವನ್ನಾದರೂ ಸಾಧಿಸಬಲ್ಲುದು. ಈಗ ನೋಡಿ, ಬಂಗಾಳಿ ಭಾಷೆ ನೀವು ನಿಮ್ಮ ಭಾಷೆಯನ್ನು ಕುರಿತು ಹೇಳಿದಂತೆ ಇತ್ತು. ರವೀಂದ್ರನಾಥ ಠಾಕೂರರು ಬಂದರು. ಹೊಸ ಹೊಸ ರೀತಿಯಲ್ಲಿ ಬರೆದರು. ಹೊಸ ಛಂದಸ್ಸುಗಳನ್ನು ಕಂಡುಹಿಡಿದರು. ಅವರಿಗೆ ನೊಬೆಲ್ ಬಹುಮಾನವೂ ಬಂದಿತು! ಹಾಗೆಯೇ ನೀವು ಹೊಸ ಹೊಸ ಛಂದಸ್ಸುಗಳನ್ನು ಕಂಡುಹಿಡಿದು, ಹೊಸ ಹೊಸ ಪದಗಳನ್ನು ಪದಪ್ರಯೋಗಗಳನ್ನು ಸಾಧಿಸಿ, ಹೊಸ ರೀತಿಯ ಸಾಹಿತ್ಯ ಸೃಷ್ಟಿ ಮಾಡಬೇಕು. ನೀವು ಸೃಷ್ಟಿಸುವ ಸಾಹಿತ್ಯ ಶ್ರೇಷ್ಠವೆಂದು ತೋರಿಬಂದರೆ ನಾವು ಅದನ್ನು ಇಂಗ್ಲಿಷಿಗೆ ಭಾಷಾಂತರಿಸಿಕೊಳ್ಳುತ್ತೇವೆ, ರವೀಂದ್ರರ ಸಾಹಿತ್ಯ ಇಂಗ್ಲಿಷಿಗೆ ಭಾಷಾಂತರವಾಗಿರುವಂತೆ. ನೀವು ಇಂಗ್ಲಿಷಿನಲ್ಲಿ ಸೃಜನ ಸಾಹಿತ್ಯ ಸೃಷ್ಟಿಮಾಡಲಾರಿರಿ. ಅದು ನಿಮಗೆ ಪರಭಾಷೆ. ಹುಟ್ಟಿನೊಡನೆ ಬಂದ ಭಾಷೆಯಲ್ಲಿ ಮಾತ್ರ ಉತ್ತಮ ಸೃಜನ ಸಾಹಿತ್ಯ ಸೃಷ್ಟಿಯಾಗಬಲ್ಲುದು. ಅದರಲ್ಲೂ ಕವಿತೆಯಲ್ಲಂತೂ ಉತ್ತಮ ಸೃಜನ ಸಾಹಿತ್ಯ ಯಾರಿಗೂ ಪರಭಾಷೆಯಲ್ಲಿ ಸಾಧ್ಯವಿಲ್ಲ. ಅದು ನಿಮಗೆ ಗೊತ್ತಾಗುವುದೂ ಇಲ್ಲ, ಅದನ್ನು ಓದುವ ನಮಗೆ ಗೊತ್ತಾಗುತ್ತದೆ, ಅದೆಂತಹ ನಗೆಪಾಟಲ ಸೃಷ್ಟಿ ಎಂಬುದು.''

ಪುಟ್ಟಪ್ಪನವರ ಚೇತನದ ಹೊರಭಾಗ ಕಸಿನ್ಸ್ ಅವರ ಉಪದೇಶವನ್ನು ತಿರಸ್ಕರಿಸಿತು. ಆದರೆ ಅವರ ಮಾತು ಇವರ ಹೃದಯವನ್ನು ತಟ್ಟಿತ್ತು. ಅಂತರಂಗದಲ್ಲಿ ಒಂದು ಗೊಂದಲ ತಲೆದೋರಿತ್ತು. ''ಕನ್ನಡದಲ್ಲಿ ಬರೆಯುವುದೇ? ಯಾವ ಕನ್ನಡದಲ್ಲಿ? ಹಳಗನ್ನಡ? ನಡುಗನ್ನಡ? ಮಲೆನಾಡಿನ ಆಡುಕನ್ನಡ? ಛೆ, ಛೆ ಎಲ್ಲಾದರೂ ಸಾಧ್ಯವೇ? ಛಂದಸ್ಸು? ವೃತ್ತವೇ? ಕಂದವೇ? ರಗಳೆಯೇ? ಷಟ್ಪದಿಯೇ? ಸಾಂಗತ್ಯವೇ? ತ್ರಿಪದಿಯೇ? - ಸಾಧ್ಯವೇ ಇಲ್ಲ. ಶಬ್ದ ಸಂಪತ್ತು ಮತ್ತು ಛಂದಸ್ಸಿನ ದೃಷ್ಟಿಯಿಂದ ಇಂಗ್ಲಿಷ್ ಎಲ್ಲಿ, ಕನ್ನಡ ಎಲ್ಲಿ ?''

ಕವಿಯ ಇಂಗ್ಲಿಷ್ ಓದು ಹೀಗೆ ವಾದ ಮಾಡುತ್ತಿದ್ದರೂ ಕವಿಯ ಮೂಲಭೂತ ಪ್ರತಿಭೆ ಕನ್ನಡದಲ್ಲಿ ಕವನ ರಚನೆಯನ್ನು ಪ್ರಾರಂಭಿಸಿಯೇ ಬಿಟ್ಟಿತು. ಇಂಗ್ಲಿಷಿನಲ್ಲಿ ತಾವೇ ರಚಿಸಿದ್ದ ''ಏಪ್ರಿಲ್'' ಎಂಬ ಕವನವನ್ನು ಕನ್ನಡಕ್ಕೆ ಅನುವಾದಿಸಿದರು. ಇಂಗ್ಲಿಷ್ ಕಾವ್ಯಾಭಿಮುಖಿಯಾಗಿದ್ದ ಕುವೆಂಪು ಪ್ರತಿಭೆ ಕನ್ನಡ ಕಾವ್ಯಾಭಿಮುಖಿಯಾಯಿತು.

ಕುವೆಂಪು ಕನ್ನಡದಲ್ಲಿ ಕಾವ್ಯರಚನೆಗೆ ತೊಡಗಿ ಕನ್ನಡದ ಮೇರು ಸಾಹಿತಿಯಾಗಿ ಬೆಳೆದದ್ದು ಏಕಮುಖ ಕ್ರಿಯೆ ಅಲ್ಲ. ತಾವು ಬೆಳೆಯುತ್ತಾ, ಜೊತೆ ಜೊತೆಗೆ ಕನ್ನಡವನ್ನು ಬೆಳೆಸಿದ ಯಮಳ ಕ್ರಿಯೆ ನಡೆದದ್ದು ಸಾಹಿತ್ಯ ಲೋಕದ ಸೋಜಿಗಗಳಲ್ಲಿ ಒಂದು. ಅವರಂತೂ ಪೂರ್ಣ ಪ್ರಮಾಣದ, ವೈವಿಧ್ಯಪೂರ್ಣವಾದ, ಅತ್ಯಂತ ಶ್ರೀಮಂತವಾದ ಸಾಹಿತ್ಯವನ್ನು ಸೃಷ್ಟಿಸಿದರು. ಹೀಗಾಗಿ ಅವರು ಸಾಹಿತ್ಯ ಜಗತ್ತಿನ ಗೊಮ್ಮಟನಾಗಿ ಬೆಳೆದರು. ಅವರು ರಚಿಸಿದ ಕೃತಿಗಳಿಂದ ಕನ್ನಡ ಸಾಹಿತ್ಯ ಗೌರವದ ಸ್ಥಾನ ಗಳಿಸಿತು. ಈ ಪ್ರಕ್ರಿಯೆ ನಡೆಯುತ್ತಿರುವಾಗಲೇ, ಕುವೆಂಪು ಪ್ರಜ್ಞಾಪೂರ್ವಕವಾಗಿ ಕನ್ನಡದ ಭವ್ಯ ಭವನದ ನಿರ್ಮಾಣ ಕಾರ್ಯವನ್ನು ಕೈಗೊಂಡರು. ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿ, ಅನಂತರ ಅನೇಕ ವರ್ಷಗಳ ಕಾಲ ಆ ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಪ್ರಕಟಣ ಸಮಿತಿಯ ಅಧ್ಯಕ್ಷರಾಗಿ - ಬರಿಯ ಸಾಹಿತ್ಯಕ ಅಲ್ಲ, ವಿಜ್ಞಾನ, ತಂತ್ರಜ್ಞಾನ, ಮಾನವಿಕ ಶಾಸ್ತ್ರಗಳು - ಮುಂತಾದುವನ್ನು ಕುರಿತಂತೆ ಅಕ್ಷರಶಃ ಸಾವಿರಾರು ಪುಸ್ತಕಗಳ ಪ್ರಕಟಣೆಗೆ ಕಾರಣರಾದರು. ಹೀಗಾಗಿ ಕುವೆಂಪು ನಿಜವಾದ ಅರ್ಥದಲ್ಲಿ ಕನ್ನಡವನ್ನು ಕಟ್ಟುವ ಕೆಲಸವನ್ನು ಮಾಡಿದರು.

ಅವರ ಕನ್ನಡ ಪ್ರೇಮವು ಉದ್ವೇಗ, ಆವೇಶ, ಭಾವುಕತೆ ಇವುಗಳಲ್ಲಿ ಜನಿಸಿ, ಅವುಗಳಲ್ಲಿಯೇ ಪರ್ಯವಸಾನಗೊಂಡದ್ದೂ ಅಲ್ಲ. ಕನ್ನಡಕ್ಕೆ ದೊರಕಬೇಕಾದ ಸಾರ್ವಭೌಮ ಸ್ಥಾನಕ್ಕಾಗಿ ಅವರು ಮಂಡಿಸಿದ ವಾದಗಳು, ಬಹುಭಾಷೆಗಳಲ್ಲಿ ದ್ವಿಭಾಷೆ ಎಂಬ ಸೂತ್ರದ ಪ್ರತಿಪಾದನೆ ಇವೆಲ್ಲ ತರ್ಕಬದ್ಧವಾಗಿ ನಡೆದವು; ಶಕ್ತಿಪೂರ್ಣವಾಗಿ ಪ್ರತಿಪಾದಿತವಾದವು.

ಕುವೆಂಪು ಅವರ ಕನ್ನಡ ಪ್ರೇಮವನ್ನು, ''ಕನ್ನಡಕ್ಕಾಗಿ ಕೈ ಎತ್ತು ನಿನ್ನ ಕೈ ಕಲ್ಪವೃಕ್ಷವಾಗುತ್ತದೆ'' ಎಂದು ಅವರು ಘೋಷಿಸಿದುದನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಬೇಕಾದ ಅವಶ್ಯಕತೆಯಿದೆ. ಕರ್ನಾಟಕದಲ್ಲಿ ಕನ್ನಡಕ್ಕೇ ಸಾರ್ವಭೌಮ ಸ್ಥಾನ ಎಂಬ ನಿಚ್ಚಳವಾದ ನಿಲುವನ್ನು ತಳೆದ ಅವರು ತಮ್ಮ ಆ ನಿಲುವನ್ನು ಎಂದೂ ಯಾವ ಕಾರಣಕ್ಕೂ ಬದಲಾಯಿಸಲಿಲ್ಲ. ಕನ್ನಡ, ಹಿಂದಿ, ಇಂಗ್ಲಿಷ್ - ಈ ಭಾಷೆಗಳ ಸ್ಥಾನಮಾನಗಳೇನು, ಅವುಗಳ ಅವಶ್ಯಕತೆ ಎಷ್ಟು ಎಂಬುದನ್ನು ಕುವೆಂಪು ಸ್ಪಷ್ಟವಾಗಿ ಹೇಳಿದ್ದಾರೆ :

''ಆಯಾ ಪ್ರಾಂತಗಳಲ್ಲಿ ಆಯಾ ಪ್ರಾದೇಶಿಕ ಭಾಷೆಗಳಿಗೆ ಪ್ರಥಮ ಸ್ಥಾನ ಸಲ್ಲಬೇಕು.

ಅಂತರ ಪ್ರಾಂತೀಯ ವ್ಯವಹಾರ ದೃಷ್ಟಿಯಿಂದ ಮತ್ತು ಕೇಂದ್ರದ ಆಡಳಿತ ದೃಷ್ಟಿಯಿಂದ ಅಖಿಲ ಭಾರತೀಯವಾದ ಸಂಯುಕ್ತ ಭಾಷೆಗೆ ಎರಡನೇ ಸ್ಥಾನ ಕೊಡಬೇಕು. ಅಂತರರಾಷ್ಟ್ರೀಯವಾದ ಭಾಷೆಗೆ ಅಥವಾ ಭಾಷೆಗಳಿಗೆ ಐಚ್ಛಿಕ ಸ್ಥಾನ ಕೊಡಬೇಕು. ಆಯಾ ಪ್ರಾಂತಗಳಲ್ಲಿ ಆಯಾ ದೇಶಭಾಷೆಗಳೇ ಆಡಳಿತ ಭಾಷೆಗಳಾಗಿರಬೇಕು. ಅಲ್ಲಿಯ ಶಿಕ್ಷಣವೆಲ್ಲ, ಎಲ್ಲ ಮಟ್ಟಗಳಲ್ಲಿಯೂ ದೇಶಭಾಷಾ ಮಾಧ್ಯಮದಲ್ಲಿಯೇ ಸಾಗಬೇಕು. ಕನ್ನಡಕ್ಕೆ ಪ್ರಪಂಚದಲ್ಲಿ ಎಲ್ಲಾದರೂ ಸ್ಥಾನಮಾನ ದೊರಕಬೇಕಾದರೆ ಅದು ಇಲ್ಲೇ, ಕರ್ಣಾಟಕದಲ್ಲೇ, ಇನ್ನೆಲ್ಲಿಯೂ ಅಲ್ಲ.... ಅಂದಮಾತ್ರಕ್ಕೆ ನಾನು ಕನ್ನಡವನ್ನು ಬಲಾತ್ಕಾರ ಭಾಷೆಯನ್ನಾಗಿ ಮಾಡಲು ಹೇಳುತ್ತಿಲ್ಲ. ಅದು ಪ್ರಥಮ ಭಾಷೆಯಾಗಿರಲಿ. ಮಾತೃ ಭಾಷೆಗೆ ಸಿಕ್ಕಬೇಕಾದ ಎಲ್ಲ ಗೌರವವೂ ಅದಕ್ಕೆ ದೊರೆಯಲಿ ಎಂಬುದಷ್ಟೇ ನನ್ನ ಅಭಿಪ್ರಾಯ.''

ಕುವೆಂಪು ಇಂಗ್ಲಿಷ್ ದ್ವೇಷಿಯಲ್ಲ. ಕನ್ನಡ ಅಧ್ಯಾಪಕ ವರ್ಗದಲ್ಲಿ ಪಾಶ್ಚಾತ್ಯ ಸಾಹಿತ್ಯದಲ್ಲಿ ಅವರಿಗಿದ್ದಷ್ಟು ಆಳವೂ ವಿಶಾಲವೂ ಆದ ಓದನ್ನು ನಡೆಸಿದವರು ಅತಿ ವಿರಳ, ಇಲ್ಲವೆಂದರೂ ಸಲ್ಲುತ್ತದೆ. ಅವರೇ ಒಂದು ಕಡೆ ಹೇಳಿದ್ದಾರೆ : ''ನಾನೇನೂ ಇಂಗ್ಲಿಷ್ ಭಾಷೆಯ ದ್ವೇಷಿಯಲ್ಲ... ಪರಮಾರಾಧಕ. ಕನ್ನಡದ ಹತ್ತು ಪಟ್ಟು ಇಂಗ್ಲಿಷ್ ಗ್ರಂಥಗಳನ್ನು ಓದುತ್ತಿದ್ದೇನೆ. ಸ್ವಂತವಾಗಿ ಆರಿಸಿಕೊಂಡು ಇಂಗ್ಲಿಷ್ ಕಲಿತವನಾದರೆ ಅವನಿಂದ ದೇಶಕ್ಕೆ ಉಪಕಾರ....''

ಕುವೆಂಪು ಅವರ ಆಕ್ಷೇಪಣೆಯೇನಿದ್ದರೂ, ಬಲಾತ್ಕಾರವಾಗಿ ಇಂಗ್ಲಿಷನ್ನು ಲಕ್ಷಾಂತರ, ಕೋಟ್ಯಂತರ ವಿದ್ಯಾರ್ಥಿಗಳ ಮೇಲೆ ಹೇರುವುದಕ್ಕೆ. ಸಹಸ್ರಾರು ಗ್ರಾಮೀಣ ಪ್ರತಿಭೆಗಳು, ಇಂಗ್ಲಿಷ್ ಕಲಿಯಲಾರದೆ, ವಿದ್ಯಾಭ್ಯಾಸವನ್ನು ಎಲ್ಲಿಗೆಂದರಲ್ಲಿಗೆ ನಿಲ್ಲಿಸಿ ಮುರುಟಿಹೋಗಿರುವುದನ್ನು ಕಂಡು ಅವರು ಕಣ್ಣೀರು ಸುರಿಸಿದ್ದಾರೆ. ನಮಗೆ ಎಂಥ ಇಂಗ್ಲಿಷ್ ಬೇಕು, ಎಷ್ಟು ಬೇಕು, ಯಾರಿಗೆ ಬೇಕು ಎಂಬುದನ್ನು ಕುರಿತು ಅವರು ಆಳವಾಗಿ ಚಿಂತಿಸಿದ್ದಾರೆ. ಒಂದೆಡೆ ಅವರು ಅದನ್ನು ವಿವರಿಸಿದ್ದಾರೆ.

''ಇನ್ನು ಮುಂದೆ ಇಂಗ್ಲಿಷ್ ಹಲವರು ಕಲಿಯುವ ಭಾಷೆಯಲ್ಲ; ಕೆಲವರು ಕಲಿಯಬೇಕಾದ ಭಾಷೆ. ಅನೇಕರಿಗೆ ಬೇಕಾದ ಇಂಗ್ಲಿಷಿನ ಮಟ್ಟವೆಂದರೆ ಅದನ್ನೋದಿ ಅರ್ಥ ಮಾಡಿಕೊಳ್ಳುವಷ್ಟೇ ಹೊರತು ಅದರಲ್ಲಿ ಸಂಭಾಷಿಸುವುದಾಗಲಿ, ಭಾಷಣ ಮಾಡುವುದಾಗಲಿ, ಬರೆಯುವುದಾಗಲಿ ಅಲ್ಲ... ಇನ್ನು ಮುಂದೆ ಇಂಗ್ಲಿಷಿನ ಈ ನೀರು ನೀರು ಸಮಾರಾಧನೆ ನಿಲ್ಲಬೇಕು. ಅದಕ್ಕೆ ಬದಲಾಗಿ ಆಯ್ದ ಕೆಲವರಿಗೆ ಮಾತ್ರ ಗಟ್ಟಿ ಇಂಗ್ಲಿಷಿನ ಪುಷ್ಟಿಯೊದಗುವಂತೆ ನಮ್ಮ ವಿದ್ಯಾಭ್ಯಾಸ ಕ್ರಮದಲ್ಲಿ ಭಾಷೆಗಳ ಸ್ಥಾನ ನಿರ್ಣಯವಾಗಬೇಕು; ಕೆಲವರಿಗೆ ಮಾತ್ರ ಇಂಗ್ಲಿಷ್ ಚೆನ್ನಾಗಿಯೇ ಬೇಕು.''

ಇನ್ನು ಕುವೆಂಪುರವರ ಕವನಗಳ ಕೆಲವು ಕವನಗಳನ್ನು, ಭಾಗಶಃವಾಗಿಯಾದರೂ ಪರಿಚಯಿಸಬಹುದು.

ಅವರ ಆಸಕ್ತಿ ವೈವಿಧ್ಯವನ್ನು, ಭಾಷೆಯ ಸರಳತೆ - ಜಟಿಲತೆಗಳನ್ನು, ಉಕ್ತಿ ಸೌಂದರ್ಯವನ್ನು, ಪರಿಚಯಿಸುವ ಸಲುವಾಗಿ, ಅವರ ಪ್ರಕೃತಿ ಗೀತೆಗಳಲ್ಲಿ ಕೆಲವು :

ಅಡಿಯ ಗೆಜ್ಜೆ ನಡುಗೆ ಹೆಜ್ಜೆಯಿಡುತ ಸುಗ್ಗಿ ಬರುತಿದೆ !
ಸುಗ್ಗಿ ಬರೆ ಹಿಗ್ಗಿ ತಿರೆ ಸಗ್ಗ ಸೊಗವ ತರುತಿದೆ !
ಕಣಿವೆಯಿಳಿದು, ತೆಮರನೇರಿ
ತರುಗಳಲ್ಲಿ ತಳಿರ ಹೇರಿ
ಹೊಸತು ಜೀವ ಕಳೆಯ ಬೀರಿ
ಸುಗ್ಗಿ ಮೂಡುತಿರುವುದು.

★ ★ ★

ಮೇರೆಯರಿಯದಿಹ ನೀಲಿಯಾಗಸವ
ಮುಡಿದಿಹ ಪರ್ವತ ಶೃಂಗವಿದು;
ಮಳೆಯ ಮೋಡಗಳು ಹಾರಿ ಬಂದಿಲ್ಲಿ
ತಾಂಡವವಾಡುವ ರಂಗವಿದು.
ಗುಡುಗು ಮಿಂಚುಗಳು ಸರಸವಾಡುತ್ತ
ಸಿಡಿಲನು ಹಡೆಯುವ ತಾಣವಿದು:
ನೇಸರಿಂದುಗಳು ನಿಚ್ಚ ಪಯಣದಲಿ
ವಿಶ್ರಮಿಸುವ ನಿಲ್ದಾಣವಿದು.

ನವೋದಯ ಯುಗದ ಎಲ್ಲ ಪ್ರಮುಖ ಕವಿಗಳಲ್ಲಿ - ಅದರಲ್ಲೂ ಕುವೆಂಪು, ಬೇಂದ್ರೆ ಮತ್ತು ಪು.ತಿ. ನರಸಿಂಹಾಚಾರ್ಯ - ಈ ಮೂವರಲ್ಲಿ ಆಧ್ಯಾತ್ಮಿಕತೆ ಮತ್ತು ಲೌಕಿಕತೆಗಳು ಹಾಸುಹೊಕ್ಕಾಗಿರುವುದನ್ನು ಗಮನಿಸುತ್ತೇವೆ. ಆದಿಕವಿ ಪಂಪನಿಂದ ನವೋದಯ ಯುಗದ ಕವಿಗಳವರೆಗೆ ಆಧ್ಯಾತ್ಮ-ಲೌಕಿಕಗಳ ಬಗೆಗೆ ದೃಷ್ಟಿ ಬದಲಾಗುತ್ತ ಬಂದಿರುವುದು ಕಾಣುತ್ತದೆ. ಹತ್ತನೆಯ ಶತಮಾನದ ಪಂಪನಿಗೆ ಲೌಕಿಕ - ಆಧ್ಯಾತ್ಮಗಳು ಬೇರೆ ಬೇರೆಯಾಗಿ ಕಂಡವು. ಆದ್ದರಿಂದಲೇ ಲೌಕಿಕಕ್ಕೆ ಒಂದು ಕಾವ್ಯ, ಅಧ್ಯಾತ್ಮಕ್ಕೆ ಒಂದು ಕಾವ್ಯ ಎಂದು ಆತ ಮೀಸಲಾಗಿಟ್ಟ. ಹದಿಮೂರನೆಯ ಶತಮಾನದಲ್ಲಿ ಹರಿಹರ ಇದನ್ನೊಂದು ಅತಿರೇಕಕ್ಕೆ ಒಯ್ದು, ಮನುಷ್ಯರ ಮೇಲೆ, ಸಾಯುವವರ ಮೇಲೆ ಕಾವ್ಯ ಬರೆಯುವುದೆ? ಬರೆಯುವುದಾದರೆ ಹರನನ್ನು ಕುರಿತು, ಹರಭಕ್ತರನ್ನು ಕುರಿತು ಬರೆಯಬೇಕು ಎಂದು ಒಂದು ರೀತಿಯ ಉಗ್ರವಾದಿಯಾದ. (ಇದರ ವಿಷಯದಲ್ಲಿ ಆತ ಎಷ್ಟು ನಿರ್ದಾಕ್ಷಿಣ್ಯನಾಗಿದ್ದ ಎಂಬುದನ್ನು ಅವನ ಸೋದರಳಿಯನಾದ ರಾಘವಾಂಕ ಕವಿ ಹೇಳಬಲ್ಲ - ಹರಿಶ್ಚಂದ್ರ ಕಾವ್ಯ ಬರೆದ ಎಂಬ ಕೋಪಕ್ಕೆ ಹರಿಹರ ಸೋದರಳಿಯನ ಹಲ್ಲುಗಳೆಲ್ಲವನ್ನೂ ಉದುರಿಸಿದ ಎಂದು 'ದಂತ ಕಥೆ'ಯೇ ಇದೆ!) ಶ್ರೇಷ್ಠ ಭಕ್ತಕವಿಯಾದ ಕುಮಾರವ್ಯಾಸನಿಗೆ ಲೌಕಿಕ ಆಧ್ಯಾತ್ಮಿಕತೆಗಳ ನಡುವೆ ವ್ಯತ್ಯಾಸ ಕಾಣಲಿಲ್ಲ. ರತ್ನಾಕರವರ್ಣಿ ತನ್ನ ಭರತೇಶ ವೈಭವದಲ್ಲಿ ಯೋಗ

ಭೋಗಗಳ ಸಮನ್ವಯ ನಡೆಸಲು ಪ್ರಯತ್ನ ಪಟ್ಟಿದ್ದಾನೆಯಾದರೂ ಅವನ ಕಾವ್ಯ ನಾಯಕ ಪ್ರಪ್ರಥಮವಾಗಿ 'ಮುರಿದು ಕಣ್ಣೆಟ್ಟರೆ ಕ್ಷಣಕೆ ಮುಕ್ತಿಯ ಕಾಂಬ' ಆಧ್ಯಾತ್ಮ ಪುರುಷ.

''ಋತ ಚಿನ್ಮಯೀ ಜಗನ್ಮಾತೆಗೆ'' ಎಂಬ ಕವನದಲ್ಲಿ ಜೀವರಸವು ವಿವಿಧ ಕ್ರಿಯೆಗಳಲ್ಲಿ ವ್ಯಕ್ತವಾಗುವ ಸಂದರ್ಭಗಳಲ್ಲಿ ಆದಿಶಕ್ತಿಯು ಸದಾ ರಸಾಸ್ವಾದನೆ ಮಾಡುತ್ತಿರುವುದನ್ನು ಕುವೆಂಪು ಕಂಡಿದ್ದಾರೆ:

ಹುಲ್ಲು ಬೆಳೆವಲ್ಲಿ, ನೆಲ್ಲು ಮೊಳೆವಲ್ಲಿ, ಕಾಯಿ ಪಣ್ಣುವಲ್ಲಿ
ಗೂಡು ಕಟ್ಟಿ ತಾಯ್ ಮೊಟ್ಟೆಯಿಟ್ಟು ಮರಿ ಮಾಡಿ ಸಲಹುವಲ್ಲಿ
ಮಮತೆಯಂತೆ ಮೇಣ್ ಕಾಮದಂತೆ ಮೇಣ್ ಪ್ರೇಮ ಭಾವದಲ್ಲಿ
ನಿನ್ನ ಚಿಚ್ಛಕ್ತಿ ತನ್ನ ನಿತ್ಯ ಸದ್ ರಸವ ಸವಿವುದಿಲ್ಲಿ!

ಪ್ರಕೃತಿಕ್ರಿಯೆಯಲ್ಲಿ ಮಾತ್ರವಲ್ಲ, ಶೃಂಗಾರಕ್ರಿಯೆಯಲ್ಲೂ ಆಧ್ಯಾತ್ಮಿಕತೆ ಹಾಸು ಹೊಕ್ಕಾಗಿರಬಲ್ಲುದು ಎಂಬುದನ್ನು ಸೂಚಿಸುವ ಈ ಪಂಕ್ತಿಗಳನ್ನು ಗಮನಿಸಬಹುದು:

ಚಿರವಾಗಲಿ, ಚಿರವಾಗಲಿ ಚಿರವಾಗಲಿ
ನಿನ್ನ ನೆನಹು ನನ್ನ ಮನದಿ, ಹೇ, ಗುರೂ!
ಶಿಶಿರ ಋತುವು ಗತಿಸುತಿರಲು
ವಿಪಿನದಂತರಂಗದಲ್ಲಿ
ಹೊಸ ವಸಂತನುಸಿರು ಹಸರಿ

ನಲಿಯುವಂತೆ ಕಾನನ
ನವೀನ ಜೀವನ -

ಚಿರವಾಗಲಿ, ಚಿರವಾಗಲಿ, ಚಿರವಾಗಲಿ
ನಿನ್ನ ನೆನಹು ನನ್ನ ಮನದಿ ಹೇ ಗುರೂ!

ಚೆಲುವೆಯೊಮ್ಮೆ ಸುಳಿದು ಕಣ್ಗೆ
ಒಲುಮೆ ಕಿಡಿಯ ಸೂಸಲೆದೆಗೆ
ಕಿಚ್ಚು ಬಾಳನೆಲ್ಲ ಮುಚ್ಚಿ
ಹುಚ್ಚುಗೈವ ತೆರದಲಿ
ಪ್ರೇಮ ಭರದಲಿ !

ಕುವೆಂಪು ಹೂವು, ಹಸಿರು, ಸೂರ್ಯೋದಯ, ಸೂರ್ಯಾಸ್ತ, ಬಯಲು, ಬೆಳುದಿಂಗಳು, ಆತ್ಮ ಪರಮಾತ್ಮ ಇವನ್ನೇ ವರ್ಣಿಸುತ್ತಾ ವಿರಮಿಸಿದ್ದರೆ ಅವರು ಯುಗದ ಕವಿಯಾಗಿ ಕೋಟ್ಯಂತರ ಜನರ ಗೌರವ, ಸ್ತುತಿ, ಕೃತಜ್ಞತೆಗೆ ಪಾತ್ರರಾಗುತ್ತಿರಲಿಲ್ಲ, ರಾಷ್ಟ್ರಕವಿ ಎಂಬ ಅತ್ಯಂತ ಹೆಮ್ಮೆಯ ಪ್ರಶಸ್ತಿಯೂ ಅವರಿಗೆ ದೊರಕುತ್ತಿರಲಿಲ್ಲ. ಮೇಲೆ ಹೇಳಿದವನ್ನೆಲ್ಲ ವರ್ಣಿಸುವುದರಲ್ಲಿ ತಲ್ಲೀನರಾಗಿದ್ದಾಗಲೇ, ತಮ್ಮ ಜನ್ಮೋದ್ದೇಶ ಏನು, ಭರತಖಂಡದ

ಅಂದಿನ ಪರಿಸ್ಥಿತಿಯಲ್ಲಿ ತಾವು ವಹಿಸಬೇಕಾದ ಪಾತ್ರ ಏನು ಎಂಬುದನ್ನು ಅವರ ಅಂತರಾತ್ಮ ಅವರಿಗೆ ಸಾರಿ ಹೇಳಿತು. ಅವರು ಅದನ್ನು ತಮ್ಮ ಕಾವ್ಯಜೀವನದ ಆರಂಭದಲ್ಲಿಯೇ ಕೇಳಿಸಿಕೊಂಡಿದ್ದು ಮತ್ತು ಅದಕ್ಕೆ ತಮ್ಮ ಜೀವನವನ್ನು ಶ್ರುತಿಗೊಳಿಸಿಕೊಂಡಿದ್ದು ಕನ್ನಡ ಸಾಹಿತ್ಯದ, ಅಷ್ಟೇ ಅಲ್ಲ, ಸಾಮಾಜಿಕ ಚರಿತ್ರೆಯ ಅತಿ ಮುಖ್ಯವಾದ ಘಟನೆಯೂ ಆಯಿತು. ಒಂದು ಸಾವಿರ ವರ್ಷಗಳ ತನ್ನ ಇತಿಹಾಸದಲ್ಲಿ ಕನ್ನಡ ಸಾಹಿತ್ಯವು ವಿವಿಧ ಧರ್ಮಗಳಿಂದ ಪೋಷಕ ಸತ್ವವನ್ನು ಸ್ವೀಕರಿಸಿದೆ. ಜೈನ, ವೀರಶೈವ, ವೈದಿಕ - ಈ ಧರ್ಮದ ಕವಿಗಳು ಮಹಾಕಾವ್ಯಗಳನ್ನು ರಚಿಸಿ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಆದರೆ ಈ ಮಹಾ ಪ್ರತಿಭಾ ಪ್ರದರ್ಶನದ ಮೆರವಣಿಗೆಯಲ್ಲಿ ಒಬ್ಬನೇ ಒಬ್ಬನಾದರೂ ಶೂದ್ರನಾಗಲಿ, ಇತರ ಶೋಷಿತ ವರ್ಗದವನಾಗಲಿ ಇಲ್ಲದಿರುವುದು ಭರತಖಂಡದ ವರ್ಣವ್ಯವಸ್ಥೆಯ ಕರಾಳ ಮುಖಕ್ಕೆ ಹಿಡಿದ ಕನ್ನಡಿಯಾಗಿದೆ. ಅನೇಕ ಜನ ಹಿಂದುಳಿದ ವರ್ಗದ, ಕಷ್ಟಕಾಯಕದ ಜನ ವಚನಗಳನ್ನು ರಚಿಸಿದರು, ನಿಜ. ಆದರೆ ಅವರು ವೀರಶೈವ ಧರ್ಮಕ್ಕೆ ಮತಾಂತರಗೊಂಡು ಕಾಲಾಂತರದಲ್ಲಿ ಜಾತಿ ಪದ್ಧತಿಯನ್ನು ಮುಂದುವರಿಸಿದ ಐತಿಹಾಸಿಕ ದುರಂತದ ಭಾಗವಾಗಿ ಹೋದರು. ದಾಸ ಪಂಥದವರಲ್ಲಿ ಅತಿ ಕೆಳಸ್ತರದಿಂದ ಬಂದ ಕನಕದಾಸರು ತಮ್ಮ ರಚನೆಗಳಿಂದ ಆ ಪಂಥದಲ್ಲಿ ಭದ್ರವಾದ ಸ್ಥಾನವನ್ನು ಗಳಿಸಿದರು. ಆದರೂ ಅದು ಭಕ್ತಿ ಪ್ರವಾಹಕ್ಕೆ ಸೇರಿಕೊಂಡ ಒಂದು ಉಪವಾಹಿನಿಯೆಂದೇ ಗಣಿಸಲ್ಪಟ್ಟ ಕ್ರಿಯೆಯಾಯಿತು. ಮುಂದೆ ಇಪ್ಪತ್ತನೆಯ ಶತಮಾನದಲ್ಲಿ ಶ್ರೀಕಂಠೇಶಗೌಡರೆಂಬುವರು ಷೇಕ್ಸ್‌ಪಿಯರನ ನಾಟಕಗಳನ್ನು ಸೊಗಸಾಗಿ ಅನುವಾದಿಸಿ ಹೆಸರು ಗಳಿಸಿದ್ದೇನೋ ಇದೆ.

ಈ ಹಿನ್ನೆಲೆಯಲ್ಲಿ ವರ್ಣವ್ಯವಸ್ಥೆಯ ಮೇಲಿನ ಮೂರು ವರ್ಣಗಳಿಂದ ಶೂದ್ರರೆಂದು ಕರೆಯಲ್ಪಡುತ್ತಿದ್ದ ಒಂದು ವರ್ಣದಿಂದ ಮೈ ಕೊಡವಿಕೊಂಡು ಮೇಲೆದ್ದ ಕವಿ ಒಂದು ಶತಮಾನವನ್ನೆಲ್ಲ ತುಂಬಿ ಸಾಹಿತ್ಯ ಕ್ಷೇತ್ರದ 'ಗೊಮ್ಮಟೇಶ್ವರ ಪ್ರತಿಭೆ'ಯಾಗಿ ಅಂದರೆ ''ಅಧ್ಯಾತ್ಮ, ಔನ್ನತ್ಯ, ಕಲಾವೈಭವ ಈ ಮೂರೂ ಮಹತ್ತು, ಬೃಹತ್ತುಗಳು ಮೇಳವಿಸಿದ ಪ್ರತಿಭೆಯಾಗಿ ಬೆಳೆದದ್ದು ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಒಂದು ಅಪೂರ್ವ ಘಟನೆಯಾಗಿ ಎದ್ದು ಕಾಣುವಂತಾಗಿದೆ.

ತಮ್ಮ ಅಂತರಾತ್ಮದ ಕರೆಗೆ ಕವಿ ಕುವೆಂಪು ''ಕ್ರಾಂತಿಕಾಳಿ'' ಎಂಬ ಸಾನೆಟ್ಟಿನಲ್ಲಿ ವಾಗ್ರೂಪವನ್ನು ನೀಡಿದ್ದಾರೆ :

ಕ್ರಾಂತಿಕಾಳಿ ಕಠಾರಿಯಂ ನನ್ನೆದೆಗೆ ಕುರಿತು
ಝಳಪಿಸುತೆ, ಬದ್ಧಭ್ರುಕುಟಿ ಕೋಪದಲಿ ನಿಂತು,
ದಂಷ್ಟ್ರ ಘರ್ಷಣ ರವಂ ಪೊಣ್ಮೆ ಗಜರಿದಳಿಂತು:
ಓ ದ್ರೋಹಿ ಕವಿಯೆ, ನಿನಗಿತ್ತಾಣತಿಯ ಮರೆತು
ಕ್ಲೀಬತನದಲಿ ಹೆಣ್ಣು ಸೋಬಾನೆಗಳ ಹಾಡಿ

ಪಾಳ್ಗೆಯ್ದೆ ಕಜ್ಜಮಂ! ಶುಕ, ಪಿಕ, ವಸಂತ, ಲತೆ
ಮುಂಗುರುಳು, ತಂಗಾಳಿ, ದೊರೆಗಿರೆಗಳಜ್ಜಿ ಕಥೆ,
ಬೆಳ್ದಿಂಗಳೆಂಬುವಂ ನೂಕಾಚೆ, ಹೆಂಬೇಡಿ!
ಬಡತನಂ, ಗೊಬ್ಬರಂ, ಕತ್ತಿ, ಗುದ್ದಲಿ, ಹಾರೆ,
ಬೆವರು ನೆತ್ತರ್ಗಳಂ ಗಾನಗೈವುದು ನಿನ್ನ
ಕರ್ತವ್ಯವಿಂದು ಹಾ! ಹೊಟ್ಟೆಗಿಲ್ಲದೆ ಅನ್ನ
ಬಡ ಜನರು ಸಾಯುತಿರೆ, ರಸ ಗಂಧವನು ತೋರೆ
ತಣಿವಹುದೆ? ಕ್ರಾಂತಿಕಾಳಿಯು ನಾನು, ಕೈ ಬೀಸಿ
ಕರೆಯೆ, ಬಾ, ಪೂಜೆಗೈ ಹೃದಯ ರಕ್ತವ ಸೂಸಿ!

ಇದು ಕವಿಹೃದಯದ ದನಿಯೂ ಹೌದು, ಸ್ವಾಮಿ ವಿವೇಕಾನಂದರು ಅಂದಿಗೆ ಅರ್ಧ ಶತಮಾನದ ಹಿಂದೆ ಮಾಡಿದ್ದ ಸಿಂಹನಾದದ ಮಾರ್ದನಿಯೂ ಹೌದು:

I call him a traitor who, having been educated, nursed in luxury by the heart's blood of the downtrodden millions of toiling poor, never even takes a thought for them. Where, in what period of history your rich men, noble men, your priests and potentates took any thought for the poor, the grinding of whose faces is the very life blood of their power?[1]

"ನಿರಂತರವಾಗಿ ಶ್ರಮಿಸುತ್ತಿರುವ, ದಮನಕ್ಕೆ ಒಳಗಾಗಿರುವ ಲಕ್ಷಾಂತರ ಜನರ ಹೃದಯದ ರಕ್ತದಿಂದ ಪೋಷಿತರಾಗಿ, ಭೋಗಜೀವನ ನಡೆಸುತ್ತಿರುವ, ಆದರೆ ಅವರಿಗಾಗಿ ಸ್ವಲ್ಪ ಮಾತ್ರವೂ ಚಿಂತಿಸದಿರುವ ಪ್ರತಿಯೊಬ್ಬನನ್ನೂ ನಾನು ದ್ರೋಹಿ ಎಂದು ಕರೆಯುತ್ತೇನೆ. ಎಲ್ಲಿ ನಿಮ್ಮ ಇತಿಹಾಸದಲ್ಲಿ ಯಾವಾಗ ನಿಮ್ಮ ಶ್ರೀಮಂತರು, ನಿಮ್ಮ ಪುರೋಹಿತಶಾಹಿ, ನಿಮ್ಮ ಯಾವ ಬಲಿಷ್ಠ ರಾಜರು, ಯಾರ ಅರೆಯುವ ಮುಖಗಳೇ ಅವರ ಶಕ್ತಿಯ ಜೀವಧಾತುವಾಗಿತ್ತೋ ಅಂತಹ ಬಡಜನರ ಬಗ್ಗೆ ಒಮ್ಮೆಯಾದರೂ ಯೋಚಿಸಿದ್ದುಂಟೇ ಹೇಳಿ?"

ಕುವೆಂಪು ಬರಿಯ ಪ್ರಕೃತಿ ವರ್ಣನೆಯ ಮಾನವ ಮತ್ತು ಪ್ರಕೃತಿ ಸೌಂದರ್ಯದ ಆರಾಧನೆಯ, ಸಿಂಹಾಸನ, ಕಿರೀಟ, ಅಡ್ಡಪಲ್ಲಕ್ಕಿಗಳ ವೈಭವದ ಮೆಚ್ಚುಗೆಯ ಕವಿಯಾಗಿ ಉಳಿಯುವುದು ಸಾಧ್ಯವೇ ಇರಲಿಲ್ಲ. ಅವರು ವರ್ತಮಾನ ಭಾರತಕ್ಕೆ ಪ್ರಸ್ತುತರಾದದ್ದು, ಭವಿಷ್ಯ ಭಾರತದ ನಿರ್ಮಾಣಕ್ಕೆ ತೋರುಗಂಬವಾದದ್ದು, ಅವರ ಸಮಸ್ತ ಸಾಹಿತ್ಯವೂ ಭರತಖಂಡದ ಜನಸಾಮಾನ್ಯರ ಸಮಗ್ರ, ಆಮೂಲಾಗ್ರ ಪರಿವರ್ತನೆಯನ್ನು ಗುರಿಯಾಗಿ ಹೊಂದಿದ್ದುದರಿಂದ.

---

1. Complete Works of Swami Vivekananda. Vol III, 329-30

ಭರತಖಂಡದ ಸಾವಿರಾರು ವರ್ಷಗಳ ಇತಿಹಾಸದಲ್ಲಿ ಜನಸಾಮಾನ್ಯರಿಗೆ ಅರ್ಥವಾಗುವ ರೀತಿಯಲ್ಲಿ ವರ್ಣ ಮತ್ತು ವರ್ಗ ವ್ಯವಸ್ಥೆಯನ್ನು ಬೇರು ಸಹಿತ ಕಿತ್ತೆಸೆಯಲು ಪ್ರಯತ್ನ ನಡೆದಿದ್ದು ಒಮ್ಮೆ ಕ್ರಿ.ಪೂ. ಐದನೆಯ ಶತಮಾನದಲ್ಲಿ ಬುದ್ಧನಿಂದ, ಮತ್ತೊಮ್ಮೆ ಕ್ರಿ.ಶ. ಹನ್ನೆರಡನೆಯ ಶತಮಾನದಲ್ಲಿ ಶಿವಶರಣರ ನಾಯಕರಾಗಿದ್ದ ಬಸವಣ್ಣನವರಿಂದ. ಆದರೆ ಅವರಿಬ್ಬರ ಮಹಾನ್ ಪ್ರಯತ್ನಗಳು ಸೋಲಿನಲ್ಲಿ ಪರ್ಯವಸಾನವಾದುವು. ಬೌದ್ಧಧರ್ಮ-ಭಾರತದ ಮಟ್ಟಿಗಾದರೂ - ಬುದ್ಧನ ಅನಂತರದವರು ಸೃಷ್ಟಿಸಿದ ಕಲ್ಪಗಳ, ಆಚರಣೆಗಳ (rituals) ಉಸುಕಿನಲ್ಲಿ ಸಿಕ್ಕಿಕೊಂಡು ಭಾರತದ ಜನಸಾಮಾನ್ಯರಿಗೆ ಅರ್ಥವಾಗದೇ ಹೋಯಿತು. ವೀರಶೈವ ಧರ್ಮವಾದರೋ, ಜಗತ್ತಿನ ಅತಿದೊಡ್ಡ ಸಾಮಾಜಿಕ ಕ್ರಾಂತಿ ಎಂದು ಘೋಷಿತವಾಗಬಹುದಾದದ್ದು ಇಷ್ಟಲಿಂಗಧಾರಣೆ, ವಿಭೂತಿಧಾರಣೆ, ಷಟ್‌ಸ್ಥಲಗಳ ಮುಂತಾದ ಇತಿಮಿತಿಗಳಿಂದ ಜಾತಿಯಾಗಿ ಹರಳುಗೊಂಡು, ಆ ಇತಿಮಿತಿಗಳನ್ನು ಒಪ್ಪಿಕೊಳ್ಳದವರಿಗೆ ದುರ್ಗಮವಾದ ಕೋಟೆಯಾಯಿತು. ಈ ಎರಡು ಧರ್ಮಗಳು ಅಸ್ಪಶ್ಯತೆಯನ್ನು ತೊಡೆದೇ ಹಾಕುವ ಮಹಾ ಸಾಮರ್ಥ್ಯವನ್ನು ಗರ್ಭೀಕರಿಸಿಕೊಂಡಿದ್ದುವು. ಒಂದು ನಾನಾ ಕಾರಣಗಳಿಂದ, ತಾನು ಹುಟ್ಟಿದ ನೆಲದಲ್ಲೇ ಶುಷ್ಕ ಆಚಾರ ವಿಚಾರಗಳ ಮರುಭೂಮಿಯಲ್ಲಿ ಇಂಗಿ ಹೋಗಿ, ಬೇರೆ ನೆಲಗಳಲ್ಲಿ ಉಕ್ಕಿಹರಿಯಿತು. ಮತ್ತೊಂದು ತಾನು ಹುಟ್ಟಿದ ನೆಲದಲ್ಲೇ, ತನ್ನ ಮಹಿಮೆಯನ್ನು ತಾನೇ ಅರಿಯದ ವಿಸ್ಮೃತ ಸ್ಥಿತಿಯ ಮಂಪರಿನಲ್ಲಿ ಉಳಿಯಿತು.

ಆದರೆ ಕುವೆಂಪು ಪದ್ಯ, ಗದ್ಯ, ನಾಟಕ ಮುಂತಾದ ತಮ್ಮ ಸೃಜನಶೀಲ ಶಕ್ತಿಯಿಂದ ಹರಿತಗೊಂಡ ವೈಚಾರಿಕತೆಯ ಖಡ್ಗದಿಂದ ಶತಶತಮಾನಗಳಿಂದ ಭಾರತದ ಸಂಸ್ಕೃತಿಗೆ ಕುಠಾರಪ್ರಾಯವಾಗಿರುವ, ಪುರೋಹಿತಶಾಹಿಯಿಂದ ಪೋಷಿತವಾಗಿರುವ ಬಂದಳಿಕೆಗಳನ್ನು ಕತ್ತರಿಸಿ ಎಸೆಯುವ ಧೀರ ಸಾಹಸಕ್ಕೆ ತಮ್ಮನ್ನು ತಾವು ಅರ್ಪಿಸಿಕೊಂಡರು. ನನಗೆ ತಿಳಿದಂತೆ, ಕುವೆಂಪು ಅವರಲ್ಲದೆ ಕನ್ನಡದ ಬೇರಾವ ಸಾಹಿತಿಯೂ - ನವೋದಯದವರಾಗಲಿ, ನವ್ಯರಾಗಲಿ, ಭಾರತದ ವರ್ಗ ಮತ್ತು ವರ್ಣವ್ಯವಸ್ಥೆಯಲ್ಲಿ ಸ್ಥಿತಿಶೀಲತೆಯನ್ನು - static - ಒಪ್ಪಿಕೊಂಡರೇ ಹೊರತು ಗತಿಶೀಲತೆಯನ್ನು - total revolution - ಬಯಸಲಿಲ್ಲ. ಕುವೆಂಪು ಧೈರ್ಯದಿಂದ ತಮ್ಮ ಸೃಜನಶೀಲತೆಯ ಗಣನೀಯವಾದ ಭಾಗವನ್ನು ಸಮಗ್ರಕ್ರಾಂತಿಗೆ, ಸರ್ವೋದಯ ಸಂಸ್ಕೃತಿ ದರ್ಶನಕ್ಕೆ ಮೀಸಲಾಗಿರಿಸಿದರು.

ಈ ಸಂದರ್ಭದಲ್ಲಿ ಅವರ ''ಕಲ್ಕಿ'' ಎಂಬ ಶಕ್ತಿಪೂರ್ಣವಾದ ಕವನವನ್ನು ಉದ್ಧರಿಸುವುದು ಅಗತ್ಯವಾಗಿದೆ.

ನಿದ್ದೆಯ ಲೋಕದಿ ಕನಸಿನ ಬೀದಿ.
ತಿರುಗಿದೆ, ತೊಳಲಿದೆ, ತಪ್ಪಿತು ಹಾದಿ.
...........

ನುಗ್ಗಿದೆ ನಾನಾ ಹಳುವಿನಲಿ;
ಆ ಕನಸಿನ ಹೆಗ್ಗಾಡಿನಲಿ.
ಅಲ್ಲಿದ್ದುದು ಬೆಳಕೆಂಬುವುದಲ್ಲ,
ಕತ್ತಲು ಅಲ್ಲ;
ಬೆಳಕೋ ಕತ್ತಲೊ ಶಿವನೇ ಬಲ್ಲ
ಶಿವನೇ ಬಲ್ಲ :
............

ಇಂಥ ಮಂಪರದ ಆರವಣದಲ್ಲಿ ಕವಿ ನಡೆಸುತ್ತಾರೆ. ಮುಂದೊಂದು ಬೆಟ್ಟ ಅದನ್ನು ಹತ್ತಿ ಹತ್ತಿ ಬೆಟ್ಟದ ನೆತ್ತಿಯ ಮೇಲೆ ನಿಲ್ಲುತ್ತಾರೆ. ಅಲ್ಲಿಂದ ನೋಡಿದರೆ ಯಾವುದೋ ಊರು – ಬರಿ ಮಾಯದ ಊರು! ಅಲ್ಲಿ:

ಧನಿಕರ ಮನೆಗಳು ಒಂದೆಡೆ ನಿಂತಿವೆ.
ಬಡವರ ಗುಡಿಸಲು ಒಂದೆಡೆ ನಿಂತಿವೆ.

ಜ್ಯೋತಿಯ ಮಣಿದೀಪಗಳಲ್ಲಿ,
ಕತ್ತಲು ಕಗ್ಗತ್ತಲು ಇಲ್ಲಿ!
ಹಾಡಿನ ನುಣ್ದನಿಯತ್ತ
ಗೋಳಿನ ನೀಳ್ದನಿಯಿತ್ತ :

ಕೂಳನು ಹೆಮ್ಮೆಗೆ ಬಿಸುಡುವರಲ್ಲಿ
ಹೊಟ್ಟೆಗೆ ಇಲ್ಲದೆ ಕೊರಗುವರಿಲ್ಲಿ!

ಆ ಕಡೆ ಉದ್ಯಾನ
ಈ ಕಡೆ ಸ್ಮಶಾನ!

ಪೀತಾಂಬರಗಳ ಹೊದೆಯುವರಲ್ಲಿ,
ಕೌಪೀನಕೆ ಚಿಂದಿಯು ಸಿಗದಿಲ್ಲಿ!
ನೋಡುತ ನೋಡುತ ನೋಡುತ್ತಿದ್ದೆ;
ನೋಡುತ್ತಿರೆಯಿರೆ ಬೆಚ್ಚಿ ಬಿದ್ದೆ;

ಬಡವರ ಬಡಬಾಗ್ನಿಯು ಎದ್ದು
ಗುಡಿಸಿಲುಗಳಿಗೇ ಬೆಂಕಿಯು ಬಿದ್ದು

ಧಗ ಧಗ ಧಗ ಧಗ ಹೊತ್ತಿದುದು
ಭುಗಿ ಭುಗಿಲೆನ್ನುತ ಮುತ್ತಿದುದು!

ಮುಗಿಲಿನವರೆಗೂ ಬಾನಿನವರೆಗೂ
ದಿಕ್ಕು ದಿಕ್ಕುಗಳ ಜುಟ್ಟಿನವರೆಗೂ

ಬಡವರ ಬೆಂಕಿಯು ನಾಲಿಗೆ ಚಾಚಿ
ಶ್ರೀಮಂತರನಪ್ಪಿತು ಬಾಚಿ!
ಬಡವರ ಸಿಟ್ಟದು ಏನು ಪಿಶಾಚಿ!
ಬಡಬಾಗ್ನಿಯ ತಲೆತಗ್ಗಿತು ನಾಚಿ!
ಶ್ರೀಮಂತರ ಸೌಧಂಗಳ ನೆತ್ತಿ
ಸೀದುದು ಬಡ ಹೊಟ್ಟೆಯ ಉರಿ ಹೊತ್ತಿ.

ಮುಂದಿನ ವರ್ಣನೆ ರುದ್ರಭಯಂಕರವಾಗಿದೆ. ಕುವೆಂಪು ಅವರ ನಂಬಿಕೆ ಈ ಬಡಬಾಗ್ನಿಯು ಶ್ರೀಮಂತಿಕೆ, ಭೋಗ ಮುಂತಾದವನ್ನೆಲ್ಲ ಸುಟ್ಟುಹಾಕುತ್ತದೆ ಎಂದು. ಈ ಸಂದರ್ಭದಲ್ಲಿ ಪಾಪದ ದೇಹ, ಪುಣ್ಯದ ದೇಹ, ಗುಡಿ ಗೋಪುರಗಳು ಎಲ್ಲ ರಕ್ತದ ಹೊಳೆಯಲ್ಲಿ ಕೊಚ್ಚಿಹೋಗುತ್ತವೆ. ಕಲ್ಕಿ ಅಸ್ಥಿಪಂಜರದ ಕುದುರೆಯನ್ನೇರಿ ಅಸ್ಥಿಪಂಜರ ರೂಪಿಯಾಗಿ ಬರುತ್ತಾನೆ, ''ಹಸಿವು, ದಾಹ, ರಕ್ತ ರಕ್ತಾ'' ಎನ್ನುತ್ತಾ ಬಂದು ನೆತ್ತರ ಹೊಳೆಯಲ್ಲಿ ಧುಮುಕುತ್ತಾನೆ. ರಕ್ತವನ್ನು ಮೊಗೆಮೊಗೆದು ಕುಡಿಯುತ್ತಾನೆ. ಕವಿಯೆಡೆಗೆ ಕಲ್ಕಿ ಧಾವಿಸಿ ಬರುತ್ತಿರುವಾಗ

''ಕಲ್ಕೀ! ಕಲ್ಕೀ! ಎನ್ನುತ ಚೀರಿ
ಕನಸೊಡೆದೆದ್ದೆ
ಇನ್ನೆಲ್ಲಿಯ ನಿದ್ದೆ!

ಇನ್ನೆಲ್ಲಿಯ ನಿದ್ದೆ ಎನ್ನುವುದು - ಷೇಕ್ಸ್‌ಪಿಯರನ ಮ್ಯಾಕ್‌ಬೆತ್ ನಾಟಕದಲ್ಲಿ "Macbeth has murdered sleep' ಎಂಬ ವಾಕ್ಯದಂತೆ ಅಸೀಮವಾದ ಧ್ವನಿ ಪ್ರಪಂಚವನ್ನು ಸೃಷ್ಟಿಸಿದೆ. ಈ ವರ್ಗದ ಅಂತಸ್ತುಗಳು, ಜಾತಿಯ ಮೇಲು ಕೀಳುಗಳು ಸೃಷ್ಟಿಸಿರುವ ಅಸಮಾನತೆಯನ್ನು ನೆನೆಸಿಕೊಂಡರೆ, ಸೂಕ್ಷ್ಮ ಸ್ವಭಾವದ ಯಾರಿಗೇ ಆದರೂ ನಿದ್ದೆ ಶಾಶ್ವತವಾಗಿ ದೂರ ದೂರ ಸರಿದಂತೆಯೇ ತಾನೆ?

ಬಡತನ, ಅಜ್ಞಾನ ಮುಂತಾದುವುಗಳಿಗೆ ಪ್ರತಿಕ್ರಿಯಿಸಿರುವಂತೆ ಕುವೆಂಪು ದೇಶವನ್ನು ಕಂಗಾಲು ಮಾಡುತ್ತಿರುವ ಜನಸಂಖ್ಯಾ ಸ್ಫೋಟದ ಪ್ರಕ್ರಿಯೆಗೆ ಪ್ರತಿಕ್ರಿಯೆಯಾಗಿ 'ಪ್ರೇತಕ್ಯೂ' ಎಂಬ ಕವನವನ್ನು ರಚಿಸಿದ್ದಾರೆ. ಜನಸಂಖ್ಯೆ ಅತಿಯಾಯಿತು. ಇನ್ನೂ ಮಕ್ಕಳು ಹುಟ್ಟುತ್ತಲೇ ಹೋದರೆ ಈ ದೇಶದಲ್ಲಿ ಅವರಿಗೆ ತಿನ್ನುವುದಕ್ಕೆ ಅನ್ನವಿರುವುದಿಲ್ಲ, ನಿಲ್ಲುವುದಕ್ಕೆ ಜಾಗವಿರುವುದಿಲ್ಲ ಎಂಬುದೆಲ್ಲ ಜನಸಂಖ್ಯಾ ತಜ್ಞರ, ಅರ್ಥಶಾಸ್ತ್ರಜ್ಞರ ವಾದಗಳು. ಆ ವಾದಗಳನ್ನೆಲ್ಲ ಗ್ರಹಿಸಿ, ಅನನ್ಯವಾದ ರೀತಿಯಲ್ಲಿ ಇದಕ್ಕಿಂತ ಸುಂದರವಾಗಿ, ಪರಿಣಾಮಕಾರಿಯಾದ ರೀತಿಯಲ್ಲಿ ಮಂಡಿಸಲು ಸಾಧ್ಯವಿಲ್ಲ ಎನ್ನುವಂತೆ, 'ಪ್ರೇತಕ್ಯೂ' ಕವನದಲ್ಲಿ ಕಾವ್ಯಮಯವಾಗಿ ಕೊರಗಿ ಜನರ ಅಜ್ಞಾನಕ್ಕಾಗಿ ಮರುಗಿದ್ದಾರೆ. ಅವರಿಗೆ ಹೇಳಿ ಉಪಯೋಗವೇನು? ಈ ಭೂಮಿಗೆ ಅತ್ಯಾತುರದಿಂದ ಮುನ್ನುಗ್ಗಿ ಬರಲು ತವಕಿಸುತ್ತಿರುವ ಜೀವಿಗಳನ್ನೇ ಉದ್ದೇಶಿಸಿ ಕೇಳುತ್ತಾರೆ:

ಯಾಕಿಂತು
ಕ್ಯೂ ನಿಂತು
ನುಗ್ಗುತ್ತಿರುವಿರಿ ಜನ್ಮಧಾರಣೆಗೆ
ಓ ನತದೃಷ್ಟ ಜೀವಗಳಿರಾ?
ನಿಮಗೆ ಕಾಣುವುದಿಲ್ಲ?
ಭೂಮಿ ತುಂಬೆಲ್ಲ
ಜನಸಂಖ್ಯೆ ಏರಿ ಕಿಕ್ಕಿರಿದು ಮೀರಿ,
ಕಂಕಾರಪಂಕ್ತಿ, ಹೊಟ್ಟೆಗಿಲ್ಲ
ಏನು ಅವಸರ ನಿಮಗೆ?
ಯಾವ ಗರ್ಭವೋ ಏನೋ
ಯಾರ ಯೋನಿಯೋ ಏನೋ
ಅಂತು ಹುಟ್ಟಿದರಾಯ್ತು
ಭೂಮಿಯಲ್ಲಿ!
ಉಸಿರು ಕಟ್ಟಿಹುದೇನು ನಿಮಗೆ ಅಲ್ಲಿ?

ಧರ್ಮಕ್ಕೆ ಸಂಬಂಧಿಸಿದಂತೆ ಕುವೆಂಪು ಅವರ ನಿಲುವು ಏನು ಎಂಬುದು ಪರಿಶೀಲಿಸಬೇಕಾದ ಪ್ರಶ್ನೆ. ಅವರು ನಾಸ್ತಿಕರಲ್ಲ. ಶ್ರೀ ರಾಮಕೃಷ್ಣ ಪರಮಹಂಸರು ಅವರಿಗೆ ಸಾಕ್ಷಾತ್ ದೇವರು. ಅವರ ಶಿಷ್ಯರಾದ ಶ್ರೀ ಶಿವಾನಂದರು ಇವರಿಗೆ ದೀಕ್ಷಾ ಗುರು. ತಮ್ಮ ಇಂದ್ರಿಯಗಳೆಲ್ಲ ಚೆನ್ನಾಗಿ ಕೆಲಸಮಾಡುತ್ತಿರುವವರೆಗೂ ಅವರು ಪ್ರತಿ ದಿನವೂ ಬೆಳಿಗ್ಗೆ ಸಂಜೆ ದೇವರ ಮನೆಯಲ್ಲಿ ಕುಳಿತು, ಗಟ್ಟಿಯಾಗಿ ದೇವರ ಸ್ತೋತ್ರಗಳನ್ನು ಹೇಳಿಕೊಳ್ಳುತ್ತಾ ಜಪಧ್ಯಾನಾದಿಗಳನ್ನು ಮಾಡುತ್ತಿದ್ದರು. ಶ್ರೀ ರಾಮಕೃಷ್ಣಾಶ್ರಮದ ಪ್ರಾರ್ಥನಾಮಂದಿರವನ್ನು ಬಿಟ್ಟು ಅವರು ಯಾವುದೇ ದೇವಸ್ಥಾನಕ್ಕೂ ಎಂದೂ ಕಾಲಿಟ್ಟವರಲ್ಲ. ಇಂಥ ವಿಷಯಗಳಲ್ಲಿ ಅವರ ಶ್ರದ್ಧೆ ಎಂಥದು ಎಂಬುದನ್ನು ತೋರಿಸುತ್ತವೆ ಪಂಡಿತ ನೆಹರೂರವರನ್ನು ಕುರಿತ ಅವರ ಮಾತುಗಳು. ಅವು ಅವರ ವೈವಿಧ್ಯಮಯವಾದ ಗದ್ಯಶೈಲಿಗೆ ಒಂದು ಉದಾಹರಣೆಯೂ ಹೌದು.

“(ನೆಹರೂ) ಜನಿವಾರ ಹಾಕಿಕೊಳ್ಳಲಿಲ್ಲ. ನಾಮ ಹಚ್ಚಿಕೊಳ್ಳಲಿಲ್ಲ. ವಿಭೂತಿ ಬಳಿದುಕೊಳ್ಳಲಿಲ್ಲ. ದೇವಾಲಯಗಳಿಗೆ ಆರಾಧನೆಗಾಗಿ ಹೋಗಲಿಲ್ಲ. ತೀರ್ಥಗಳಿಗೆ ಯಾತ್ರೆ ಹೋಗಿ ಮೀಯಲಿಲ್ಲ. ಪುರೋಹಿತರ ಪಾದ ತೊಳೆದು ನೀರು ಕುಡಿಯಲಿಲ್ಲ. ಪೂಜಾರಿಗಳಿಗೆ ಅಡ್ಡ ಬೀಳಲಿಲ್ಲ. ಅಡ್ಡಪಲ್ಲಕ್ಕಿಯ ಜಗದ್ಗುರುಗಳಿಗೆ ಕೈ ಮುಗಿದು ಮಾಲೆ ಹಾಕಲಿಲ್ಲ. ರಾಹುಕಾಲ ಗುಳಿಕಕಾಲ ನೋಡಲಿಲ್ಲ. ನಿಮಿತ್ತ ನೋಡಿಸಲಿಲ್ಲ. ಪಂಚಾಂಗ ತೆರೆಯಲಿಲ್ಲ. ಜ್ಯೋತಿಷ್ಯ ನಂಬಲಿಲ್ಲ. ಗ್ರಹಣ ಕಾಲದಲ್ಲಿ ತಂಬಟೆ ಬಡಿದು ಸೂರ್ಯನನ್ನು ರಾಹುವಿನಿಂದ ಪಾರು ಮಾಡುವ ಭಾರತೀಯ ಡಾನ್ ಕ್ವಿಕ್ಸೋಟು ಆಗಲಿಲ್ಲ -

ಇತ್ಯಾದಿಗಳಿಗಾಗಿ ಅವರನ್ನು ನಾಸ್ತಿಕ ಎಂದರೆ - ಅವರಂತಹ ನಾಸ್ತಿಕರೊಡನೆ ನರಕವೂ ಲೇಸು; ಮೂಢಮತಾಚಾರದ ಯಾವಾತನೋ ಒಬ್ಬ ಪೂರ್ಣಾನಂದ, ಭ್ರಾಂತ ಜೋತಿಷಿ, ಯಾವಾತನೊ ಒಬ್ಬ ರಾಮಣ್ಣ, ಮತ್ತಾರೊ ಒಬ್ಬ ಮಠಾಧಿಪತಿ ಸೀನಣ್ಣ ಮುಂತಾದವರು ಇರುವ ಸ್ವರ್ಗವೂ ಹೇಸು! - ಎಂದು ಹೇಳಬೇಕಾಗುತ್ತದೆ.''

ಮೇಲಿನ ಎಲ್ಲ ಮಾತುಗಳೂ ಕುವೆಂಪು ಅವರಿಗೂ ಅನ್ವಯಿಸುತ್ತವೆ. ಆದರೆ, ಅವರು ನಿಜವಾಗಿ, ನಿಜದ ಅರ್ಥದಲ್ಲಿ ಆಸ್ತಿಕರು. ಎಂದರೆ, ನಮಗೆ ತಿಳಿದಿರುವ ಜಗತ್ತಿನ ಎಲ್ಲ ಶಕ್ತಿಗಳಿಗೂ ಮೀರಿದ ಶಕ್ತಿಯೊಂದಿದೆ ಎಂಬುದು ಅವರ ದೃಢವಾದ ನಂಬಿಕೆ. ಪ್ರಾರ್ಥನೆಯ ಶಕ್ತಿಯಲ್ಲಿ ಅವರಿಗೆ ಗಾಢವಾದ ವಿಶ್ವಾಸ. ದೇವರು ಯಾವ ಲೌಕಿಕ ಪ್ರಯೋಜನಗಳನ್ನಾಗಲಿ ತಮಗೆ ನೀಡುತ್ತಾನೆ ಎಂಬ ಭಾವನೆ ಅವರಿಗಿರಲಿಲ್ಲ. ಆದರೆ ಆತ್ಮಸಾಕ್ಷಾತ್ಕಾರ ಎಂಬುದರಲ್ಲಿ ಅವರಿಗೆ ನಂಬಿಕೆಯುಂಟು. ಉಪನಿಷತ್ತುಗಳ ಆಳವಾದ ಪರಿಚಯ ಅವರಿಗಿತ್ತು. ಭಗವದ್ಗೀತೆಯನ್ನು ಚೆನ್ನಾಗಿ ಅಧ್ಯಯನ ಮಾಡಿದ್ದರು. ಯಾವುದೇ ಒಂದು ಧರ್ಮ ಇನ್ನೊಂದು ಧರ್ಮಕ್ಕಿಂತ ಹೆಚ್ಚಾದದ್ದು ಎಂಬ ಭಾವಫೆ ಅವರಿಗಿರಲಿಲ್ಲ. ಜಗತ್ತಿನಲ್ಲಿ ಎಷ್ಟು ಕೋಟಿ ಜನರಿದ್ದಾರೆಯೋ ಅಷ್ಟು ಕೋಟಿ ಧರ್ಮಗಳಿವೆ, ಪ್ರತಿಯೊಬ್ಬ ವ್ಯಕ್ತಿಯೂ ತನಗೆ ಸರಿತೋರಿದಂತೆ, ತನ್ನ ಸಂಸ್ಕಾರಕ್ಕೆ ತಕ್ಕಂತಹ ಧರ್ಮವನ್ನು ಅಳವಡಿಸಿಕೊಳ್ಳಲಿ ಎಂಬ ವಿವೇಕಾನಂದರ ಮಾತಿಗೆ ಇವರ ಪೂರ್ಣ ಸಹಮತಿಯುಂಟು. ತಮ್ಮ ಆರಾಧ್ಯದೈವವಾದ ಶ್ರೀ ರಾಮಕೃಷ್ಣ ಪರಮಹಂಸರ ಮಾತುಕತೆಗಳ ಸಂಗ್ರಹವಾದ ''ಶ್ರೀರಾಮಕೃಷ್ಣ ವಚನವೇದ'' ಎಂಬ ಗ್ರಂಥಕ್ಕೆ ಅವರು ಅತ್ಯಪೂರ್ವವಾದ ಒಂದು ಮುನ್ನುಡಿ ಬರೆದಿದ್ದಾರೆ. ಅದರ ಒಂದು ಪ್ಯಾರಾ ಓದಿದರೆ ಸಾಕು ಕುವೆಂಪು ಅವರ ಆಸ್ತಿಕ್ಯದ ಸ್ವರೂಪ ಗೊತ್ತಾಗುತ್ತದೆ!

''ಶ್ರೀ ರಾಮಕೃಷ್ಣ ವಚನವೇದ'ವೆಂದರೆ ಅದೊಂದು ಕರತಲ ದೇವಸ್ಥಾನ, ಕರತಲ ತಪೋರಂಗ, ಕರತಲ ಪುಣ್ಯಕ್ಷೇತ್ರ. ಆದರೆ ದೇವಸ್ಥಾನ ಪುಣ್ಯಕ್ಷೇತ್ರಗಳಂತೆ ತಾನೆಂದಿಗೂ ಕಲುಷಿತನಾಗುವ ಸಂಭವವಿಲ್ಲ. ಯಾವ ಮನೆಯಲ್ಲಿ ಈ 'ವಚನವೇದ'ವಿರುತ್ತದೆಯೋ ಅದು ಮಂದಿರವಾಗುತ್ತದೆ. ಯಾರ ಕೈ ಇದನ್ನು ಹಿಡಿದಿರುತ್ತದೆಯೋ ಅದು ಭಗವಂತನ ಪಾದಾರವಿಂದವನ್ನೇ ಧರಿಸಿರುತ್ತದೆ. ಯಾರ ಚಿಹ್ವೆ ಇದನ್ನು ಪಠಿಸುತ್ತದೆಯೋ ಅದು ಅಮೃತವನ್ನು ಈಂಟುತ್ತಿರುತ್ತದೆ. ಇದು ಆನಂದದ ಆಗರ; ಶಾಂತಿಯ ಸಾಗರ; ದಿವ್ಯ ಜ್ಞಾನದ ಓಗರ. ಕಷ್ಟದ ಸಮಯದಲ್ಲಿ ಧೈರ್ಯವೀಯುವ ಸಖ; ಸುಖದ ಸಮಯದಲ್ಲಿ ಸಮರ್ಪಣ ಭಾವವಿತ್ತು ವಿನಯ ಭಕ್ತಿಗಳನ್ನು ಪ್ರಚೋದಿಸುವ ಗುರು; ಕತ್ತಲಲ್ಲಿ ದೀಪ; ದಾರಿಗೆ ಊರುಗೋಲು. ದಿಕ್ಕುಗೆಡದಂತೆ ಗುರಿದೋರುವ ಧ್ರುವತಾರೆ. ಇಲ್ಲಿ ವೇದ ವೇದಾಂತ ದರ್ಶನಾದಿ ಸರ್ವಸಾರವಿದೆ. ಓದು ಬರುವ ಅತ್ಯಂತ ಸಾಮಾನ್ಯನೂ ಇದನ್ನು ಓದಿದ ಮೇಲೆ ಯಾವ ಪಂಡಿತನಿಗೂ ಕರುಬುವ ಅವಶ್ಯಕತೆಯಿಲ್ಲ; ಯಾವ ವಿದ್ವತ್‌ಪೂರ್ಣವಾದ ತತ್ತ್ವಜ್ಞಾನಿಗೂ ಕೀಳೆಂದು ನಾಚಬೇಕಾಗಿಲ್ಲ. ಅದಕ್ಕೆ ಬದಲು ಭಗವಂತನ ಕೃಪೆಯಿಂದ

ತನಗಿಂತಲೂ ಧನ್ಯರಿಲ್ಲ ಎಂತು ನಿರ್ಮಮನಾಗುತ್ತಾನೆ, ಶಾಂತನಾಗುತ್ತಾನೆ, ಪೂರ್ಣನಾಗುತ್ತಾನೆ. ಆತನಿಗೆ ಗಗನದ ವೈಶಾಲ್ಯ, ಹೈಮಾಚಲದ ಔನ್ನತ್ಯ, ಅಂಬುಧಿಯ ಗಾಂಭೀರ್ಯ ಎಲ್ಲವೂ ವೃದ್ಧಿಸುತ್ತವೆ. ಇಷ್ಟು ಸರ್ವಜನ ಸಾಮಾನ್ಯ ರೂಪದಲ್ಲಿ, ಇಷ್ಟು ಸರ್ವಸುಲಭ ರೂಪದಲ್ಲಿ ಭಗವಂತ ಎಂದೂ ಅವತರಿಸಿರಲಿಲ್ಲ, ಭಗವದ್‌ವಾಣಿ ತಾನೆಂದೂ ಕೃತಿಗೊಂಡಿರಲಿಲ್ಲ.''

ದೈವತತ್ವವನ್ನು, ದೈವವಾಣಿಯನ್ನು ಈ ಮಾತುಗಳು ಪ್ರಕಾಶಗೊಳಿಸಿದ್ದರೆ, ಗುರುತತ್ವವನ್ನು, ಗುರುಸತ್ವವನ್ನು, ಶಿಷ್ಯನ ತತ್ವಾನುಸಂಧಾನ ಸತ್ವವನ್ನು, ಸಮರ್ಪಣಾಭಾವದ ಶಿಖರಸ್ವರೂಪವನ್ನು ವರ್ಣಿಸುವ ಕೃತಿ, ಅವರ ಅಮೋಘವಾದ ನಾಟಕ 'ಬೆರಳ್-ಗೆ-ಕೊರಳ್'. ಇದು ಪ್ರಕಟವಾದದ್ದು ೧೯೪೭ರಲ್ಲಿ. ಬಹುಶಃ ಅವರ ನಾಟಕಗಳಲ್ಲೆಲ್ಲ ಅತಿ ಹೆಚ್ಚಿನ ಸಲ ರಂಗಭೂಮಿಯ ಮೇಲೆ ಪ್ರದರ್ಶಿತವಾದ ಹೆಗ್ಗಳಿಕೆ ಇದರದು. ಹಳಗನ್ನಡದಲ್ಲಿದ್ದರೂ ಭಾಷೆಯ ಓಟಕ್ಕೆ ಸ್ವಲ್ಪವೂ ತೊಡಕಾಗಿಲ್ಲ. ಹಾಗಾಗಿಯೇ, ಸಾವಿರಾರು ಪ್ರೇಕ್ಷಕರ ಮೆಚ್ಚುಗೆಗೆ ಈ ನಾಟಕ ಪಾತ್ರವಾಯಿತು. ಇದರಲ್ಲಿನ ಒಂದೇ ಒಂದು ಸಂದರ್ಭವನ್ನು ಮಾತ್ರ ಉದ್ಧರಿಸಿ ಸಮಾಧಾನ ಪಡಬೇಕಾಗಿದೆ.

ಏಕಲವ್ಯನನ್ನು ಪರೀಕ್ಷಿಸಲು ದ್ರೋಣಾಚಾರ್ಯರು ಕಣ್ಣಿಗೆ ಕಾಣಿಸುತ್ತಾ ಇರದಿದ್ದರೂ, ಧ್ವನಿಮಾತ್ರದಿಂದ ತನ್ನ ಅಸ್ತಿತ್ವವನ್ನು ಸಾರುತ್ತಿರುವ ಹಕ್ಕಿಯನ್ನು ಶಬ್ದವೇಧಿ ವಿದ್ಯೆಯಿಂದ ಕೊಲ್ಲುವಂತೆ ಶಿಷ್ಯ ಏಕಲವ್ಯನಿಗೆ ಹೇಳುತ್ತಾರೆ. ಅವರ ಈ ಅಪ್ಪಣೆಯಿಂದ ಬೆದರಿದ ಏಕಲವ್ಯ ಥಟ್ಟನೆ ಉತ್ತರಿಸುತ್ತಾನೆ:

ಅಪರಾಧಮಿಲ್ಲದಾ ಸಾಧುವಂ ಕೊಲಲ್ಕಲ್ತು
ಆಚಾರ್ಯ, ಈ ವಿದ್ಯೆಯಂ ನೀನಿತ್ತುದೆನಗೆ.
ಮುನಿಗುಂ ಮಂತ್ರಾಧಿದೇವತೆ; ಮೇಣ್
ದಿವ್ಯ ವಿದ್ಯಾಬಲದಿ ಪಾಪಕಾರ್ಯವನೆಸಗೆ
ಧರ್ಮಂ ಋತಚ್ಯುತನೆನಗೆ ತಾನುಗ್ರಮಕ್ಕುಂ, ಮೇಣ್
ಆತ್ಮಹಾನಿಯಿಂ ಸರ್ವನಾಶಮಕ್ಕುಂ.
ತಾಮದನೆಲ್ಲಮಂ ಬಲ್ಲಿರಾದೊಡಂ
ನನಗಿದು ಪರೀಕ್ಷೆಯಲ್ತೆ ಈ ಪೊಳ್ತು!

ದ್ರೋಣರು ಆನಂದದಿಂದ ಏಕಲವ್ಯನನ್ನು ಆಲಿಂಗಿಸಿಕೊಳ್ಳುತ್ತಾರೆ. ''ಪುಣ್ಯವಂತನ್ ನೀನ್, ಏಕಲವ್ಯ! ಬರ್ದುಕಿದಯ್. ನೀನ್ ಬದುಕಿ ನನ್ನನುಂ ಬರ್ದುಕಿಸಿದಯ್'' ಎಂದು ಕಳಕಳಿಯಿಂದ ಹೇಳುತ್ತಾರೆ. ಏಕಲವ್ಯನೇನಾದರೂ ಧರ್ಮವನ್ನು ಮರೆತು ನಿರಪರಾಧಿ ಯಾದ ಹಕ್ಕಿಯನ್ನು ಕೊಂದಿದ್ದರೆ ನೀಡಬೇಕಾದ ಪರಿಸ್ಥಿತಿ ಒದಗುತ್ತಿರಲಿಲ್ಲ. ತನ್ನ ನಿಯಮವನ್ನು ಮೀರಿದ ಏಕಲವ್ಯನನ್ನು ಧರ್ಮವೇ ಶಪಿಸುತ್ತಿತ್ತು! ಅಲ್ಲದೆ, ಇಲ್ಲೊಂದು ನಾಟಕೀಯ ವ್ಯಂಗ್ಯವೂ ಇದೆ. 'ಅಪರಾಧಮಿಲ್ಲದಾ ಸಾಧು'ವಾದ ಏಕಲವ್ಯನ ಬಿಲ್ಲಿಗೆ

ಬಾಣವನ್ನು ಹೂಡುವ ಶಕ್ತಿಯನ್ನು, ಹೆಬ್ಬೆರಳನ್ನು ಗುರುದಕ್ಷಿಣೆಯಾಗಿ ಕೇಳಿ ಪಡೆಯುವುರ ಮೂಲಕ ಗುರು ದ್ರೋಣ ಶಿಷ್ಯನನ್ನು ನಾಶಗೈಯುತ್ತಾನೆ. ದಿವ್ಯವಿದ್ಯಾಬಲವುಳ್ಳವನಾಗಿದ್ದ ಗುರು ಹೀಗೆಸಗಿದ್ದ 'ಪಾಪ ಕಾರ್ಯ'ವೇ ಮಂತ್ರಾಧಿದೇವತೆ ದ್ರೋಣನ ಆ ಕೃತ್ಯಕ್ಕೆ ಏಕಲವ್ಯನ ಅಬ್ಬೆಯ ಉಬ್ಬೆಗದ ರೂಪದಲ್ಲಿ ಮುನಿಯಿತೊ ಎಂಬಂತೆ ಹಿಂದುಮುಂದು ವಿವರ ಅರಿಯದ ಅವಳು ತನ್ನ ಮಗನ 'ಬೆರಳ್'ಗೆ, ಆ ಬೆರಳು ತುಂಡಾಗುವುದಕ್ಕೆ ಕಾರಣನಾದವನ 'ಕೊರಳ್' ಬಲಿಯಾಗಲೆಂದು ಶಪಿಸುತ್ತಾಳೆ. ಮುಂದೆ ಮಹಾಭಾರತ ಯುದ್ಧಕಾಲದಲ್ಲಿ ಅವನ ಪ್ರಿಯ ಶಿಷ್ಯನಿಂದಲೇ- ಅರ್ಜುನನಿಂದಲೇ-ದ್ರೋಣನ 'ಕೊರಳ್' ಕತ್ತರಿಸಲ್ಪಡುತ್ತದೆ ನ್ಯಾಯವಲ್ಲದ ಸಂದರ್ಭದಲ್ಲಿ. ಗುರುದಕ್ಷಿಣೆಯ ಹೆಸರಿನಲ್ಲಿ ದಿವ್ಯೀಕೃತಗೊಳಿಸಲ್ಪಟ್ಟ ಗುರುವಿನ ಅಲ್ಪತಾಕಾಂಕ್ಷೆ ಬೇರೊಬ್ಬ ಶಿಷ್ಯನ ವೀರೋಚಿತವಲ್ಲದ ಅಲ್ಪಕಾಂಕ್ಷೆಗೆ ಧರ್ಮ ಸಮ್ಮತವಲ್ಲದ ಪಾತಕಕ್ಕೆ ಪ್ರೇರಕವಾಯಿತು. ಈ ಧ್ವನಿ, ನಾಟಕೀಯ ವ್ಯಂಗ್ಯವನ್ನು ಕವಿ ಪ್ರತಿಭೆ ಅನನ್ಯವಾದ ರೀತಿಯಲ್ಲಿ ವ್ಯಂಜಿಸಿರುವುದನ್ನು ಗಮನಿಸಬೇಕು.

ಆಮೇಲಿನದು ಮಾತ್ರ ಏಕಲವ್ಯ ನಿರೀಕ್ಷಿಸದೇ ಹೋದದ್ದು. ಆತನ ತಾಯಿ ಮಗನನ್ನು ಹುಡುಕುತ್ತಾ ಅಲ್ಲಿಗೆ ಬರುತ್ತಾಳೆ. ಏಕಲವ್ಯ ಬೇಗ ಬೇಗ ದ್ರೋಣನನ್ನು ಬೀಡಿಗೆ ಕಳುಹಿಸುತ್ತಾನೆ. ಆದರೇನು? ತಾಯಿ ನೆತ್ತರನ್ನು ನೋಡುತ್ತಾಳೆ. ಅದರಲ್ಲಿ ಬಿದ್ದಿರುವ ಮಗನ ಹೆಬ್ಬೆರಳನ್ನು ನೋಡಿ ಮಾತೃಹೃದಯ ಬೇಯುತ್ತದೆ. ಆ ಬೆಂದ ಹೃದಯದಿಂದ ರುದ್ರವಾದ ಶಾಪ ಉಕ್ಕುತ್ತದೆ:

ಆರ್‍ಗೊ ಬಲಿ ನನ್ನ ಕಂದನ ಬೆರಳ್
ಬಲಿಯಕ್ಕೆ ಆ ಪಾಪಿಯ ಕೊರಳ್!

ಮುಂದೆ ದ್ರೋಣರ ತಲೆಯನ್ನು ಕಾಯಬಹುದಾಗಿದ್ದ ಏಕಲವ್ಯನ ಬೆರಳು ಹೋಯಿತು. ದ್ರೋಣರ ಕೊರಳು, ಕಾಯುವವರಿಲ್ಲದೆ ಮಹಾಭಾರತದಲ್ಲಿ ಉರುಳಿತು. ಈ ಎರಡನ್ನೂ ಕಾರ್ಯಕಾರಣ ಸಂಬಂಧವುಳ್ಳ ಒಂದು ಘಟನೆಯಾಗಿ ಹೆಣೆದಿದೆ ಮಹಾಕವಿಯ ನಾಟ್ಯ ಪ್ರತಿಭೆ.

ಇಷ್ಟೆಲ್ಲ ಆದರೂ ಕುವೆಂಪು ಹೋರಾಡುತ್ತಿರುವುದು ಯಾವ ಅವಿದ್ಯಾ ಶಕ್ತಿಯೊಂದಿಗೆ? ಜಾತೀಯತೆ, ವರ್ಣಾಶ್ರಮಗಳ ವಿಂಗಡಣೆ, ಸಾಂಪ್ರದಾಯಿಕವಾದ ಅರ್ಥರಹಿತವಾದ ಆಚರಣೆಗಳು - ಇವೆಲ್ಲವನ್ನು ಒಟ್ಟಾಗಿಸಿ 'ಮೌಢ್ಯ' ಎಂದು ಕರೆದರೆ ಅದೇ ಕುವೆಂಪು ಅವರ ಪರಮ ಶತ್ರು. ಅದನ್ನು ಕಳೆದುಕೊಂಡು ವಿಚಾರಮತಿಗಳಾಗಿ, ವಿಜ್ಞಾನಮತಿಗಳಾಗಿ ಎಂದು ಕುವೆಂಪು - ಗದ್ಯ, ಪದ್ಯ, ನಾಟಕ, ಕಾದಂಬರಿ ಈ ಎಲ್ಲ ಪ್ರಕಾರಗಳಲ್ಲೂ ಸಾಹಿತ್ಯ ರಚಿಸಿ - ಪದೇ ಪದೇ ಕರೆ ನೀಡಿದ್ದಾರೆ. ಆದರೆ ನಾಮ, ಮುದ್ರೆ, ವಿಭೂತಿ, ತುಳಸೀಮಾಲೆ, ರುದ್ರಾಕ್ಷಿಸರ, ಕ್ರಾಸು, ಶಿಲುಬೆ, ಅರ್ಧಚಂದ್ರ ಇವೇ ಧರ್ಮ ಎಂಬ ಭಾವನೆಯನ್ನು ಬೇರೂರಿಕೊಂಡಿರುವ ಮಾನವ ಮತಿ ಇದರಾಚೆಗೆ ಚಲಿಸುವ ಯಾವ ಸೂಚನೆಗಳೂ ಕಾಣುತ್ತಿಲ್ಲ. ಇದನ್ನೆಲ್ಲ ಕಂಡು ಕೊರಗಿ ಕವಿ ಹೇಳಿದರು:

ನಮ್ಮ ದೇಶಕೆ ಏನು ಬಂದರೇನಂತೆ?
ಕೊನೆಗೆ
ಕಮ್ಯೂನಿಜಂ ಏ ಬಂದರೂ
ಹಾಕುವೆವು ಅದಕೂ ಮೂರು ನಾಮ!
ಅದರ ಹೆಗಲಿಗೂ ಬೀಳುವುದು ಜನಿವಾರ!
ಅದಕ್ಕೂ ಕಟ್ಟುವೆವು ಲಿಂಗ!
ಕ್ರಾಸು ತಗಲಿಸಿದರೂ ಆಶ್ಚರ್ಯವಿಲ್ಲ!

ಮೂಢನಂಬಿಕೆಗಳೊಂದಿಗೆ ಕುವೆಂಪು ಅವರ ಹೋರಾಟ ನಿರಂತರವಾದದ್ದಾಗಿದೆ; ನಿಷ್ಠುರವಾದದ್ದಾಗಿದೆ. ಆ ಹೋರಾಟವನ್ನೂ ಅವರು ತಮ್ಮ ಕಾವ್ಯಶೈಲಿಯಲ್ಲಿ ಅತ್ಯಂತ ಪರಿಣಾಮಕಾರಿಯಾಗಿ, ಪ್ರಭಾವಶಾಲಿಯಾಗಿ ತಮ್ಮ ಕೃತಿಗಳಲ್ಲಿ ಹಿಡಿದಿಟ್ಟಿದ್ದಾರೆ.

ಕುವೆಂಪು ಅನೇಕ ಸಣ್ಣ ಕತೆಗಳನ್ನು ಬರೆದಿದ್ದಾರೆ. ಅವೆಲ್ಲವೂ ಸಾಹಿತ್ಯಕವಾಗಿ ಒಂದೇ ಸಮನಾಗಿ ಒಳ್ಳೆಯ ಗುಣಮಟ್ಟದವು ಎಂದು ಹೇಳುವಂತಿಲ್ಲ. ಆದರೆ, ಅವುಗಳಲ್ಲಿ ಧನ್ವಂತರಿಯ ಚಿಕಿತ್ಸೆ ಎಂಬುದು ಅತ್ಯಂತ ಗಮನಾರ್ಹವಾಗಿದೆ. ಅಷ್ಟೇ ಅಲ್ಲ, ಅದನ್ನು ಬೀದಿ ನಾಟಕವನ್ನಾಗಿಸಿ ಅನೇಕ ಕಡೆಗಳಲ್ಲಿ ಪ್ರದರ್ಶಿಸಲಾಗಿದೆ. ಅದಕ್ಕೆ ಕಾರಣ ಅದರ ವಸ್ತು ಕುವೆಂಪು ಅವರ ಜನಪರ ಕಾಳಜಿಯನ್ನು ಎತ್ತಿ ತೋರಿಸುವಂಥದಾಗಿರುವುದಲ್ಲದೆ ಅದರ ವಸ್ತುವಿನಲ್ಲೇ ನಾಟಕೀಯತೆಯೂ ಹೆಣೆದುಕೊಂಡಿರುವುದು.

ಅದರ ವಸ್ತು ಸಂಕ್ಷೇಪವಾಗಿ ಹೀಗಿದೆ: ಸ್ವರ್ಗದಲ್ಲಿದ್ದ ವಿಶ್ವಾಮಿತ್ರನಿಗೆ ಭೂಲೋಕದಿಂದ ಒಂದು ಹೃದಯವಿದ್ರಾವಕವಾದ ಯಾತನೆಯ ರೋದನ ಧ್ವನಿ ಹಗಲೂ ರಾತ್ರಿ ಕೇಳಿಸುತ್ತದೆ. ಎಷ್ಟು ಪ್ರಯತ್ನಿಸಿದರೂ ಆ ನರಳುವಿಕೆಯ ಮೂಲ ಯಾವುದು ಎಂದು ತಿಳಿಯುವುದಿಲ್ಲ. ವೈಕುಂಠದಲ್ಲಿ ವಸಿಷ್ಠನನ್ನು ವಿಚಾರಿಸಿದಾಗ ಅವನು ತನಗೆ ಆ ನರಳುವಿಕೆ ಕೇಳಿಸುತ್ತಿಲ್ಲವೆಂದೂ, ಅದು ವಿಶ್ವಾಮಿತ್ರನ ಮನೋಭ್ರಾಂತಿಜನ್ಯವಾಗಿರಬೇಕೆಂದೂ ಹೇಳಿ ಅದರ ಪರಿಹಾರಾರ್ಥವಾಗಿ ಒಂದು ಯಜ್ಞವನ್ನು ನೆರವೇರಿಸುವಂತೆ ಬುದ್ಧಿ ಹೇಳಿದನು. ಆದರೆ ವಿಶ್ವಾಮಿತ್ರನಿಗೆ ಹಳೆಯ ಕಂದಾಚಾರಗಳಲ್ಲಿ ನಂಬುಗೆ ತಪ್ಪಿ ಹೋಗಿತ್ತಾದ್ದರಿಂದ ವಸಿಷ್ಠನ ಗೊಡ್ಡು ಬುದ್ಧಿವಾದಕ್ಕೆ ಶರಣಾಗಲಿಲ್ಲ. ವಿಶ್ವಾಮಿತ್ರನಂತೆಯೇ ಅದು ಇನ್ನೊಬ್ಬನೇ ಒಬ್ಬನಿಗೆ ಕೇಳಿಸಿತ್ತು– ಪರಶುರಾಮನಿಗೆ. ಇಬ್ಬರೂ ವೇಷಾಂತರದಿಂದ ಭೂಲೋಕಕ್ಕೆ ಬಂದು ಆ ನರಳುವಿಕೆಯ ಮೂಲವನ್ನು ಹುಡುಕಿಕೊಂಡು ಹೋದರು. ನೆತ್ತರು ಹೆಪ್ಪುಗಟ್ಟುವಂತೆ ಹೊಮ್ಮುತ್ತಿದ್ದ ಆ ಧ್ವನಿ ಬರುತ್ತಿದ್ದುದು ಹಳ್ಳಿಯೊಂದರ ಗುಡಿಸಲಿನಿಂದ. ವಿಶ್ವಾಮಿತ್ರ ಮತ್ತು ಪರಶುರಾಮರಿಬ್ಬರೂ ಗುಡಿಸಲಿನ ತಡಿಕೆಯ ಕಿಂಡಿಯಿಂದ ನೋಡಿದರು. ಅವರು ಕಂಡದ್ದೇನು ಎಂಬುದನ್ನು ಕತೆಗಾರರ ಮಾತುಗಳೇ ವರ್ಣಿಸಬೇಕು:

''ಗುಡಿಸಲಿನ ಒಳಗಡೆ ಮಬ್ಬುಗತ್ತಲೆ ಕವಿದಿತ್ತು. ಸರ್ವತ್ರವೂ ಹೊಗೆ ಹಿಡಿದು ಕರಿ

ಬಲೆ ನೇತು ಬಿದ್ದು ಕರ್ರಗಾಗಿತ್ತು. ಹಾರೆ, ಗುದ್ದಲಿ, ಹೆಡಗೆ, ಕುಕ್ಕೆ, ಮಡಕೆ, ನೇಗಿಲು, ಕತ್ತಿ - ಇತ್ಯಾದಿ ಬೇಸಾಯದ ಉಪಕರಣಗಳು ಅಲ್ಲಲ್ಲಿ ಅಸ್ತವ್ಯಸ್ತವಾಗಿ ಬಿದ್ದಿದ್ದುವು. ನಿರ್ಜೀವವಾದ ಕಸಕಡ್ಡಿಗಳೂ ಸಜೀವವಾದ ನೊಣಗಳೂ ಸ್ವರಾಜ್ಯ ಸಂಪಾದನೆ ಮಾಡಿದಂತಿತ್ತು. ಮಧ್ಯೆ ಹಾಸಿದ್ದ ಕಂಬಳಿಯ ಮೇಲೆ ಕೊಳೆ ಹಿಡಿದ ಸೊಂಟದ ಪಂಚೆಯ ವಿನಾ ಸಂಪೂರ್ಣವಾಗಿ ನಗ್ನನಾಗಿದ್ದ ರೈತನೊಬ್ಬನು ಅಂಗಾತನೆ ಮಲಗಿ, ಎದೆಯನ್ನು ಎರಡು ಕೈಗಳಿಂದಲೂ ಒತ್ತಿಕೊಳ್ಳುತ್ತಾ ಘೋರವಾಗಿ ನರಳುತ್ತಿದ್ದನು. ಆ ನರಕಯಾತನೆಗೆ ಅವನ ಕರಿ ಮೊರಡು ಮೈ, ತಲೆ ಮಾತ್ರ ಬಂಡೆಯಡಿ ಸಿಕ್ಕಿದ ಹಾವಿನಂತೆ, ಒದ್ದಾಡಿಕೊಳ್ಳುತ್ತಿತ್ತು. ಋಷಿಗಳಿಬ್ಬರೂ ನೋಡುತ್ತಿದ್ದ ಹಾಗೆಯೇ ಮುದ್ದೆ ಮುದ್ದೆಯಾದ ನೆತ್ತರು ಬುಗ್ಗೆ ಬುಗ್ಗೆಯಾಗಿ ಚಿಮ್ಮಿ ಅವನ ಬಾಯಿಂದ ಕೆಂಪಗೆ ಹೊರಹೊಮ್ಮಿ ನೆಲವನ್ನು ತೊಯ್ಯಿಸಿತು! ಆ ರೈತನ ಪಕ್ಕದಲ್ಲಿ ಚಿಂದಿ ಚಿಂದಿಯಾದ ಕೊಳಕಲು ಸೀರೆಯನ್ನು ಮಾನ ಮುಚ್ಚಿಕೊಳ್ಳುವಷ್ಟರ ಮಟ್ಟಿಗೆ ಉಟ್ಟುಕೊಂಡು, ಬಡಕಲಾಗಿದ್ದ ಅವನ ಹೆಂಡತಿ ತಲೆಯ ಮೇಲೆ ಕೈ ಹೊತ್ತು ಕುಳಿತು ಕಣ್ಣೀರು ಸುರಿಸುತ್ತಿದ್ದಳು. ಆ ಹೆಂಗಸಿನ ಹಿಂದೆ ಕೂದಲು ಕೆದರಿ ವಿಕಾರವಾಗಿದ್ದ, ಬತ್ತಲೆಯಾಗಿ ಹೊಟ್ಟೆಡೊಳ್ಳಾಗಿ ಮೈ ಸಣಕಲಾಗಿದ್ದ ನಾಲ್ಕೈದು ವರ್ಷದ ಹುಡುಗಿಯೊಬ್ಬಳು ನೆಲದ ಮೇಲೆ ಒರಗಿ ಮೂರ್ಛೆ ಹೋಗಿರುವಂತೆ ನಿದ್ದೆ ಮಾಡುತ್ತಿದ್ದಳು.''

ಮನ ಕರಗಿ, ಕಣ್ಣೀರು ಹರಿಯುತ್ತಿದ್ದ ಇಬ್ಬರು ಋಷಿಗಳೂ ಬಾಗಿಲನ್ನು ಮೆಲ್ಲನೆ ದಬ್ಬಿ, ಒಳ ಹೊಕ್ಕು ಆ ರೈತನು ಯಾವ ಕಾಯಿಲೆಯಿಂದ ನರಳುತ್ತಿದ್ದಾನೆಂದು ವಿಚಾರಿಸಿದರು. ಆದರೆ ಯಾತನೆಯ ವಿನಾ, ಬೇರೇನೂ ಅವರಿಗೆ ತಿಳಿದು ಬರಲಿಲ್ಲ. ವೈದ್ಯರು, ಮಂತ್ರವಾದಿ, ಭಟ್ಟರು ಎಲ್ಲರನ್ನೂ ಕರೆಸಿದರೂ ಯಾರಿಂದಲೂ ಕಾರಣ ತಿಳಿಯಲಿಲ್ಲ. ದೇವಲೋಕದಿಂದ ದೇವವೈದ್ಯನಾದ ಧನ್ವಂತರಿಯನ್ನೂ ಕರೆಸಿದರು. ಆತನು ತಂದಿದ್ದ ದಿವ್ಯ ಯಂತ್ರದ ಮೂಲಕ ನೋಡಿದಾಗ ಅವನ ಎದೆನೋವಿನ ಸ್ವರೂಪ ಗೊತ್ತಾಯಿತು:

''ರೈತನ ಎದೆಯ ಮೇಲೆ ಸಮಸ್ತ ಚಕ್ರಾಧಿಪತ್ಯವೂ ಮಹಾ ಪರ್ವತಾಕಾರವಾಗಿ ನಿಂತಿತ್ತು. ಋಷಿಗಳು ನೋಡಿಕೊಂಡು ಬಂದಿದ್ದ ಆ ಮುಖ್ಯ ಪಟ್ಟಣ ಅದರ ನೆತ್ತಿಯಲ್ಲಿ ರಾರಾಜಿಸುತ್ತಿದೆ! ಅಲ್ಲಿಯ ದೇವಾಲಯಗಳೂ ವಿಶ್ವವಿದ್ಯಾನಿಲಯಗಳೂ ಕ್ರೀಡಾಮಂದಿರಗಳೂ ಪ್ರಮೋದ ವನಗಳೂ, ಕರ್ಮ ಸೌಧಗಳೂ, ಕಾರ್ಖಾನೆಗಳೂ, ರಾಜ ಪ್ರಸಾದಗಳೂ ತಮ್ಮ ಭಾರವನ್ನೆಲ್ಲಾ ರೈತನ ಎದೆಯ ಮೇಲೆ ಹಾಕಿ, ಸಂಸ್ಕೃತಿ ಮತ್ತು ನಾಗರಿಕತೆ ಎಂಬ ಕೀರ್ತಿಗಳಿಂದ ಮೆರೆಯುತ್ತಿವೆ.

''ಅಯ್ಯೋ ಅಯ್ಯೋ ಅಯ್ಯೋ! ಅವನು ಇದುವರೆಗೆ ಸಾಯದೆ ಬದುಕಿದ್ದುದೆ ಹೆಚ್ಚುಳವಪ್ಪ! ಗೋವರ್ಧನ ಪರ್ವತವನ್ನು ಹೊತ್ತ ಕೃಷ್ಣನು ಕೂಡ ನುಚ್ಚುನೂರಾಗುತ್ತಿದ್ದನಲ್ಲಾ ಈ ರಾಜ್ಯದ ಭಾರ ಅವನ ಎದೆಯ ಮೇಲೆ ಬಿದ್ದಿದ್ದರೆ!'' ಎಂದು ಪರಶುರಾಮನು ಕೂಗಿಕೊಂಡನು.

ಸರಿ, ಧನ್ವಂತರಿಯ ಚಿಕಿತ್ಸೆ ಪ್ರಾರಂಭವಾಯಿತು. ಅವನ ಸಲಹೆಯಂತೆ ವಿಶ್ವಾಮಿತ್ರನ ಹೂಂಕಾರದಿಂದ ಮಹಾ ಭಯಂಕರವಾಗಿದ್ದ ಕ್ರಾಂತಿಭೂತಗಳು ಮೈದೋರಿ ನಿಂತು ತಲೆಬಾಗಿ ಕೈ ಮುಗಿದು ಬೆಸನೇನೆಂದು ಬೇಡಿದುವು. ''ಹೋಗಿ ಆ ರೈತನ ಎದೆಯ ಮೇಲಿರುವ ಭಾರವನ್ನೆಲ್ಲಾ ನೆಲಕ್ಕುರುಳಿಸಿ'' ಎಂದು ಗರ್ಜಿಸಿ ಕೈಬೀಸಿದನು. ಒಡನೆಯೆ ರಾಜ್ಯದಲ್ಲಿ ಸಿಡಿಲು ಮಳೆ ಬಿರುಗಾಳಿ ಭೂಕಂಪಗಳು ತೋರಿ ಉತ್ಪಾತವಾಯಿತು. ನೋಡುತ್ತಿದ್ದಂತೆ ರಾಜವೇಶ್ಮ ಉರುಳಿತು; ದೇವಾಲಯದ ಗೋಪುರಗಳೂ ಮಹಾರವದಿಂದ ಕೆಳಗೆ ಬಿದ್ದುವು....

ರೈತನ ನರಳುವಿಕೆ ಕ್ರಮೇಣ ಕಡಮೆಯಾಗುವಂತೆ ತೋರಿತು. ಶ್ವಾಸೋಚ್ಛ್ವಾಸ ಸಹಜವಾಗತೊಡಗಿತು. ಕಣ್ಣಿನಲ್ಲಿ ಸಂತೋಷದ ಬೆಳಕೂ ಮಿಂಚಿತು... ಮತ್ತೆ.... ತುಸು ಹೊತ್ತಿನಲ್ಲಿಯೇ ನೋಡುತ್ತಿದ್ದವರಿಗೆ ಆಶ್ಚರ್ಯವಾಗುವಂತೆ, ನಗುಮೊಗನಾಗಿ ಮೇಲೆದ್ದು ನಿಂತು, ಕೈಮುಗಿದನು ಋಷಿಗಳಿಗೆ.''

ಒಂದು ಪುಟ್ಟ ಕಥೆಯಲ್ಲಿ ಕುವೆಂಪು ಅತಿ ಸಾಮಾನ್ಯ ಶೋಷಿತನ ಚಿತ್ರವನ್ನೂ, ಅರಮನೆ ದೇವಾಲಯಗಳು ಅವನ ಎದೆಯ ಮೇಲೆ ಯಮಭಾರವಾಗಿ ಕುಳಿತಿರುವ ರೀತಿಯನ್ನೂ - ಒಂದು ಆಡಳಿತದ ಸಂಕೇತವಾದರೆ ಮತ್ತೊಂದು ಮೌಢ್ಯದ ಸಂಕೇತ - ಎಷ್ಟೊಂದು ಕಲಾತ್ಮಕವಾಗಿ ಚಿತ್ರಿಸಿದ್ದಾರೆ ಎಂಬುದು ಕಲಾರಾಧಕರಾದ ವಿಚಾರವಂತರ ಮೆಚ್ಚುಗೆಯನ್ನು ಗಳಿಸುತ್ತದೆ.

ಕುವೆಂಪು ಅವರು ಎರಡು ಮಹಾ ಕಾದಂಬರಿಗಳನ್ನು ರಚಿಸಿದ್ದಾರೆ. ಮೊದಲನೆಯದು ಕಾನೂರು ಹೆಗ್ಗಡಿತಿ. ೧೯೩೩ರಲ್ಲಿ ಆರಂಭವಾಗಿ ೧೯೩೦ರಲ್ಲಿ ಮುಗಿದ ಆ ಕಾದಂಬರಿ, ಹತ್ತಿರ ಹತ್ತಿರ ಏಳು ದಶಕಗಳ ಕಾಲ ಕನ್ನಡ ಕಾದಂಬರೀಪ್ರಿಯರ ಕಥಾ ಕುತೂಹಲವನ್ನು ತಣಿಸಿ, ಮಲೆನಾಡಿನಲ್ಲಿ ಇಂದು ಹೆಚ್ಚು ಕಡಮೆ ಕಣ್ಮರೆಯಾಗಿರುವ ಪ್ರಾಕೃತಿಕ ಮತ್ತು ಸಾಂಸ್ಕೃತಿಕ ವಿವರಗಳನ್ನು ಓದುಗರ ಮುಂದೆ ಚಲನಚಿತ್ರದಲ್ಲಿ ಹೇಗೋ ಹಾಗೆ ವರ್ಣಮಯವಾಗಿ ಸುರುಳಿ ಬಿಚ್ಚುತ್ತಾ, ಸಾಹಿತ್ಯ ಪ್ರೇಮಿಗಳಿಂದ ಮತ್ತೆ ಮತ್ತೆ ಓದಿಸಿಕೊಳ್ಳುತ್ತಾ ಅನೇಕ ಆವೃತ್ತಿಗಳನ್ನು ಕಂಡಿದೆ. ೧೯-೯-೧೯೩೩ರ ಅವರ ದಿನಚರಿಯಲ್ಲಿ ಹೀಗೊಂದು ದಾಖಲೆಯಿದೆ; ''ಇವೊತ್ತು ಬೆಳಿಗ್ಗೆ ನಾವಲನ್ನು ಪ್ರಾರಂಭಿಸಿದೆ. ಗುರುದೇವನ ಕೃಪೆಯಿಂದ, ಸರಸ್ವತಿಯ ದಯೆಯಿಂದ, ಕಲಾಸುಂದರಿಯ ಪ್ರೇಮದಿಂದ ಆ ಕೃತಿಯು ಮಹಾಕೃತಿಯಾಗಲಿ ಎಂದು ಹಾರೈಕೆ.'' ಆ ಹಾರೈಕೆ ಫಲಿಸಿತು ಎಂಬುದನ್ನು ಈಗ ಬಲ್ಲೆವು. ಆಗ?

ಅವರು ತಮ್ಮ ಮೊದಲ ಕಾದಂಬರಿ ಕಾನೂರು ಹೆಗ್ಗಡಿತಿಯನ್ನು ರಚಿಸುತ್ತಿದ್ದ ಕಾಲ. ಆಧ್ಯಾತ್ಮಿಕತೆಯೇ ಪುಟ್ಟಪ್ಪನವರ ಬದುಕಿನಲ್ಲಿ ಪ್ರಧಾನ ಶ್ರುತಿಯಾಗಿದ್ದ ವರ್ಷಗಳು. ಕಾದಂಬರಿ ಪ್ರಕಾರವು ಸಮರ್ಥವಾದ ಕಲಾಮಾಧ್ಯಮವಾಗಬಹುದು ಎಂಬ ಕಲ್ಪನೆಯೂ ಆಗ ಅವರಿಗೆ ಇರಲಿಲ್ಲ. ಅವರು ಆರಾಧಿಸುತ್ತಿದ್ದ ಲೇಖಕರಲ್ಲಿ ರಷ್ಯದ ಮಹಾ ಸಾಹಿತಿ

ಕೌಂಟ್ ಲಿಯೋ ಟಾಲ್‌ಸ್ಟಾಯ್ ಅವರೂ ಒಬ್ಬರು. ''ರಿಸರೆಕ್ಷನ್'' ಎಂಬ ಹೆಸರಿನ ಅವರ ಪ್ರಸಿದ್ಧ ಕಾದಂಬರಿ ಪುಟ್ಟಪ್ಪನವರ ಮೇಲೆ ಅಗಾಧವಾದ ಪ್ರಭಾವವನ್ನು ಬೀರಿ ಅವರನ್ನು ಕಾದಂಬರಿ ರಚನೆಗೆ ಪ್ರೋತ್ಸಾಹಿಸಿತು. ಆ ವೇಳೆಗೆ ಅವರು ಇಂಗ್ಲಿಷಿನ ನೂರಾರು ಕಾದಂಬರಿಗಳನ್ನು ಓದಿದ್ದರು. ಅವರ ಮನಸ್ಸು ಕಾದಂಬರಿ ರಚನೆಗೆ ತೊಡಗಿತು.

ಗಾತ್ರದ ದೃಷ್ಟಿಯಿಂದಲೂ ಸತ್ವದ ದೃಷ್ಟಿಯಿಂದಲೂ 'ಕಾನೂರು ಹೆಗ್ಗಡಿತಿ' ಒಂದು ಮಹಾ ಕಾದಂಬರಿ. ಇಷ್ಟು ದೊಡ್ಡ ಗಾತ್ರದ ಸ್ವತಂತ್ರ ಕಾದಂಬರಿ ಅಂದಿಗೆ ಕನ್ನಡದಲ್ಲಂತೂ ರಚಿತವಾಗಿರಲಿಲ್ಲ. ಈ ಕಾದಂಬರಿಯ ವೈಶಿಷ್ಟ್ಯಗಳು ಅನೇಕ. ಈ ಕೃತಿ ರಚನೆಯಾದ ಕಾಲಕ್ಕೆ ಐವತ್ತು ಅರವತ್ತು ವರ್ಷಗಳಷ್ಟು ಹಿಂದಿನ ಮಲೆನಾಡಿನ ಪರ್ವತ ಶ್ರೇಣಿಗಳು, ಈಗ ವೇಗವಾಗಿ ಮರೆಯಾಗುತ್ತಿರುವ ಕಾಡು ಇವುಗಳ ಚಿತ್ರಣ, ಬೇಟೆಯ ವರ್ಣನೆ; ಕನ್ನಡ ನಾಡಿನ ಇತರ ಭಾಗಗಳಿಗಿಂತ ತೀರ ಭಿನ್ನವಾಗಿದ್ದ ಪ್ರದೇಶವೊಂದರ ಜನಜೀವನದ ಆತ್ಮೀಯ ಪರಿಚಯ; ಆಳವಾದ ಜೀವನಾನುಭವದ ರಮ್ಯ ನಿರೂಪಣೆ; ತೀವ್ರವಾದ ರಾಗದ್ವೇಷಗಳ ವರ್ಣರಂಜಿತ ವ್ಯಾಖ್ಯಾನ; ಸಮಯೋಚಿತ ಹಾಸ್ಯ; ಆ ಪ್ರಾಂತಕ್ಕೇ ವಿಶಿಷ್ಟವಾದ ಕನ್ನಡ ಭಾಷೆಯ ಸೊಗಡು; ಕವಿಯು ಅತ್ಯಂತ ಎಚ್ಚರದಿಂದ ಕಾಯ್ದಿರಿಸಿದ ಸಾಮಾಜಿಕ ಪ್ರಜ್ಞೆ, ನಿಜವಾದ ಮಣ್ಣಿನ ವಾಸನೆ - ಹೀಗೆ ಹತ್ತುಹಲವು ವೈಶಿಷ್ಟ್ಯಗಳಿಂದ ಈ ಕಾದಂಬರಿ - ವಾಸ್ತವವಾಗಿ ಈ ಕಾದಂಬರಿಕಾರರ ಎರಡೂ ಕಾದಂಬರಿಗಳು - ಆಧುನಿಕ ಕನ್ನಡ ಕಾದಂಬರಿಗಳಲ್ಲಿ ಅತ್ಯಂತ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿವೆ.

ದಟ್ಟವಾದ, ಹಗಲಿನಲ್ಲೂ ಸೂರ್ಯರಶ್ಮಿ ತೂರುವುದಕ್ಕೂ ಅವಕಾಶ ಕೊಡದ ಕಗ್ಗತ್ತಲೆಯ ನಡುವೆ, ಹೇಗೋ ದಾರಿ ಮಾಡಿಕೊಂಡು ಬೆಳಕಿನ ಕಿರಣಗಳು ತೂರಿ ಬಂದಂತೆ ಶತಮಾನಗಳ ಅನಕ್ಷರತೆ, ಮೌಢ್ಯ, ಅವೈಚಾರಿಕತೆ, ಅವೈಜ್ಞಾನಿಕತೆಗಳನ್ನು ಭೇದಿಸಿಕೊಂಡು ಅಕ್ಷರವಿದ್ಯೆ, ವಿಚಾರ, ವೈಜ್ಞಾನಿಕತೆಗಳು ಪ್ರವೇಶಿಸುವ ಸಂಕ್ರಮಣ ಕ್ರಿಯೆಯನ್ನು ಕುವೆಂಪು ಕಲಾತ್ಮಕವಾಗಿ ಚಿತ್ರಿಸಿದ್ದಾರೆ ಈ ಕಾದಂಬರಿಯಲ್ಲಿ. ವೈಚಾರಿಕ ಕ್ರಾಂತಿ ಎನ್ನುವುದು ಕ್ಷಿಪ್ರವಾಗಿ ನಡೆಯುವ ಧಿಡೀರ್ ಘಟನೆಯಲ್ಲ - ಕ್ರಮಕ್ರಮವಾಗಿ ಬೇರೆ ಬೇರೆ ಘಟ್ಟಗಳಲ್ಲಿ, ಬೇರೆ ಬೇರೆ ರೀತಿಯಾಗಿ ಸಂಭವಿಸುವ ವಿಕಾಸಕ್ರಿಯೆ ಎಂಬುದನ್ನು ಕುವೆಂಪು ಅನೇಕ ಪಾತ್ರಗಳ ಮೂಲಕ, ಅನೇಕ ಘಟನೆಗಳ ಮೂಲಕ ತೋರಿಸಿದ್ದಾರೆ.

ತಮ್ಮ ಬಂಧು ಬಾಂಧವರ, ಆಪ್ತೇಷ್ಟರ ಸಮಾಜವನ್ನು ಚಿತ್ರಿಸುವಾಗಲೂ ಕುವೆಂಪು ಎಷ್ಟು ನಿರ್ಲಿಪ್ತರೂ ವಸ್ತುನಿಷ್ಠರೂ ಆಗಿರಬಲ್ಲರು ಎಂಬುದಕ್ಕೆ ಒಂದು ನಿದರ್ಶನವನ್ನು ಈ ಕಾದಂಬರಿಯಿಂದ ಎತ್ತಿ ತೋರಿಸಬಹುದು. ಈ ಸಂದರ್ಭದಲ್ಲಿ ಪುಟ್ಟಪ್ಪನವರ ವರ್ಣನಾ ಕೌಶಲವೂ ಹಾಸ್ಯರಂಜಕ ಶಕ್ತಿಯೂ ಅನನ್ಯವಾದ ರೀತಿಯಲ್ಲಿ ಪ್ರಕಟವಾಗಿವೆ. ಅಧ್ಯಾಯದ ಹೆಸರು: ''ಶೂದ್ರ ಸಂಘದ ಮಹಾಸಭೆಯಲ್ಲಿ!'' ಆ ಸಭೆ ಸೇರಿದ್ದುದು ಮದ್ಯಪಾನವನ್ನು ನಿಷೇಧಿಸುವ ನಿರ್ಣಯವನ್ನು ಕೈಗೊಳ್ಳುವುದಕ್ಕೆ. ಅಧ್ಯಕ್ಷರಾದಿಯಾಗಿ ಸಕಲ ಸದಸ್ಯರ

ಮೂಗು ಬಾಯಿಗಳಿಂದಲೂ ಹೆಂಡ ಕಳ್ಳು ಸಾರಾಯಿಗಳ ಕಂಪು ಹೊಮ್ಮಿ, ಸಭಾಸ್ಥಳದ ವಾಯುಮಂಡಲವನ್ನೆಲ್ಲ ತೀವಿ, ಮದ್ಯಪಾನನಿರೋಧದ ಮಸೂದೆಯನ್ನು ಪರಿಹಾಸ್ಯ ಮಾಡುವಂತಿತ್ತು! ಬಾಳೂರು ನಿಂಗೇಗೌಡರು 'ಉಪಣ್ಯಾಸ' ಮುಗಿಸಿ, ಬಾಯಲ್ಲಿ ಜೊಲ್ಲು ಸುರಿಸುತ್ತ, ಬಹಳ ಪರಿಶ್ರಮದಿಂದ ತಮ್ಮ ಪೀಠವನ್ನು ತಡವಿ ತಡವಿ ಹುಡುಕಿ ಕುಳಿತುಕೊಂಡ ಮೇಲೆ ಕಾನೂರು ಚಂದ್ರಯ್ಯಗೌಡರು ಮಾತನಾಡಲು ಎದ್ದರು.... ಚಂದ್ರಯ್ಯಗೌಡರು ಏನೇನನ್ನು ಹೇಳಬೇಕೆಂದು ಮಾಡಿದ್ದರೋ ಅದೆಲ್ಲ ಕೈ ಚಪ್ಪಾಳೆಯ ದೆಸೆಯಿಂದ ಮಿದುಳಿನಲ್ಲಿ ಕದಡಿಹೋಗಿತ್ತು....

''ಎಲ್ಲರಿಗೂ ಮುಂದೆ ಏನು ಹೇಳಬೇಕೋ ಗೊತ್ತಾಗಲಿಲ್ಲ. ತಲೆಯಲ್ಲಿ ಹೆಂಡವು ಮದ್ಯಪಾನ ನಿರೋಧಕ್ಕೆ ವಿರೋಧವಾಗಿ ಚಳುವಳಿ ಹೂಡಿತ್ತು.''

''ಪಕ್ಕದಲ್ಲಿದ್ದ ನಿಂಗಪ್ಪಗೌಡರು ಪಿಸುಮಾತಿನಲ್ಲಿ 'ಹೆಂಡ ಕುಡಿಯುವುದು ಕೆಟ್ಟದ್ದು' ಎಂದು ಉಪನ್ಯಾಸ ಮಾಡಲು ಸೂಚನೆ ಕೊಟ್ಟರು.

''ಆ ಕೊಟ್ಟ ಸೂಚನೆ ತಮಗೆ ಮಾಡಿದ ಉಪದೇಶವೆಂದು ಕೆರಳಿ ಚಂದ್ರಯ್ಯಗೌಡರು ಮೆಳ್ಳಗಣ್ಣು ಮಾಡಿಕೊಂಡು, ದುರು ದುರು ನೋಡುತ್ತ ನಿಂಗಪ್ಪಗೌಡರ ಕಡೆ ತಿರುಗಿ, ಗಟ್ಟಿಯಾಗಿ ''ಯಾರೋ... ಯಾರೋ ಹೇಳ್ದೋರು ನಿನಗೆ'' ಎಂದು ಕೂಗಿದರು.

''ನಿಮಗಲ್ಲ ಹೇಳಿದ್ದು, ಅವರಿಗೆ ಹೇಳಿ ಅಂತ ಹೇಳ್ದೆ ಅಷ್ಟೇ!'' ಎಂದು ಮೆಲ್ಲಗೆ ನುಡಿದು ನಿಂಗಪ್ಪಗೌಡರು ಸಮಾಧಾನ ಮಾಡಿದರು.

''ಚಂದ್ರಯ್ಯಗೌಡರು ಮತ್ತೆ ಪ್ರಾರಂಭಿಸಿದರು:

''ಹೆಂಡ ಕುಡಿಯೋದು... ಬಾಳ ಕೆಟ್ಟದ್ದು... ಕಾಫಿ ಕುಡಿಯೋದು ಅದಕ್ಕಿಂತ ಕೆಟ್ಟದ್ದು! ಹೆಂಡ ಬಿಟ್ಟರೆ... ಮುಂದೇನು ಗತಿ?... ಅಂತಾ ಕೇಳ್ತೀನಿ ನಾನು! ನಮ್ಮ ಅಪ್ಪಾ ಕುಡಿದಿದ್ದಾ... ನಮ್ಮಜ್ಜ ಕುಡಿದಿದ್ದಾ... ನಾವು ಕುಡಿತೀವಿ... ಮಳೆಗಾಲದಾಗ ಕುಡಿದ್ರೆ... ಒಳ್ಳೆ ಕಾವು ಬತ್ತದೆ! ಸಕ್ತಿ.. ಸಕ್ತಿ ಬತ್ತದೆ. ಹೆಂಡ ಕುಡಿಯೋದು ಬಹಳ ಕೆಟ್ಟದ್ದು...''

''ಭಾಷಣದ ನಡುವೆಯೆ ಚಂದ್ರಯ್ಯಗೌಡರು ಕುಸಿದು ಬಿದ್ದರು.''

ಕುವೆಂಪು ಅವರ ಎರಡನೆಯ ಕಾದಂಬರಿ ಮಲೆಗಳಲ್ಲಿ ಮದುಮಗಳು. ಇದೂ ಕೂಡ ಕನ್ನಡಕ್ಕೆ ಅವರು ನೀಡಿರುವ ಮತ್ತೊಂದು ಅಪೂರ್ವ ಕಾಣಿಕೆ. ಜನಜೀವನವನ್ನು ಅವರು ಅತ್ಯಂತ ಸೂಕ್ಷ್ಮವಾಗಿ ಗಮನಿಸಿರುವ ರೀತಿ, ಅವರ ಬದುಕನ್ನು ವ್ಯಾಖ್ಯಾನಿಸಿರುವ ವಿಧಾನ, ಅತ್ಯಂತ ಸಾಮಾನ್ಯರನ್ನು, ಸಮಾಜದಲ್ಲಿ ಅತಿ ನಿಕೃಷ್ಟರು ಎಂದು ಭಾವಿಸಲ್ಪಟ್ಟಿರುವವರಿಗೂ ಅವರು ತೋರಿಸಿರುವ ಗೌರವ... ಹೀಗೆ ಇನ್ನೂ ಹಲವು ಅಂಶಗಳು ಅವರ ಈ ಕೃತಿಗೆ ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಅದ್ವಿತೀಯವಾದ ಸ್ಥಾನವನ್ನು ತಂದುಕೊಟ್ಟಿವೆ. ಓದುಗರಿಗೆ ಎಂದು ಕಾದಂಬರಿಯ ಮೊದಲಲ್ಲಿ ಅವರು ಬರೆದಿರುವ ಕೆಲವು ಪಂಕ್ತಿಗಳು ಅವರ ''ದರ್ಶನ''ಕ್ಕೆ ಕೀಲಿಕೈಯಾಗಿವೆ.

ಇಲ್ಲಿ
ಯಾರೂ ಮುಖ್ಯರಲ್ಲ;
ಯಾರೂ ಅಮುಖ್ಯರಲ್ಲ;
ಯಾವುದೂ ಯಃಕಶ್ಚಿತವಲ್ಲ!

ಇಲ್ಲಿ
ಯಾವುದಕ್ಕೂ ಮೊದಲಿಲ್ಲ;
ಯಾವುದಕ್ಕೂ ತುದಿಯಿಲ್ಲ;
ಯಾವುದೂ ಎಲ್ಲಿಯೂ ನಿಲ್ಲುವುದೂ ಇಲ್ಲ;
ಕೊನೆ ಮುಟ್ಟುವುದೂ ಇಲ್ಲ!

ಇಲ್ಲಿ
ಅವಸರವೂ ಸಮಾಧಾನದ ಬೆನ್ನೇರಿದೆ;

ಇಲ್ಲಿ
ಎಲ್ಲಕ್ಕೂ ಇದೆ ಅರ್ಥ;
ಯಾವುದೂ ಅಲ್ಲ ವ್ಯರ್ಥ
ನೀರೆಲ್ಲ ಊ ತೀರ್ಥ!

ಕಾಮ ಅಥವಾ ಲೈಂಗಿಕ ಆಕರ್ಷಣೆ ಈ ಕಾದಂಬರಿಯ ಪ್ರಧಾನ ವಸ್ತು ಎನ್ನಬಹುದು. ಇಲ್ಲಿ 'ಕಾಮ'ಕ್ಕೆ ಲೇಖಕರು ಪೀತಾಂಬರವನ್ನು ಉಡಿಸಿಲ್ಲ; ಇಲ್ಲವೇ ಚಿಂದಿಯಲ್ಲೂ ಇಡಲು ಹಿಂಜರಿದಿಲ್ಲ. ಕಾಮ ಮತ್ತು ಜೀವಕಾಮಗಳು ಅವುಗಳ ಸಹಜ, ಪ್ರಾಕೃತ ಸ್ಥಿತಿಯಲ್ಲಿ ಇಲ್ಲಿ ಕಾಣಿಸಿಕೊಳ್ಳುತ್ತವೆ. ಇಲ್ಲಿನ ಪಾತ್ರಗಳ ಪ್ರಧಾನ ಲಕ್ಷಣವೆಂದರೆ ಅವುಗಳ ಮುಗ್ಧ ಸರಳ ಸ್ಥಿತಿ. ಅವು ತಾವು ಏನಾಗಿಲ್ಲವೋ ಅದರಂತೆ ತೋರಿಸಿಕೊಳ್ಳಲು ಯಾವ ಪ್ರಯತ್ನವನ್ನೂ ಮಾಡುವುದಿಲ್ಲ. ಅಲ್ಲದೆ ಇಲ್ಲಿನ ಬಹುಪಾಲು ಪಾತ್ರಗಳು ಸಮಾಜದ ಅತ್ಯಂತ ಕೆಳವರ್ಗಕ್ಕೆ ಸೇರಿದವು; ಬದುಕನ್ನು ಅದು ಇರುವಂತೆ ಒಪ್ಪಿಕೊಂಡವು. ಈ ಪಾತ್ರಗಳ ವೈಶಿಷ್ಟ್ಯ ಅವುಗಳ ಸಹಜತೆ, ಅವುಗಳ ವರ್ತನೆ, ಅವು ವಾಸಿಸುತ್ತಿರುವ ಆವರಣಕ್ಕೆ ತೀರ ಹತ್ತಿರವಾಗಿರುವುದು. ಸಹಜವಾಗಿ ಬದುಕುತ್ತಿರುವ ಐತ – ಪಿಂಚಲು, ಗುತ್ತಿ–ತಿಮ್ಮಿ, ಅಕ್ಕಣಿ–ಪಿಜಿನ ಈ ಸಾಮಾನ್ಯ ಪಾತ್ರಗಳ ಜೋಡಿಗಳು ಒಂದೆಡೆಗಾದರೆ, ಇನ್ನೊಂದು ಕಡೆಗೆ ತಮ್ಮ ವಾತಾವರಣದ ವಿರುದ್ಧ ಹೋರಾಡುವ ಮುಕುಂದಯ್ಯ ಮತ್ತು ಚಿನ್ನಮ್ಮ ಸಂಪೂರ್ಣವಾಗಿ ವೈರುಧ್ಯವನ್ನು ಒಡ್ಡಿರುವಂತೆ ಚಿತ್ರಿತರಾಗಿದ್ದಾರೆ.

* * *

ಕನ್ನಡದಲ್ಲಿ ಸಾಹಿತ್ಯವಿಮರ್ಶೆ ಒಂದು ಶಿಸ್ತು ಕ್ರಮವಾಗಿ ಬೆಳೆದದ್ದೇ ಇಪ್ಪತ್ತನೆಯ

ಶತಮಾನದಲ್ಲಿ ಸೃಜನಶೀಲ ಲೇಖಕರಾದ ಕುವೆಂಪು ಸಾಹಿತ್ಯ ವಿಮರ್ಶೆಯ ಕ್ಷೇತ್ರದಲ್ಲಿಯೂ ಹೊಸದಾದ ಹೆದ್ದಾರಿಯನ್ನು ತೆರೆದರು. ಪೂರ್ವ-ಪಶ್ಚಿಮ ದೇಶಗಳಲ್ಲಿ ವಿಪುಲವಾಗಿ ಬೆಳೆದು ಬಂದಿದ್ದ ಕಾವ್ಯಮೀಮಾಂಸೆಯನ್ನೂ ಸಾಹಿತ್ಯ ವಿಮರ್ಶೆಯನ್ನೂ ಆಸ್ಥೆಯಿಂದ ಅಧ್ಯಯನ ಮಾಡಿದ್ದ ಕುವೆಂಪು ಇತರರು ಸವೆಸಿದ್ದ ಹಾದಿಯನ್ನೇ ತಾವೂ ಸವೆಸದೆ, ತಮ್ಮ ಸೃಜನಶೀಲ ಪ್ರತಿಭಾ ಸಾಮರ್ಥ್ಯದಿಂದ ಸೃಜನಶೀಲ ವಿಮರ್ಶೆ ಎಂದು ನಾವು ಕರೆಯಬಹುದಾದ ವಿಮರ್ಶಾಮಾರ್ಗವನ್ನು ಸೃಜಿಸಿದರು. ಹಳೆಯ ಕಾವ್ಯದಲ್ಲಿ ಅವರು ಹೊಸ ಹೊಸದನ್ನು ಕಂಡರು. ಕಾವ್ಯವನ್ನು ಕಾಣುವುದು ಅಂತರಂಗದ, ಪ್ರತಿಭೆ ಸ್ಪರ್ಶಿಸಿದ ದೃಷ್ಟಿಯಿಂದ ಎಂದು ಅವರು ತೋರಿಸಿಕೊಟ್ಟು ನಾವು 'ದರ್ಶನ ವಿಮರ್ಶೆ' ಎಂದು ಕರೆಯಬಹುದಾದ ವಿಮರ್ಶಾಪಂಥಕ್ಕೆ ಆದಿಪುರುಷರಾದರು.

ಕುವೆಂಪು ಅವರಲ್ಲಿನ ರಸಾನ್ವೇಷಿಯು ಹಳಗನ್ನಡ, ನಡುಗನ್ನಡ ಕಾವ್ಯಗಳ ರಸಸ್ಥಾನಗಳನ್ನು ಸಂದರ್ಶಿಸಿದ್ದು ಹೇಗೆ ಎಂಬುದಕ್ಕೆ ಅವರ 'ಮಹಾಶ್ವೇತೆಯ ತಪಸ್ಸು', 'ಪಂಪನಲ್ಲಿ ಭವ್ಯತೆ', 'ಸರೋವರದ ಸಿರಿಗನ್ನಡಿಯಲ್ಲಿ', 'ದ್ರೌಪದಿಯ ಶ್ರೀಮುಡಿ', 'ಯಶೋಧರ ಚರಿತೆಯಲ್ಲಿ ಕಾಮವಿಕಾರ ನಿರೂಪಣೆಯ ಉದ್ದೇಶ' ಮುಂತಾದ ಪ್ರಬಂಧಗಳನ್ನು ನೋಡಬಹುದು. ಕನ್ನಡ ಕಾವ್ಯದಲ್ಲಿ 'ಮಹೋಪಮೆ'ಯನ್ನು ಮೊದಲಿಗೆ ಬಳಸಿದ ಕವಿ ಕುವೆಂಪು ಮಹೋಪಮೆಯ ಸ್ವರೂಪವನ್ನು ಅವರು ಅದೇ ಹೆಸರಿನ ತಮ್ಮ ಪ್ರಬಂಧದಲ್ಲಿ ಪಾಶ್ಚಾತ್ಯ ಸಾಹಿತ್ಯದ ಮಹೋಪಮೆಗಳನ್ನು ಉದ್ಧರಿಸಿ ವ್ಯಾಖ್ಯಾನಿಸಿ ತೋರಿಸಿದ್ದಾರೆ.

ಕುವೆಂಪು ಅವರ ವೈಶಿಷ್ಟ್ಯವೆಂದರೆ ತಾವು ಬಳಸಿರುವ 'ದರ್ಶನ', 'ಭವ್ಯತೆ', 'ಪ್ರತಿಮಾ ಮತ್ತು ಪ್ರತಿಕೃತಿ', 'ಮಹೋಪಮೆ', 'ಪೂರ್ಣದೃಷ್ಟಿ' ಮುಂತಾದ ಕಲ್ಪನೆಗಳಿಗೆ ತಾವೇ ವಿವರಣಾತ್ಮಕವಾದ, ನಿದರ್ಶನಸಹಿತವಾದ, ಪ್ರಬಂಧಗಳನ್ನು ಬರೆದು ತಮ್ಮ ಕಲ್ಪನೆಗಳನ್ನು ಸ್ಪಷ್ಟಗೊಳಿಸಿರುವುದು, ಇವುಗಳಲ್ಲಿ 'ದರ್ಶನ' ಎಂದರೆ ಏನು ಎಂಬುದನ್ನು ಅವರು ವಿವರಿಸಿರುವ ರೀತಿ ಇದು:

''ದರ್ಶನ'' ಎಂದರೆ ನಿಯಮಬದ್ಧವಾದ ಅಥವಾ ತರ್ಕಬದ್ಧವಾದ ಆಲೋಚನೆಗಳ ಸಮುದಾಯವಲ್ಲ. ಭಾವ, ಕಲ್ಪನೆ ಮತ್ತು ಆಲೋಚನೆಗಳ ವಿದ್ಯುದಾಲಿಂಗನದಿಂದ ಸಂಭವಿಸುವ ಪ್ರತಿಭಾಜ್ಯೋತಿ ಅದರ ಲಕ್ಷಣ. ಅಂತಹ ದರ್ಶನ ಸಂಪಾದನೆ ಕವಿಗೆ ತಪಸ್ಸಿನಿಂದಲೂ ಧ್ಯಾನದಿಂದಲೂ, ಅವಲೋಕನದಿಂದಲೂ ಮಾತ್ರವೇ ಸಾಧ್ಯವಾಗುತ್ತದೆ. ಕಲಾ ಸುಂದರಿ ಬಹಿರಂಗದಲ್ಲಿ ತೇಜಸ್ವಿನಿ, ಅಂತರಂಗದಲ್ಲಿ ತಪಸ್ವಿನಿ... ಭಾವ, ಕಲ್ಪನೆ, ಆಲೋಚನೆ ಎಲ್ಲದರಲ್ಲಿಯೂ ಕವಿಯು ಸಮದೂರನಾಗಿ ಬಹುದೂರ ಮುಂದುವರಿದು ಪ್ರತಿಭಾಶಾಲಿಯಾಗಿ ರಸಋಷಿಯಾಗಬೇಕು. 'ದರ್ಶನ' ಸಂಪಾದನೆ ಮಾಡಬೇಕು.''

* * *

ಶ್ರೀ ಕುವೆಂಪು ಅವರು ಕನ್ನಡಕ್ಕೆ, ಜಗತ್ತಿನ ಸಾರಸ್ವತ ಲೋಕಕ್ಕೆ ಕಾಣಿಕೆಯಾಗಿ ನೀಡಿರುವ ''ಶ್ರೀ ರಾಮಾಯಣ ದರ್ಶನಂ'' ಮಹಾಕಾವ್ಯ ಅವರ ಮೇರು ಕೃತಿ. ೧೯೩೬ ರಿಂದ ೧೯೪೬ರ ವರೆಗೆ ಹತ್ತು ವರ್ಷಗಳ ಕಾಲ ಸಾರಸ್ವತ ತಪಸ್ಸನ್ನು ಕೈಗೊಂಡ ಅವರು ರಚಿಸಿದ ಹತ್ತಿರ ಹತ್ತಿರ ಇಪ್ಪತ್ತೈದು ಸಾವಿರ ಪಂಕ್ತಿಗಳ ಮಹಾಕಾವ್ಯ ಅದು. ಕುವೆಂಪು ಅವರನ್ನು ಶ್ರೀಕುವೆಂಪುವಾಗಿ ಮಾಡಿದ ಸ್ಪರ್ಶಮಣಿಯಂಥ ಕೃತಿ ಇದು. ಸ್ವಯಂ ಕುವೆಂಪು ಅವರಿಗೆ ಮಾತ್ರವಲ್ಲದೆ ಕನ್ನಡಕ್ಕೂ ಗೌರವವನ್ನು ತಂದುಕೊಟ್ಟ ರಚನೆ. ಜ್ಞಾನಪೀಠ ಪ್ರಶಸ್ತಿ ಸ್ಥಾಪಿತವಾದ ಮೇಲೆ ಮೊದಲನೆಯ ವರ್ಷದ ಪ್ರಶಸ್ತಿಯನ್ನು ಈ ಮಹಾಕಾವ್ಯಕ್ಕೆ ಶ್ರೀ ಕುವೆಂಪು ಪಡೆದಿದ್ದಾರೆ.

ಇಪ್ಪತ್ತನೆಯ ಶತಮಾನದಲ್ಲಿ ಒಂದು ಮಹಾಕಾವ್ಯವನ್ನು ರಚಿಸುವ ಆವಶ್ಯಕತೆ ಇತ್ತೆ ಎಂಬ ಪ್ರಶ್ನೆಯನ್ನು ಅನೇಕರು ಕೇಳಿದ್ದಾರೆ. ಆವಶ್ಯಕತೆ ಇದೆ. ಒಂದೊಂದು ಯುಗಕ್ಕೂ ತಾನು ಹೇಳಬೇಕಾದ ಹೊಸ ವಿಷಯ, ಸಾರಬೇಕಾದ ಸಂದೇಶ ಇದ್ದೇ ಇರುತ್ತದೆ. ಅದನ್ನು ನಿರ್ವಹಿಸಲು ಮಹಾಕಾವ್ಯವು ಒಂದು ಸಮರ್ಥ ಮಾಧ್ಯಮವಾಗಬಹುದು ಎಂಬುದನ್ನು ''ಶ್ರೀ ರಾಮಾಯಣ ದರ್ಶನಂ'' ಮಹಾಕಾವ್ಯದ ರಚನೆಯ ಮೂಲಕ ಶ್ರೀ ಕುವೆಂಪು ಅವರು ತೋರಿಸಿದ್ದಾರೆ.

ವಾಲ್ಮೀಕಿ ಮಹರ್ಷಿಗಳು ರಾಮಾಯಣ ಮಹಾಕಾವ್ಯವನ್ನು ರಚಿಸಿ ಮೂರೋ ನಾಲ್ಕೋ ಸಾವಿರ ವರ್ಷಗಳಾಗಿವೆ ಎಂದು ಸದ್ಯಕ್ಕೆ ಇಟ್ಟುಕೊಳ್ಳೋಣ. ಈ ಅವಧಿಯಲ್ಲಿ ಧರ್ಮ, ಸಂಸ್ಕೃತಿ, ನಾಗರಿಕತೆ ಮುಂತಾದ ಕ್ಷೇತ್ರಗಳಲ್ಲಿ ಎಷ್ಟೆಲ್ಲ ಕ್ರಾಂತಿಕಾರಕ ಬದಲಾವಣೆಗಳಾಗಿವೆ! ಅಲ್ಲದೆ, ವಿಜ್ಞಾನ ಮತ್ತು ತಂತ್ರಜ್ಞಾನಗಳು ಜನರ ಬದುಕನ್ನು ತ್ವರಿತಗತಿಯಲ್ಲಿ ಬದಲಾಯಿಸಿವೆ, ಈಗಂತೂ ಮಿಂಚಿನ ವೇಗದಲ್ಲಿ ಬದಲಾಯಿಸುತ್ತಿವೆ. ಬುದ್ಧ, ಯೇಸುಕ್ರಿಸ್ತ, ಬಸವಣ್ಣ, ರಾಮಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದರು ಮುಂತಾದ ದಾರ್ಶನಿಕರು; ಗ್ರೀಕ್, ರೋಮನ್, ಭಾರತೀಯ ಶಿಲ್ಪಕಲೆ, ಚಿತ್ರಕಲೆಗಳು; ಹರಪ್ಪ ಮೊಹೆಂಜೊದಾರೊ, ಸಿಂಧೂ ಸಂಸ್ಕೃತಿಗಳು; ಚಂದ್ರ ಸೂರ್ಯ ಭೂಮಿ ಇತ್ಯಾದಿ ಗ್ರಹಗಳನ್ನು ಅಳೆದು ತೂಗಿದ್ದು, ಅಣುವನ್ನು ಸಿಡಿಸಿದ್ದು; ಹೋಮರ್, ಡಾಂಟೆ, ಷೇಕ್ಸ್‌ಪಿಯರ್, ಮಿಲ್ಟನ್, ಕಾಳಿದಾಸ ಮುಂತಾದ ಕವಿಗಳ ಸಾಹಿತ್ಯ ಸೃಷ್ಟಿ; ಒಂದೇ ಎರಡೇ ಈ ಜಗತ್ತು ಕಂಡ ಅದ್ಭುತಗಳ ಪರಂಪರೆ! ಜೊತೆಗೆ ನಮ್ಮ ಸಮಕಾಲೀನರಾಗಿದ್ದು ಸ್ವಾತಂತ್ರ್ಯ ಹೋರಾಟ ನಡೆಸಿ ವಿಜಯಿಗಳಾದ ಸಂತ - ರಾಜಕಾರಣಿ ಮಹಾತ್ಮಗಾಂಧಿ ತೆರೆದ ದಾರಿ, ಅಹಿಂಸಾಸ್ತ್ರವನ್ನು ಸಫಲಗೊಳಿಸಿದ ಪವಾಡ ಇವೆಲ್ಲ ಅಸಾಮಾನ್ಯ ಸಾಧನೆಗಳು. ಇವೆಲ್ಲವನ್ನೂ, ಜೊತೆಗೆ ಇಂದಿನ ಜಗತ್ತಿನ ನಾಗರಿಕ ಸಂಸ್ಕೃತಿಗಳನ್ನೂ ಅನುಭವವನ್ನಾಗಿ ಪರಿವರ್ತಿಸಿಕೊಂಡು, ಅಭಿವ್ಯಕ್ತಿ ನೀಡಲು ಮಹಾಕಾವ್ಯವೊಂದು ಸಮರ್ಥ ಮಾಧ್ಯಮವಾಗಲಾರದೆ? ಇದಕ್ಕೆ ತಕ್ಕ ಸಿದ್ಧತೆಯನ್ನು ಮಾಡಿಕೊಂಡಿದ್ದ ಕವಿ ಕುವೆಂಪು ಅವರು ಸಹಜವಾಗಿಯೇ ಮಹಾಕಾವ್ಯ ರಚನೆಯ ಸಾಹಸಕ್ಕೆ ತೊಡಗಿದರು.

ಹೌದು, ಹಳೆಯ ಕಾವ್ಯವಸ್ತುವೇ ಏಕೆ? ನಿಜವಾಗಿ ನೋಡಿದರೆ ರಾಮಾಯಣದ ವಸ್ತು ಹಳೆಯ ಕಥೆ ಅಲ್ಲವೇ ಅಲ್ಲ. ಭಾರತೀಯ ಚೇತನದ ಮೂಲ ದ್ರವ್ಯವಾಗಿದ್ದೂ ಪ್ರತಿಸಲವೂ ಹೊಸದಾಗಿ ಭಾವಗಳನ್ನು ಮಿಡಿಸುವ ಅದರ ವಸ್ತು ಎಂದೆಂದಿಗೂ ಆಕರ್ಷಣೀಯವಾದದ್ದೇ. ರಾಮ ಕಾಡಿಗೆ ಹೊರಟ ಎಂಬುದನ್ನು ಓದಿದಾಗ ಕಣ್ಣೀರು ಕರೆಯದವರು ಯಾರು? ರಾವಣ ಸೀತೆಯನ್ನು ಅಪಹರಿಸುವಾಗ ಮನಸ್ಸಿನಲ್ಲಾದರೂ ಅವಳನ್ನು ರಕ್ಷಿಸಲು ಮುನ್ನುಗ್ಗದವರು ಯಾರು? ಸೀತೆಯ ಅಗ್ನಿಪ್ರವೇಶ ಮಾಡುವಾಗ ರಾಮನು ಆಡುವ ಮಾತುಗಳನ್ನು ಕೇಳಿ ಹೇಸಿ ''ಛಿ, ಅನಾಗರಿಕ, ನೀಚ'' ಎಂದು ಬೈಯದವರು ಯಾರು? ರಾಮ ಲಕ್ಷ್ಮಣ ಸೀತೆಯರು ಅಯೋಧ್ಯೆಗೆ ಹಿಂದಿರುಗಿ ಪಟ್ಟಾಭಿಷೇಕ ನಡೆದಾಗ ಆನಂದ ಬಾಷ್ಪಗಳನ್ನು ಸುರಿಸಿ ಸಂತೋಷ ಪಡದವರು ಯಾರು ? ರಾಮಾಯಣವನ್ನು ಎಷ್ಟು ಸಲ ಓದಿದರೂ, ನಾಸ್ತಿಕನಾಗಲಿ, ಆಸ್ತಿಕನಾಗಲಿ ಈ ಅನುಭವಗಳನ್ನು ಪಡೆಯುತ್ತಾನೆ.

ಹೀಗೆ ಜನಮಾನಸದಲ್ಲಿ ನೆಲೆಗೊಂಡಿದ್ದ ರಾಮಾಯಣದ ಕಥೆಯ ಸಂಪೂರ್ಣ ಪ್ರಯೋಜನವನ್ನು ಕುವೆಂಪು ಅವರು ತಮಗೆ ತಿಳಿಯದೆಯೇ ಪಡೆದುಕೊಂಡರು. ಅವರನ್ನು ಅಂದು ಯಾರಾದರೂ ''ನೀವು ರಾಮಾಯಣದ ಕಥೆಯನ್ನು ಆರಿಸಿಕೊಳ್ಳುತ್ತಿರುವುದು ಏಕೆ?'' ಎಂದು ಕೇಳಿದ್ದರೆ ಅವರಿಗೆ, ಸಮರ್ಪಕವಾದ ಉತ್ತರ ಇರಲಿಲ್ಲ. ವಸ್ತುವಿನ ಆಯ್ಕೆ ಎಂಬುದು ನಮ್ಮ ಐದು ಇಂದ್ರಿಯಗಳನ್ನೂ ಮೀರಿದ ಆರನೆಯ ಇಂದ್ರಿಯವೊಂದರ ಕೆಲಸ. ನಿಜವಾಗಿ ವಸ್ತುವಿನ ನಿರ್ವಹಣೆಯಲ್ಲಿ ಹೇಗೋ ಹಾಗೆ ಅದರ ಆಯ್ಕೆಯ ಸಯಯದಲ್ಲೂ ಪ್ರತಿಭೆ ಕೆಲಸ ಮಾಡುತ್ತಿದೆ. ಹೀಗಾಗಿ ಈ ಕಾವ್ಯದ ವಸ್ತು-ವಿನ್ಯಾಸಗಳು ಶುದ್ಧ ಪ್ರತಿಭೆಯ ಆಯ್ಕೆಯಾಗಿವೆ. ಸಂಸ್ಕೃತ, ಕನ್ನಡ ಕಾವ್ಯಪರಂಪರೆಯಲ್ಲಿ ರಾಮಾಯಣ ಮಹಾಭಾರತಗಳು ಚಿರಂತನ ಕಾವ್ಯ ವಸ್ತುಗಳಾಗಿ ಬಂದಿವೆ. ಜೊತೆಗೆ ಗಾಂಧೀಯುಗದ ಶ್ರೀರಾಮ ಕಲ್ಪನೆಯಲ್ಲಿ ಹೊಸ ಯುಗದ ಸರ್ವೋದಯ ತತ್ವ ಅರವಿಂದರ ಪೂರ್ಣದೃಷ್ಟಿ, ರಾಮಕೃಷ್ಣ-ವಿವೇಕಾನಂದರ ಸರ್ವಸಮಾನತಾ ಅಧ್ಯಾತ್ಮ ದೃಷ್ಟಿ - ಇವುಗಳನ್ನು ರಾಮಕಥೆಯಲ್ಲಿ ಸ್ವೋಪಜ್ಞ ರೀತಿಯಲ್ಲಿ ಕಸಿಗೊಳಿಸಿ ಯುಗದ ದರ್ಶನವಾಗಿ ಅರಳಿಸುವ ಮಹತ್ವಾಕಾಂಕ್ಷೆ - ಇವು ಈ ವಸ್ತುವಿನ ಆಯ್ಕೆಗೆ ಕಾರಣ ಎಂದೂ ಎನ್ನಬಹುದು.

ಕುವೆಂಪು ತಮ್ಮ ಕಾವ್ಯದ ಆರಂಭದಲ್ಲಿ ಮೇಲಿನ ನಮ್ಮ ಪ್ರಶ್ನೆಗೆ ಕೊಡುವ ಉತ್ತರ ಇದು:

ಕಲೆಯನಲ್ಲದೆ ಶಿಲ್ಪಿ ಶಿಲೆಯನೇಂ ಸೃಷ್ಟಿಪನೆ?
ತನು ನಿನ್ನದಾದೊಡಂ ಚೈತನ್ಯಮೆನ್ನದೆನೆ,
ಕಥೆ ನಿನ್ನದಾದೊಡಂ, ನೀನೆ ಮೇಣಾಶೀರ್ವದಿಸಿ
ಮತಿಗೆ ಬೋಧವನಿತ್ತೊಡಂ, ಕೃತಿ ನನ್ನ ದರ್ಶನಂ
ಮೂರ್ತಿವೆತ್ತೊಂದಮರ ಕಾವ್ಯದಾಕೃತಿಯಲ್ತೆ ?

ಪಂಜರದ ಪಳಮೆಯೊಳ್ ಪ್ರಾಣ ನವ ಪಕ್ಷಿಯಂ,
ವಿಗ್ರಹಕೆ ದೇವತಾವಾಹನಂ ಗೆಯ್ವವೋಲ್
ಭಕ್ತಿಯಿಂದಾಹ್ವಾನಿಪೆನ್, ಕವಿಗುರುವೆ, ನೀಡೆನಗೆ
ವಾಙ್ಮಂತ್ರಶಕ್ತಿಯಂ.

ಕುವೆಂಪು ಅವರಿಗೆ ವಾಲ್ಮೀಕಿ ಮಹರ್ಷಿಗಳಲ್ಲಿ ಅಪಾರವಾದ ಭಕ್ತಿ ಗೌರವಗಳುಂಟು. ವಾಲ್ಮೀಕಿಯ ಕಾವ್ಯವನ್ನು ಉತ್ತಮಪಡಿಸುತ್ತೇನೆ ಎಂಬ ಭಾವ ಅವರಿಗಿಲ್ಲ, ಬದಲಿಗೆ, ಹೊಸ ದೃಷ್ಟಿಯಿಂದ, ಈ ಯುಗದ ದೃಷ್ಟಿಯಿಂದ, ನಾನು ಕಂಡಂತೆ, ನನ್ನ 'ದರ್ಶನ' ದಾರಿತೋರಿಸಿದಂತೆ ಕಾವ್ಯವನ್ನು ರಚಿಸುತ್ತೇನೆ ಎಂಬುದು ಅವರ ಭಾವ.

ಕಥೆ : ಇಲ್ಲಿನ ಕಥೆಯೂ ವಾಲ್ಮೀಕಿ ಮಹರ್ಷಿಗಳು ಹೇಳಿದ ರೀತಿಯಲ್ಲಿಯೇ ಮುಂದುವರಿಯುತ್ತದೆ. ಅಲ್ಲಲ್ಲಿ ಕೆಲವು ಬದಲಾವಣೆಗಳೂ, ಅಗತ್ಯಕ್ಕೆ ತಕ್ಕಂತೆ ಕೆಲವು ಹೊಸ ಪಾತ್ರಗಳ ಸೃಷ್ಟಿಯೂ ನಡೆದಿದೆ. ಆದರೆ ಇವು ಯಾವುವೂ ಮೂಲ ಕಥೆಯ ಆಶಯಕ್ಕಾಗಲಿ ಸ್ವರೂಪಕ್ಕಾಗಲಿ ಅಪಚಾರವನ್ನು ಮಾಡುವಂಥವಲ್ಲ. ಅಂತಹ ಬದಲಾವಣೆಗಳಲ್ಲಿ ಒಂದೆರಡನ್ನು ಪರಿಶೀಲಿಸಿದರೆ ಮೇಲಿನ ಮಾತಿನ ಸತ್ಯ ಗೊತ್ತಾಗುತ್ತದೆ.

ಮೊದಲನೆಯದು ಮಂಥರೆಯ ವೃತ್ತಾಂತ. ವಾಲ್ಮೀಕಿ ರಾಮಾಯಣದಲ್ಲಿ ಮಂಥರೆಯ ಜನನ, ಬಾಲ್ಯ ಮುಂತಾದ ವಿವರಗಳು ದೊರೆಯುವುದಿಲ್ಲ. ಹಾಗಾಗಿ ಅವಳು ಕೈಕೆ ಭರತರ ವಿನಾ ಉಳಿದವರನ್ನೆಲ್ಲ ಏಕೆ ಅಷ್ಟಾಗಿ ದ್ವೇಷಿಸುತ್ತಾಳೆ ಎಂಬುದು ಗೊತ್ತಾಗುವುದಿಲ್ಲ. ಕೇಕಯ ರಾಜನಿಗೆ ಮಂಥರೆ ಸಿಕ್ಕಿದ ಸಂದರ್ಭವನ್ನು ಕುವೆಂಪು ಸೃಷ್ಟಿಸಿದ್ದಾರೆ. ಬೇಟೆಯಾಡಲು ಕಾಡಿಗೆ ಹೋಗಿದ್ದ ಕೇಕಯ ರಾಜನಿಗೆ ಒಂದು ಮಗುವಿನ ಅಳು ಕೇಳುತ್ತದೆ. ಹತ್ತಿರ ಹೋಗಿ ನೋಡಿದರೆ ಮುಳ್ಳು ಮಣ್ಣು ತರಗೆಲೆಯ ಮೇಲೆ ಇರುವೆ ಹತ್ತಿ ಮಲಗಿರುವ ಮಗು ಕಾಣುತ್ತದೆ. ರಾಜ ಆ ದಿಕ್ಕಿಲ್ಲದ ಮಗುವನ್ನು ಎತ್ತಿಕೊಂಡು ಅರಮನೆಗೆ ತರುತ್ತಾನೆ. ಕುರೂಪಿಯಾದ ಆ ಮಗುವನ್ನು ಕಂಡರೆ ಎಲ್ಲರಿಗೂ ತಿರಸ್ಕಾರ. ಎಲ್ಲರೂ ಅದನ್ನು ನಾಯಿಮರಿಗಿಂತ ಕೀಳಾಗಿ ಕಾಣುತ್ತಾರೆ. ಪ್ರೀತಿ ವಿಶ್ವಾಸಗಳನ್ನೇ ಕಾಣದೆ ಬೆಳೆದ ಅವಳಿಗೆ ರಾಜನು ಕೈಕೇಯಿಯ ಶುಶ್ರೂಷೆಯ ಕೆಲಸವನ್ನು ವಹಿಸಿದಾಗ ಮೂರು ಲೋಕವೇ ಸಿಕ್ಕಿದಂತಾಯಿತು. ರಾಜನ ಬಗೆಗೂ ರಾಜನಿಗೆ ತುಂಬ ಪ್ರಿಯಳಾಗಿದ್ದ ಕೈಕೆಯಿಯ ಮತ್ತು ಅವಳ ಮಗ ಭರತನ ಬಗೆಗೂ ಅವಳಿಗೆ ಎಲ್ಲೆ ಮೀರಿದ ಮಮಕಾರ. ಉಳಿದವರ ಬಗೆಗೆ ತನ್ನನ್ನು ಅಷ್ಟು ತಿರಸ್ಕಾರದಿಂದ ಕಂಡದ್ದಕ್ಕೆ ದ್ವೇಷ. ಅವಳು ರಾಮಾಯಣದ ಎಲ್ಲ ಘಟನೆಗಳಿಗೂ ಕಾರಣಳಾದಳು. ರಾಮನನ್ನು ಕಾಡಿಗಟ್ಟಲು ಈಕೆ ಮೂಲ ಕಾರಣ ಎಂದು ತಿಳಿದ ಭರತ ಉಗ್ರವಾಗಿ ಕೋಪಗೊಂಡಾಗ ಮಂಥರೆ ರಾಮನನ್ನು ಕರೆದು ತರುತ್ತೇನೆ ಎಂದು ಕಾಡಿಗೆ ಓಡಿ ಅಲ್ಲಿ ಬೆಂಕಿಯಲ್ಲಿ ಸಿಕ್ಕಿ ಬೆಂದುಹೋಗುತ್ತಾಳೆ. ಇದು ಮತ್ತು ಇಲ್ಲಿನ ಮುಂದಿನದೂ ಕುವೆಂಪು ಸೃಷ್ಟಿ. ಈ ಕಾವ್ಯದಲ್ಲಿ ಅವಳು ಮತ್ತೊಮ್ಮೆ ಕಾಣಿಸಿಕೊಳ್ಳುತ್ತಾಳೆ,

ಸೂಕ್ಷ್ಮತನುರೂಪದಿಂದ. ರಾಮನು ಕಾಡಿನಿಂದ ಕೊಟ್ಟ ಅವಧಿಗೆ ಸರಿಯಾಗಿ ಬಾರದೇ ಹೋದಾಗ ಭರತ ಅಗ್ನಿಪ್ರವೇಶ ಮಾಡಲು ಸಿದ್ಧನಾಗುತ್ತಾನೆ. ಆಗ ಒಂದು ಸುಂದರ ಸೂಕ್ಷ್ಮ ತೇಜದ ಸುರಾಂಗನಾ ಮೂರ್ತಿ ಜ್ವಾಲೆಯಲ್ಲಿ ಕಾಣಿಸಿಕೊಂಡು :

ಕಂದ, ನಿನ್ನಗ್ರಜಂ
ಇಂದೋ ನಾಳೆಯೋ ದಿಟಂ ಪಿಂದಿರುಗಿ ಬಂದಪನ್,

ಎಂದು ಹೇಳಿ ಅಗ್ನಿಪ್ರವೇಶದ ನಿಶ್ಚಯವನ್ನು ತಪ್ಪಿಸುತ್ತದೆ. ''ನೀನಾರು?'' ಎಂದು ಕೇಳಿದ ಭರತನಿಗೆ ಆಮೂರ್ತಿ : ''ಮತ್ತಾರ್, ಸದಾ ನಿನ್ನ ಸುಕ್ಷೇಮ ಚಿಂತನೆಯೊಳಿರ್ಪರ್ ಆ ಮಂಥರೆಯ ವಿನಾ'' ಎನ್ನುತ್ತದೆ. ಭರತ ''ಮತ್ತೆ ಅವಳ ಹೆಸರನ್ನೇ ಎತ್ತಬೇಡ, ನನ್ನ ಈ ಅವಸ್ಥೆಗೆಲ್ಲ ಆ ಗೂನಿಯೇ ಕಾರಣ'' ಎನ್ನುತ್ತಾನೆ. ಆಗ ಆಕೆ ಕೊಡುವ ಉತ್ತರ : ''ಮಗೂ ಅವಳು ಕಾರಣಳಲ್ಲ, ಕರಣ (ಸಾಧನ)'' ಎನ್ನುವುದು ರಾಮಾಯಣ ದರ್ಶನದ ಇಡೀ ದರ್ಶನಸೂತ್ರಕ್ಕೆ ಅನುಗುಣವಾಗಿದೆ.

ಇನ್ನೊಂದು ಮುಖ್ಯವಾದ ಬದಲಾವಣೆ ಸೀತೆಯ ಅಗ್ನಿಪ್ರವೇಶ ಮಾಡುವ ಸಂದರ್ಭದ್ದು. ಸೀತೆಯ ಶೀಲವನ್ನು ಎಲ್ಲ ಮಾನವ, ದಾನವ, ವಾನರ ಸೈನ್ಯದ ಮುಂದೆ ರಾಮ ಪ್ರಶ್ನಿಸುತ್ತಾನೆ. ಆರ್ಯನಾದವನು ಆಡಬಾರದ ಮಾತುಗಳನ್ನು ಆಡುತ್ತಾನೆ. ಆಗ ಸೀತೆ ಆಡುವ ಮಾತುಗಳು ಇವು :

... ರಾಕ್ಷಸಂ ಮುಟ್ಟಿದನೆ ? ನಾನಲ್ತು
ದೈವಮಪರಾಧಿ. ಮೆಯ್ಯನಲ್ಲದೆ ಮನವನೇಂ
ಮುಟ್ಟಿದನೆ? ಮುಟ್ಟಲಾರದೆ ಸುಟ್ಟು ಸೀದನಯ್,
ನಿನ್ನಲಗಿನೇರ್ಗೆಂತುಟಂತೆ...

ರಾಮನಿಗೆ ಇನ್ನೂ ಇಂಥ ಕೆಲವು ಮಾತುಗಳನ್ನು ಹೇಳಿ, ಲಕ್ಷ್ಮಣನತ್ತ ತಿರುಗಿ ''ಚಿತೆಯಂ ರಚಿಸು ಸೌಮಿತ್ರಿ'' ಎಂದು ಅಪ್ಪಣೆ ಮಾಡುತ್ತಾಳೆ. ಸೀತೆಯ ಶೀಲದ ವಿಷಯದಲ್ಲಿ ರಾಮ ಸಂದೇಹ ಪಡಬಹುದಾದರೆ ಜನರು ರಾಮನ ಶೀಲದ ವಿಷಯದಲ್ಲೂ ಸಂದೇಹ ಪಡಬಹುದಲ್ಲವೆ ? ಆದ್ದರಿಂದ ರಾಮನು

ಚಲಿಸಿದನು ಚಿತೆಗೆ, ನೋಳ್ಪರಾ
ವಿಸ್ಮಯಂ ಚಿಂತೆಗೆ ತಿರುಗುವಂತೆ. ಓ ವೋ ವೋ
ಎಂಬನಿತರೊಳೆ ತಾಂ ಪ್ರವೇಶಿಸುತ್ತುಜ್ವಲಿಪ
ಗೋಪುರೋಪಮದಗ್ನಿ ಮಧ್ಯೆ ಮರೆಯಾದನೈ
ಜಮದಗ್ನಿ ಜಾತನಂ ಜಯಿಸಿದಾತಂ.

ಇದಾದ ಮೇಲೆ ಮುಂದಿನದನ್ನು ಯಾರೂ ಊಹಿಸಬಹುದು :

ಹವ್ಯವಾಹನ
ಪವಿತ್ರ ತನುವಿಂ ಪೊಣ್ಮೆದನು ದಶರಥಾತ್ಮಜಂ
ಜಾನಕೀ ಪಾಣಿಗ್ರಹಣ ಕೃಪಾಲು! ಸೀತೆಯಂ
ಪಾವನಾಗ್ನಿ ಸ್ನಾತೆಯಂ, ಕಿರ್ಚ್ಚಿನುರಿಯಿಂದೆ
ಕಾಯ್ದು ತೆರದಿಂದೆ, ಕರೆತಂದನೊಯ್ಯನೆ ಪೊರಗೆ
ದುರಿತ ವಿರಹಿತ ಶಾಂತ ಹರಿತಶಾದ್ವಲ ಚಾರು ಆ
ಗಿರಿಯ ವೇದಿಕೆಗೆ. ಶ್ರೀಮದ್ ದಿವ್ಯ ದೇಹದಿಂ
ದಿವ್ಯ ಮಾಲಾಂಬರಗಳಿಂ ದಿವ್ಯ ತೇಜದಿಂ
ಶೋಭಿಸುತ್ತಿರ್ದ ಆ ಸೀತಾಸಹಿತಂ ರಾಮನಂ
ಕಂಡು ಹರ್ಷೋನ್ಮಾದಕದ್ದುದು ಕಪಿಧ್ವಜಿನಿ,
ಘೇ ಘೇ ಜಯಧ್ವನಿಗೈವ ರಾಕ್ಷಸಧ್ವಜಿನಿಯಿಂ
ಕೂಡಿ, ಪಯೋನಿಧಿಯ ನಪ್ಪುವೋರ್ ಪಾಥೋಧಿಯೋಲ್!

ಆಗ ತೀರ ಅನಿರೀಕ್ಷಿತವಾದ ಒಂದು ಘಟನೆ ನಡೆಯಿತು. ವಿಭೀಷಣನ ಮಗಳು ಅನಲೆ, ಈ ಎಲ್ಲ ಕ್ರಿಯೆಗಳಿಗೂ ಸಾಕ್ಷಿಯಾಗಿದ್ದವಳು ಓಡಿ ಬಂದು ರಾಮನ ಪಾದಗಳಿಗೆ ದಿಂಡುರುಳಿದಳು. ಮತ್ತು ಹೇಳಿದಳು :

''ಮನ್ನಿಸೈ, ಸ್ವಾಮಿ ;
ದೇವಿಯಂ ನಿಂದಿಸಿದ ನಿನ್ನೆನೆನಿತೆನಿತೊ, ನಾಂ
ಬಯ್ದೆನಯ್. 'ಹದಿಬದೆಯನಗ್ನಿವುಗಿಸುವುದಿರಲಿ,
ತನ್ನಂ ಪರೀಕ್ಷಿಸುವರಾರೋ? ತಾನೇಂ ಪೊರತೊ
ದುರಿತ ದೋಷಕೆ?'' ಎನುತೆ ಶಂಕಿಸಿದೆನಾ ನಿಂದೆ
ಭಸ್ಮವಾಯಿತು ತಂದೆ, ನೀನೊಡ್ಡಿದೀ ಚಿತೆಯ
ಲೋಕಪಾವಕ ಪವನಸಖನಿಂದೆ : ಪೂಜ್ಯೆಯಂ
ಪಾಲಿಸುವ ನೆವದಿ ನೀನುಂ ಪರೀಕ್ಷಿತನಲಾ!
ಲೋಕ ತೃಪ್ತಿಗೆ ಲೋಕ ಮರ್ಯಾದೆಗೊಳಗಾದೆ;
ಸರ್ವಲೋಕಪ್ರಭುವೆ, ಲೋಕಗುರು ನೀಂ ದಿಟಂ!''

ದರ್ಶನ : ಈ ಇಡೀ ಕಾವ್ಯವನ್ನು ಒಂದು ಸೂತ್ರ ಅಳುತ್ತಿದೆ :

ನೆಯ್ದಾಳುತಿದೆ ಜಗವನೊಂದತಿ ವಿರಾಣ್ ಮನಂ,
ಸೂಕ್ಷ್ಮಾತಿಸೂಕ್ಷ್ಮ ತಂತ್ರದಿ ಬಿಗಿದು ಕಟ್ಟಿಯುಂ
ಜೀವಿಗಳ್ಗಿಚ್ಛೆಯಾ ಸ್ವಾತಂತ್ರ್ಯಭಾವಮಂ
ನೀಡಿ. ಮಂಥರೆ ಸೀತೆ ರಾಮ ರಾವಣರೆಲ್ಲರುಂ
ಸೂತ್ರಗೊಂಬೆಗಳಲ್ತೆ ಆ ವಿಧಿಯ ಹಸ್ತದಲಿ ?

ಒಂದು ವಿರಾಟ್ ಮನಸ್ಸು - ಎಂದರೆ ವಿಶ್ವವ್ಯಾಪಿಯೂ ಸರ್ವಶಕ್ತವೂ ಆದ ಮನಸ್ಸು - ಜಗತ್ತನ್ನು ಹಾಸುಹೊಕ್ಕಾಗಿ ನೆಯ್ದು ಆಳುತ್ತಿದೆ. ಅದು ಎಲ್ಲ ಜೀವಿಗಳನ್ನೂ ಸೂಕ್ಷ್ಮಾತಿಸೂಕ್ಷ್ಮವಾದ ತಂತ್ರದಿಂದ ಬಿಗಿದು ಕಟ್ಟಿದೆ. ಜೀವಿಗಳು ಸ್ವತಂತ್ರರಲ್ಲ. ಆದರೂ ಅವರು ಸ್ವತಂತ್ರರು ಎಂಬ ಭಾವನೆಯನ್ನು ಅವರಿಗೆ ಆ ವಿರಾಟ್ ಮನಸ್ಸು ನೀಡಿದೆ. (ಗೂಟಕ್ಕೆ ಉದ್ದವಾದ ಹಗ್ಗದಿಂದ ಕಟ್ಟಿದ ಪಶುವಿನಂತೆ ಅದು ಆ ಪರಿಧಿಯಲ್ಲಿ ಸುತ್ತುವಷ್ಟರ ಮಟ್ಟಿಗೆ ಸ್ವತಂತ್ರ. ಅದರಾಚೆಗೆ ಅದು ಹೋಗಲಾರದು. ಆ ಸ್ವಾತಂತ್ರ್ಯ ಅದಕ್ಕಿಲ್ಲ!) ಮಂಥರೆಯಾಯಿತು, ಸೀತೆ, ರಾಮ ರಾವಣ ಯಾರೇ ಆಗಲಿ ಆ ವಿಧಿಯ (ವಿರಾಟ್ ಮನಸ್ಸಿನ) ಹಸ್ತದಲ್ಲಿ ಸೂತ್ರದ ಬೊಂಬೆಗಳು. ಅದು ಕುಣಿಸಿದಂತೆ ಅವರು ಕುಣಿಯಲೇಬೇಕು.

ಎರಡನೆಯ ಅಂಶ ಪ್ರತಿಯೊಬ್ಬರಿಗೂ ಅವನು ರಾವಣನೇ ಆಗಿರಲಿ - ಉದ್ಧಾರವಿದ್ದೇ ಇದೆ. ಸರ್ವರಿಗೂ ಅಂತಿಮವಾಗಿ ಈ ಎಲ್ಲ ಕಷ್ಟ ಕಾಯಿಲೆಗಳಿಂದ, ಮಾಯೆಯ ಬಂಧನದಿಂದ ಬಿಡುಗಡೆ ಇದ್ದೇ ಇದೆ ಎಂಬುದು ಕವಿಯ ಕಾಣ್ಕೆಯ ಭಾಗ.

ಪಾಪಿಗುದ್ಧಾರವಿಹುದು ಸೃಷ್ಟಿಯ ಮಹದ್‌ವ್ಯೂಹ ರಚನೆಯೊಳ್

ಎಂಥ ಜೀವಿಗೂ ತಣ್ಪುನೀಡುವಂಥ ಅಮೃತ ವಾಕ್ಯ ಇದು. ಇದಕ್ಕೆ ನಿದರ್ಶನವಾಗಿ ರಾವಣನ ಪಾತ್ರವನ್ನು ನೋಡೋಣ.

ಇಲ್ಲಿಯ ರಾವಣನೂ ಮೂಲ ರಾಮಾಯಣದ ರಾವಣನಂತೆ ಮಹಾ ಪರಾಕ್ರಮಿ, ಕಾಮಿ. ಅನೇಕ ಸ್ತ್ರೀಯರು ಅವನ ವೈಭವಕ್ಕೆ, ಶಕ್ತಿಗೆ ಮಾರು ಹೋದಂತೆ ಸೀತೆಯೂ ತನ್ನ ವಶಳಾಗುತ್ತಾಳೆ ಎಂಬುದೇ ಅವನ ಭಾವನೆ. ಸೀತೆ ತನ್ನ ನಿರೀಕ್ಷೆಯಂತೆ ನಡೆಯದೇ ಹೋದಾಗ ಅವನಿಗೆ ನಿರಾಶೆಯಾಗುತ್ತದೆ. ಸೀತೆ ತನ್ನನ್ನು ತಿರಸ್ಕರಿಸಿದಷ್ಟೂ ಅವಳ ವಿಷಯಕ್ಕೆ ಅವನ ಮೋಹ ಹೆಚ್ಚುತ್ತಾ ಹೋಗುತ್ತದೆ. ಆದರೆ ಮಂಡೋದರಿ, ವಿಭೀಷಣ, ಆತನ ಮಗಳು ಅನಲೆ ಈ ಎಲ್ಲರ ಸಾತ್ವಿಕ ಶಕ್ತಿ, ಪ್ರಾರ್ಥನೆಗಳಿಂದ ಅವನ ಮನಸ್ಸು ಕಾಮದ ಉರಿಯಿಂದ ಬೆಳಕಿನ ಕಡೆಗೆ ತಿರುಗುತ್ತದೆ. ಸೀತೆಯನ್ನು ಅತಿಯಾಗಿ ಕಾಮಿಸಿದ ರಾವಣನೇ ಕೊನೆಗೆ ಹೇಳುತ್ತಾನೆ :

ನನಗೆ ದೇವತೆ, ಮಾತೆ. ಶ್ರದ್ಧೆಗೆಟ್ಟಿರ್ದನಗೆ
ಶ್ರದ್ಧೆಯಂ ಮರುಕೊಳಿಸುತಾತ್ಮದುದ್ಧಾರಮಂ
ತಂದ ದೇವತೆ, ಪುಣ್ಯಮಾತೆ!

ಈ ಕಾವ್ಯದ ರಾವಣ ದೊಡ್ಡ ಸಾಧಕ. ಸೀತೆ ತನ್ನನ್ನು ಗೆದ್ದಳು. ಆದ್ದರಿಂದ ರಾಮನನ್ನು ಗೆದ್ದು ಅವನನ್ನು ಸೀತೆಗೆ ಕಾಣಿಕೆಯಾಗಿ ಕೊಡುತ್ತೇನೆ ಎಂಬುದು ಅವನ ಪ್ರತಿಜ್ಞೆ. ಆದರೆ ಅವನ ರಾವಣತ್ವ ಸವೆದು ಕಳೆಯದೆ ರಾಮತ್ವ ಸಿದ್ಧಿಸುವಂತಿಲ್ಲ. ಅದಕ್ಕಾಗಿಯೇ ಅವನು ಪಾಡು ಪಟ್ಟದ್ದು, ಇತರರನ್ನು ಪಾಡುಪಡಿಸಿದ್ದು. ಅವನಿಂದಾಗಿ ಎಂತಹ ಕಷ್ಟ ದುಃಖಗಳ

ಪರಂಪರೆ ಅವನಿಗೂ ರಾಮ ಸೀತೆ ಲಕ್ಷ್ಮಣರಿಗೂ ಒದಗಿತು! ಮಗ ಇಂದ್ರಜಿತು ಸತ್ತಾಗ ಸೊಸೆ ತಾರಾಕ್ಷಿ ರಾವಣನ ಕಾಲಮೇಲೆ ದಿಂಡುರುಳುತ್ತಾಳೆ. ಆಗ ಕವಿ ವರ್ಣಿಸುತ್ತಾರೆ :

ಬಾಲೆಯಂ ಮೇಲೆತ್ತವೋಗಿ, ಕುಸಿದನು ತಾನೆ ನೆಲಕೆ ನಗೆಹಲಲುಗಾಡಿಸಿದ ಬಾಹುಭೀಮಂ!

ಯುದ್ಧ ಮುಂದುವರಿಯುತ್ತದೆ. ಸೀತೆ ಆ ವೇಳೆಗೆ ಅವನಿಗೆ ತಾಯಿಯಂತೆ ತೋರುತ್ತಿದ್ದಾಳೆ. ದೇವಿ ಅಂಬಿಕೆ ರಾವಣನಿಗೆ ಕರುಣಿಸಿದ ದರ್ಶನದಲ್ಲಿ ಆತ ಕಾಣುತ್ತಾನೆ - ಮರು ಜನ್ಮದಲ್ಲಿ ತಾನೂ, ಕುಂಭಕರ್ಣನೂ ಅವಳಿಮಕ್ಕಳಾಗಿ ಸೀತೆಯಿಂದ ವಾತ್ಸಲ್ಯವನ್ನು ಪಡೆಯುತ್ತಾರೆ. ಸೀತೆ ಅವರನ್ನು ಎತ್ತಿ ಮುದ್ದಾಡುತ್ತಾಳೆ. ಹಾಡಿ ಮೊಲೆಯೂಡುತ್ತಾಳೆ. ತೊಡೆಯ ಮೇಲೆ ಮಲಗಿಸಿಕೊಂಡು ಎದೆಗೆ ಅಪ್ಪಿಕೊಳ್ಳುತ್ತಾಳೆ. ಇದು ರಾವಣನಿಗೆ ದೊರೆತ ಸ್ವಪ್ನದರ್ಶನ! ವಾಸ್ತವ ಮುಂದುವರಿಯುತ್ತದೆ. ಘೋರ ಯುದ್ಧವಾಗುತ್ತದೆ. ರಾಮನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸುತ್ತಾನೆ. ರಾವಣನು ತನ್ನ ಹೃದಯವನ್ನು ಹೊಕ್ಕ ಅಸ್ತ್ರವನ್ನು ರಾಮನೆಂದೇ ನಂಬಿ ಭದ್ರವಾಗಿ ಹಿಡಿದುಕೊಳ್ಳುತ್ತಾನೆ.

''ಸೆರೆ ಸಿಕ್ಕಿದನಲಾ ಶತ್ರು!''

ಎಂದು ಉದ್ಗರಿಸುತ್ತಾನೆ. ಅಷ್ಟೇ ಅಲ್ಲ; ಸಾರಥಿಗೆ ಅಪ್ಪಣೆ ಮಾಡುತ್ತಾನೆ : ''ವೈರಿ ಸೆರೆ ಸಿಕ್ಕಿದ್ದಾನೆ. ರಥವನ್ನು ಊರಿಗೆ ಹಿಂದಿರುಗಿಸು''. ಊರಿಗೆ ಹಿಂತಿರುಗಿ ಸತಿ ಮಂಡೋದರಿಗೆ ಹೇಳುತ್ತಾನೆ: ''ಇದೋ ಈ ಕಪ್ಪವನ್ನು ಸೀತಾಮಾತೆಗೆ ಕಾಣಿಕೆಯಾಗಿ ಕೊಡು.''

''ಶ್ರೀ ರಾಮಾಯಣ ದರ್ಶನಂ'' ಕಾವ್ಯದ ಉದ್ದಕ್ಕೂ ಎದ್ದು ಕಾಣುವ ''ಕ್ರಿಯಾಶಕ್ತಿಗಳು'' ಭಗವತ್ ಕೃಪೆ ಮತ್ತು ಭಗವದಿಚ್ಛೆ. ಅವೇ ವಿಧಿಶಕ್ತಿಯೂ ಹೌದು. ಇದಕ್ಕೆ ಪೂರಕವಾಗಿ ಕೆಲವು ನಿದರ್ಶನಗಳನ್ನು ನೋಡಬಹುದು. ಜಟಾಯುವಿನ ಅಣ್ಣ ಸಂಪಾತಿ, ಒಮ್ಮೆ ಆಕಾಶದಲ್ಲಿ ಭಾರೀ ಸರ್ಪವೊಂದನ್ನು ಕಚ್ಚಿಕೊಂಡು ಹಾರುತ್ತಿದ್ದಾಗ ಆ ಹಾವು ಕಚ್ಚಿಕೊಂಡಿದ್ದ ತಿಮಿಂಗಲ ಕೆಳಗೆ ಬಿದ್ದು ನಿಶಾಕರ ಮುನಿಯ ಪುಣ್ಯಾಶ್ರಮ ನುಚ್ಚು ನೂರಾಯಿತು. ಆಶ್ರಮದಲ್ಲಿದ್ದವರೆಲ್ಲ ಸತ್ತರು. ಎಲ್ಲೋ ಹೊರಗೆ ಹೋಗಿದ್ದುದರಿಂದ ನಿಶಾಕರ ಮುನಿ ಉಳಿದುಕೊಂಡ. ಋಷಿ ಸಂಪಾತಿಯನ್ನು ಶಪಿಸುವುದಿಲ್ಲ. ಬದಲಿಗೆ ''ನಿನ್ನಿಂದ ಮಹತ್ಕಾರ್ಯವಾಗಬೇಕು. ಕರ್ಮಪರಿಹಾರಕ್ಕಾಗಿ ಕಾಯಲೇಬೇಕು ಎನ್ನುತ್ತಾನೆ. ಮತ್ತೊಮ್ಮೆ ಸಂಪಾತಿ ಹಾರುತ್ತಾ ಸೂರ್ಯನನ್ನು ಸಮೀಪಿಸಿದ ತಮ್ಮ ಜಟಾಯುವನ್ನು ರಕ್ಷಿಸಲು ಧಾವಿಸಿ, ಅವನನ್ನು ತನ್ನ ರೆಕ್ಕೆಗಳಿಂದ ರಕ್ಷಿಸುತ್ತಾನೆ. ಆದರೆ ಅವನ ರೆಕ್ಕೆಗಳೇ ಸುಟ್ಟು ಮಹೇಂದ್ರಾಚಲದ ಕೋಡುಗಲ್ಲಿನ ಮೇಲೆ ದೊಪ್ಪನೆ ಉರುಳುತ್ತಾನೆ. ಕಪಿ ಸೈನ್ಯವು ಸೀತೆಯನ್ನು ಹುಡುಕುತ್ತಾ ಮಹೇಂದ್ರಾ ಚಲದವರೆಗೆ ಬರುವವರೆಗೂ ನರಳುತ್ತಾ ಶೋಕ ಮೋಕ್ಷಕ್ಕಾಗಿ ಕಾಯುತ್ತಿರುತ್ತಾನೆ. ಕಪಿಸೇನೆಯ ಶರಗುಲ್ಮ ಅವನಿಗೆ ಈ ಮಾತುಗಳನ್ನು ಹೇಳುತ್ತಾನೆ :

ಮಾಣ್ಬುದು ನಿರಾಶೆಯಂ, ಹೇ
ವಿಹಂಗಮತಪಸ್ವಿ, ದೈವಕೃಪೆಗೀ ಕ್ಲೇಶಮುಂ
ರೆಂಕೆಯಪ್ಪುದು. ಶಂಕೆಯೇಕೆ... ಶಿವಕೃಪೆಗೆ
ತೃಣಮೆ ಖಡ್ಗಂ ; ಪನಿ ಕಡಲ್, ಶ್ರದ್ಧೆ ತಾಂ
ಸಾಣೆಯಿರೆ ತಾಳ್ಮೆಯೆ ತಪಂ... ನಿಶ್ಯಬ್ದಿಯೈ ಈಶ್ವರ
ಕೃಪಾಬ್ಧಿ
ಬರ್ಪುದನರಿಯಲಾರೆವಂತೆಯೆ ಮಹತ್ಕೃತಿ ತಾಂ
ಮಹನ್ ಮೌನಿ.

ದಶರಥನು ತನಗೆ ಹಿಂದೆ ಕೊಟ್ಟಿದ್ದ ಮಾತನ್ನು ನೆನಪು ಮಾಡಿ ಕೈಕೆಯು ಅವನಿಂದ ವರವನ್ನು ಬೇಡುವ ಸಂದರ್ಭ. ದಶರಥ ಇಂಥದೊಂದು ವರನೀಡಿ ರಾಮನನ್ನು ಕಾಡಿಗೆ ಕಳುಹಿಸಲು ಇದ್ದ ಗುಪ್ತ ಕಾರಣ :

ಕಬಂಧನ ಮೊರೆಯೊ?
ಶಬರಿಯ ಕರೆಯೊ? ರಾಮನಾತ್ಮಾಭಿಲಾಷಿತಮೊ?
ಪಾತ್ರಂಗಳಂತರಾಳದಿ ತನ್ನ ಸೂತ್ರಂಗಳಂ
ನಡೆಯಿಪಂತರ್ಯಾಮಿ ಶಕ್ತಿಯ ವಿಲಾಸಿತಮೊ?

ಮುದ್ದು ಮಗನಾದ ರಾಮಚಂದ್ರ ಕಾಡಿಗೆ ಹೋಗುವುದು ಅನಿವಾರ್ಯವಾದಾಗ ತಾಯಿ ಕೌಸಲ್ಯೆ ಹೇಳುವ ಮಾತುಗಳು:

....ಜೈಸುಗೆ ವಿಧಿಯ ವಜ್ರೇಚ್ಛೆ!
ಗೆಲ್ಗೆ ನಿರುತಂ ಋತಂ! ಜಗದೀಶ ಕೃಪೆಯೆನಗೆ
ದಯೆಗೆಯ್ಗೆ! ಗೆಲಮಕ್ಕೆ ದೇವರ್ಗಳೆಲ್ಲರ್ಗೆ !
ಜಯಮಕ್ಕೆ ಮಾತೃವೊಲ್ಮೆಯ ಮಹತ್ ಪ್ರಾರ್ಥನೆಗೆ !

ಈ ಯುಗಧರ್ಮವಾದ ಅಹಿಂಸೆಯನ್ನು ಕವಿ ತಮ್ಮ ರಾಮಾಯಣ ದರ್ಶನಂ ಕಾವ್ಯದ ದರ್ಶನದ ಭಾಗವಾಗಿ ಅಳವಡಿಸಿಕೊಂಡಿದ್ದಾರೆ. ಪುತ್ರಸಂತಾನವಾಗಬೇಕೆಂದು ದಶರಥ ಮಹಾರಾಜನು ಪುತ್ರಕಾಮೇಷ್ಟಿ ಯಜ್ಞವನ್ನು ಮಾಡಲು ಬಯಸಿದಾಗ ಜಾಬಾಲಿ ಋಷಿವರೇಣ್ಯರು ರಾಜನಿಗೆ ಹೇಳಿದ್ದು ಹೀಗೆ :

ಕುಲ ಪುರೋಹಿತರೊರೆದ ಜನ್ನಮಂ ಕೈಗೊಂಡು
ಪಸುಳೆರನ್ನರ ಪಡೆವೆಯದು ದಿಟಂ ಕೇಳಾದೊಡಂ
ನನ್ನೊಂದು ಕಾಣ್ಕೆಯಂ. ಪೂರ್ವಪದ್ಧತಿವಿಡಿದು
ಮಾಳ್ಪ ದಿಗ್ವಿಜಯ ಹಯಮೇಧ ಮೊದಲಾದುವಂ
ತೊರೆದು, ಹಿಂಸಾ ಕ್ರೌರ್ಯಮಿಲ್ಲದಿಹ ಪ್ರೇಮಕ್ಕೆ
ನೋಂತು, ದೇವರ್ಕಳಂ ಪೂಜಿಸಲ್ ಮೆಚ್ಚುವುದು
ಜಗವನಾಳುವ ಋತಂ....

ಕುವೆಂಪು ಸಾಹಿತ್ಯಸಮಸ್ತವನ್ನೂ ಸಂಕ್ಷೇಪಿಸುವ ಯಾವುದೇ ಮಹತ್ತಾದ ಪ್ರಯತ್ನವಾದರೂ ವಿಶಾಲವಾದ ಕ್ಷೀರಸಾಗರದ ಸಮುದ್ರ ಸಮಸ್ತವನ್ನೂ ಒಂದು ಬಟ್ಟಲು ಹಾಲಾಗಿ ಇಂಗಿಸಿ, ಕೆನೆಗಟ್ಟಿಸಿ ನೀಡುವ ಪ್ರಯತ್ನದಂತೆಯೇ ಅಸಮರ್ಪಕವೂ, ಸೋಲನ್ನು ಒಪ್ಪಿಕೊಳ್ಳಲೇಬೇಕಾದದ್ದೂ ಆಗುವುದು ಅನಿವಾರ್ಯ. ''ವ್ಯಾಸ ಮುನೀಂದ್ರ ರುಂದ್ರ ವಚನಾಮೃತವಾರ್ಧಿಯನೀಸುವೆನ್ ಎಂಬ ಗರ್ವಮೆನಗಿಲ್ಲ'' ಎಂದು ಮಹಾಕವಿ ಪಂಪ ಹೇಳಿದ್ದಾನೆ. ಈಗಲೂ 'ಕುವೆಂಪು ರಸಋಷಿ ರುಂದ್ರ ವಚನಾಮೃತವಾರ್ಧಿಯನೀಸುವೆನ್ ಎಂಬ ಧೈರ್ಯಮೆನಗಿಲ್ಲ' ಎಂದೇ ಹೇಳಬೇಕಾಗಿದೆ. ಸಹೃದಯರನ್ನು ಕುವೆಂಪು ಸಾಹಿತ್ಯ ತಪೋವನ ಯಾತ್ರಿಗಳಾಗುವಂತೆ ಪ್ರೇರಿಸುವಲ್ಲಿ ಯಶಸ್ವಿಯಾಗಿದ್ದರೆ ನಾನು ಧನ್ಯನೆಂದು ಭಾವಿಸುತ್ತೇನೆ.

ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯವರು ನಾನು ಸ್ವಲ್ಪ ಮಟ್ಟಿಗೆ ವಿಸ್ತಾರವಾಗಿಯೇ ಇಂಗ್ಲಿಷಿನಲ್ಲಿ ರಚಿಸಿರುವ ''ಕುವೆಂಪು'' ಎಂಬ ಗ್ರಂಥವನ್ನು ಪ್ರಕಟಿಸಿದ್ದಾರೆ. ಅದರ ಮುನ್ನುಡಿಯ ಭಾಗದಲ್ಲೂ, ಗ್ರಂಥದ ಆರಂಭದಲ್ಲೂ ಬರೆದಿರುವ ಕೆಲವು ಇಂಗ್ಲಿಷ್ ವಾಕ್ಯಗಳನ್ನು ಉದ್ಧರಿಸಿ ಅವುಗಳ ಅನುವಾದವನ್ನು ನೀಡಿ ನನ್ನ ಈ ಲೇಖನವನ್ನು ಮುಗಿಸುತ್ತೇನೆ :

Despite close association over several decades, Sri Kuvempu has always struck me as the Himalayan range. So have his works. The snow-capped peaks of the majestic moutain, the mighty and mysterious ranges that span India from end to end, believed to be the abode of countless deities (Devatatma - Kalidasa's phrase) awe-inspiring ravines and valleys, from whence originate great rivers of India, crowded by innumerable varieties of flora and fauna rich in colour and sound, varying to the rhythms of day and night, their whiteness intensified in moonlight, their eternal serenity concealed in their changing moods of anger and destruction, all these and more have their coounterparts in his works. Over the last sixty years, he has produced work after work of the same serene beauty. Now, in the ripe age of eighty-two, the tall, handsome, majestic figure exuding a calm lustre, capped with silvery hair - is a rare personality among the shapers of modern Kannada literature.

ಶ್ರೀ ಕುವೆಂಪು ಅವರನ್ನು ಅನೇಕ ದಶಕಗಳಿಂದ ನಾನು ಆತ್ಮೀಯವಾಗಿ ಬಲ್ಲೆ. ಆದರೂ ಅವರು ನನಗೆ ಹಿಮಾಲಯ ಪರ್ವತ ಶ್ರೇಣಿಗಳಷ್ಟೇ ನಿಗೂಢವಾಗಿಯೇ ಕಾಣುತ್ತಾರೆ. ಅವರ ಕೃತಿಗಳೂ ಅಷ್ಟೇ. ಭವ್ಯವಾದ ಆ ಪರ್ವತ ಶ್ರೇಣಿಯ ಹಿಮಾವೃತ ಶಿಖರಗಳು, ಭಾರತದ

ಒಂದು ತುದಿಯಿಂದ ಮತ್ತೊಂದರವರೆಗೆ ಹಬ್ಬಿ ಹರಡಿರುವ ಧೀರ ನಿಗೂಢ ಪರ್ವತ ಶ್ರೇಣಿ - ಅದು ಅಸಂಖ್ಯಾತ ದೇವತೆಗಳನ್ನು ತನ್ನ ಗರ್ಭದಲ್ಲಿರಿಸಿಕೊಂಡಿದೆ ಎನ್ನುತ್ತಾರೆ, (ಕಾಳಿದಾಸ : ದೇವತಾತ್ಮ), ಭಾರತದ ಅನೇಕ ನದಿಗಳಿಗೆ ಮೂಲವಾದ ಭಯಾನಕವಾದ ಕಣಿವೆ ಕಂದರಗಳು, ಅಸಂಖ್ಯಾತ ಜೀವಸಂಕುಲ, ಸಸ್ಯ ಸಂಪತ್ತು, ಹಗಲು ರಾತ್ರಿಗಳಿಗೆ ತಮ್ಮ ಲಯವನ್ನು ಬದಲಿಸುತ್ತಾ ಹಾಡುವ ಪಕ್ಷಿ ಸಂಕುಲ, ಬೆಳುದಿಂಗಳಲ್ಲಿ ಉಜ್ವಲವಾದಂತೆ ಕಾಣುವ ಅದರ ಧವಳತೆ, ಕ್ರೋಧ ವಿನಾಶಗಳನ್ನು ಒಳಗೆ ತಾಳಿಕೊಂಡೂ ದಿವ್ಯ ಶಾಂತಿಯನ್ನು ಪ್ರದರ್ಶಿಸುತ್ತಿರುವ ಅದರ ಹೊರಮುಖ - ನೀವು ಇವುಗಳಲ್ಲಿ ಯಾವುದನ್ನೇ ಹೆಸರಿಸಿ - ಅವುಗಳ ಪ್ರತಿರೂಪವನ್ನು ಕುವೆಂಪು ಅವರ ಕೃತಿಗಳಲ್ಲಿ ಕಾಣುತ್ತೀರಿ. ಕಳೆದ ಅರವತ್ತು ವರ್ಷಗಳಲ್ಲಿ ಅವರು ಶಾಂತ ಸುಂದರ ಹೊರರೂಪವುಳ್ಳ ಅನೇಕ ಕೃತಿಗಳನ್ನು ರಚಿಸಿದ್ದಾರೆ. ತಮ್ಮ ಎಂಬತ್ತೆರಡನೆಯ ಈ ಮಾಗಿದ ಪ್ರಾಯದಲ್ಲಿ, ಎತ್ತರವಾಗಿದ್ದು, ಶಾಂತಕಾಂತಿಯನ್ನು ಬೀರುತ್ತಿರುವ ಬೆಳ್ಳಿಕೂದಲಿನ ಈ ಮಹಾನ್ ಚೇತನ ಆಧುನಿಕ ಕನ್ನಡ ಸಾಹಿತ್ಯ ನಿರ್ಮಾಪಕರ ಪಂಕ್ತಿಯಲ್ಲಿ ಎದ್ದುಕಾಣುವ ಅಪರೂಪದ ವ್ಯಕ್ತಿತ್ವ ಉಳ್ಳವರು.

"If there is something great, boundless, vast, painfully gripping and powerfully promising, which we have been wont to associate with the name of Russia, then it is Gorky whom we must regard as having expressed all that." This tribute to Gorky by the symbolist poet, Alexander Blok, may very well apply to Kuvempu, who as a poet, novelist, dramatist and literary critic, may be said to represent not only Karnataka, but the whole of India as well. If we would choose a single writer who gives powerful expression to the grandeur and the glory, the wealth and the spirituality of this ancient land of ours Kuvempu would be our most natural choice. On the other hand, if we would choose a single writer who would speak with powerful poetic eloquence on the ugliness and the degradation, the squalid poverty and the spiritual bankruptcy of this ancient land of ours, we would again have to read the charming works of Kuvempu himself."

"ರಷ್ಯಾದೇಶದ ಹೆಸರಿನೊಂದಿಗೆ ಸಂಬಂಧಿಸಬಹುದಾದ ಮಹತ್ತಾದುದೂ ಅಸೀಮವಾದುದೂ, ನಮ್ಮ ಮನಸ್ಸನ್ನು ಸೆರೆಹಿಡಿಯಬಹುದಾದ್ದೂ, ಆಶಾದಾಯಕವಾದದ್ದೂ ಏನಾದರೂ ಇರುವುದಾದರೆ ಅವನ್ನೆಲ್ಲ ಶಕ್ತಿಪೂರ್ಣವಾಗಿ ಅಭಿವ್ಯಕ್ತಿಗೊಳಿಸಿರುವವನು ಮ್ಯಾಕ್ಸಿಂ ಗಾರ್ಕಿ ಮಾತ್ರ." ಈ ನುಡಿನಮನವನ್ನು ನೀಡಿದವನು ಕವಿ ಅಲೆಕ್ಸಾಂಡರ್ ಬ್ಲಾಕ್. ಈ ನುಡಿಗೌರವವನ್ನು ಯಾರಾದರೂ ಕನ್ನಡ ಲೇಖಕನಿಗೆ ನೀಡಬಹುದಾದರೆ ಅದು ಕವಿ, ನಾಟಕಕಾರ, ವಿಮರ್ಶಕ ಎಲ್ಲವೂ ಆಗಿರುವ,

ಕರ್ನಾಟಕವನ್ನೇಕೆ ಇಡೀ ಭಾರತವನ್ನೇ ಪ್ರತಿನಿಧಿಸುವ ರಾಷ್ಟ್ರಕವಿ ಕುವೆಂಪು ಅವರಿಗೆ. ನಮ್ಮ ಈ ಪುರಾತನ ನಾಡಿನ ವೈಭವಕ್ಕೆ, ಆಧ್ಯಾತ್ಮಿಕತೆಗೆ ಶಕ್ತಿಪೂರ್ಣವಾದ ಉಕ್ತಿಯನ್ನು ನೀಡಿರುವ ಕವಿ ಯಾರು ಎಂದರೆ ನಮಗೆ ಸಹಜವಾಗಿ ನೆನಪಿಗೆ ಬರುವುದು ಕುವೆಂಪು ಅವರು. ಹಾಗೆಯೇ ಈ ದೇಶದ ಕುರೂಪ, ಅವನತಿ, ದಟ್ಟ ದಾರಿದ್ರ್ಯ, ಧಾರ್ಮಿಕ ದಿವಾಳಿತನ ಇವುಗಳಿಗೆ ಶಕ್ತಿಪೂರ್ಣವಾದ ಅಭಿವ್ಯಕ್ತಿ ನೀಡಿರುವ ಒಬ್ಬ ಕವಿಯನ್ನು ಆರಿಸಿಕೊಳ್ಳಬೇಕಾದರೆ ಮತ್ತೆ ಕುವೆಂಪು ಅವರ ಸಾಹಿತ್ಯರಾಶಿಯತ್ತಲೇ ಕಣ್ಣು ಹಾಯಿಸಬೇಕಾಗುತ್ತದೆ.

## ಮಹಾಕವಿ ಕುವೆಂಪು ಅವರ ಮುಖ್ಯ ವರ್ಷಗಳು

೧೯೦೪ ಜನನ (ಕುಪ್ಪಳ್ಳಿ - ತೀರ್ಥಹಳ್ಳಿ ತಾಲ್ಲೂಕು) ಡಿಸೆಂಬರ್, ೨೯

೧೯೧೮ ಮೈಸೂರಿನಲ್ಲಿ ವೆಸ್ಲಿಯನ್ ಮಿಷನ್ ಹೈಸ್ಕೂಲಿಗೆ ಸೇರಿದ್ದು

೧೯೨೨ Beginner's Muse - ಇಂಗ್ಲಿಷ್ ಕವನ ಸಂಕಲನದ ಪ್ರಕಟಣೆ

೧೯೨೪ ಕನ್ನಡದಲ್ಲಿ ಮೊದಲ ಕೃತಿ - ಅಮಲನ ಕಥೆಯ ಪ್ರಕಟಣೆ

೧೯೨೫ ಶ್ರೀರಾಮಕೃಷ್ಣಾಶ್ರಮಕ್ಕೆ ಬಂದದ್ದು

೧೯೨೭ ಬಿ.ಎ. ಪದವಿ

೧೯೨೮ ವಿದ್ಯಾರ್ಥಿ ಕವಿ ಸಮ್ಮೇಳನದ ಅಧ್ಯಕ್ಷತೆ (ಬೆಂಗಳೂರು)

೧೯೨೯ ಎಂ.ಎ. ಪದವಿ; ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಅಧ್ಯಾಪಕರಾಗಿ ಸೇರಿದ್ದು.

೧೯೩೦ ಮೊತ್ತ ಮೊದಲನೆಯ ಕವನಸಂಕಲನ 'ಕೊಳಲು' ಪ್ರಕಟಣೆ

೧೯೩೬ ಚಿತ್ರಾಂಗದಾ ಖಂಡಕಾವ್ಯದ ಪ್ರಕಟಣೆ; ಮೊತ್ತಮೊದಲನೆಯ ಕಥಾಸಂಕಲನ 'ಸಂನ್ಯಾಸಿ ಮತ್ತು ಇತರ ಕಥೆಗಳು' ಪ್ರಕಟಣೆ

೧೯೩೭ ವಿವಾಹ - ಶ್ರೀಮತಿ ಹೇಮಾವತಿ ಅವರೊಡನೆ

೧೯೩೮ ಮೊತ್ತ ಮೊದಲನೆಯ ಕಾದಂಬರಿ 'ಕಾನೂರು ಹೆಗ್ಗಡಿತಿ' ಪ್ರಕಟಣೆ

೧೯೩೯ ಕನ್ನಡ ಉಪಪ್ರಾಧ್ಯಾಪಕರಾಗಿ ನೇಮಕ.

೧೯೪೯ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದ ಪ್ರಕಟಣೆ

೧೯೫೫ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ; ಮಹಾರಾಜಾ ಕಾಲೇಜಿನ ಪ್ರಿನ್ಸಿಪಾಲರಾದದ್ದು

೧೯೫೬ ಮೈಸೂರು ವಿಶ್ವವಿದ್ಯಾನಿಲಯದ ಗೌರವ ಡಿ.ಲಿಟ್. ಪ್ರಶಸ್ತಿ; ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕುಲಪತಿಗಳಾಗಿ ನೇಮಕ

೧೯೫೯ ೩೯ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ (ಧಾರವಾಡದಲ್ಲಿ)

೧೯೫೮ ಭಾರತ ಸರ್ಕಾರದಿಂದ 'ಪದ್ಮಭೂಷಣ' ಪ್ರಶಸ್ತಿ; ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಮಾಧ್ಯಮದ ತರಗತಿಗಳ ಪ್ರಾರಂಭ

೧೯೬೦ ಸ್ನಾತಕೋತ್ತರ ಶಿಕ್ಷಣ ಕೇಂದ್ರ 'ಮಾನಸಗಂಗೋತ್ರಿ'ಯ ಪ್ರಾರಂಭ; ಕುಲಪತಿ ಪದವಿಯಿಂದ ನಿವೃತ್ತಿ

೧೯೬೪ 'ರಾಷ್ಟ್ರಕವಿ' ಪ್ರಶಸ್ತಿ

೧೯೬೬ ಕರ್ನಾಟಕ ವಿಶ್ವವಿದ್ಯಾನಿಲಯದ ಗೌರವ ಡಿ.ಲಿಟ್ ಪ್ರಶಸ್ತಿ

೧೯೬೭ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಪ್ರಕಟಣೆ

೧೯೬೮ 'ಭಾರತೀಯ ಜ್ಞಾನಪೀಠ' ಪ್ರಶಸ್ತಿ; 'ಗಂಗೋತ್ರಿ' ಅಭಿನಂದನ ಗ್ರಂಥದ ಪ್ರಕಟಣೆ

೧೯೬೯ ಬೆಂಗಳೂರು ವಿಶ್ವವಿದ್ಯಾನಿಲಯದ ಗೌರವ 'ಡಿ.ಲಿಟ್' ಪ್ರಶಸ್ತಿ

೧೯೭೫ 'ಸಹ್ಯಾದ್ರಿ' ಅಭಿನಂದನ ಗ್ರಂಥದ ಪ್ರಕಟಣೆ

೧೯೭೬ ಕಾನ್ಪುರ ವಿಶ್ವವಿದ್ಯಾನಿಲಯದ ಗೌರವ 'ಡಿ.ಲಿಟ್' ಪ್ರಶಸ್ತಿ

೧೯೮೨ ಪತ್ನಿ ಶ್ರೀಮತಿ ಹೇಮಾವತಿ ಅವರ ನಿಧನ

೧೯೮೬ ಕಲಾ ಮತ್ತು ಸಾಂಸ್ಕೃತಿಕ ವಿಶ್ವ ಅಕಾಡೆಮಿ, ಸ್ಯಾನ್‌ಫ್ರಾನ್ಸಿಸ್ಕೋ ವತಿಯಿಂದ ಗೌರವ ಡಾಕ್ಟರೇಟ್ ಪ್ರಶಸ್ತಿ

೧೯೮೮ ಪಂಪ ಪ್ರಶಸ್ತಿ

೧೯೯೨ 'ಕರ್ನಾಟಕ ರತ್ನ' ಪ್ರಶಸ್ತಿ (ಕರ್ನಾಟಕ ಸರ್ಕಾರದ ವತಿಯಿಂದ)

೧೯೯೪ ದೈವಾಧೀನ – ನವೆಂಬರ್ ೧೦

---

ಈ ಪ್ರಬಂಧವನ್ನು ಸಿದ್ಧಪಡಿಸುವುದರಲ್ಲಿ ನನ್ನ ಆಪ್ತಮಿತ್ರರೂ, ಶ್ರೇಷ್ಠ ವಿದ್ವಾಂಸರೂ ಆದ ಶ್ರೀ ಜಿ.ಎಚ್. ನಾಯಕರು ನೀಡಿರುವ ನೆರವನ್ನು ಕೃತಜ್ಞತೆಯಿಂದ ನೆನೆಯುತ್ತೇನೆ. ಮತ್ತು ಈ ಪ್ರಬಂಧದ ಕರಡನ್ನು ಮತ್ತೆ ಮತ್ತೆ ಶ್ರದ್ಧೆಯಿಂದ ತಿದ್ದಿ, ಇದು ಆದಷ್ಟೂ ತಪ್ಪಿಲ್ಲದಂತೆ ನೋಡಿಕೊಂಡಿರುವ ಮಿತ್ರರೂ ಪ್ರಸಾರಾಂಗದ ಉಪ ನಿರ್ದೇಶಕರೂ ಆದ ಶ್ರೀ ಬಿ.ವಿ. ಶ್ರೀಧರ ಅವರಿಗೂ ವಂದನೆಗಳನ್ನು ಸಲ್ಲಿಸುತ್ತೇನೆ.

●

# ಭಾಗ ೧

## ಜೀವನ ಮತ್ತು ವಿಚಾರ ಸಾಹಿತ್ಯ

'ಓ ನನ್ನ ಚೇತನ, ಆಗು ನೀ ಅನಿಕೇತನ !'

# ಶತಮಾನದ ಶಿಖರ : ಕುವೆಂಪು

## ಜಿ.ಎಸ್. ಶಿವರುದ್ರಪ್ಪ, ಕರ್ನಾಟಕ

ಶ್ರೀ ಕುವೆಂಪು ಶತಮಾನೋತ್ಸವದ ಸಂದರ್ಭದಲ್ಲಿ ಅವರನ್ನು ನೆನೆಯುವುದು ಎಂದರೆ, ಮನುಕುಲದ ಚರಿತ್ರೆಯಲ್ಲಿ ಮಹತ್ವದ ಕಾಲವಾದ ಇಪ್ಪತ್ತನೆಯ ಶತಮಾನವನ್ನು ತಮ್ಮ ಕೃತಿಗಳ ಮೂಲಕ ಅದರ ಸಮಸ್ತ ಪಲ್ಲಟಗಳ ಹಾಗೂ ತಲ್ಲಣಗಳ ಸಹಿತ ಗ್ರಹಿಸಿ ನಿರೂಪಿಸಿದ ಪ್ರತಿಭಾವಿಶೇಷವೊಂದನ್ನು ನೆನೆಯುವುದು ಎಂದು ಅರ್ಥ. ಬೇರೊಂದು ಮಾತಿನಲ್ಲಿ ಹೇಳುವುದಾದರೆ ಸಮಕಾಲೀನ ಭಾರತೀಯ ಸಾಹಿತ್ಯವು ಕನ್ನಡದ ಸಂದರ್ಭದಲ್ಲಿ ಪಡೆದುಕೊಂಡ ಸೃಜನಶೀಲತೆ ಮತ್ತು ವೈಚಾರಿಕತೆಗಳ ಉತ್ಕರ್ಷದ ಪ್ರತಿನಿಧಿಯಂತೆ ಇದ್ದಾರೆ ಕುವೆಂಪು.

'ಕಾಡಿನ ಕೊಳಲಿದು, ಕಾಡ ಕವಿಯು ನಾ, ನಾಡಿನ ಜನರೊಲಿದಾಲಿಪುದು' ಎಂಬ ಬಿನ್ನಹದೊಂದಿಗೆ, ಕಳೆದ ಶತಮಾನದ ಮೂರನೆಯ ದಶಕದಲ್ಲಿ ಕನ್ನಡ ನವೋದಯವನ್ನು ಪ್ರವೇಶಿಸಿದ ಈ 'ಕಾಡಿನ ಕವಿ' ಅನಂತರ ನಾಡಿನ ಕವಿಯಾಗಿ, ಸಾಹಿತ್ಯದ ವಿವಿಧ ಪ್ರಕಾರಗಳನ್ನು ಶ್ರೀಮಂತಗೊಳಿಸುತ್ತ ಜಾಗತಿಕ ಪ್ರಜ್ಞೆಯ ವಿಸ್ತಾರದಲ್ಲಿ ಕನ್ನಡವನ್ನು ಬೆಳೆಯಿಸುತ್ತ ಬಂದ ಸಂಗತಿ ಈಗಾಗಲೆ ಕನ್ನಡ ಸಾಹಿತ್ಯ ಚರಿತ್ರೆಯ ಒಂದು ಭಾಗವಾಗಿದೆ. ಅರ್ಧ ಶತಮಾನಕ್ಕೂ ಮೀರಿದ ಕಾಲಮಾನದಲ್ಲಿ ಸಾಹಿತ್ಯ-ಶಿಕ್ಷಣ- ಸಂಸ್ಕೃತಿಗೆ ಮಹತ್ವದ ಕೊಡುಗೆಯನ್ನು ಕೊಟ್ಟ ಈ ಮಹಾನ್ ಲೇಖಕನ ಸಾಹಿತ್ಯ ನಿರ್ಮಿತಿಯ ಹರಹು, ಆಳ ಮತ್ತು ವೈವಿಧ್ಯಗಳು ಹಾಗೂ ಉದ್ದಕ್ಕೂ ಕಾಯ್ದುಕೊಂಡು ಬಂದ ಒಂದು ನಿಶ್ಚಿತವಾದ ಎತ್ತರ, ಅವರು ಹುಟ್ಟಿ-ಬೆಳೆದು- ಬದುಕಿದ ಮಲೆನಾಡಿನ ಪರ್ವತಾರಣ್ಯ ಪ್ರಪಂಚದಂತೆ ಪ್ರವೇಶ ಮಾಡಿದವರನ್ನು ದಂಗುಬಡಿಸುತ್ತದೆ. ಅವರ ಸಾಹಿತ್ಯದ ವಿಭಿನ್ನ ನೆಲೆಗಳು, ಅದರ ವೈರುಧ್ಯಗಳು, ಅಸ್ತಿತ್ವದ ಅನೇಕ ಸ್ತರಗಳಿಗೆ ಏರುವ-ಇಳಿಯುವ ಅನ್ವೇಷಣಾ ಸಾಮರ್ಥ್ಯ, ವಿವಿಧ ಜ್ಞಾನ ಶಾಖೆಗಳ ಗಾಢವಾದ ತಿಳಿವಿನಿಂದ ಅವರು ಪಡೆದುಕೊಂಡ ವ್ಯುತ್ಪತ್ತಿ ವಿಶೇಷಗಳು - ಯಾವುದೇ ಸಿದ್ಧ ಸಾಹಿತ್ಯ ವಿಮರ್ಶೆಯ ಮಾನದಂಡಗಳಿಗೆ ಅಳವಡುವುದು ದುಸ್ತರವಾಗಿದೆ. ಅಷ್ಟೇ ಅಲ್ಲ, ಅವರ ಸಾಹಿತ್ಯ ಸಾಧನೆಗಳಾಚೆಗೂ ನಿಂತು ಅವರು ಪಡೆದುಕೊಳ್ಳುವ ಸಾಂಸ್ಕೃತಿಕ ಮಹತ್ವ ವಿಶೇಷ ರೀತಿಯದಾಗಿದೆ.

ಕುವೆಂಪು ಶತಮಾನೋತ್ಸವದ ಸಂದರ್ಭದ ನಮ್ಮ ಸಮಕಾಲೀನ ಜಗತ್ತು ಹಿಂದಿಗಿಂತ ಎಷ್ಟೋ ಮುಂದುವರಿದಿರುವುದು ನಿಜವಾದರೂ, ಅನೇಕ ಬಗೆಯ ತಲ್ಲಣಗಳಿಂದ ಒಂದು ರೀತಿಯಲ್ಲಿ ಅಸ್ವಸ್ಥವಾಗಿದೆ. ಈ ಅಸ್ವಸ್ಥತೆಗೆ ಕಾರಣವನ್ನು 'ಹಿಂಸೆ'

ಎಂದು ಗುರುತಿಸಬಹುದು. ಈ ಹಿಂಸೆ ಅನೇಕ ಮುಖಿಯಾದದ್ದು: ಅಭಿವೃದ್ಧಿಶೀಲತೆಯೊಂದಿಗೆ ತಳುಕು ಹಾಕಿಕೊಂಡಿರುವ ಪರಿಸರನಾಶದ ತಲ್ಲಣಗಳ ಹಿಂಸೆ; ರಾಷ್ಟ್ರವ್ಯಾಪಿಯಾದ ಭ್ರಷ್ಟಾಚಾರದ ಹಿಂಸೆ; ಬಹುಕಾಲದಿಂದ ಹೇಗೋ ಕಾಪಾಡಿಕೊಂಡು ಬಂದ ಕೋಮು ಸಾಮರಸ್ಯದ ಆಕೃತಿಗಳು ರಾಜಕಾರಣ ಮತ್ತು ಧರ್ಮಗಳ ಅಪವಿತ್ರ ಮೈತ್ರಿಯಿಂದ ಚೂರು ಚೂರಾಗುತ್ತಿರುವುದನ್ನು ಅಸಹಾಯಕವಾಗಿ ನೋಡಬೇಕಾದ ಹಿಂಸೆ; ಅದರ ವಿಸ್ತರಣೆಯಾದ ಭಯೋತ್ಪಾದಕತೆಯ ಹಿಂಸೆ; ವಿಜ್ಞಾನ-ತಂತ್ರಜ್ಞಾನಗಳ ಹೊಸ ಆವಿಷ್ಕಾರಗಳ ನಡುವೆಯೂ ಮುಂದುವರಿಯುತ್ತಿರುವ ಎಷ್ಟೋ ಜಡ ಸಂಪ್ರದಾಯಗಳ ಮತ್ತು ಹೊಸದಾಗಿ ಹುಟ್ಟುತ್ತಿರುವ ಮೂಢನಂಬಿಕೆಗಳ ಪರಿಣಾಮವಾದ ಅವೈಚಾರಿಕತೆಯ ಹಿಂಸೆ; ನವ ವಸಾಹತುಶಾಹೀ ರೂಪದ ವಾಣಿಜ್ಯ ಸಂಸ್ಕೃತಿಯ ಆಕ್ರಮಣಗಳ ಹಿಂಸೆ - ಇಂಥವುಗಳನ್ನು ಎದುರಿಸಲು ಮತ್ತು ದಾಟಲು ಅಗತ್ಯವಾದ ವೈಚಾರಿಕತೆಯನ್ನು ಕುವೆಂಪು ಎತ್ತಿ ಹಿಡಿದಿದ್ದಾರೆ ಎನ್ನುವುದನ್ನು ನೆನೆದರೆ, ಕುವೆಂಪು ಅವರು ಈ ಹೊತ್ತೂ ಎಷ್ಟೊಂದು ಪ್ರಸ್ತುತರಾಗುತ್ತಾರೆ ಎಂಬುದು ಆಶ್ಚರ್ಯದ ಸಂಗತಿಯಾಗಿದೆ.

ಕುವೆಂಪು ಹುಟ್ಟಿ ಬೆಳೆದ ಕುಪ್ಪಳಿಯನ್ನೊಳಗೊಳ್ಳುವ ಸಹ್ಯಾದ್ರಿಯ ಅರಣ್ಯ ವೈಭವ, ಇಂದು ಕೇವಲ ಅವರ ಸಾಹಿತ್ಯದೊಳಗೆ ಉಳಿದುಕೊಳ್ಳುವಂತಾಗಿರುವ, ಪರಿಸರ ನಾಶದ ತಲ್ಲಣಗಳ ನಡುವೆ ನಿಂತು ನೋಡಿದರೂ, ಕುವೆಂಪು ಅವರು ತಮ್ಮ ಬದುಕಿನುದ್ದಕ್ಕೂ ಈ ನಿಸರ್ಗವನ್ನು ಅತ್ಯಂತ ಉತ್ಕಟವಾಗಿ ಪ್ರೀತಿಸಿದ, ಆರಾಧಿಸಿದ, ಕೀರ್ತಿಸಿದ ಕ್ರಮ, ಅವರನ್ನು ಅವರ ಸಮಕಾಲೀನ ಪ್ರಮುಖ ಬರಹಗಾರರಿಂದ ಬೇರ್ಪಡಿಸುವ ಮುಖ್ಯ ಲಕ್ಷಣವಾಗಿದೆ. ಯಾಕೆಂದರೆ ಅವರಾರೂ ಕುವೆಂಪು ಅವರಂತೆ ಇಂತಹ ಮಲೆನಾಡಿನ ದುರ್ಗಮ ಅರಣ್ಯ ಶ್ರೇಣಿಯ ದಟ್ಟವಾದ ಅನುಭವಗಳಲ್ಲಿ ಬೇರೂರಿ ಬೆಳೆದವರಲ್ಲ; ಮತ್ತು ರಮ್ಯತೆಯಿಂದ ಮೊದಲುಗೊಂಡು ಭವ್ಯತೆಯವರೆಗಿನ ಅರಣ್ಯಾನುಭವಗಳನ್ನು ಕುವೆಂಪು ಅವರಂತೆ ಗ್ರಹಿಸಿ ಅಭಿವ್ಯಕ್ತಿಸಿದವರೂ ಅಲ್ಲ. ಇದರಿಂದ ಕುವೆಂಪು ಅವರ ಎಲ್ಲ ಕೃತಿಗಳ - ಕವಿತೆ, ಕತೆ, ನಾಟಕ, ಕಾದಂಬರಿ, ಮಹಾಕಾವ್ಯ - ಮೂಲದ್ರವ್ಯದಂತೆ ಈ ಅರಣ್ಯಾನುಭವ ಸರ್ವವ್ಯಾಪಿಯಾಗಿದೆ. ಅವರ ಬಹುತೇಕ ಎಲ್ಲ ಪಾತ್ರಗಳೂ ಈ ಅರಣ್ಯ ಸಂಸ್ಕೃತಿಯ ಹಲವು ಹಂತಗಳನ್ನು ಪ್ರತಿನಿಧಿಸುತ್ತವೆ. ಅವರ ವ್ಯಕ್ತಿತ್ವದ ಬೇರು-ಬುಡದಂತೆ ಅವರನ್ನು ವ್ಯಾಪಿಸಿದ ಈ ನಿಸರ್ಗ ಪ್ರೀತಿ, ಕೇವಲ ಸೌಂದರ್ಯನಿಷ್ಠವಾದುದಲ್ಲ; ಅದನ್ನೂ ಮೀರಿದ ಒಂದು ಅಧ್ಯಾತ್ಮಿಕ ಅನ್ವೇಷಣೆಯ ಹಾಗೂ ಸಾಕ್ಷಾತ್ಕಾರದ ಅನುಭವ ಕೂಡ. ನಿಸರ್ಗ ಕೇವಲ ನಮ್ಮ ಉಪಭೋಗದ ವಸ್ತುವಲ್ಲ; ನಮ್ಮ ವ್ಯಕ್ತಿತ್ವದ ಒಂದು ವಿಸ್ತರಣೆ ಅಥವಾ ನಾವು ಅದರ ಚೈತನ್ಯದ ಒಂದು ಅಂಶ - ಎಂಬ ನಿಲುವನ್ನು ಪ್ರತಿಪಾದಿಸುವ ಕುವೆಂಪು ಅವರ ಅದಮ್ಯವಾದ ನಿಸರ್ಗ ಪ್ರೀತಿ, ಪರಿಸರನಾಶದ ತಲ್ಲಣದ ಈ ದಿನಗಳಲ್ಲಿ ಒಂದು ಬಹು ದೊಡ್ಡ ಮೌಲ್ಯ ಎಂಬುದನ್ನು ನಾವಿನ್ನೂ ತಿಳಿದುಕೊಳ್ಳಬೇಕಾಗಿದೆ.

ಕನ್ನಡ ನವೋದಯ ಸಾಹಿತ್ಯ ಸಂದರ್ಭದಲ್ಲಿ ಬಹುತೇಕ ಮೇಲುವರ್ಗದಿಂದ ಬಂದ ಬರಹಗಾರರ ನಡುವೆ, ನಗರ ನಾಗರಿಕ ಪರಿಸರದಿಂದ ದೂರವಾದ ಮಲೆನಾಡಿನ ಕಾಡಿನ ನಡುವಣ, ಅಪ್ರತಿಷ್ಠಿತ ಜನಸಮುದಾಯದ, ಅದರಲ್ಲೂ ಶೂದ್ರ ವರ್ಗದಿಂದ ಬಂದ ಮೊದಲ ಮಹತ್ವದ ಲೇಖಕರಾಗಿದ್ದಾರೆ ಕುವೆಂಪು - ಎನ್ನುವುದು ಅವರ ಸಾಹಿತ್ಯವನ್ನು ಅರ್ಥಮಾಡಿಕೊಳ್ಳಲು ಅಗತ್ಯವಾದ ಹಲವು ಒಳನೋಟಗಳನ್ನು ಒದಗಿಸುತ್ತದೆ. ಇಂಥ ಸಾಮಾಜಿಕ ಸ್ತರದಿಂದ ಬಂದ ಕುವೆಂಪು ಸಿದ್ಧ ಸಂಪ್ರದಾಯದ ಯಾವುದೇ ಉಪಾಧಿಗಳಿಗೂ ಬದ್ಧರಾಗದೆ, ಒಂದು ಮುಕ್ತವೂ ಸ್ವತಂತ್ರವೂ ಆದ ನಿಲುವನ್ನು ರೂಪಿಸಿಕೊಳ್ಳಲು ಸಾಧ್ಯವಾಯಿತು. ಹುಟ್ಟಿನಿಂದ ಶೂದ್ರರೂ, ಹಿಂದಿನ ಅಥವಾ ಇಂದಿನ, ಅಂತರಂಗದ ಅಥವಾ ಬಹಿರಂಗದ ಸಾಂಪ್ರದಾಯಿಕ ನಿಯಂತ್ರಣಗಳಿಗೆ ಕಟ್ಟುಬೀಳದ ಒಂದು 'ನಿರಂಕುಶಮತಿ'ಯ ನಿಲುವನ್ನು ರೂಢಿಸಿಕೊಂಡ ಕುವೆಂಪು ಈ ದೇಶದ ಸಾಮಾಜಿಕ ವಾಸ್ತವಗಳನ್ನು ಉಳಿದೆಲ್ಲರಿಗಿಂತ ಹೆಚ್ಚು ನಿಖರವಾಗಿ ಗುರುತಿಸಲು ಸಾಧ್ಯವಾಯಿತು. ಇಂಗ್ಲಿಷ್ ಶಿಕ್ಷಣ, ಪ್ರಾಚ್ಯ-ಪಾಶ್ಚಾತ್ಯ ತತ್ವಜ್ಞಾನಗಳ ತಲಸ್ಪರ್ಶಿಯಾದ ತಿಳಿವಳಿಕೆ, ಆಧುನಿಕ ವಿಜ್ಞಾನ ಮತ್ತು ಜಾಗತಿಕ ಸಮಾಜವಾದೀ ಚಿಂತನೆಗಳೊಂದಿಗೆ ನಡೆಯಿಸಿದ ಸಂವಾದ, ಶ್ರೀ ರಾಮಕೃಷ್ಣ- ವಿವೇಕಾನಂದ - ಗಾಂಧಿ - ಅರವಿಂದರು ಮತ್ತು ಲೋಹಿಯಾ, ಇಂಥ ವ್ಯಕ್ತಿತ್ವಗಳ ಚಿಂತನೆಯ ಪ್ರಭಾವ - ಇತ್ಯಾದಿಗಳಿಂದ ರೂಪುಗೊಂಡ ಕುವೆಂಪು ಅವರ ವೈಚಾರಿಕತೆಯು, ಮನುಷ್ಯನ ಚೈತನ್ಯದ ಚಲನ ಶೀಲತೆಯನ್ನು ಸ್ಥಗಿತಗೊಳಿಸುವ ಎಲ್ಲ ವಿಕೃತಿಗಳನ್ನೂ ವಿರೋಧಿಸುತ್ತ ಮನುಷ್ಯರೆಲ್ಲರ ಸಮಾನತೆಯ ಪರವಾದ ಕಾಳಜಿಗಳನ್ನು ಎತ್ತಿ ಹಿಡಿಯುವ ಸ್ವರೂಪದ್ದಾಗಿದೆ. ಒಂದು ರೀತಿಯಲ್ಲಿ ಇದು ಕುವೆಂಪುಸಾಹಿತ್ಯದ ಮುಖ್ಯಸತ್ವವಾದ ಅಧ್ಯಾತ್ಮದ ಲಕ್ಷಣವೂ ಹೌದು. ಕುವೆಂಪು ಅವರ ದೃಷ್ಟಿಯಲ್ಲಿ ಅಧ್ಯಾತ್ಮ ಎಂದರೆ, ಎಲ್ಲ ಜಾತಿಮತ ಪಂಥಗಳನ್ನೂ ನಿರ್ದಾಕ್ಷಿಣ್ಯವಾಗಿ ನಿರಾಕರಿಸುತ್ತ, ಜೀವ ಜೀವರ ನಡುವೆ, ಆತ್ಮ ಆತ್ಮಗಳ ಹಾಗೂ ಜಡಚೈತನ್ಯಗಳ ನಡುವೆ ಯಾವುದೇ ತರತಮಗಳನ್ನು ಕಲ್ಪಿಸದ ಒಂದು ಏಕತೆಯ ಅನುಭವ. ಕುವೆಂಪು ಪ್ರತಿಪಾದಿಸುವ ಈ ಏಕತೆ ಅಥವಾ 'ಅದ್ವೈತ', ಏಕಕಾಲಕ್ಕೆ ಅಧ್ಯಾತ್ಮಿಕವಾದದ್ದೂ ಹೌದು, ಸಾಮಾಜಿಕವಾದದ್ದೂ ಹೌದು. ಇದನ್ನು ಹೊಸ ಪರಿಭಾಷೆಯಲ್ಲಿ ವ್ಯಾಖ್ಯಾನಿಸಿದ ಮಹಾತ್ಮಾಗಾಂಧಿಯವರ 'ಸರ್ವೋದಯ'ವನ್ನು ಕುವೆಂಪು ಅವರು ಒಂದು 'ಯುಗಮಂತ್ರ'ವೆಂದು ಸ್ವೀಕರಿಸುತ್ತಾರೆ. ಈ ಕಾರಣದಿಂದಲೇ ಕುವೆಂಪು ಸರ್ವೋದಯ ವಿರೋಧಿಯಾದ ವರ್ಣವ್ಯವಸ್ಥೆ, ಜಾತಿಪದ್ಧತಿ, ಮೂಢನಂಬಿಕೆ, ಸಾಂಸ್ಥಿಕ ಧರ್ಮದ ಸಂಕೇತವಾದ ದೇವಸ್ಥಾನ, ಧರ್ಮದ ಹೆಸರಿನಲ್ಲಿ ಸಾಮಾನ್ಯ ಜನರನ್ನು ಶೋಷಣೆಗೆ ಗುರಿಪಡಿಸುವ ಪುರೋಹಿತಶಾಹಿ - ಇತ್ಯಾದಿಗಳನ್ನು ತಮ್ಮ ಸಮಕಾಲೀನರಾದ ಇತರ ಪ್ರಮುಖ ಬರಹಗಾರರಿಗಿಂತ ಭಿನ್ನವಾಗಿ ಮತ್ತು ಉಗ್ರವಾಗಿ ಚಿಕಿತ್ಸೆಗೆ ಮತ್ತು ನಿರಾಕರಣೆಗೆ ಗುರಿಪಡಿಸುತ್ತಾರೆ. ಒಂದು ಕಾಲಕ್ಕೆ ಮನುಷ್ಯರ ಆಧ್ಯಾತ್ಮಿಕ ಅವಶ್ಯಕತೆಗಳಾಗಿದ್ದ ಹಾಗೂ ಸಮುದಾಯದ ಬದುಕನ್ನು ಹಿಡಿದು ಕೂಡಿಸುತ್ತಿದ್ದ ಧರ್ಮ

ಮತ್ತು ದೇವಾಲಯದಂಥ ಸಂಸ್ಥೆಗಳು, ಇಂದಿನ ಕೋಮು-ರಾಜಕಾರಣದ ಸಮೂಹ ಸನ್ನಿಯಲ್ಲಿ ಸ್ಫೋಟಕ ಸಾಮಗ್ರಿಗಳಂತೆ ಬಳಕೆಯಾಗುತ್ತಿರುವ ಹೊತ್ತಿನಲ್ಲಿ, 'ಗುಡಿ ಚರ್ಚು ಮಸಜೀದಿಗಳ ಬಿಟ್ಟು ಬನ್ನಿ', 'ನೂರು ದೇವರನೆಲ್ಲ ನೂಕಾಚೆ ದೂರ, ಭಾರತಾಂಬೆಯ ದೇವಿ ನಮಗಿಂದು ಪೂಜಿಸುವ ಬಾರ', 'ಆ ಮತದ ಈ ಮತದ ಹಳೆಮತದ ಸಹವಾಸ ಸಾಕಿನ್ನು, ಓ ಬನ್ನಿ ಸೋದರರೆ ಮನುಜ ಮತಕೆ' - ಎಂದು ಆರು ದಶಕಗಳಿಗೂ ಹಿಂದೆ ಕುವೆಂಪು ಕೊಟ್ಟ ಕರೆ ಇಂದು ಎಷ್ಟೊಂದು ಪ್ರಸ್ತುತವಾಗಿದೆ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಶೂದ್ರ ಸಮುದಾಯಕ್ಕೆ ಸೇರಿದ ಕುವೆಂಪು, ಈ ವರ್ಗಕ್ಕೆ ಯಾವತ್ತಿನಿಂದಲೋ ನಿರಾಕೃತವಾದ ಹಿಂದೂ ಧಾರ್ಮಿಕ ಅಧ್ಯಾತ್ಮಿಕ ಪರಂಪರೆಯನ್ನು ಸ್ವಂತ ಅಧ್ಯಯನದ ಮೂಲಕ ಕರಗತ ಮಾಡಿಕೊಂಡು ಆ ಪರಂಪರೆ ಮತ್ತು ಸಂಸ್ಕೃತಿಯನ್ನು ತಮ್ಮ ಪ್ರತಿಭೆ ಮತ್ತು ವೈಚಾರಿಕತೆಗಳಿಂದ, ಈ ಕಾಲಮಾನದ ಅಗತ್ಯಕ್ಕೆ ತಕ್ಕಹಾಗೆ ತಮ್ಮ ಸೃಜನ ಹಾಗೂ ಸೃಜನೇತರ ಸಾಹಿತ್ಯ ಕೃತಿಗಳಲ್ಲಿ ಪುನರ್ ವ್ಯಾಖ್ಯಾನ ಮತ್ತು ಚಿಕಿತ್ಸೆಗೆ ಒಳಗುಪಡಿಸಿರುವುದನ್ನು ನೋಡಿದರೆ, ಈ ದೇಶದ ಚರಿತ್ರೆ ಹಾಗೂ ಪರಂಪರೆಯನ್ನು ಅತ್ಯಂತ ಆರೋಗ್ಯಪೂರ್ಣವಾದ ಚರ್ಚೆಗೆ ಗುರಿಪಡಿಸಿದ ಸಾಹಿತಿಗಳಲ್ಲಿ ಕುವೆಂಪು ಮುಖ್ಯರಾಗುತ್ತಾರೆ. ಆದರೆ ಈ ಚರ್ಚೆಯ ಸಂದರ್ಭದಲ್ಲಿ ಕುವೆಂಪು ತಾಳುವ ನಿಲುವು ಬಹುತೇಕ ಸುಧಾರಣಾವಾದಿಯದಾಗಿದೆಯೇ ಹೊರತು ಅದು, ಬೇರೊಂದು ಪರ್ಯಾಯ ಸಂಸ್ಕೃತಿಯೊಂದನ್ನು ನೆಲೆಗೊಳಿಸುವಷ್ಟು ಶಕ್ತವಾಗಿಲ್ಲ ಎಂಬ ವಿಮರ್ಶನೋಕ್ತಿಗಳನ್ನು ಒಪ್ಪಿಕೊಂಡರೂ, ಕುವೆಂಪು ತಮ್ಮ ಸಮಕಾಲೀನತೆಯಲ್ಲಿ ಸಂಭವಿಸುತ್ತಿದ್ದ ಯುಗ ಪರಿವರ್ತನಕಾರಿಯಾದ ವಿದ್ಯಮಾನಗಳಿಗೆ ಸ್ಪಂದಿಸುತ್ತ, ಈ ನವಕ್ರಾಂತಿಗೆ ಈ ದೇಶದ ಯುವಮನಸ್ಸುಗಳನ್ನು ಸಜ್ಜುಗೊಳಿಸಿದ ಕ್ರಮವು ಗಮನಿಸತಕ್ಕದ್ದಾಗಿದೆ. ಹಾಗೆ ನೋಡಿದರೆ ಕುವೆಂಪು ಅವರ ಸಾಹಿತ್ಯವೆಲ್ಲವೂ, ಒಂದು ರೀತಿಯಲ್ಲಿ ಈ ದೇಶದ ಸ್ವಾತಂತ್ರ್ಯಪೂರ್ವದ ಆಶೋತ್ತರಗಳ ಅಭಿವ್ಯಕ್ತಿಯೂ, ಸ್ವಾತಂತ್ರ್ಯೋತ್ತರ ಭಾರತದ ವಿಮರ್ಶೆಯೂ ಆಗಿದೆ. ಕುವೆಂಪು ನೇರವಾಗಿ ಸ್ವಾತಂತ್ರ್ಯ ಚಳುವಳಿಯೊಳಗೆ ಧುಮುಕದಿದ್ದರೂ, ಆ ಕಾಲದಲ್ಲಿ ತಮ್ಮ ಅನೇಕ ಕವಿತೆಗಳ ಮೂಲಕ ಈ ಚಳುವಳಿಗೆ ಕೊಟ್ಟ ಸ್ಫೂರ್ತಿ ಕಡಮೆಯದೇನಲ್ಲ. ನಿಜವಾದ ರಾಷ್ಟ್ರೀಯ ಪ್ರಜ್ಞೆಯ ಎಚ್ಚರಕ್ಕೆ ಅಗತ್ಯವಾದ ಪರಂಪರೆಯ ಹಿನ್ನೆಲೆಯನ್ನೂ, ಸಾಂಸ್ಕೃತಿಕ ಸ್ಮರಣೆಗಳನ್ನೂ ಮತ್ತು ತಕ್ಕ ವೈಚಾರಿಕತೆಯನ್ನೂ ತಮ್ಮ ಕವಿತೆಗಳ ಮೂಲಕ ಕಟ್ಟಿಕೊಟ್ಟವರು ಕುವೆಂಪು. ಭಾರತವು ಸ್ವತಂತ್ರವಾದಾಗ ಅವರು 'ಸ್ವಾತಂತ್ರ್ಯೋದಯ ಮಹಾಪ್ರಗಾಥದ ಮೂಲಕ ಅಭಿವ್ಯಕ್ತಿಸಿದ ಸಂಭ್ರಮವನ್ನೂ, ಭಾರತ ಗಣರಾಜ್ಯವಾದಾಗ 'ಹಿಂದಾಯಿತು ಓರ್ರೋರ್ವರ ಗರ್ವದ ಕಾಲ, ಇದು ಸರ್ವರ ಕಾಲ' ಎಂದು ಶ್ರೀಸಾಮಾನ್ಯನ ಪರವಾಗಿ ಸರ್ವೋದಯವನ್ನು ಕೀರ್ತಿಸಿದ ಉತ್ಸಾಹವನ್ನೂ ನೆನೆಯಬಹುದು. ಸ್ವಾತಂತ್ರ್ಯೋತ್ತರ

ಭಾರತದ ಎಷ್ಟೋ ವಿದ್ಯಮಾನಗಳಿಗೆ ಕುವೆಂಪು ತಮ್ಮ ಕವಿತೆಗಳ ಮೂಲಮಾನದಲ್ಲಿ ಸ್ಪಂದಿಸಿರುವರಾದರೂ, ೧೯೭೪ರಂದು ಬೆಂಗಳೂರು ವಿಶ್ವವಿದ್ಯಾಲಯದ ಘಟಿಕೋತ್ಸವದ ಸಂದರ್ಭದಲ್ಲಿ ಅವರು ಮಾಡಿದ 'ವಿಚಾರ ಕ್ರಾಂತಿಗೆ ಆಹ್ವಾನ' ಎಂಬ ಭಾಷಣ ಸಮಕಾಲೀನ ಭಾರತದ ರಾಜಕಾರಣಕ್ಕೆ ಒಂದು ಎಚ್ಚರಿಕೆಯ ಗಂಟೆಯಾಗಿದೆ : ''ಪ್ರಜಾಸತ್ತೆಯನ್ನು ರಕ್ಷಿಸುವ ಇಚ್ಛೆ ನಿಮಗಿದ್ದರೆ, ಇಂದಿನ ರೀತಿಯ ಧನಾಶ್ರಿತ ಚುನಾವಣೆಯ ಪದ್ಧತಿಯನ್ನೆ ಬದಲಾಯಿಸಿ ಅದನ್ನು ಗುಣಾಶ್ರಿತವನ್ನಾಗಿ ಪರಿವರ್ತಿಸುವ ಕರ್ತವ್ಯ ನಿಮ್ಮ ಹೆಗಲ ಮೇಲಿದೆ''... ''ಇನ್ನು ಮುಂದಾದರೂ ನಾವು ವೈಜ್ಞಾನಿಕ ದೃಷ್ಟಿಯ ಮತ್ತು ವೈಚಾರಿಕ ಬುದ್ಧಿಯ ನೆರವಿನಿಂದ ನಮ್ಮ ನಾಡಿನ ರಾಜಕೀಯ ಸಾಮಾಜಿಕ ಮತ್ತು ಮತ ಧಾರ್ಮಿಕ ರಂಗಗಳನ್ನು ಪರಿಶೋಧಿಸದಿದ್ದರೆ ನಮಗೆ ಕೇಡು ತಪ್ಪದು.''

ಕರ್ನಾಟಕವನ್ನು ಭಾರತ ಜನನಿಯ ತನುಜಾತೆ ಎಂದು ವರ್ಣಿಸುವ ಕುವೆಂಪು, ಕನ್ನಡ ಪರವಾದ ಕಾಳಜಿಗಳನ್ನು ಪ್ರಕಟಿಸುವ ಕವಿತೆಗಳನ್ನು ಉಳಿದೆಲ್ಲರಿಗಿಂತ ಹೆಚ್ಚು ಸಂಖ್ಯೆಯಲ್ಲಿ ಬರೆದಿದ್ದಾರೆ. ಅಖಂಡ ಕರ್ನಾಟಕದ ಕನಸನ್ನು ಕಾಣುತ್ತ 'ಎಲ್ಲಾದರು ಇರು ಎಂತಾದರು ಇರು, ಎಂದೆಂದಿಗು ನೀ ಕನ್ನಡವಾಗಿರು' ಎಂಬ ನಿರ್ದೇಶನವನ್ನು ನೀಡಿದವರು ಕುವೆಂಪು. ಇಂಗ್ಲಿಷಿನ ಮುಖಾಂತರವೆ ಕನ್ನಡ ಸಾಹಿತ್ಯವನ್ನು ಪ್ರವೇಶಿಸಿದ ಕುವೆಂಪು, ಈ ದೇಶದಲ್ಲಿ ಜಾತಿಪದ್ಧತಿ, ಇಂಗ್ಲಿಷ್ ಭಾಷೆ ಮತ್ತು ಆಸ್ತಿವ್ಯವಸ್ಥೆ - ಈ ಮೂರೂ ಹೇಗೆ ಭಾರತದೊಳಗಿನ ಅಸಮಾನತೆ ಹಾಗೂ ಶೋಷಣೆಗಳಿಗೆ ಕಾರಣವಾಗಿವೆ ಎಂಬುದನ್ನು ನಿಚ್ಚಳವಾಗಿ ಬಲ್ಲ ಕುವೆಂಪು, ಮೊದಲಿನಿಂದಲೂ ಕನ್ನಡ ಪರವಾದ ಹೋರಾಟಗಳಿಗೆ ಪ್ರೇರಣೆ ಮತ್ತು ಸ್ಫೂರ್ತಿಯಾಗಿದ್ದಾರೆ. ಕರ್ನಾಟಕದಲ್ಲಿ ಕನ್ನಡವೇ ಸಾರ್ವಭೌಮ ಸ್ಥಾನವನ್ನು ಪಡೆದುಕೊಳ್ಳಬೇಕು ಎನ್ನುವುದು ಅವರ ಬಹುಮುಖ್ಯವಾದ ಆಶಯ. ಅವರ ಈ ಕನ್ನಡ ಪ್ರೇಮ, ಕೇವಲ ಕನ್ನಡದ ಮೇಲಿನ ಅಭಿಮಾನದಿಂದ ಹುಟ್ಟಿಕೊಂಡದ್ದಲ್ಲ; ಅದು ಶ್ರೀಸಾಮಾನ್ಯನ ಅಭ್ಯುದಯಪರವಾದ ಕಾಳಜಿಗಳಿಂದ ಹುಟ್ಟಿಕೊಂಡದ್ದು. ಯಾಕೆಂದರೆ ಇಂಗ್ಲಿಷ್ ಭಾಷೆ ಮತ್ತು ಆ ಮಾಧ್ಯಮದ ಶಿಕ್ಷಣದ ಹಿಡಿತಗಳು ನಮ್ಮ ಸಾಮಾಜಿಕ ಸಂದರ್ಭದಲ್ಲಿ ಉಂಟುಮಾಡುವ ತರತಮಗಳು, ಪ್ರಜಾಪ್ರಭುತ್ವ ವಿರೋಧಿಯಾದ ಅಸಮಾನತೆಯನ್ನು ಸುಭದ್ರವಾಗಿ ನೆಲೆಗೊಳಿಸುವ ತಂತ್ರಗಳೆ ಆಗುತ್ತವೆ ಎಂಬುದನ್ನು ಕುವೆಂಪು ಬಲ್ಲವರಾಗಿದ್ದರು. ಆದರೆ ಏನಾಗಬಾರದೆಂದು ಕುವೆಂಪು ಆಶಿಸಿದ್ದರೋ, ಅದೇ ಆಗುವಂತೆ ತೋರುತ್ತಿದೆ. ಜಾಗತೀಕರಣದ ಹೆಸರಿನಲ್ಲಿ ಮತ್ತೆ ಇಂಗ್ಲಿಷ್ ಭಾಷೆ ಹೊಸ ಬಗೆಯ ಹುನ್ನಾರಗಳ ಮೂಲಕ ಹೇಗೆ ತನ್ನ ಜಾಲವನ್ನು ವಿಸ್ತರಿಸತೊಡಗಿದೆ ಎನ್ನುವುದು ಒಂದು ವಿಪರ್ಯಾಸವಾಗಿದೆ!

ಕುವೆಂಪು ತಮ್ಮ ಬದುಕಿನ ಸಂದೇಶವೆಂದು 'ವಿಶ್ವ ಮಾನವ'ನ ಪರಿಕಲ್ಪನೆಯೊಂದನ್ನು ಮಂಡಿಸಿದವರು: 'ಪ್ರತಿಯೊಂದು ಮಗುವೂ ಹುಟ್ಟುತ್ತಲೆ ವಿಶ್ವಮಾನವ', ಬೆಳೆಯುತ್ತಾ ನಾವು

ಅದನ್ನು 'ಅಲ್ಪಮಾನವನನ್ನಾಗಿ ಮಾಡುತ್ತೇವೆ. ಮತ್ತೆ ಅದನ್ನು 'ವಿಶ್ವಮಾನವ'ನನ್ನಾಗಿ ಮಾಡುವುದೆ ವಿದ್ಯೆಯ ಕರ್ತವ್ಯವಾಗಬೇಕು'. ಇದನ್ನು ಕಾರ್ಯಗತಗೊಳಿಸಲು ಅಗತ್ಯವಾದ ಸಪ್ತಸೂತ್ರಗಳನ್ನು ಮಂಡಿಸುತ್ತಾ 'ಮನುಷ್ಯ ಜಾತಿ ತಾನೊಂದೆ ವಲಂ' ಎಂಬ ಕವಿ ಪಂಪನ ಸೂತ್ರವನ್ನು ನಿರುಪಾಧಿಕವಾಗಿ ಸ್ವೀಕರಿಸಬೇಕು' ಎನ್ನುತ್ತಾರೆ ಕುವೆಂಪು. ಬಹು ದೊಡ್ಡ ಕನಸು; ಬಹುದೊಡ್ಡ ಆದರ್ಶ. ಆದರೆ ಮನುಷ್ಯ ಮನುಷ್ಯನಾಗಿ ಬದುಕುವುದೇ ಸಾಧ್ಯವಾಗದಂತಹ ವಿದ್ಯಮಾನಗಳು ಸಂಭವಿಸುತ್ತಿರುವ ಹೊತ್ತಿನಲ್ಲಿ, ಅನೇಕ ವಿಚ್ಛಿದ್ರಕಾರಕ ಶಕ್ತಿಗಳಿಂದ ಮನುಷ್ಯತ್ವವೇ ಚೂರುಚೂರಾಗುತ್ತಿರುವ ಸಂದರ್ಭದಲ್ಲಿ ಕುವೆಂಪು ಅವರ ವಿಶ್ವಮಾನವ ಕಲ್ಪನೆ ಒಂದು ದೂರದ, ಎತ್ತರದ ಬೆಳಕು ಮಾತ್ರ !

●

# ಪರಮಹಂಸ, ವಿವೇಕಾನಂದ ಮತ್ತು ಕುವೆಂಪು

ಮೈ.ಶ್ರೀ. ನಟರಾಜ, ಮೇರಿಲ್ಯಾಂಡ್

## ಪೀಠಿಕೆ

ಕುವೆಂಪುರವರ ಆಧ್ಯಾತ್ಮಿಕ ದೃಷ್ಟಿಕೋಣ ಅವರ ಅನೇಕ ಬರಹಗಳಲ್ಲಿ ಮತ್ತು ಭಾಷಣಗಳಲ್ಲಿ ಅಭಿವ್ಯಕ್ತಿಗೊಂಡಿದೆ. ಉದಾಹರಣೆಗೆ, ೧೯೫೭ರಲ್ಲಿ ಧಾರವಾಡದಲ್ಲಿ ನಡೆದ ಮುವ್ವತ್ತೊಂಬತ್ತನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಸ್ಥಾನದಿಂದ ಅವರು ಮಾಡಿದ ಭಾಷಣ. ಕುವೆಂಪುರವರ ಈ ಭಾಷಣಕ್ಕೆ ಕನ್ನಡ ಸಾರಸ್ವತಲೋಕದಲ್ಲಿ ಒಂದು ವಿಶಿಷ್ಟ ಸ್ಥಾನವಿದೆ. ಅವರ ಆದರ್ಶ ಪ್ರಪಂಚದಲ್ಲಿ ಕನ್ನಡ, ಕರ್ಣಾಟಕ, ಭಾರತ ಮತ್ತು ಭಾರತೀಯ ಸಂಸ್ಕೃತಿಗಳ ಬಗ್ಗೆ ಅವರಿಗಿದ್ದ ನಿಲುವುಗಳನ್ನು ಅಲ್ಲಿ ಕಾಣಬಹುದು. ಆ ಭಾಷಣದಲ್ಲಿ ಕುವೆಂಪು ಹೇಳಿರುವ ಪ್ರಕಾರ: (ಅ) ವ್ಯಷ್ಟಿರೂಪವಾದ ವ್ಯಕ್ತಿಗೆ ಕೋಶಗಳಿರುವಂತೆ, ಸಮಷ್ಟಿರೂಪವಾದ ದೇಶಕ್ಕೂ ಕೋಶಗಳಿವೆ; (ಆ) ಕರ್ಣಾಟಕಕ್ಕೆ ಅನ್ನಮಯವಾದ ಭೂಪ್ರದೇಶವಿರುವಂತೆಯೇ ಪ್ರಾಣಮನೋಮಯರೂಪವಾದ ಚಿತ್‌ಪ್ರದೇಶವೂ ಇದೆ; ಮತ್ತು (ಇ) ಚಿನ್ಮಯವೂ ಆಧ್ಯಾತ್ಮಿಕವೂ ಆಗಿರುವ ಆ ಸಂಸ್ಕೃತಿಕೋಶವೇ ಕರ್ಣಾಟಕದೇವಿಯ ಸೂಕ್ಷ್ಮ ಶರೀರ. ಅಷ್ಟೇ ಅಲ್ಲ, ''ಆ ಜ್ಯೋತಿಶ್ಶರೀರಿಯ ಉಪಾಸನೆಯೇ ಕವಿ, ಕಲಾವಿದ, ತತ್ತ್ವಜ್ಞ, ಸಾಧಕರಾದಿಯಾಗಿ ಸಕಲರ ಗಂತವ್ಯ ಮತ್ತು ಗಮ್ಯ''. ಈ ಚರಿತ್ರಾರ್ಹ ಘೋಷಣೆಯನ್ನು ಮಾಡುವ ಹೊತ್ತಿಗಾಗಲೇ ಕುವೆಂಪು ಐವತ್ತು ದಾಟಿ, ಕರ್ನಾಟಕದ ಹೆಸರಾಂತ ಕವಿ ಮತ್ತು ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿ ಸಹ ಆಗಿದ್ದರೆಂಬುದನ್ನು ಗಮನಿಸಬೇಕು.

## ಭಾರತಜನನಿಯ ಮೊಮ್ಮಗ - ಕರ್ಣಾಟಕ ಮಾತೆಯ ಹೆಮ್ಮಗ

ಚಿನ್ಮಯವೂ ಆಧ್ಯಾತ್ಮಿಕವೂ ಆದ ಕನ್ನಡ ಸಂಸ್ಕೃತಿಯ ಈ ವರಪುತ್ರ, 'ಕಾವ್ಯರ್ಷಿ' ಎಂದು ಪ್ರಖ್ಯಾತರಾಗುವ ಮೊದಲೇ ಅಂದರೆ ಅವರ ತಾರುಣ್ಯದಲ್ಲೇ ಒಂದು ಮಹಾನ್ ಸತ್ಯವನ್ನು ಮನಗಂಡಿದ್ದರು. ಅದೇ ಅವರು ಕಲ್ಪಿಸಿದ ಭಾರತೀಯ ಆಧ್ಯಾತ್ಮಿಕ ಶಕ್ತಿಯ ಹಿಂದಿದ್ದ ರಹಸ್ಯದ ವಿಶ್ಲೇಷಣೆ. 'ಖಂಡಖಂಡವಾಗಿ ಹರಿದು ಹಂಚಿಹೋಗಿದ್ದ ಭಾರತವನ್ನು ಅಖಂಡವಾಗಿಟ್ಟಿದ್ದ ಆ ಬೃಹತ್ ಶಕ್ತಿ ಯಾವುದು?' ಎಂಬುದನ್ನು ಕುರಿತು ಅವರು ಚಿಂತಿಸತೊಡಗಿದ್ದು ವಿದ್ಯಾರ್ಥಿಯಾಗಿದ್ದಾಗಿನಿಂದಲೇ ಎಂಬ ವಿಷಯ ಅವರ ತಾರುಣ್ಯದ ಬರಹಗಳಿಂದಲೇ ತಿಳಿದು ಬರುತ್ತದೆ. ಅವರೇ ಹೇಳಿರುವಂತೆ, ''ವಾಗ್ದೇವಿಯ

ತೊಡೆಯಮೇಲೆ ತೊದಲುವ ಹಸುಳೆಯಾಗಿದ್ದಾಗ ಬಹುಶಃ ಹಿರಿಯ ಕವಿ ರವೀಂದ್ರರ ಪ್ರಸಿದ್ಧ ರಾಷ್ಟ್ರಗೀತೆಯ ಪ್ರಭಾವದಿಂದ ಪ್ರೇರಿತನಾಗಿ ಬರೆದ'' ಕರ್ಣಾಟಕ ನಾಡಗೀತೆ - 'ಜೈ ಭಾರತ ಜನನಿಯ ತನುಜಾತೆ, ಜಯಹೇ ಕರ್ಣಾಟಕ ಮಾತೆ' ಯಲ್ಲಿ ಕನ್ನಡ, ಕರ್ಣಾಟಕ ಮತ್ತು ಭಾರತಗಳ ನಡುವಣ ಸಂಬಂಧಗಳನ್ನು ಸ್ಪಷ್ಟಪಡಿಸಿದ್ದಾರೆ. ''ಭಾರತಾಂಬೆಯ ಅಂಗೋದ್ಭವೆಯಾಗಿ ವಿನಾ ಕರ್ಣಾಟಕಕ್ಕೆ ಬೇರೆಯ ಅಸ್ತಿತ್ವವಿಲ್ಲ'' ಎಂಬ ಅವರ ದೃಢ ನಂಬಿಕೆಯನ್ನು ಇಲ್ಲಿ ಅವರು ವ್ಯಕ್ತಪಡಿಸಿದ್ದಾರೆ. ವೇದೋಪನಿಷತ್ತು ಮತ್ತು ಷಡ್‌ದರ್ಶನಗಳಲ್ಲಿ ಹರಿಯುತ್ತಿರುವ ಆಧ್ಯಾತ್ಮಿಕ ಶಕ್ತಿ, ರಾಮಾಯಣ ಮಹಾಭಾರತ ಭಾಗವತಾದಿಗಳಲ್ಲಿ ಗೋಚರಿಸುವ ಸಾಹಿತ್ಯಶಕ್ತಿ, ಋಷಿ ಯೋಗಿ ಸಾಧು ಸಂತರ ದಿವ್ಯಜೀವನದಲ್ಲಿ ಅಭಿವ್ಯಕ್ತಿಗೊಂಡಿರುವ ಧಾರ್ಮಿಕ ಶಕ್ತಿ, ಈ ಮೂರೂ ಶಕ್ತಿಗಳ ಸಮ್ಮಿಲನವೇ ಭಾರತದ ಅಂತಃಶಕ್ತಿ. ಈ ಅಂತಃಶಕ್ತಿಯೇ ಖಂಡಖಂಡವಾಗಿದ್ದ ಭಾರತವನ್ನು ಅಖಂಡವಾಗಿಟ್ಟದ್ದ ಮಹಾನ್ ಶಕ್ತಿ. ಆ ಮಹಾನ್ ಶಕ್ತಿಯ ಸ್ಥೂಲರೂಪಿಣಿಯೇ ಭಾರತ ಜನನಿ, ಅವಳ ತನುಜಾತೆಯೇ ಚಿನ್ಮಯೀ ಕರ್ಣಾಟಕಮಾತೆ - ಎಂಬ ವಿಶ್ಲೇಷಣೆಯನ್ನು ಕನ್ನಡ ಸಾಹಿತ್ಯ ಸಮ್ಮೇಳನದ ಅವರ ಅಧ್ಯಕ್ಷ ಭಾಷಣದಲ್ಲಿ ನಾವು ಕಾಣಬಹುದು. ಅಂತಹ ಕರ್ಣಾಟಕಮಾತೆಯ ವರಪುತ್ರರಲ್ಲಿ ಕುವೆಂಪು ಮೊದಲಿಗರ ಗುಂಪಿನಲ್ಲಿ ಸೇರುತ್ತಾರೆಂದು ಧಾರಾಳವಾಗಿ ಹೇಳಬಹುದು. ಹೀಗಾಗಿ ಕುವೆಂಪು ಭಾರತಜನನಿಯ ಮೊಮ್ಮಗ ಮತ್ತು ಕರ್ಣಾಟಕಮಾತೆಯ ಹೆಮ್ಮೆಯ ಹೆಮ್ಮಗ!

## ಪರಮಹಂಸ - ವಿವೇಕರು

ಕರ್ಣಾಟಕ ನಾಡಗೀತೆಯಲ್ಲಿ ಕುವೆಂಪು ಅನೇಕ ಮಹಾತ್ಮರನ್ನು ನೆನೆಯುತ್ತಾರೆ. ''ಚೈತನ್ಯ, ಪರಮಹಂಸ ವಿವೇಕರ ಭಾರತಜನನಿಯ ತನುಜಾತೆ....'' ಎಂಬ ಸಾಲನ್ನು ಓದುಗರು ಗಮನಿಸಬೇಕು. ಕುವೆಂಪುರವರ ಜೀವನದ ಮೇಲೆ ಅಪಾರ ಪ್ರಭಾವವನ್ನು ಬೀರಿದ ಮತ್ತು ಅವರ ಜೀವನದೃಷ್ಟಿಯನ್ನು ರೂಪಿಸುವುದರಲ್ಲಿ ಅತಿ ದೊಡ್ಡ ಭಾಗವಾಗಿದ್ದ ಇಬ್ಬರು ಪುಣ್ಯಚೇತನರೆಂದರೆ: ಶ್ರೀ ರಾಮಕೃಷ್ಣ ಪರಮಹಂಸ (೧೮೩೬-೧೮೮೬); ಮತ್ತು ಸ್ವಾಮಿ ವಿವೇಕಾನಂದ (೧೮೬೩-೧೯೦೨). ಇವರಲ್ಲಿ ಒಬ್ಬರನ್ನು ನೆನೆದರೆ ಸಾಕು ಮತ್ತೊಬ್ಬರ ಚಿತ್ರ ತಾನೆ ತಾನಾಗಿ ಕಣ್ಮುಂದೆ ಬಂದು ನಿಲ್ಲುತ್ತದೆ. ತರುಣ ಕುವೆಂಪು ಕನ್ನಡ, ಸಂಸ್ಕೃತ, ಬಂಗಾಳಿ ಮತ್ತು ಇಂಗ್ಲಿಷ್ ಭಾಷೆಗಳನ್ನು ಆಳವಾಗಿ ಅಧ್ಯಯನ ಮಾಡಿ ತಮ್ಮ ಜೀವನದ ದಿಕ್ಕನ್ನು ಕಂಡುಕೊಳ್ಳುತ್ತಿದ್ದಾಗ, ಅವರ ವ್ಯಕ್ತಿತ್ವದ ಮೇಲೆ ಮಹತ್ತರ ಪರಿಣಾಮ ಮಾಡಿದವರೆಂದರೆ, ಈ ಇಬ್ಬರು ಮಹಾಪುರುಷರು. ಕನ್ನಡ ಸಾರಸ್ವತಲೋಕಕ್ಕೆ ಕಾವ್ಯ, ನಾಟಕ, ಕತೆ, ಪ್ರಬಂಧ ಮತ್ತು ಕಾದಂಬರಿಗಳನ್ನು ಯಥೇಚ್ಛವಾಗಿ ನೀಡಿದ ಕುವೆಂಪು ಬರೆದ ಎರಡು ಜೀವನಚರಿತ್ರೆಗಳೆಂದರೆ: (೧) ಸ್ವಾಮಿ ವಿವೇಕಾನಂದ (ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು, ಮೊದಲ ಮುದ್ರಣ ೧೯೩೨, ಹದಿಮೂರನೆಯ ಮುದ್ರಣ ೧೯೯೭); ಮತ್ತು

(೨) ಶ್ರೀ ರಾಮಕೃಷ್ಣ ಪರಮಹಂಸ (ಶ್ರೀ ರಾಮಕೃಷ್ಣ ಆಶ್ರಮ, ಮೈಸೂರು, ಮೊದಲ ಮುದ್ರಣ ೧೯೩೪, ಒಂಬತ್ತನೆಯ ಮುದ್ರಣ ೧೯೯೮). ಈ ಕೃತಿಗಳನ್ನು ಓದಬಯಸುವವರು, ಇವೆರಡನ್ನು ಒಂದರ ಜೊತೆಗೆ ಮತ್ತೊಂದನ್ನು ಸಮಾನಾಂತರವಾಗಿ ಓದಬೇಕು, ಏಕೆಂದರೆ, ಇವು ಒಂದೇ ಕತೆಯ ಎರಡು ಅವಿಭಾಜ್ಯ ಅಂಗಗಳು! ಒಂದು ಪುಸ್ತಕದೊಳಗೆ ಮತ್ತೊಂದರ ಪ್ರತಿಬಿಂಬವನ್ನು ತೋರುತ್ತಾ ಸಮಾನಾಂತರವಾಗಿ ಓದಿಸಿಕೊಳ್ಳುತ್ತವೆ ಈ ಎರಡು ಪುಸ್ತಕಗಳು.

ರಾಮಕೃಷ್ಣ ಪರಮಹಂಸರು ಹೆಚ್ಚಿನ ಓದುಬರಹವನ್ನು ಕಂಡರಿಯದವರು. ವಿವೇಕಾನಂದರಾದರೋ ಪಾಶ್ಚಿಮಾತ್ಯ ವಿದ್ಯಾಭ್ಯಾಸ ಮಾಡಿದವರು. ಪರಮಹಂಸರು ಬಡಕುಟುಂಬದಲ್ಲಿ ಜನಿಸಿದವರು, ವಿವೇಕಾನಂದರು ಅನುಕೂಲಸ್ಥರು. ಒಬ್ಬರು ಹಳ್ಳಿಗರು, ಮತ್ತೊಬ್ಬರು ನಗರವಾಸಿ. ರಾಮಕೃಷ್ಣರನ್ನು ನೋಡಿದರೆ ಅತಿ ಸಾಧಾರಣರಂತೆ ಕಾಣುವ ಜೋಗಿ. ವಿವೇಕಾನಂದರರದು ಆಕರ್ಷಕ ವ್ಯಕ್ತಿತ್ವ ಯಾವುದನ್ನೂ ಚರ್ಚಿಸದೇ, ಕೂಲಂಕಷವಾಗಿ ಪರೀಕ್ಷಿಸದೇ ಒಪ್ಪಿಕೊಳ್ಳುವ ಸ್ವಭಾವದವರಲ್ಲ. ಪರಮಹಂಸರು ದೇವೀ ಉಪಾಸಕರು, ವಿವೇಕಾನಂದರು ಮೂರ್ತಿಪೂಜೆಗೆ ವಿರೋಧವಿದ್ದವರು. ಬುದ್ಧಿಜೀವಿಯೂ ಪಾದರಸದಂಥ ವ್ಯಕ್ತಿತ್ವ ಇದ್ದವರೂ, ಉತ್ತಮ ವಾಗ್ಮಿಯೂ, ಗಂಧರ್ವರಂತೆ ಹಾಡುವವರೂ, ದೇಹವನ್ನು ವ್ಯಾಯಾಮದಿಂದ ದಂಡಿಸಿ ದಷ್ಟಪುಷ್ಟರೂ ಆಗಿದ್ದ ಸುಂದರ ತರುಣ ನಾಗರೀಕನೆಲ್ಲಿ, ಸದಾ ಪೂಜೆ ಸಮಾಧಿಗಳಲ್ಲಿ ನಿರತನಾಗಿರುತ್ತ ಏಕಾಂಗಿಯಾಗಿದ್ದ 'ಗಡ್ಡದ ಜೋಗಿ' ರಾಮಕೃಷ್ಣರೆಲ್ಲಿ ? ವಿಧಿ ಅವರಿಬ್ಬರನ್ನು ಹೇಗೆ ಒಂದುಗೂಡಿಸಿತು ? ವಿವೇಕಾನಂದರ ಆಗಮನಕ್ಕಾಗಿ ರಾಮಕೃಷ್ಣರು ಹೇಗೆ ಕಾತರರಾಗಿ ಕಾದು ಕುಳಿತಿದ್ದರು, ಪರಮಹಂಸರ ಶಿಷ್ಯತ್ವದಿಂದ ವಿವೇಕಾನಂದರು ಕಲಿತ ಪಾಠವೇನು, ರಾಮಕೃಷ್ಣರ ಅಮರ ಸಂದೇಶವಾಣಿಯನ್ನು ಹೊತ್ತು ಇಡೀ ದೇಶವನ್ನೆಲ್ಲ ಸುತ್ತಿದ್ದೇ ಅಲ್ಲದೇ, ಹೇಗೆ ಅವರು ವಿಶ್ವಪರ್ಯಟನೆ ಮಾಡಿದರು, ಅಮೆರಿಕದಲ್ಲಿ ನಡೆದ ಸರ್ವಧರ್ಮ ಸಮ್ಮೇಳನದಲ್ಲಿ ಸನಾತನ ಧರ್ಮದ ಪ್ರತಿನಿಧಿಯಾಗಿ ಭಾರತೀಯ ಚರಿತ್ರೆಯಲ್ಲಿ ಹೇಗೆ ಅಮರರಾದರು ಎಂಬ ದಿವ್ಯ ಕಥಾಮೃತವನ್ನು ಕುವೆಂಪುರವರ ಭಾಷೆಯಲ್ಲೇ ಓದಿ ಸವಿಯಬೇಕು. ಪರಮಹಂಸರ ಅಥವಾ ವಿವೇಕಾನಂದರ ಜೀವನದ ಬಗ್ಗೆ ಹೆಚ್ಚಿನ ಮಾಹಿತಿ ಒದಗಿಸುವುದು ಈ ಪ್ರಸ್ತುತ ಲೇಖನದ ಉದ್ದೇಶವಲ್ಲ. ಆ ಇಬ್ಬರು ಯೋಗಿವರ್ಯರ ಜೀವನಚರಿತ್ರೆಯ ಹಿನ್ನೆಲೆಯಲ್ಲಿ ಕುವೆಂಪುರವರ ಜೀವನದೃಷ್ಟಿ ಮತ್ತು ಆಧ್ಯಾತ್ಮ ದೃಷ್ಟಿಯ ಬಗ್ಗೆ ಒಂದು ಪಕ್ಷಿನೋಟವನ್ನು ಚಿತ್ರಿಸುವುದೇ ಈ ಲೇಖನದ ಮುಖ್ಯ ಉದ್ದೇಶ.

### ಸಾಮಾಜಿಕ ಹಿನ್ನೆಲೆ

ರಾಷ್ಟ್ರಕವಿಯಾಗಿ, ಭಾರತೀಯ ಜ್ಞಾನಪೀಠ ಪ್ರಶಸ್ತಿ ಪಡೆದ ಪ್ರಥಮ ಕನ್ನಡಿಗರಾಗಿ ತಮ್ಮ ಜೀವನ ಸಂಧ್ಯೆಯಲ್ಲಿ ಕುವೆಂಪು ವಿಶ್ವಮಾನವರಾಗಲು ಶ್ರೀ ರಾಮಕೃಷ್ಣರ ಸಮನ್ವಯ

ತತ್ತ್ವ ಮತ್ತು ವಿವೇಕಾನಂದರ ''ಏಳಿ, ಎಚ್ಚರಗೊಳ್ಳಿ, ಗುರಿಮುಟ್ಟುವ ತನಕ ನಿಲ್ಲದಿರಿ'' ಎಂಬ ಅಮರ ಸಂದೇಶ ದಾರಿದೀಪಗಳಾದವು. ರಾಮಕೃಷ್ಣರ ಜನ್ಮವಾದ ಸಮಯದಲ್ಲಿ ಭಾರತದ ಪರಿಸ್ಥಿತಿ ಹೇಗಿತ್ತು ಎಂಬುದನ್ನು ಅವರ ಪುಸ್ತಕದ ಪೀಠಿಕಾ ರೂಪದ ಪ್ರಥಮ ಅಧ್ಯಾಯಗಳಲ್ಲಿ ಕಾಣಬಹುದಾಗಿದೆ. ಆ ದಿನಗಳಲ್ಲಿ, ಹಳೆಯದೆಲ್ಲ ಪವಿತ್ರವೆಂಬ ಗೊಡ್ಡು ನಂಬಿಕೆ ಭಾರತೀಯರಲ್ಲಿ ಬೆಳೆದಿತ್ತು. ಹಿಂದೆಂದೋ ಒಂದು ಕಾಲಕ್ಕೆ ಸರಿ ಎನಿಸಿದ್ದಿರಬಹುದಾದ ಸಾಮಾಜಿಕ ನಿಯಮಗಳನ್ನು ಸ್ವಲ್ಪವೂ ವಿಮರ್ಶಿಸದೇ ಕಣ್ಮುಚ್ಚಿ ಪಾಲಿಸುವ ಕುರುಡು ಬುದ್ಧಿ ಭಾರತೀಯರಲ್ಲಿ ಬೆಳೆದಿತ್ತು. ಪೌರಾಣಿಕ ಜ್ಞಾನವನ್ನೇ ವಿಜ್ಞಾನವೆಂದು ನಂಬಿ, ಮೇಲು-ಕೀಳೆಂಬ ತಾರತಮ್ಯವನ್ನು ಬೆಳೆಸಿಕೊಂಡು, ಸಹಗಮನವೇ ಮುಂತಾದ ಭೀಷಣ ಪದ್ಧತಿಗಳನ್ನು ಅನುಸರಿಸುತ್ತಾ, ಕಲಿಯುಗವನ್ನು ಅಧರ್ಮದ, ವಿನಾಶದ ಯುಗವೆಂದು ಹಳಿಯುತ್ತಾ ಕಾಲಕಳೆಯುವವರೇ ಹೆಚ್ಚಾಗಿದ್ದ ಕಾಲವದು. ತ್ರೇತಾಯುಗದ ಶ್ರೀರಾಮನ ಆದರ್ಶವನ್ನಾಗಲೀ ದ್ವಾಪರಯುಗದ ಶ್ರೀಕೃಷ್ಣನ ಗೀತೋಪದೇಶದ ಸಾರವನ್ನಾಗಲೀ ಅರ್ಥಮಾಡಿಕೊಳ್ಳದಿದ್ದರೂ ಪುರಾತನವಾದದ್ದನ್ನೆಲ್ಲ ಸ್ತೋತ್ರ ಮಾಡುವುದನ್ನೇ ಒಂದು ಉದ್ಯೋಗವನ್ನಾಗಿಸಿಕೊಂಡು ನಿಂತ ನಿಂತ ನೀರಿನಂತೆ ಕೊಳೆಯುತ್ತಿದ್ದ ಭಾರತೀಯರ ಕಣ್ಣು ತೆರೆಸಲು ರಾಮಕೃಷ್ಣರಂಥ ಮೇಧಾವಿ ಜನ್ಮತಾಳಬೇಕಾಯಿತು. ಜಡತ್ವದಿಂದ ಭಾರತೀಯರನ್ನು ಬಡಿದೆಬ್ಬಿಸಲು ವಿವೇಕಾನಂದರಂಥ ವರ್ಚಸ್ವೀ ಸನ್ಯಾಸಿಯೋರ್ವನ ನಿರಂಕುಶ ಮತಿಯ ಅಗತ್ಯವೂ ಇತ್ತು. ಈ ಸಾಮಾಜಿಕ ಹಿನ್ನೆಲೆಯನ್ನು ತಿಳಿಸುವುದರ ಮೂಲಕ ಈ ಕ್ರಾಂತಿ ಪುರುಷರ ಹುಟ್ಟಿಗೆ ಅವತಾರದ ಪೀಠಿಕೆಯನ್ನು ಹಾಕುತ್ತಾರೆ ಕುವೆಂಪು.

## ಮನುಷ್ಯರಲ್ಲಿ ಮೂರು ಜಾತಿ

ಮನುಷ್ಯರನ್ನು ನಮ್ಮ ದಾರ್ಶನಿಕರು ಮೂರು ಗುಂಪಾಗಿ ವಿಂಗಡಿಸುತ್ತಾರೆ. ಇದರ ವಿವರವನ್ನು ಕುವೆಂಪು ಹೀಗೆ ವಿವರಿಸಿದ್ದಾರೆ. ಇತರರು ಹೇಳಿದ್ದನ್ನು ಯೋಚಿಸದೇ ನಂಬುವವರು ಒಂದು ಗುಂಪು; ಇತರರು ಹೇಳಿದ್ದು ಸಕಾರಣವಾಗಿದೆಯೇ ಎಂದು ತರ್ಕಿಸಿ, ಸಕಾರಣವಾಗಿದ್ದರೆ ಮಾತ್ರ ನಂಬುವವರು ಇನ್ನೊಂದು ಗುಂಪು; ಸ್ವಂತ ಅನುಭವಕ್ಕೆ ಬಂದದ್ದನ್ನು ಮಾತ್ರ ಒಪ್ಪುವ ಸ್ವಭಾವದವರು ಮೂರನೆಯ ಗುಂಪು. ಈ ಮೂರು ವರ್ಗದ ಮಾರ್ಗಗಳನ್ನೇ, 'ಶ್ರುತಿ' (ಅಂದರೆ, ಶ್ರದ್ಧೆ-ಭಕ್ತಿಯಿಂದ ಬಂದದ್ದು); 'ಮತಿ' (ಅಂದರೆ, ವಿಚಾರ ಬುದ್ಧಿಶಕ್ತಿಯಿಂದ ಬಂದದ್ದು); ಮತ್ತು ಅನುಭೂತಿ (ಅಂದರೆ, ಸ್ವಾನುಭವ ಮತ್ತು ಸಾಕ್ಷಾತ್ಕಾರದಿಂದ ಬಂದದ್ದು) ಎಂದು ಸಹ ವರ್ಣಿಸುತ್ತಾರೆ. ಇವನ್ನೇ ದಾರ್ಶನಿಕರು ಶಬ್ದ ಅನುಮಾನ ಮತ್ತು ಪ್ರತ್ಯಕ್ಷ ಎಂದು ವೇದಾಂತದ ತಾಂತ್ರಿಕ ಭಾಷೆಯಲ್ಲಿ ವಿವರಿಸುತ್ತಾರೆ. ವೇದ, ಬೈಬಲ್, ಕುರಾನ್ - ಇವೆಲ್ಲ 'ಶ್ರುತಿ'ಗಳು. ಅವುಗಳನ್ನು ನಂಬುವವರಿಗೆ ಅದೇ ದೈವವಾಣಿ. ಆದರೆ ವೈಜ್ಞಾನಿಕ ವಿಚಾರಗಳನ್ನು ಅರಿತುಕೊಳ್ಳಲು 'ಮತಿ'ಯ ಸಹಾಯ ಬೇಕು. ಪ್ರತಿಯೊಂದಕ್ಕೂ ಕಾರಣ ಹುಡುಕಿ ತಿಳಿಯಲೆತ್ನಿಸುವುದು ಈ ಮಾರ್ಗದ ಲಕ್ಷಣ.

ಮೂರನೆಯ ಮಾರ್ಗದಲ್ಲಿ, ಸತ್ಯವು ಸ್ವಯಂವೇದ್ಯವಾದಾಗ ಮತ್ತು ಅದು ಅನುಭವಕ್ಕೆ ಬಂದಾಗ ಅದು ಅನುಭೂತಿಯಾಗುತ್ತದೆ. ಆದರೆ, ಒಬ್ಬರಿಗೆ ಅನುಭೂತಿಯಾದದ್ದು ಮತ್ತೊಬ್ಬರಿಗೂ ಅನುಭೂತಿಯಾಗಬೇಕಿಲ್ಲ. ಇನ್ನೊಬ್ಬರಿಗಾದ ಅನುಭೂತಿಯನ್ನು ಸ್ವಲ್ಪವೂ ಪರೀಕ್ಷಿಸದೇ, ವಿಮರ್ಶಿಸದೇ ಒಪ್ಪಿಕೊಂಡಲ್ಲಿ, ಆ ಅನುಭೂತಿಯೂ ಶ್ರುತಿಯ ಮಟ್ಟಕ್ಕೇ ಇಳಿದುಬಿಡುತ್ತದೆ. ಈ ಮಾತುಗಳನ್ನು ಪರಮಹಂಸರ ಆಧ್ಯಾತ್ಮಕ್ಕೆ ಪೀಠಿಕಾ ರೂಪದಲ್ಲಿ ಕುವೆಂಪು ವಿವರಿಸಿದ್ದರೂ, ಇದು ಇವರ ಸ್ವಂತ ಕಲಿಕೆ ಮತ್ತು ಅನುಭವಕ್ಕೆ ಸಂಬಂಧಪಟ್ಟ ವಿಷಯ. ಇದನ್ನು ಮೆಚ್ಚಬೇಕಾದರೆ, ೧೯೭೦ರ ದಶಕದಲ್ಲಿ ಅವರು ಬರೆದ ''ನೆನಪಿನ ದೋಣಿಯಲ್ಲಿ'' ಆತ್ಮಚರಿತ್ರೆಯ ೫೯ನೆಯ ಅಧ್ಯಾಯವನ್ನು ಓದಬೇಕು (ಈ ಬಗ್ಗೆ ಮತ್ತೆ ಚರ್ಚಿಸೋಣ). ಮುಖ್ಯವಾಗಿ ಇಲ್ಲಿ ನೆನಪಿಡಬೇಕಾದ ಅಂಶವೆಂದರೆ, ಸ್ವಯಂವೇದ್ಯವಾದ ಅನುಭೂತಿಯ ಸಹಾಯದಿಂದ 'ಶ್ರುತಿ', 'ಮತಿ'ಗಳನ್ನೂ ಮಾನ್ಯಮಾರ್ಗಗಳೆಂದು ಒಪ್ಪಿ ತಿಳಿದು ವಿವೇಕಾನಂದರಿಗೂ ಮನದಟ್ಟು ಮಾಡಿಸಿದ ಮಹಾತಪಸ್ವಿ ಶ್ರೀ ರಾಮಕೃಷ್ಣ ಪರಮಹಂಸ ಎಂಬುದು. ಈ ವಿಚಾರವನ್ನು ಕಣ್ಣಿಗೆ ಕಟ್ಟುವಹಾಗೆ ಮನಸ್ಸಿಗೆ ಹಿಡಿಸುವ ಹಾಗೆ, ಕಾವ್ಯಮಯವಾದ ಭಾಷೆಯಲ್ಲಿ ವರ್ಣಿಸಿರುವುದೇ ಈ ಎರಡು ಪುಸ್ತಕಗಳ ಹಿರಿಮೆ.

## ಭಾರತೀಯ ತತ್ತ್ವಶಾಸ್ತ್ರದ ಸಾರಸರ್ವಸ್ವ

ಶ್ರೀ ರಾಮಕೃಷ್ಣರ ಜೈತ್ರಯಾತ್ರೆಯನ್ನು ವರ್ಣಿಸುವಾಗ ಕುವೆಂಪು ವಿವರಿಸಿರುವ ಭಾರತೀಯ ತತ್ತ್ವಶಾಸ್ತ್ರದ ಸಾರಸರ್ವಸ್ವವನ್ನು ಇಲ್ಲಿ ಇನ್ನೂ ಚಿಕ್ಕದಾಗಿಸಿ ಪ್ರಸ್ತುತ ಪಡಿಸಿದ್ದೇನೆ. ತತ್ತ್ವಶಾಸ್ತ್ರದ ಮೂಲ ಉದ್ದೇಶ ಸತ್ಯಾನ್ವೇಷಣೆ ಎಂಬುದನ್ನು ಮೊದಲು ಮನನ ಮಾಡಿಕೊಳ್ಳೋಣ. ರಾಮಕೃಷ್ಣರಿಗಿದ್ದಂತೆ ವಿವೇಕಾನಂದರಿಗೂ ಸತ್ಯಾನ್ವೇಷಣೆ ಮುಖ್ಯವೇ ಹೊರತು ಸತ್ಯಾನ್ವೇಷಣೆಯ ಮಾರ್ಗ ಅಷ್ಟೇನೂ ಮುಖ್ಯವಲ್ಲ. ಇವರಿಬ್ಬರ ಮಾರ್ಗವನ್ನು ಅನುಸರಿಸುವ ಕುವೆಂಪು ಅವರ ದೃಷ್ಟಿಯಲ್ಲಿ ಸಹ ಸತ್ಯಾನ್ವೇಷಣೆಯ ವಿವಿಧ ಮಾರ್ಗಗಳು ಅವಶ್ಯವಾಗಿ ಏರಬೇಕಾದ ಸೋಪಾನಗಳು, ಅವು ಒಂದಕ್ಕೊಂದು ವಿರೋಧವಾಗಕೂಡದು, ಒಂದಕ್ಕೊಂದು ಪೂರಕಗಳಾಗಬೇಕು. ಸತ್ಯಾನ್ವೇಷಣೆಗೆ ಸಂಬಂಧಪಟ್ಟ ಹೆಚ್ಚಿನ ವಿವರಗಳನ್ನೆಲ್ಲ ಸಂಕ್ಷೇಪಿಸಿ ಪಟ್ಟಿ ಮಾಡೋಣ.

- ★ ವ್ಯಕ್ತಿ ಯಾವುದೋ ಒಂದು ಆದರ್ಶಸಿದ್ಧಿಗಾಗಿ ಮಾಡುವ ಯತ್ನಗಳೇ ಸಾಧನೆ.
- ★ ಆಧ್ಯಾತ್ಮಿಕ ಸಾಧನೆಯ ಪ್ರಮುಖ ಧ್ಯೇಯವೇ ಸತ್ಯಾನ್ವೇಷಣೆ.
- ★ ಸರ್ವಭೂತಗಳಲ್ಲಿಯೂ ಬ್ರಹ್ಮದರ್ಶನ ಮಾಡುವುದೇ ಸಾಧನೆಯ ಪರಮ ಗುರಿ.
- ★ ಸ್ಥೂಲ-ಸೂಕ್ಷ್ಮ, ಜಡ-ಚೇತನ, ಎಲ್ಲವೂ ಬ್ರಹ್ಮಮಯ, ಬೇರೆ ಇಲ್ಲ.
- ★ 'ನಾನು', 'ನೀನು', 'ಅವನು/ಳು', 'ಅದು' ಎಲ್ಲವೂ ಬ್ರಹ್ಮಮಯ, ಭೇದವಿಲ್ಲ.

- ★ 'ಬೇರೆ' ಎಂಬ ಭೇದ ಇಂದ್ರಿಯಗಳಿಗೆ ತೋರಿದರೆ ಅದಕ್ಕೆ ಕಾರಣ ಅಜ್ಞಾನ.
- ★ ಆತ್ಮನೂ ಪರಮಾತ್ಮನೂ ಬೇರೆ ಎಂಬ ಭೇದವನ್ನು ಕಲ್ಪಿಸುವ 'ದ್ವೈತ'ದ ಭ್ರಮೆ ಹುಟ್ಟಿಸುವುದು 'ಅವಿದ್ಯೆ.'
- ★ ಈ ಅವಿದ್ಯೆ ಎಂಬುದು ಅನಾದಿಯಾದುದು.
- ★ ಅವಿದ್ಯೆಯಿಂದುಂಟಾದ 'ಮಾಯೆ'ಯ ಮುಸುಕಿನಿಂದ ಈ ಮಿಥ್ಯಾಜಗತ್ತು ಸತ್ಯವೆಂಬಂತೆ ತೋರುತ್ತದೆ.
- ★ ಆದರೆ, ಈ ಜಗತ್ತು ಮಿಥ್ಯ; ಬ್ರಹ್ಮ ಮಾತ್ರ ಸತ್ಯ.
- ★ ಅವಿದ್ಯೆಯು ತೊಲಗಿದಾಗ (ಮಾಯೆಯ ಮುಸುಕನ್ನು ಕಿತ್ತು ಬಿಸುಟಾಗ) ನಿರ್ವಿಕಲ್ಪ ಸಮಾಧಿಯನ್ನು ತಲಪುವುದು ಸಾಧ್ಯವಾಗುತ್ತದೆ.
- ★ ನಿರ್ವಿಕಲ್ಪ ಸಮಾಧಿಯಲ್ಲಿ "ಈ ವ್ಯಾವಹಾರಿಕ ಜಗತ್ತು ಅನಿತ್ಯ, ಆದ್ದರಿಂದ ಅದು ಮಿಥ್ಯ" ಎಂಬರಿವು ಉಂಟಾಗುತ್ತದೆ.
- ★ ಅದ್ವಯವೂ, ಸಚ್ಚಿದಾನಂದವೂ, ನಿತ್ಯವೂ ಆದ ಬ್ರಹ್ಮ ಒಂದೇ ಸತ್ಯ ಎಂಬರಿವು ಸಹ ಹುಟ್ಟುತ್ತದೆ.
- ★ ಹೀಗೆ ಬ್ರಹ್ಮ ಸಾಕ್ಷಾತ್ಕಾರವಾದಾಗ, ಸಾಧಕನು ಸತ್ಯಾನ್ವೇಷಣೆಯ ಗುರಿ ತಲಪಿದಂತಾಗುತ್ತದೆ.

ಬ್ರಹ್ಮಸಾಕ್ಷಾತ್ಕಾರ ಪಡೆಯಲು ಸಾಧಕರು ಎರಡು ಮಾರ್ಗಗಳನ್ನು ಅನುಸರಿಸಬಹುದೆಂದು ದಾರ್ಶನಿಕರು ಹೇಳುತ್ತಾರೆ, (೧) ಜ್ಞಾನಮಾರ್ಗ; ಮತ್ತು (೨) ಭಕ್ತಿಮಾರ್ಗ. ಜ್ಞಾನಮಾರ್ಗ ವಿಚಾರಪೂರ್ಣವಾದ್ದರಿಂದ ಮೇಧಾವಿಗಳಿಗೆ ಮಾತ್ರ ಸಾಧ್ಯ. ಭಕ್ತಿಮಾರ್ಗ ಭಾವಮಯವಾದ್ದರಿಂದ ಸಾಧಾರಣರಿಗೂ ಸುಲಭಸಾಧ್ಯ. ಪರಮಹಂಸರು ಜ್ಞಾನಮಾರ್ಗ ಮತ್ತು ಭಕ್ತಿಮಾರ್ಗಗಳ ಸಮನ್ವಯವನ್ನು ಸಾಧಿಸಿದರೆಂಬುದನ್ನು ಮೊದಲೇ ತಿಳಿಸಿಯಾಗಿದೆ.

## ದ್ವೈತ, ವಿಶಿಷ್ಟಾದ್ವೈತ ಮತ್ತು ಅದ್ವೈತಗಳ ಬಗ್ಗೆ ಕುವೆಂಪು

ಕುವೆಂಪು ಅದ್ವೈತಿಗಳೆಂಬುದು ನಿಸ್ಸಂಶಯವಾಗಿ ಅವರ ಅನೇಕ ಕವನ, ಪ್ರಬಂಧಗಳಲ್ಲಿ ಕಂಡು ಬರುತ್ತದೆ ("ನೆಲ ಬಾನ್ಗಳನೊಲಿದಪ್ಪಿರೆ, ದ್ವೈತವು ಬರಿ ಛಾಯೆ!). ಆದರೆ ಪರಮಹಂಸ ವಿವೇಕರಂತೆ ಅವರೂ ಸಹ, ಈ ಮೂರು ವೇದಾಂತ ತತ್ತ್ವಗಳನ್ನು, ಇವು ಪರಸ್ಪರ ವಿರೋಧಿಗಳಲ್ಲ, ಒಂದಕ್ಕೊಂದು ಪೂರಕ ಮೆಟ್ಟಲುಗಳೆಂದೇ ನಂಬಿದ್ದರು. ಅವರು ಹೇಳುವ ಪ್ರಕಾರ, ಬ್ರಹ್ಮವೇ ಶಕ್ತಿ ಶಕ್ತಿಯೇ ಬ್ರಹ್ಮ, ಅದ್ವೈತವು ಸಾಧನೆಯ ಕಟ್ಟ ಕಡೆಯ ಮಾತು, ಅಲ್ಲ, ಮೌನ! ಏಕೆಂದರೆ, ಅದ್ವೈತ ಸಮಾಧಿಯನ್ನು ಬಾಯಿಂದಾಡಲು ಸಾಧ್ಯವಿಲ್ಲ, ನಿಶ್ಶಬ್ದ ಅನುಭವದಲ್ಲೇ ಗುರುತಿಸಬೇಕು. ಸಮಾಧಿಯ ಅನುಭವ ಮಾತಿಗೂ

ಮನಸ್ಸಿಗೂ ಮೀರಿದ್ದು! ಈ ದೃಷ್ಟಿಯಿಂದ ನೋಡಿದರೆ, ಮನಸ್ಸು ಬುದ್ಧಿಗಳಿಗೆ, ವಿಶಿಷ್ಟಾದ್ವೈತವೇ ತುತ್ತತುದಿಯ ಸಿದ್ಧಿ. ಕುವೆಂಪು ಮನುಷ್ಯನ ಇತಿ-ಮಿತಿಗಳನ್ನು ಗುರುತಿಸದೇ ಇರುವಷ್ಟು ಉಗ್ರವಾದಿಗಳಲ್ಲ. ಹೀಗಾಗಿ, ಅವರು ಇಂದ್ರಿಯಬದ್ಧನಾದ ಸಾಧಾರಣ ಮನುಷ್ಯನಿಗೆ ದ್ವೈತವಿಲ್ಲದೇ ಬೇರೆ ಸಾಧ್ಯವಿಲ್ಲ ಎಂಬ ವ್ಯಾವಹಾರಿಕ ಸತ್ಯವನ್ನು ಮನಗಂಡಿದ್ದರು.

## ಮೂರ್ತಿಪೂಜೆಯ ಬಗ್ಗೆ ಕುವೆಂಪು

ಕುವೆಂಪು ಅಪ್ಪಟ ಅದ್ವೈತವಾದಿಗಳಾಗಿದ್ದರು. ಪೂಜೆ ಪುನಸ್ಕಾರ, ಕುರುಡು ಆಚಾರ-ಸಂಸ್ಕಾರಗಳ ಬಗ್ಗೆ ಅತೀವ ಜುಗುಪ್ಸೆ ಹೊಂದಿದ್ದರು. ಆದರೂ, ಸಾಧಾರಣ ಮನುಷ್ಯರಿಗೆ ಬ್ರಹ್ಮಸಾಕ್ಷಾತ್ಕಾರದ ಮೊದಲ ಹೆಜ್ಜೆ ಭಜನೆ, ಸಂಕೀರ್ತನೆ, ಸಾಕಾರಮೂರ್ತಿಯ ಆರಾಧನೆ ಎಂಬುದನ್ನು ಮನಗಂಡಿದ್ದರು. ಈ ಎರಡೂ ಪುಸ್ತಕಗಳಲ್ಲಿ ಅನೇಕ ಸನ್ನಿವೇಶಗಳಲ್ಲಿ ಮೂರ್ತಿಪೂಜೆಯ ಬಗ್ಗೆ ಅತ್ಯುತ್ತಮವಾದ ವಿಶ್ಲೇಷಣೆಯನ್ನು ನೀಡಿದ್ದಾರೆ. ಇವರ ಪ್ರಕಾರ, ಮಣ್ಣಿನ ಕಲ್ಲಿನ ಬೊಂಬೆಗಳು ಮಾತ್ರವೇ ಮೂರ್ತಿಗಳಲ್ಲ. ಒಂದು ಪುಸ್ತಕ, ಒಂದು ಹೆಸರು, ಒಂದು ಸ್ಥಾನ, ಒಂದು ಮಂದಿರ, ಒಂದು ಭಾವ - ಇವೆಲ್ಲವೂ ಮೂರ್ತಿಗಳೇ. ಕೆಲವು ಸ್ಥೂಲ ಮತ್ತೆ ಕೆಲವು ಸೂಕ್ಷ್ಮ ಅಷ್ಟೆ. ವೇದ, ಕುರಾನ್, ಬೈಬಲ್, ಗ್ರಂಥಸಾಹಿಬ್‌ನಂತಹ ಧರ್ಮಗ್ರಂಥಗಳನ್ನಾಗಲೀ, ಚರ್ಚು, ಮಸೀದಿ, ಗುರುದ್ವಾರ, ಮಂದಿರಗಳನ್ನಾಗಲೀ, ಕ್ರಿಸ್ತ ಶಿವ, ಮಹಮ್ಮದ, ನಾನಕರೇ ಮುಂತಾದ ಹೆಸರುಗಳನ್ನು ಪವಿತ್ರವೆಂದು ಗೌರವಿಸುವುದಾಗಲೀ, ಇವೆಲ್ಲ ಒಂದಿಲ್ಲ ಒಂದು ರೀತಿ ಮೂರ್ತಿಪೂಜೆಯ ಲಕ್ಷಣಗಳೇ. ಹಿಂದುಗಳಲ್ಲದವರು ಈ ವಿಚಾರವನ್ನು ಒಪ್ಪಲಿ ಬಿಡಲಿ ಅದು ಮೂರ್ತಿಪೂಜೆಯೇ. ಆದ್ದರಿಂದ, ಎಲ್ಲ ಮತಗಳೂ, ಎಲ್ಲ ಮಾನವರೂ ವಿಗ್ರಹಾರಾಧಕರೇ! ''ಅಹಂಕಾರ'' ಎಂಬ ವಿಗ್ರಹವನ್ನು ನಾಶಮಾಡಿಕೊಂಡಿರುವ ಮುಕ್ತರು ಮಾತ್ರ ವಿಗ್ರಹಾರಾಧಕರಲ್ಲ. ಅಹಂಭಾವವಿರುವವರೆಗೆ ''ನಿರಾಕಾರ'' ಎಂಬುವುದು ಒಂದು ಬರಿಯ ಮಾತು. ಇದು ಎಂಥ ಮನದಟ್ಟುವ ವಿವರಣೆ! ಎಂಥ ಸಕಾರಣ ತರ್ಕ! ಇಂಥ ಸುಲಭ ವಿವರಣೆಯನ್ನು ಓದಿದ ಮೇಲೆ, ರಾಮಕೃಷ್ಣರ ಸಾಧನೆ, ಹೇಗೆ ಸ್ಥೂಲ ವಿಗ್ರಹಾರಾಧನೆಯಿಂದ (ಕಾಳೀ ಪೂಜೆಯಿಂದ) ಪ್ರಾರಂಭವಾಗಿ ಸೂಕ್ಷ್ಮಭಾವದ ಆರಾಧನೆಗೆ ಏರಿ, ಕೊಟ್ಟಕೊನೆಗೆ ನಿರಾಕಾರತೆಯ ಸಿದ್ಧಿಯನ್ನು ಪಡೆಯಿತು ಎಂಬ ತರ್ಕವನ್ನು ನಂಬಲು, ಮೆಚ್ಚಲು ಸುಲಭಸಾಧ್ಯವಾಗುತ್ತದೆ.

## ಅನುಪಮ ಗುರುಶಿಷ್ಯ ಸಂಬಂಧದಿಂದ ಉದ್ಭವಿಸಿದ ಸಂದೇಶ

ದಕ್ಷಿಣೇಶ್ವರದ ರಾಮಕೃಷ್ಣರ ಗುಪ್ತಗಾಮಿನಿಯಂತಹ ವಿಚಾರವಾಹಿನಿ ಇಂದು ಇಡೀ ಭರತಖಂಡ, ಏಕೆ, ವಿಶ್ವದ ನಾನಾ ಮೂಲೆಗಳಲ್ಲಿ ಹರಿಯಲು ಕಾರಣ - ಭಾರತದ ಶೂರ

ಸನ್ಯಾಸಿ ಸ್ವಾಮಿ ವಿವೇಕಾನಂದರು. ತಮ್ಮ ಗುರುವಾಣಿಯನ್ನು ಭಾರತದಾಚೆ ಅನೇಕ ದೇಶಗಳಲ್ಲಿ ಮೊಳಗಿಸಿದ ಮಹಾನುಭಾವ ಈತ. ಕುವೆಂಪು ಹೇಳಿರುವಂತೆ, ಈತ ಸಾರುವ ಸಂದೇಶದಲ್ಲಿ, ಕಾಲದೇಶಜನಿತವಾದ ಸಂಕುಚಿತ ದೃಷ್ಟಿ ಇಲ್ಲ, ಅಸೂಯೆ ಇಲ್ಲ, ಮೂಢಬುದ್ಧಿಯ ಹ್ರಸ್ವತೆ ಇಲ್ಲ, ಅಂಧಶ್ರದ್ಧೆಯ ಕುಬ್ಜತೆ ಇಲ್ಲ. ಅದು ನಿರಂಕುಶವಾಗಿದೆ, ವಿಚಾರಪೂರ್ವಕವಾಗಿದೆ, ನಿಯಮ-ಸಂಯಮಶೀಲವಾಗಿದೆ. ಅದು ಕೇವಲ ಒಬ್ಬ ವ್ಯಕ್ತಿಯ ವಾಣಿಯಲ್ಲ, ಒಂದು ಜತೆ ಕಣ್ಣುಗಳ ಕಾಂತಿಯಲ್ಲ, ಅನೇಕ ಮಹಾಪುರುಷರ ಜೀವನಜ್ಯೋತಿಯ ಸೂತ್ರಸಮಷ್ಟಿಯಾಗಿದೆ. ಆತನ ಸಂದೇಶ ಯಾವೊಂದು ಮತಕ್ಕಾಗಲೀ, ಪಥಕ್ಕಾಗಲೀ, ಒಂದು ದೇಶ ಅಥವಾ ಜನಾಂಗಕ್ಕಾಗಲೀ ಸೇರಿದ್ದಲ್ಲ. ಅಲ್ಲಿ ಸರ್ವಧರ್ಮಸಮನ್ವಯವಿದೆ. ಇಂತಹ ಸತ್ವಯುತವಾದ ಸಂದೇಶವನ್ನು ವಿವೇಕಾನಂದರು ಕೊಡಲು ಸಮರ್ಥರಾದದ್ದಾದರೂ ಹೇಗೆ ? ರಾಮಕೃಷ್ಣರಂಥ ಪರಮಯೋಗಿ ಗುರುವಾಗಿ ಸಿಕ್ಕಿದ್ದೇ ವಿವೇಕಾನಂದರ ಯಶಸ್ಸಿಗೆ ಕಾರಣ. ವಿವೇಕಾನಂದರು ಅಸ್ಖಲಿತ ಬ್ರಹ್ಮಚಾರಿ, ಅವರ ಗುರು ವಿವಾಹಿತರಾದರೂ ಸತತವಾದ ಸಾಧನೆಯಿಂದ ಕಾಮಿನೀ-ಕಾಂಚನಗಳನ್ನು ಸಂಪೂರ್ಣವಾಗಿ ತ್ಯಜಿಸಿದ್ದ ಸರ್ವಸಂಗಪರಿತ್ಯಾಗಿ. ಸ್ತ್ರೀ-ಪುರುಷರೆಂಬ ಲಿಂಗಭೇದವನ್ನು ಚಿತ್ತದಿಂದ ಕಿತ್ತೊಗೆದು ಸ್ತ್ರೀಯರನ್ನು (ತಮ್ಮ ಧರ್ಮಪತ್ನಿಯನ್ನೂ ಸಹ) ಜಗನ್ಮಾತೆಯ ಪ್ರತಿಬಿಂಬಗಳೆಂದು ಬಗೆದ ಮಹಾತ್ಮ. ಶಾಕ್ತ, ವೈಷ್ಣವ, ಶೈವ, ಬೌದ್ಧ, ಮುಸಲ್ಮಾನ, ಕ್ರೈಸ್ತ ಮತಧರ್ಮಗಳೆಲ್ಲವೂ ಏಕಮಾತ್ರ ಧ್ಯೇಯವಾದ ಪರಮಾತ್ಮನೆಡೆಗೆ ಸಾಧಕರನ್ನು ಕೊಂಡೊಯ್ಯುವ ಮಾರ್ಗಗಳು, ಎಂಬುದನ್ನು ಪ್ರತ್ಯಕ್ಷಾನುಭವದಿಂದ ತಿಳಿದಿದ್ದ ಮಹಾಪುರುಷ. ಈ ಗುರುಶಿಷ್ಯ ಸಂಬಂಧದಲ್ಲಿ ಒಂದು ಅಲೌಕಿಕತೆ ಇದೆ, ಆ ಸಂಬಂಧ ಪ್ರಾಕೃತವಾಗಿಲ್ಲ, ಯೌಗಿಕವಾಗಿದೆ. ಅದು ಎರಡು ವ್ಯಕ್ತಿಗಳ ನಡುವಣ ಪರಿಚಯಮಾತ್ರದಂತಿಲ್ಲ. ಎರಡು ವ್ಯಕ್ತಿಗಳ ವಿದ್ಯುದಾಲಿಂಗನದಿಂದ ಹೊಮ್ಮಿದ ಅದ್ವಯವಾದ ಆತ್ಮಜ್ಯೋತಿಯಂತಿದೆ. ಅವರಿಬ್ಬರೂ ಒಂದೇ ಶಕ್ತಿಯ ಎರಡು ಮುಖಗಳು. ಒಬ್ಬರನ್ನು ಬಿಟ್ಟರೆ ಇನ್ನೊಬ್ಬರು ಅಪೂರ್ಣ. ಅವರ ಮಾತು ಕೇವಲ ಉಪದೇಶಮಾತ್ರವಲ್ಲ, ಅದೊಂದು ಆವೇಶ.

## ಚೇತನ ಅನಿಕೇತನ ಶೈಲಿ ವಿನೂತನ !

ಈ ಮಹಾತ್ಮದ್ವಯರ ಪ್ರಭಾವದಿಂದಲೇ ಕುವೆಂಪು ತಮ್ಮ ಚೇತನವನ್ನು ಕೂಗಿ ಕರೆಯುವುದು ಸಾಧ್ಯವಾಯಿತು ಎಂದು ನನಗೆ ಅನ್ನಿಸುತ್ತದೆ. "ಓ ನನ್ನ ಚೇತನ, ಆಗು ನೀ ಅನಿಕೇತನ" ಎಂದು ಆಶಿಸಲು ಸಾಧ್ಯವಾಯಿತು. "ನೂರು ಮತದ ಹೊಟ್ಟ ತೂರಿ, ಎಲ್ಲ ತತ್ತ್ವದೆಲ್ಲೆ ಮೀರಿ, ನಿರ್ದಿಗಂತವಾಗಿ ಏರಿ.... ಓ ನನ್ನ ಚೇತನ, ಆಗು ನೀ ಅನಿಕೇತನ...." ಎಂಬ ಕರೆಯಲ್ಲಿ ಈ ಮಹಾಪುರುಷರಿಬ್ಬರ ಪ್ರತಿಬಿಂಬವನ್ನು ಕಾಣದ ಓದುಗರಾರು? ಕುವೆಂಪುರವರ ಭಾಷಾ ಪ್ರಭುತ್ವ ಮತ್ತು ಲೇಖನ ಶೈಲಿಯ ಬಗ್ಗೆ ಬಹಳಷ್ಟು ಜನ ಪುಟಗಟ್ಟಲೆ

ಬರೆದು ಬಿಟ್ಟಿರುವುದರಿಂದ, ನಾನೇನು ಬರೆದರೂ ಚರ್ವಿತ-ಚರ್ವಣವಾಗುವುದರಲ್ಲಿ ಸಂದೇಹವಿಲ್ಲ. ಆದರೂ ಸನ್ಯಾಸಿಯೊಬ್ಬನ ಕತೆ ಹೇಳುವಾಗಲೂ ಎಂತೆಂತಹ ಸುಂದರ ವರ್ಣನೆಗಳು ಬರುತ್ತವೆ ಎಂಬುದಕ್ಕೆ ಒಂದೆರಡು ಸಣ್ಣ ಉದಾಹರಣೆ ಕೊಟ್ಟರೆ ಅಪ್ರಸ್ತುತವಾಗಲಾರದು. ವಿವೇಕಾನಂದರು ಕನ್ಯಾಕುಮಾರಿಯಲ್ಲಿ ಭಾರತಾಂಬೆಯನ್ನು ಚರಣಕಮಲಗಳ ತುದಿಯಿಂದ ಕಂಡು ರೋಮಾಂಚಗೊಂಡ ದೃಶ್ಯ ಓದುಗರನ್ನೂ ರೋಮಾಂಚಗೊಳಿಸದೇ ಇರುವುದಿಲ್ಲ. ಈ ದೃಶ್ಯವನ್ನು ಕುವೆಂಪುರವರ ಮಾತಿನಲ್ಲೇ ಸವಿಯೋಣ.

''.....ಆಗತಾನೇ ಪೂರ್ವದಿಗಂತದಲ್ಲಿ ಅರುಣೋದಯವಾಗುತ್ತಿತ್ತು. ನಲಿನಲಿಯುತ್ತಿದ್ದ ಕಡಲೊಡಲ ತೆರೆಗಳು ಮುಂಬೆಳಕಿನಲ್ಲಿ ಮಿಂಚುತ್ತಿದ್ದವು. ಶೈಶಿರ ಪ್ರಭಾತದ ಶೀತಲ ಸಮೀರನು ಸುಯ್ಯೆಂದು ತೀಡುತ್ತಿದ್ದನು. ಅನೇಕಾನೇಕ ಸಮುದ್ರ ಪಕ್ಷಿಗಳು ಹಿಂಜರಿಯುತ್ತಿದ್ದ ಮಂಜಿನಲ್ಲಿ ಹಾರಾಡತೊಡಗಿದ್ದವು. ತೀರದ ಕಲ್ಪವೃಕ್ಷಗಳಲ್ಲಿ ಚಿರಮರ್ಮರ ನಾದ ಮಾಡುತ್ತಿದ್ದ ತೆಂಗಿನ ಗರಿಗಳಲ್ಲಿ ವಿವಿಧ ನೆಲವಕ್ಕಿಗಳು ಇಂಚರಗೈಯ್ಯಲು ಪ್ರಾರಂಭಿಸಿದ್ದವು. ಆ ಮಧುರ ಸುಂದರ ಶಾಂತ ಸನ್ನಿವೇಶದಲ್ಲಿ ಸನ್ಯಾಸಿ ಆವೇಶವಶನಾದನು. ಆ ತಪಸ್ವಿಯ ಕಾಂತಿ ಮಿಗಿಲಾಗುತ್ತಿದ್ದ ಪ್ರಭಾತ ಪ್ರಕಾಶದೊಡನೆ ಸ್ನೇಹ ಬೆಳೆಸುತ್ತಿತ್ತು.... ಬಲಗಡೆ ಸಮುದ್ರ, ಎಡಗಡೆ ಸಮುದ್ರ, ಹಿಂದುಗಡೆ ಸಮುದ್ರ, ಮುಂದುಗಡೆ ವಿಸ್ತಾರವಾದ ತನ್ನ ಜನ್ಮಭೂಮಿ. ಮೇಲುಗಡೆ ಅನಂತವಾದ ನೀಲಾಕಾಶ, ಈ ಮಹಾವಸ್ತುಗಳ ನಡುವೆ ತಾನು!'' ವೀರಸನ್ಯಾಸಿ ವಿವೇಕಾನಂದರು ತಾಯಿಯ ಕಾಲಬಳಿ ನಿಂತಿರುವ ಚಿತ್ರ ಕಣ್ಣಿಗೆ ಬರುವುದಿಲ್ಲವೇ, ಇದನ್ನು ಓದಿದ ಮೇಲೆ ?

ಮತ್ತೊಂದು ಉದಾಹರಣೆ, ಅಮೇರಿಕದಲ್ಲಿರುವ ಸಹಸ್ರದ್ವೀಪೋದ್ಯಾನದಲ್ಲಿ ಶಿಷ್ಯರೊಬ್ಬರ ಮನೆಯಲ್ಲಿ ಸ್ವಾಮಿ ವಿವೇಕಾನಂದರು ತತ್ತ್ವ ಬೋಧನೆ ಮಾಡುತ್ತ ಕುಳಿತಿರುವ ಸನ್ನಿವೇಶದ ಸುಂದರ ವರ್ಣನೆ:''.... ಅದೊಂದು ಈಶ್ವರನಿಲಯವೇ ಆಗಿತ್ತು. ಸುತ್ತಲೂ ಮರಗಳ ದಟ್ಟವಾದ ಹಸಿರು ತಳಿರಿನ ಶ್ಯಾಮಲ ಮಂದಹಾಸ; ಆ ಶ್ಯಾಮಲ ಪರ್ಣಾರ್ಣವದಲ್ಲಿ ಮುಳುಗಿಹೋದ ಹಳ್ಳಿಯ ಮನೆಗಳು ನಮ್ಮ ಸ್ಮೃತಿಪಥದಿಂದಲೂ ಜಾರಿ ಹೋಗುತ್ತಿದ್ದುವು. ನಗರ ನಾಗರೀಕತೆಗಳಿಂದ ಅತಿದೂರವಾದ ಯಾವುದೋ ಒಂದು ಮಹಾನೀರವ ನಿಬಿಡಾರಣ್ಯದ ಮಧ್ಯೆ ಮಹರ್ಷಿಯೊಬ್ಬನ ಮುಂದೆ ಕುಳಿತಂತೆ ನಮಗೆ ಭಾಸವಾಗುತ್ತಿತ್ತು. ಲಕ್ಷಲಕ್ಷ ವೃಕ್ಷಶ್ರೇಣಿಗಳ ಆಚೆ ದಿಗಂತ ವಿಶ್ರಾಂತವಾಗಿದ್ದ ಪಸಲೆಯೊಂದು ಹಬ್ಬಿತ್ತು. ಅಲ್ಲಿದ್ದ ಕೆಲವು ಮನೆಮನೆಯ ಸೊಡರುಗಳು ಕವಿದುಬರುತ್ತಿದ್ದ ಕಗ್ಗತ್ತಲೆಯಲ್ಲಿ ಮಿಣುಕುತ್ತಿದ್ದವು. ಆದರೆ ಅವುಗಳು ಬಹುದೂರವಾಗಿದ್ದುದರಿಂದ ಚಿತ್ರಾರ್ಪಿತ ಸ್ವಪ್ನದಂತೆ ತೋರುತ್ತಿದ್ದವೇ ಹೊರತು ವಾಸ್ತವದಂತೆ ಕಾಣುತ್ತಿರಲಿಲ್ಲ. ಮಾನುಷವಾಣಿಯೊಂದೂ ನಮ್ಮ ಕಿವಿಗೆ ಬೀಳುತ್ತಿರಲಿಲ್ಲ. ಕ್ರಿಮಿಕೀಟಗಳ ಕೀಚುದನಿ, ವನವಿಹಂಗಮಗಳ ನುಣ್ಚರ, ತಳಿರ

ನಡುವೆ ಸುಳಿದಾಡುವ ತಂಗಾಳಿಯ ಸುಯ್ದನಿ! ಕೆಲವು ಸಾರಿ ಮೂಡಿದ ತಿಂಗಳ ಬೆಳ್ದಿಂಗಳ ಮನೋಹರವಾದ ಕಾಂತಿಯ ಇಂಪಿನಿಂದ ದೃಶ್ಯ ಸ್ವರ್ಗೀಯವಾಗುತ್ತಿತ್ತು. ನುಣ್ಣನೆಯ ನೀರಿನ ಸಣ್ಣ ಸಣ್ಣಲೆಗಳು ಕೌಮುದಿಯನ್ನು ಕನ್ನಡಿಸಿ ಕೋಟ್ಯಾನುಕೋಟಿ ಮಿಣುಕುಹುಳಗಳ ಮಂದೆಯಂತೆ ತಳತಳಿಸಿ ಮಿಂಚುತ್ತಿದ್ದವು. ಇಂತಹ ಅಲೌಕಿಕ ಸುಂದರ ಸಮ್ಮೋಹಕ ಸನ್ನಿವೇಶದಲ್ಲಿ,' ಮರೆತ ಲೋಕವ ಬಗೆಗೆ ಸುಳಿಸುವ ಮರೆವ ಲೋಕದಲಿ' ನಮ್ಮ ಪ್ರಿಯ ಆಚಾರ್ಯನ ದಿವ್ಯ ಸನ್ನಿಧಿಯಲ್ಲಿ ಆತನ ಮಂಗಳಮಯವಾದ ಉಪದೇಶಗಳನ್ನು ಕೇಳುತ್ತ ನಾಲ್ಕು ವಾರಗಳನ್ನು ಕಳೆದೆವು....'' ('ಹರಿದಾಸಿ' ಎಂಬ ಹೆಸರಿನಿಂದ ಮುಂದೆ ಪ್ರಸಿದ್ಧಳಾದ ಸ್ವಾಮಿ ವಿವೇಕಾನಂದರ ಶಿಷ್ಯೆ ಮಿಸ್ ವಾಲ್ಡೊ ಎಂಬ ಮಹಿಳೆಯ ವರ್ಣನೆಯ ಆಧಾರದಮೇಲೆ ಸೈಂಟ್ ಲಾರೆನ್ಸ್ ನದಿಯ ದಡದಲ್ಲಿರುವ ಸಹಸ್ರದ್ವೀಪೋದ್ಯಾನದ ಸುತ್ತಲಿನ ಪ್ರಕೃತಿಯ ವರ್ಣನೆ ನೋಡಿದವರಿಗಿಂತ ಚೆನ್ನಾಗಿ ತಮ್ಮದೇ ಬಣ್ಣನೆ ಎಂಬಷ್ಟು ಸಹಜವಾಗಿಸುವ ಕವಿಚಮತ್ಕಾರವನ್ನು ಗಮನಿಸಿ! ಹೀಗೇ ಬರೆಯುತ್ತ ಹೋದರೆ, ಪುಟಗಟ್ಟಲೆ ಇಂತಹ ಸುಂದರ ವರ್ಣನೆಗಳ ಉದಾಹರಣೆಗಳಿವೆ. ಸಂಸ್ಕೃತ ಪದಪುಂಜಗಳ ಬಳಕೆ ಒಮ್ಮೊಮ್ಮೆ ಅಬ್ಬರವೆನ್ನಿಸುವಷ್ಟು ಅತಿಯಾಗುವುದೆಂಬ ಕೆಲವರ ಆಕ್ಷೇಪಣೆ ಕೇಳಿಬರುತ್ತದೆಯಾದರೂ, ತಿಳಿಗನ್ನಡವನ್ನೂ ಲೀಲಾಜಾಲವಾಗಿ ಬಳಸುವ ಇವರ ಶೈಲಿ ಅನುಪಮವಾದದ್ದು, ಅಮೋಘವಾದದ್ದು, ಅಪೂರ್ವವಾದದ್ದು ಅನ್ನುವ ವಿಷಯದಲ್ಲಿ ಎರಡು ಅಭಿಪ್ರಾಯಗಳಿಲ್ಲ.

### ''ಪುಟ್ಟಪ್ಪ ಸತ್ತುಹೋದ; ನಾನು ವಿವೇಕಾನಂದ''

ಕುವೆಂಪು ಅವರಿಗೆ ಪರಮಹಂಸ, ಶ್ರೀಮಾತೆ (ಅಂದರೆ ರಾಮಕೃಷ್ಣರ ಧರ್ಮಪತ್ನಿ ಶಾರದಾದೇವಿ) ಮತ್ತು ಸ್ವಾಮಿ ವಿವೇಕಾನಂದರಲ್ಲಿ ಅಪಾರ ಭಕ್ತಿ ಬರಲು ಅನೇಕ ಕಾರಣಗಳಿವೆ. ಚಿಕ್ಕಂದಿನಿಂದ ಮೈಸೂರು ಮಠದ ಸ್ವಾಮಿ ಸಿದ್ಧೇಶ್ವರಾನಂದರ ಮಾರ್ಗದರ್ಶನ ಒಂದಾದರೆ, ಶ್ರೀಮಾತೆಯ ಜನ್ಮತಿಥಿ ಮಾರ್ಗಶೀರ್ಷ ಸಪ್ತಮೀ ಪುಟ್ಟಪ್ಪನವರ ಜನ್ಮತಿಥಿಯೂ ಆಗಿರುವ ಆಕಸ್ಮಿಕ ಸಂಯೋಗವೂ ಒಂದಿರಬಹುದು. ಕುವೆಂಪು ಆತ್ಮಕಥನ ''ನೆನಪಿನ ದೋಣಿಯಲ್ಲಿ'' ಕೃತಿಯ ಬಗ್ಗೆ ಮೊದಲೆ ತಿಳಿಸಿದ್ದೇನೆ. ಐವತ್ತೊಂಬತ್ತನೆಯ ಅಧ್ಯಾಯದಲ್ಲಿ ಕುವೆಂಪು ತಮ್ಮ ಜೀವನದ ಅತಿ ವಿಚಿತ್ರ ಘಟನೆಗಳಲ್ಲೊಂದರ ಬಗ್ಗೆ ದೀರ್ಘವಾಗಿ ಬರೆದಿದ್ದಾರೆ. ಆಗ ಅವರು ಬಿ.ಎ. ಮುಗಿಸಿ ಪ್ರಥಮ ಎಮ್.ಎ. ಓದುತ್ತಿದ್ದರು. ಜೋಗ್ ಜಲಪಾತಕ್ಕೆ ಪ್ರವಾಸ ಹೊರಟಿದ್ದಾಗ ಇದ್ದಕ್ಕಿದ್ದಹಾಗೆ ದೊಡ್ಡ ಸಿಡುಬಿಗೆ ತುತ್ತಾಗಿ ಇನ್ನೇನು ಇವರ ಕತೆ ಮುಗಿಯಿತು ಅನ್ನುವ ಸಂದರ್ಭ ಬಂದು ಅವರಿಗೆ 'ಬುದ್ಧಿವಿಕಲ್ಪ'ವಾಗುವಷ್ಟು ಖಾಯಿಲೆ ಆಯಿತಂತೆ. ಆ ಸಂದರ್ಭದಲ್ಲಿ ಇವರಿಗೆ ಮೈಮೇಲೆ ವಿವೇಕಾನಂದರ ಆವಾಹನೆ ಆದಂತೆ ಭಾಸವಾಯಿತೆಂದು ಬರೆದಿದ್ದಾರೆ. (ಈ ವಿಷಯವನ್ನು ನನ್ನ ಗಮನಕ್ಕೆ ತಂದದ್ದೇ ಅಲ್ಲದೇ

ಅದಕ್ಕೆ ಸಂಬಂಧಪಟ್ಟ 'ನೆನಪಿನ ದೋಣಿಯಲ್ಲಿ'ನ ಭಾಗಗಳನ್ನು ಸಹ ಸಕಾಲಕ್ಕೆ ಒದಗಿಸಿದ ಹಿರಿಯ ಗೆಳೆಯ ಎಚ್.ವೈ. ರಾಜಗೋಪಾಲರಿಗೆ ನಾನು ಋಣಿ.) ತಮಗೆ ಸನ್ನಿಯಾಗಿ ಸಿಡುಬಿನಿಂದ ಬಳಲುತ್ತಿದ್ದಾಗ ಹತ್ತಿರದಲ್ಲಿದ್ದ ಸೇವಕ ಮುದುಕನೊಬ್ಬ "ರೂಪಸಾದೃಶ್ಯದಿಂದಲೋ" ಏನೋ ರಾಮಕೃಷ್ಣರಂತೆ ಕಂಡಿದ್ದನಂತೆ. ಖಾಯಿಲೆಯಿಂದ ದಣಿದಿದ್ದ ಇವರನ್ನು "ನೀನು ಯಾರು" ಎಂದು ಯಾರಾದರೂ ಕೇಳಿದರೆ, "ನಾನು ವಿವೇಕಾನಂದ" ಎನ್ನುತ್ತಿದ್ದರಂತೆ! "ಪುಟ್ಟಪ್ಪ" ಎಂದು ಕರೆದರೆ, "ಪುಟ್ಟಪ್ಪ ಸತ್ತು ಹೋದ" ಎನ್ನುತ್ತಿದ್ದರಂತೆ! ತಾವು ವಿವೇಕಾನಂದರೆಂದೇ ತಾತ್ಕಾಲಿಕವಾಗಿ ಭಾವಿಸಲು ಕಾರಣವನ್ನು ಸಹ ಅವರೇ ವಿವರಿಸಿದ್ದಾರೆ: "ಯಾವುದಾದರೂ ಆದರ್ಶವನ್ನು ನಾವು ಮೆಚ್ಚಿ, ಪೂಜಿಸಿ, ಉಪಾಸಿಸಿ, ಮೂರುಹೊತ್ತೂ ಅದನ್ನೇ ಧ್ಯಾನಿಸಿ ಆಹ್ವಾನಿಸುತ್ತಿದ್ದರೆ ಕ್ರಮೇಣ 'ಭ್ರಮರಕೀಟ' ನ್ಯಾಯದಂತೆ ಕೀಟತ್ವವಳಿದು ಭ್ರಮರತ್ವ ಪರಿಣಮಿಸುವಂತೆ ಸದಾ ವಿವೇಕಾನಂದರನ್ನೇ ಕುಳಿತು ಆಲೋಚಿಸುತ್ತಾ, ಧ್ಯಾನಿಸುತ್ತಾ ಅವರ ಕೃತಿಗಳನ್ನೇ ಅಧ್ಯಯನ ಮಾಡುತ್ತಾ ಇದ್ದುದರಿಂದ 'ನನ್ನನಳಿಸಿ ನೀನೇ ನೆಲೆಸು ಹೃದಯಪದ್ಮ ದಲದಲಿ' ಎಂಬ ರವೀಂದ್ರರ ಒಂದು ಪ್ರಾರ್ಥನೆಯಲ್ಲಿ ಬರುವ ಅಭೀಪ್ಸೆಯಂತೆ ಪುಟ್ಟಪ್ಪತ್ವವನ್ನಳಿಸಿ ವಿವೇಕಾನಂದತ್ವ ನೆಲೆಸಿತೆಂದು ಭಾವಿಸೋಣವೇ?" ಎಂದು ತಮ್ಮನ್ನು ತಾವೇ ಕೇಳಿಕೊಳ್ಳುತ್ತಾರೆ! ತಾತ್ಕಾಲಿಕವಾಗಿ ಅವರಿಗೊದಗಿದ್ದ ಭಾವುಕತೆಯು ಇತರರ ಕಣ್ಣಿಗೆ ಹುಚ್ಚಿನಂತೆ ಕಂಡಿದ್ದರೆ ಆಶ್ಚರ್ಯವೇನಿಲ್ಲ (ರಾಮಕೃಷ್ಣರನ್ನೂ ಅನೇಕರು ಹುಚ್ಚರೆಂದೇ ತಿಳಿದಿದ್ದರಲ್ಲವೇ?) ಆದರೆ, ಅವರೇ ಹೇಳಿರುವಂತೆ "ಲೋಕರಂಗದ ಹುಚ್ಚನ್ನು ಕಲಾರಂಗಕ್ಕೆ ವರ್ಗಾಯಿಸುವುದೇ ಕಾವ್ಯರಂಗದ ಯಶಸ್ಸಿದ್ಧಿ!" ಕುವೆಂಪುರವರಿಗೆ ಕಾವ್ಯರಂಗದ ಯಶಸ್ಸಿದ್ಧಿ ದೊರಕಿತೆಂಬುದು ಕನ್ನಡ ಸಾರಸ್ವತಲೋಕದಲ್ಲಿ ಯಾರಿಗೆ ತಾನೇ ಗೊತ್ತಿಲ್ಲ?

"ಪರಬ್ರಹ್ಮ ಎನಗೆ ತಂದೆ, ಮಹಾಕಾಳಿ ಎನ್ನ ತಾಯಿ; ರಾಮಕೃಷ್ಣರೆನಗೆ ಗುರುವು, ಶ್ರೀ ವಿವೇಕಾನಂದರೆನಗೆ ಗುರುಭಾಯಿ" ಎಂದು ಬರೆದು ತಾವೂ ವಿವೇಕಾನಂದರೂ ಒಂದೇ ಗುರುವಿನ ಶಿಷ್ಯಸೋದರರು ಎಂದು ಸಾರಿದ್ದರು. ಅಷ್ಟಕ್ಕೇ ತೃಪ್ತರಾಗದೇ "ರಾಮಕೃಷ್ಣದೇವರೆಂದು ಎನ್ನ ಕರೆವರೋ ಅಂದು ಗೆಳೆಯ ಮೃತ್ಯುವೊಡನೆ ಕೂಡಿ ನಲಿದು ಹಾಡಿ ಬಾಲನಂತೆ ನಗುತ ತೆರಳುವೆ" ಅನ್ನುವ ಕವನವನ್ನು ಬರೆದರೂ ಪ್ರಕಟಿಸದೇ ಇಟ್ಟುಕೊಂಡಿದ್ದು ಕೊನೆಗೂ ತಮ್ಮ ನೆನಪಿನದೋಣಿಯಲ್ಲಿ ಪ್ರಕಟಿಸಿಬಿಟ್ಟರು. ತಾವೂ ರಾಮಕೃಷ್ಣರೂ ಒಂದೇ ಎಂಬರ್ಥ ಬರುವ ಈ ಕವನ ಸ್ವಲ್ಪ ಅತಿಯಾಯಿತೇನೋ ಎಂದು ಸ್ವಾಮಿ ಸಿದ್ಧೇಶ್ವರಾನಂದರೂ ಎಚ್ಚರಿಸಿದ್ದರು, ಪುಟ್ಟಪ್ಪನವರೂ ನಂಬಿದ್ದರು. (ಸಂಶಯಪಟ್ಟಿದ್ದರು?). ಆದರೇನು, ನಿಜವಾದ ಅದ್ವೈತಿಗೆ ಇದು ಸೂಕ್ತವಾದ ನಿಲುವೇ ಎಂದು ಸಮಾಧಾನಪಟ್ಟುಕೊಳ್ಳಬಹುದು!

## ಉಪಸಂಹಾರ

ಕುವೆಂಪುರವರನ್ನು ನನ್ನ ಜೀವನದಲ್ಲಿ ಒಂದೇ ಬಾರಿ ಮುಖತಃ ನೋಡಿರುವುದು. ಆಗ ನಾನು ಮಾಧ್ಯಮಿಕ ಶಾಲೆಯಲ್ಲಿ ಕಲಿಯುತ್ತಿದ್ದೆ. ಹಾಸನದ ಇಂಟರ್‌ಮೀಡಿಯಟ್ ಕಾಲೇಜನ್ನು ಪ್ರಥಮದರ್ಜೆ ಕಾಲೇಜಾಗಿ ಪರಿವರ್ತಿಸಿದಾಗ (ಸುಮಾರು ೧೯೫೬-೫೭ ಎಂದು ನನ್ನ ನೆನಪು) ಮುಖ್ಯಮಂತ್ರಿ ಬಿ.ಡಿ. ಜತ್ತಿ ಮುಖ್ಯ ಅತಿಥಿಯಾಗಿ, ಮತ್ತು ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿದ್ದ ಕುವೆಂಪು ಅಧ್ಯಕ್ಷರಾಗಿ ಆಹ್ವಾನಿತರಾಗಿದ್ದರು. ನಮ್ಮ ತಂದೆಯವರ ಜೊತೆ ಹೋಗಿ ಪುಟ್ಟಪ್ಪನವರ ಭಾಷಣವನ್ನು ಕೇಳಿದ್ದು ಚೆನ್ನಾಗಿ ನೆನಪಿದೆ. ಈ ಭಾಷಣದ ಮಿಕ್ಕೆಲ್ಲ ಸಂಗತಿಗಳು ಮರೆತು ಹೋಗಿದ್ದರೂ ಅವರು ಮಾಡಿದ ಒಂದು 'ಜೋಕು' ಮಾತ್ರ ಚೆನ್ನಾಗಿ ನೆನಪಿದೆ. ''ಬಿ.ಡಿ. ಜೆತ್ತಿಯವರನ್ನು ಮತ್ತು ನನ್ನನ್ನು ಇದೇ ಮೊದಲ ಬಾರಿಗೆ ನೋಡುತ್ತಿರುವವರು ಇಲ್ಲಿ ಕೆಲವರು ಇರಬಹುದು. ಅವರೆಲ್ಲಾ ಜತ್ತಿಯವರನ್ನೇ 'ಪುಟ್ಟಪ್ಪ' ಎಂದೂ ನನ್ನನ್ನೇ 'ಜಟ್ಟಿ' ಎಂದೂ ತಪ್ಪು ತಿಳಿದುಕೊಳ್ಳುವ ಸಾಧ್ಯತೆ ಇದೆ'' ಎಂದಾಗ ಸಭಾಸದರೆಲ್ಲ ಹೊಟ್ಟೆ ಹುಣ್ಣಾಗುವಷ್ಟು ನಕ್ಕರು. (ಪುಟ್ಟಪ್ಪ ಆಜಾನುಬಾಹು, ಜಟ್ಟಿಯಂತೆ ಕಾಣುತ್ತಿದ್ದರು, ಜತ್ತಿ ಬಹಳ ಪುಟ್ಟದಾಗಿ ಕಾಣುತ್ತಿದ್ದರೆಂಬುದು ನನ್ನ ಕಣ್ಣ ಮುಂದೆ ನಿಂತುಬಿಟ್ಟಿದೆ!) ಅವರ 'ಬೊಮ್ಮನಹಳ್ಳಿಯ ಕಿಂದರಿಜೋಗಿ'ಯನ್ನು ಬಾಯಿಪಾಠ ಮಾಡಿದವರಿಗೆಲ್ಲ ನಮ್ಮ ತಂದೆ ಎಂಟಾಣೆ ಬಹುಮಾನ ಕೊಡುತ್ತಿದ್ದರು. (ನಮ್ಮ ದೊಡ್ಡಣ್ಣ ಮಾತ್ರ ತಪ್ಪದೇ ಒಪ್ಪಿಸಿ ಬಹುಮಾನ ಪಡೆದರೆಂದು ಕೇಳಿಬಲ್ಲೆ!) ಅವರ ''ಕುಮಾರವ್ಯಾಸನು ಹಾಡಿದನೆಂದರೆ'' ಪದ್ಯ ನನ್ನ ಬಾಲ್ಯದ ಪ್ರಿಯ ಕವನಗಳಲ್ಲೊಂದಾಗಿತ್ತು. (ಅದನ್ನು ಅನುಕರಿಸಿ ಕೆಲವು ಪದ್ಯಗಳನ್ನು ನಾನು ಶಾಲಾ ವಿದ್ಯಾರ್ಥಿಯಾಗಿದ್ದಾಗಲೇ ಬರೆದಿದ್ದೆ.) ಅಂದಿನಿಂದ ಇಂದಿನವರೆಗೂ ಕುವೆಂಪು ಕನ್ನಡ ಕವಿಗಳಲ್ಲಿ ನನಗೆ ಮೆಚ್ಚಿನ ಕವಿಯಾಗೇ ಉಳಿದಿದ್ದಾರೆ.

ನಾನು ಈ ಲೇಖನದಲ್ಲಿ ಶ್ರೀ ರಾಮಕೃಷ್ಣರ ಅಥವಾ ಸ್ವಾಮೀ ವಿವೇಕಾನಂದರ ಕತೆಯನ್ನು ಹೇಳಲು ಯತ್ನಿಸಿಲ್ಲ. ತಾರುಣ್ಯದಲ್ಲೇ ಬರೆದದ್ದಾದರೂ ಇವರ ಬರಹಗಳಲ್ಲಿ ಬಹುಕಾಲ ಉಳಿಯಬಹುದಾದ ಈ ಇಬ್ಬರು ಮಹಾಪುರುಷರ ಜೀವನಚರಿತ್ರೆಗಳ ಮೂಲಕ ಕುವೆಂಪು ಜೀವನದೃಷ್ಟಿಯ ಬಗ್ಗೆ ಮತ್ತು ಅವರ ಆಧ್ಯಾತ್ಮಿಕತೆಯ ಬಗ್ಗೆ ಒಂದು ಸ್ಥೂಲ ಚಿತ್ರವನ್ನು ಬಿಡಿಸಲು ಯತ್ನಿಸಿದ್ದೇನೆ. ಈ ಯತಿದ್ವಯರು ಅವರ ಜೀವನದ ಮೇಲೆ ಅಪಾರವಾದ ಪ್ರಭಾವ ಉಂಟುಮಾಡಿದ್ದಾರೆಂದು ಮತ್ತೆ ಮತ್ತೆ ಹೇಳುವ ಅಗತ್ಯವಿಲ್ಲ. ಈ ಎರಡೂ ಪುಸ್ತಕಗಳನ್ನೋದದೇ ಕುವೆಂಪುರವರ ಆಧ್ಯಾತ್ಮಚಿಂತನೆಯನ್ನು ಅರಿತುಕೊಳ್ಳುವುದು ಕಷ್ಟ. ಈ ಲೇಖನದಲ್ಲಿ ನನ್ನದೆಂಬುದು ಅತ್ಯಲ್ಪ. ಅವರ ಎರಡು ಪುಸ್ತಕಗಳನ್ನೋದಿ ಗ್ರಹಿಸಿದ ಆಧ್ಯಾತ್ಮ ವಿಚಾರಗಳನ್ನು ಸಂಗ್ರಹಿಸಿ, ಸಂಕುಚಿಸಿ, ಸಾಕಷ್ಟು ಸರಳೀಕರಿಸಿ

ಸಂಕ್ಷೇಪಗೊಳಿಸಿರುವುದರಿಂದ ನನ್ನ ಕೈಮೀರಿ ವಸ್ತುವಿಗೆ ಅಪಚಾರವಾಗಿರಲೂ ಬಹುದು. ಹಾಗೇನಾದರೂ ದೋಷವಿದ್ದರೆ ಅದು ನನ್ನದೇ ವಿನಾಃ ಮೂಲ ಪುಸ್ತಕಗಳದ್ದಲ್ಲ.

ಈ ಲೇಖನವನ್ನೋದಿ ಉಚಿತ ಸಲಹೆಗಳನ್ನಿತ್ತ ಮೇರಿಲ್ಯಾಂಡಿನಲ್ಲಿರುವ, ಸಿಲ್ವರ್ ಸ್ಪ್ರಿಂಗ್ ಶಾಖೆಯ ಶ್ರೀ ರಾಮಕೃಷ್ಣಾಶ್ರಮದ ಸ್ವಾಮಿ ಬ್ರಹ್ಮರೂಪಾನಂದರಿಗೆ ನಾನು ಚಿರಋಣಿ.

●

# ಯುಗದ ಕವಿ ಕುವೆಂಪು

ಪ್ರಕಾಶ್ ಹೇಮಾವತಿ, ಇಲಿನಾಯ್

ಕುವೆಂಪು ಅಂತಹ ಮಹಾನ್ ವ್ಯಕ್ತಿಯ ಬಗ್ಗೆ ಬರೆಯುವುದಕ್ಕೂ ಅರ್ಹತೆ ಇರಬೇಕೆಂದೆನಿಸುತ್ತದೆ. ಅವರ ಕೃತಿಗಳಿಂದ ಪಡೆಯುತ್ತಿರುವ ಸಾಹಿತ್ಯ, ನಿಸರ್ಗ, ಜೀವನ, ಕಾವ್ಯ, ಕಲಾತ್ಮಕತೆ, ಸೌಂದರ್ಯ, ಸಂಸ್ಕೃತಿ, ಪರಂಪರೆಗಳ ಪರಿಚಯ, ತಿಳಿವು, ಅನುಭವಗಳೊಂದಿಗೆ ಬೆಳೆಯುತ್ತಿರುವ ನನಗೆ ಅವರ ಬಗ್ಗೆ ಬರೆಯಲು ಅರ್ಹತೆ ಇಲ್ಲದಿದ್ದರೂ ಸ್ವಾರ್ಥವೊಂದಿದೆ. ಇದರಿಂದಾಗಿ ಈ ನನ್ನ ನಾಲ್ಕು ಸಾಧಾರಣ ನುಡಿಗಳು ಕುವೆಂಪು ಕುರಿತ ಕೃತಿಗೆ ತಕ್ಕುದಲ್ಲವಾಗಿದ್ದರೆ ಓದುಗರು ಅದನ್ನು ಮನ್ನಿಸುತ್ತಾರೆ ಎಂದುಕೊಂಡಿದ್ದೇನೆ.

ಕಾವ್ಯ, ನಾಟಕ, ಕಥೆ, ಕಾದಂಬರಿ, ಮೀಮಾಂಸೆಗಳೆಲ್ಲದರಲ್ಲಿ ವಿಶೇಷ ಜ್ಞಾನ ಹೊಂದಿದ್ದ ಕುವೆಂಪು ಅವರ ವ್ಯಕ್ತಿತ್ವ ಅವರ ಕೃತಿಗಳಂತೆಯೇ ಅಸಾಧಾರಣವಾದದ್ದು. ಮೊದಲ ನೋಟಕ್ಕೇ ಅವರ ವ್ಯಕ್ತಿತ್ವ ನಮ್ಮೆಲ್ಲಾ ಸಂಸ್ಕೃತಿ, ಪರಂಪರೆ, ಧಾರ್ಮಿಕತೆ, ಭಾರತೀಯತೆಗಳ ಸಮಾವೇಶವೆಂಬಂತೆ ಭಾಸವಾಗುತ್ತದೆ. ಬದುಕಿನ ಎಂತಹ ಕ್ಷುಲ್ಲಕ ಸಂಗತಿಗಳನ್ನೂ ತಾತ್ಸಾರದಿಂದ ನೋಡದೆ ಎಲ್ಲವನ್ನೂ ಸುಂದರವಾದ ಸ್ವಚ್ಛ ಮನಸ್ಸಿನಿಂದ ನೋಡುವ ಕುವೆಂಪು ಅವರ ಜೀವನ ದೃಷ್ಟಿಯನ್ನು ಅರ್ಥಮಾಡಿಕೊಂಡು ಅಳವಡಿಸಿಕೊಂಡರೆ ಬದುಕಿನಲ್ಲಿ ಒಳ್ಳೆಯದನ್ನೂ, ಉನ್ನತವಾದದ್ದನ್ನೂ ಸಾಧಿಸಿದ ಸಂತೃಪ್ತಿ ಒದಗುತ್ತದೆ.

ಶ್ರೀ ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ಅರವಿಂದರು, ಹಾಗೂ ಮಹಾತ್ಮ ಗಾಂಧೀಜಿಯವರ ದಿವ್ಯ ಪ್ರಭಾವಕ್ಕೆ ಒಳಗಾಗಿದ್ದ ಕುವೆಂಪು ಅವರು ಸಮಾಜದ ಹಾಗೂ ದೇಶದ ಆಗುಹೋಗುಗಳ ಬಗ್ಗೆ ಅಸಾಧಾರಣವಾದ ಸಾಮಾಜಿಕ ಪ್ರಜ್ಞೆ ಇದ್ದು, ಒಬ್ಬ ಲೇಖಕನಾಗಿ, ತತ್ವಜ್ಞಾನಿಯಾಗಿ ತಮ್ಮ ಕರ್ತವ್ಯ, ಜವಾಬ್ದಾರಿಗಳನ್ನು ಅತ್ಯಂತ ನಿಷ್ಠೆಯಿಂದ, ಕಾಳಜಿಯಿಂದ, ಪ್ರೀತಿಯಿಂದ ನಿಭಾಯಿಸಿದ್ದಾರೆ. ಅವರು ಬರೆದಿರುವ ಅನೇಕ ಸ್ವಾತಂತ್ರ್ಯ ಗೀತೆಗಳು, ಮೂಢನಂಬಿಕೆ, ಅನಾಚಾರ, ದುರ್ವ್ಯವಸ್ಥೆಗಳ ಬಗೆಗಿನ ಖಂಡನೆಯ ಕವನಗಳು ಅವರ ಸಾಮಾಜಿಕ ಪ್ರಜ್ಞೆ, ಕಳಕಳಿಗೆ ಸಾಕ್ಷಿಯಾಗಿವೆ. ಅತ್ಯಂತ ಧಾರ್ಮಿಕರಾಗಿದ್ದ ಕುವೆಂಪು ಅವರು ದೇಶದ ಬಡತನ, ದಾರಿದ್ರ್ಯತೆಗಳ ಕರಾಳತೆಯಿಂದ ನರಳುತ್ತಿರುವ ಜನರ ನೋವನ್ನು ಕಂಡು ಸಹಿಸಲಾರದೆ 'ಗುಡಿ ಚರ್ಚು ಮಸೀದಿಗಳಿಂದ ಹೊರಬಂದು ಬಡತನದ ನಿರ್ಮೂಲನಕ್ಕೆ ಕಂಕಣಬದ್ಧರಾಗಿ' ಎಂದು ಹೇಳಲೂ ಹಿಂಜರಿಯಲಿಲ್ಲ. ಅವರ ಈ ನಿಲುವು

ಅವರಿಗಿದ್ದ ಮಾನವತೆಗೆ ಸಾಕ್ಷಿಯಾಗಿದೆ. ತಮ್ಮದೇ ಸಾಹಿತ್ಯ ಲೋಕದಲ್ಲಿ ಮೈಮರೆಯದೆ ಸುತ್ತಲಿನ ಜನ ಜೀವನದ ಬಗೆಗೂ ಆಳವಾದ ಕಾಳಜಿಯಿದ್ದ ಕುವೆಂಪು ಅವರ ವ್ಯಕ್ತಿತ್ವ ಅವೆರಡರ ಒಂದು ಅಪೂರ್ವ ಸಂಗಮವಾಗಿತ್ತು. ಮಹಾಕಾವ್ಯಗಳ ಕಾಲ ಮುಗಿಯಿತು ಎನ್ನುವ ಕಾಲದಲ್ಲೇ ಮಹಾಕಾವ್ಯಗಳ ಎಲ್ಲ ಅಂತಃಸತ್ವವನ್ನು ಹೀರಿಕೊಂಡು ಉದಯಿಸಿದ ಮಹಾ ಛಂದಸ್ಸಿನ 'ಶ್ರೀ ರಾಮಾಯಣ ದರ್ಶನಂ' ಕನ್ನಡ ಸಾಹಿತ್ಯ ಇರುವವರೆಗೂ ವಿಶೇಷ ಸ್ಥಾನದಲ್ಲಿ ವಿಜೃಂಭಿಸುವುದರಲ್ಲಿ ಸಂಶಯವಿಲ್ಲ. 'ಶ್ರೀ ರಾಮಾಯಣ ದರ್ಶನಂ' ನಂತರ ಅಂತಹ ಮಹಾಕಾವ್ಯಗಳು ಇದುವರೆವಿಗೂ ಬಂದಿಲ್ಲ. ಮುಂದೆ ಬರುವ ಸಂಭವವೂ ಕಡಿಮೆಯೇ.

ಸುಂದರವಾದ, ಕಲಾತ್ಮಕವಾದ ಅವರ ಭಾಷಾ ಶೈಲಿ, ವಿಷಯ ವೈವಿಧ್ಯತೆ, ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ಅವರಿಗಿದ್ದ ಪಾಂಡಿತ್ಯ, ಸಾಧಿಸಿದ್ದ ವಿಶೇಷತೆ ಇವೆಲ್ಲವುಗಳಿಗೆ ಪೂರಕವಾಗಿದ್ದ ಅವರ ವ್ಯಕ್ತಿತ್ವ ಜಗತ್ತಿನಲ್ಲಿ ಈ ಶತಮಾನದ ಸಾಹಿತಿಗಳಲ್ಲಿ ಅವರನ್ನು ಅಗ್ರಗಣ್ಯರನ್ನಾಗಿಸಿವೆ. ಅವರ ಗದ್ಯ ಶೈಲಿಯೂ ಕಾವ್ಯದಷ್ಟೇ ಸುಂದರವಾಗಿ ಮನಮೋಹಕವಾಗಿದೆ. ಕಾವ್ಯದ ಎಲ್ಲಾ ಬಾಹ್ಯ ಲಕ್ಷಣಗಳನ್ನೊಳಗೊಂಡಿರುವ ಅವರ ಗದ್ಯವೂ ಕಾವ್ಯದಷ್ಟೇ ಸಂತೃಪ್ತಿಯನ್ನು ನೀಡಲು ಸಮರ್ಥವಾಗಿವೆ. ವೈಚಾರಿಕತೆಯೇ ಮೂಲ ತತ್ವವಾಗಿರುವ ಇವರ ಸಾಹಿತ್ಯದಲ್ಲಿ ಜೀವನದ ನಾನಾ ವಿಚಾರಗಳು ಹಾಗೂ ಮೌಲ್ಯಗಳು ಪರಿಣತವಾಗಿ ಆವಿಷ್ಕಾರಗೊಂಡು ಗಾಢವಾದ ಜೀವನ ಶ್ರದ್ಧೆಯನ್ನು ನಿರೂಪಿಸುತ್ತವೆ. ಮನುಷ್ಯರ ಜೀವನದಲ್ಲಿ ಹಾಸುಹೊಕ್ಕಾಗಿರುವ ಎಲ್ಲಾ ಪ್ರಾಕೃತಿಕ, ದೈಹಿಕ ಹಾಗೂ ಮಾನಸಿಕ ಕ್ರಿಯೆಗಳು ಯಾವ ಭಾವೋನ್ಮಾದಕ್ಕೂ ಒಳಗಾಗದೆ ಸಹಜ ರೀತಿಯಲ್ಲಿ ನಿರೂಪಣೆಗೊಂಡು ಬದುಕನ್ನು ನೋಡುವ ಹೊಸದೃಷ್ಟಿಯನ್ನೇ ಪ್ರತಿಪಾದಿಸುತ್ತವೆ.

ತಮ್ಮ ಇಪ್ಪತ್ತ ನಾಲ್ಕನೇ ವಯಸ್ಸಿನಲ್ಲಿಯೇ 'ಬೊಮ್ಮನಹಳ್ಳಿಯ ಕಿಂದರಿ ಜೋಗಿ' ಯನ್ನು ಬರೆದು ಕನ್ನಡಿಗರ ಮನೆ ಮಾತಾದ ಕುವೆಂಪು ಅವರ ಸಾಹಿತ್ಯಿಕ ಬೆಳವಣಿಗೆಯನ್ನು ಅಭ್ಯಸಿಸಿದರೆ, ಅವರ ಬೆಳವಣಿಗೆ ಎಂತಹವರಿಗೂ ಆಶ್ಚರ್ಯವಾಗುವುದು ಸಹಜ. ಭಾವಗೀತೆಗಳ ಎಲ್ಲಾ ಪ್ರಕಾರದ ಮೇಲೆ ಪರಿಪೂರ್ಣತ್ವ ಸಾಧಿಸಿದ ಮೇಲೆ, 'ಶ್ರೀ ರಾಮಾಯಣ ದರ್ಶನಂ' ನಂತಹ ಮಹಾಕಾವ್ಯದ ರಚನೆಗೆ ಪೂರ್ವ ಪೀಠಿಕೆಯಾಗಿ 'ಚಿತ್ರಾಂಗದ'ವನ್ನು ರಚಿಸಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಮಹೋಪಮೆಗಳೇ ವಿರಳವಾಗಿದ್ದಾಗ ಮಹೋಪಮೆಗಳ ಮಹಾಪೂರದಲ್ಲಿ 'ಚಿತ್ರಾಂಗದ'ವನ್ನು ರಚಿಸಿ ಕನ್ನಡ ಕಾವ್ಯಲೋಕಕ್ಕೆ ಮಹೋನ್ನತವಾದ ವೈಶಿಷ್ಟ್ಯತೆಯನ್ನು ಒದಗಿಸಿದ್ದಾರೆ. ಏಳು ಮಹೋಪಮೆ ಗಳನ್ನೊಳಗೊಂಡ ಈ ಖಂಡಕಾವ್ಯದಲ್ಲಿ ಶೃಂಗಾರ, ವೀರ, ಕರುಣರಸಗಳು ಪ್ರಧಾನವಾಗಿವೆ. ಭಾರತದ ಇತಿಹಾಸ, ಸಂಸ್ಕೃತಿ, ಪುರಾಣ ಹಾಗೂ ಕಾವ್ಯದ ಸಮಗ್ರ ಲಕ್ಷಣಗಳನ್ನು ಒಳಗೊಂಡಿರುವ ಸುಂದರವಾದ, ಕಲಾತ್ಮಕವಾದ 'ಚಿತ್ರಾಂಗದ' ಕಾವ್ಯ ಕನ್ನಡದ ಶ್ರೇಷ್ಠ ಕೃತಿಗಳಲ್ಲಿ ಒಂದಾಗಿರುವುದು ಅತ್ಯಂತ ಸಹಜವಾಗಿದೆ. ಓದುಗರ ಅರಿವು ಬೆಳೆದಂತೆಲ್ಲಾ ಈ

ಕಾವ್ಯದ ಅರ್ಥವೂ ವಿಸ್ತಾರಗೊಳ್ಳುತ್ತಾ ಹೋಗುವುದು ಕುವೆಂಪು ಅವರಿಗಿದ್ದ ಪಾಂಡಿತ್ಯ ಹಾಗೂ ಕಲ್ಪನಾ ಶಕ್ತಿಗೆ ಸಾಕ್ಷಿಯಾಗಿದೆ.

'ಶ್ರೀ ರಾಮಾಯಣ ದರ್ಶನಂ' ನಂತಹ ಮಹಾಕಾವ್ಯ, 'ಚಿತ್ರಾಂಗದ'ದಂತಹ ಖಂಡಕಾವ್ಯ, ಇವೇ ಮೊದಲಾದುವುಗಳು ಕುವೆಂಪು ಅವರ ಪಾಂಡಿತ್ಯದ ಒಂದು ಮುಖವಾದರೆ 'ಬೊಮ್ಮನಹಳ್ಳಿಯ ಕಿಂದರಿ ಜೋಗಿ', ಸರಳತೆಯೇ ಮೈವೆತ್ತಿರುವ 'ನನ್ನ ಗೋಪಾಲ', ಓದುಗರ ಕಣ್ಮುಂದೆ ಯಕ್ಷಿಣಿ ಲೋಕವನ್ನೇ ಸೃಷ್ಟಿಸಿ ಬಿಡುವ 'ಜಲಗಾರ' ನಂತಹ ನಾಟಕಗಳು ಅವರ ಪಾಂಡಿತ್ಯದ ಇನ್ನೊಂದು ಮುಖವಾಗಿದೆ. ಅತ್ಯಂತ ಸರಳ ರೀತಿಯಲ್ಲಿ ರಚಿಸಿರುವ 'ನನ್ನ ಗೋಪಾಲ' ಸಹ ಓದುಗರಲ್ಲಿ ಉತ್ಕಟ ಭಾವೋದ್ವೇಗವನ್ನು ಹೊಮ್ಮಿಸುವುದರಲ್ಲಿ ಯಶಸ್ವಿಯಾಗಿರುವುದು ಕುವೆಂಪು ಅವರ ಸಾಹಿತ್ಯದ ಘನತೆಯನ್ನು ಎತ್ತಿ ತೋರಿಸಿದೆ. ಭಾರತದ ಇತಿಹಾಸ, ಪುರಾಣ, ಸಂಸ್ಕೃತಿ, ಆಧ್ಯಾತ್ಮಿಕತೆಗಳು ಅವರ ಕೃತಿಗಳಲ್ಲಿ ಜೀವಶಕ್ತಿಯಾಗಿ ಹರಿದು ಬಂದು ಕುವೆಂಪು ಅವರನ್ನು ಭಾರತದ ಮಹಾಕವಿಯನ್ನಾಗಿಸಿವೆ.

ಯಾವುದೇ ಸಾಹಿತ್ಯಿಕ ಮೌಲ್ಯಗಳಿಗಾಗಲೀ, ನಿರ್ದಿಷ್ಟ ತತ್ವಕ್ಕಾಗಲೀ ಅಂಟಿಕೊಳ್ಳದೆ, ನಿತ್ಯ ಜೀವನದ ಸರಳ ಬದುಕನ್ನು ಅತ್ಯಂತ ಪ್ರಾಮಾಣಿಕತೆಯೊಂದಿಗೆ ನಿಷ್ಠೆಯಿಂದ ಪ್ರಸ್ತುತ ಪಡಿಸಿರುವ 'ಮಲೆಗಳಲ್ಲಿ ಮದುಮಗಳು' ಮತ್ತು 'ಕಾನೂರು ಸುಬ್ಬಮ್ಮ ಹೆಗ್ಗಡತಿ' ಕಾದಂಬರಿಗಳು ಕನ್ನಡ ಸಾಹಿತ್ಯ ಲೋಕಕ್ಕೆ ಕುವೆಂಪು ಅವರು ಕೊಟ್ಟಿರುವ ಅಮರ ಕೊಡುಗೆಗಳು. ಎರಡು ಹೊತ್ತಿನ ಗಂಜಿಗಾಗಿ ದಿನವಿಡೀ ದುಡಿಯುವ ಅತ್ಯಂತ ಸಾಮಾನ್ಯ ಜನರ ಪಾತ್ರಗಳನ್ನು ಹಾಗೂ ಜೀವನ ರೀತಿಗಳನ್ನು ಚಿತ್ರಿಸಿರುವ ರೀತಿ ಕುವೆಂಪು ಅವರಿಗಿದ್ದ ಮಾನವತೆ ಬಗೆಗಿನ ಉದಾರತೆಯನ್ನು ಎತ್ತಿ ತೋರಿಸಿವೆ. ಅಷ್ಟೇ ಅಲ್ಲದೆ ಇಲ್ಲಿ ಪ್ರಕೃತಿಯು ತನ್ನೆಲ್ಲಾ ಸುಂದರತೆ, ಭೀಕರತೆ, ರುದ್ರ ರಮಣೀಯತೆಗಳಿಂದ ಶೋಭಿಸಿ, ಕಾದಂಬರಿಯ ಮುಖ್ಯ ಅಂಗವಾಗಿ ಕಾದಂಬರಿಯ ಉದ್ದಕ್ಕೂ ಮೈಚಾಚಿಕೊಂಡಿರುವ ರೀತಿ ಬಹುಶಃ ಬೇರಾವ ಕೃತಿಗಳಲ್ಲೂ ಕಂಡುಬರುವುದಿಲ್ಲ. ಇವರ ಕಾದಂಬರಿಗಳು ನಿಸರ್ಗ ಹಾಗೂ ಮಾನವ ಪಾತ್ರಗಳನ್ನು ಒಳಗೊಂಡಿರುವುದಲ್ಲದೇ, ಪ್ರಾಣಿ ಪಕ್ಷಿಗಳಿಗೂ ವಿಸ್ತಾರಗೊಂಡು, ಕಾದಂಬರಿಯನ್ನು ಬದುಕಿಗೆ ಇನ್ನೂ ಹತ್ತಿರ ತಂದಿವೆ. ಮಲೆಗಳಲ್ಲಿ ಮದುಮಗಳುವಿನಲ್ಲಿ ಬರುವ ಗುತ್ತಿಯ ನಾಯಿ ಹುಲಿಯ ಮತ್ತು ಕಾನೂರು ಸುಬ್ಬಮ್ಮ ಹೆಗ್ಗಡತಿಯಲ್ಲಿ ಬರುವ ಒಕ್ಕಣ್ಣಿನ ನಾಯಿಮರಿಯ ಸ್ವಭಾವಗಳೂ ಸಹ ಅಷ್ಟೇ ಪ್ರಾಮುಖ್ಯತೆಯಿಂದ ಚಿತ್ರಿತವಾಗಿ ಕಾದಂಬರಿಗೆ ಹೊಸ ಆಯಾಮವನ್ನು ಒದಗಿಸಿವೆ. ಒಂದು ನಿರ್ದಿಷ್ಟ ಪ್ರಾದೇಶಿಕ ಪರಿಸರದ ಸಂಕೀರ್ಣ ಬದುಕು ತನ್ನೆಲ್ಲಾ ಮಣ್ಣಿನ ವಾಸನೆಯಿಂದ ಈ ಕಾದಂಬರಿಗಳಲ್ಲಿ ಅರಳಿ ನಿಜ ಬದುಕಿನ ಪ್ರತಿಬಿಂಬವಾಗಿದೆ. ಎಲ್ಲೇ ಹುಟ್ಟಿ ಬೆಳೆದಿದ್ದವರಿಗೂ ಸಹ ಮಲೆನಾಡಿನ ಪ್ರಕೃತಿ, ಜೀವನ ಶೈಲಿಗಳನ್ನು ಮನಮೋಹಕವಾಗಿ ಚಿತ್ರಿಸಿರುವ ಇವರ ಕಾದಂಬರಿಗಳು ಓದುಗರು ಪ್ರಕೃತಿಯನ್ನು ನೋಡುವ ದೃಷ್ಟಿಯನ್ನೇ ಬದಲಿಸುವಂತಿವೆ.

ರಾಗ, ದ್ವೇಷ ಹಾಗೂ ಮಾನವರ ಸಹಜ ವಿಕಾರತೆಗಳಿಂದ ದೂರವಾದ ಸುಂದರ ವಿಶ್ವದ ಕನಸು ಕಂಡ ಕುವೆಂಪು ಅವರ ಅನೇಕ ಕೃತಿಗಳಲ್ಲಿ ಅವರ ಜೀವನ ದೃಷ್ಟಿ ಪ್ರತಿಬಿಂಬಿಸಿದೆ. ಶ್ರೀ ರಾಮಾಯಣ ದರ್ಶನಂನಲ್ಲಿ ಚಿತ್ರಿತವಾಗಿರುವ, ಸಹಜವಾದ ಕಾಮಲಾಲಸೆಗೆ ಒಳಗಾದ ಶೂರ್ಪನಖಿಯ ಪಾತ್ರ, ಮುಂದೆ ಸೀತೆ ರಾವಣನ ಬಂಧಿತೆಯಾದಾಗ ತನ್ನ ತಪ್ಪಿನ ಅರಿವಾಗಿ, ಪಶ್ಚಾತ್ತಾಪ ಪಟ್ಟು ಸೀತೆಯನ್ನು ಬಂಧಮುಕ್ತಳನ್ನಾಗಿ ಮಾಡಲು ತನ್ನ ಅಣ್ಣನನ್ನು ಬೇಡಿಕೊಳ್ಳುವ ಬಗೆ ಕುವೆಂಪು ಅವರಿಗಿದ್ದ ಮಾನವೀಯತೆಯಲ್ಲಿನ ನಂಬಿಕೆಯನ್ನು ಎತ್ತಿ ತೋರಿಸಿರುವುದಲ್ಲದೆ, ಮಾನವೀಯತೆಯ ಸೀಮಾರೇಖೆಯನ್ನೇ ಅಗಾಧವಾಗಿ ವಿಸ್ತರಿಸಿದೆ. ಹೆಚ್ಚಿನ ರಾಮಾಯಣಗಳಲ್ಲಿ ರಾಕ್ಷಸೀ ಪಾತ್ರದಲ್ಲಿ ಹಾಸ್ಯಕ್ಕೊಳಗಾದ ಶೂರ್ಪನಖಿಗೆ ಹೊಸ ವ್ಯಕ್ತಿತ್ವವನ್ನೇ ರೂಪಿಸಿರುವ ಕುವೆಂಪು ಅವರ ಸುಂದರ, ವಿಶಾಲ ದೃಷ್ಟಿ ರಾಮಾಯಣ ಕೃತಿಯ ಚರಿತ್ರೆಯನ್ನೇ ಬದಲಿಸಿದೆ.

ಹಸಿ ಸೌದೆಯಲ್ಲಿ ಅಡಿಗೆ ಮಾಡಲು ಪ್ರಯತ್ನಿಸಿ ಮುಖವನ್ನೆಲ್ಲಾ ಮಸಿ ಮಾಡಿಕೊಂಡ ಸೀತೆಯನ್ನು ನೋಡಿ ತಡೆಯಲಾಗದೆ ನಗುತ್ತಿದ್ದ ರಾಮನು, ಲಕ್ಷ್ಮಣನಿಗೆ ತನ್ನ ಅತ್ತಿಗೆಯನ್ನು ನೋಡಲು ಹೋಗೆಂದಾಗ, ಆಕೆಯನ್ನು ನೋಡಿದ ಲಕ್ಷ್ಮಣನಿಗೆ ನಗೆ ಬರಲಿಲ್ಲ 'ನಗೆಗೆ ಮೀರಿರ್ದುದಾ ಧೂಮ ದೃಶ್ಯಂ' ಎಂದು ವರ್ಣಿಸಿರುವ ಕುವೆಂಪು ಅವರು ಲಕ್ಷ್ಮಣನು 'ಮನ್ನಿಸೆನ್ನನು ಪಸಿ ಸೌದೆಯಂ ತಂದಪರಾಧಿಯನು' ಎಂದು ಅತ್ತಿಗೆಯಲ್ಲಿ ಕ್ಷಮೆ ಕೇಳುವ ರೀತಿಯಲ್ಲೇ ಆತನ ಇಡೀ ವ್ಯಕ್ತಿತ್ವವನ್ನು ಓದುಗರ ಮುಂದೆ ನಿರೂಪಿಸಿದ್ದಾರೆ. ಒಂದು ಸಣ್ಣ ಸಂಗತಿಯಲ್ಲಿ ಒಂದು ಪಾತ್ರದ ಇಡೀ ವ್ಯಕ್ತಿತ್ವವನ್ನೇ ಹಿಡಿದಿಡುವುದು ಕುವೆಂಪು ಅಂತಹ ಮಹಾಕವಿಗಳಿಗೆ ಮಾತ್ರ ಸಾಧ್ಯವೆನಿಸುತ್ತದೆ.

ಅನೇಕ ಹೊಸ ತಂತ್ರಗಳನ್ನು ಬಳಸಿಕೊಂಡು ರಚಿತವಾಗಿರುವ ಶ್ರೀ ರಾಮಾಯಣ ದರ್ಶನಂ ಅನ್ನು ಕುವೆಂಪು ಅವರು ಮಹಾ ಛಂದಸ್ಸು ಎಂದು ಕರೆದಿರುವುದು ಸ್ತುತ್ಯವಾಗಿದೆ. ವಿವಿಧ ಮಾತ್ರೆ-ಲಯಗಳನ್ನು ಉಪಯೋಗಿಸಿಕೊಂಡು ಛಂದಸ್ಸಿನ ಬಗೆ ಬಗೆ ನಡಿಗೆಗಳನ್ನು ಅಳವಡಿಸಿಕೊಂಡಿರುವುದು ಕುವೆಂಪು ಅವರಿಗಿದ್ದ ವಿಶೇಷ ಪಾಂಡಿತ್ಯದ ಅಭಿಮುಖವಾಗಿದೆ. ಈ ಮಹಾಕಾವ್ಯದ ಇನ್ನೊಂದು ವೈಶಿಷ್ಟ್ಯವೆಂದರೆ, ಭಾವಗೀತೆಗಳ ಲಕ್ಷಣಗಳುಳ್ಳ ಪದ್ಯಗಳನ್ನು ಈ ಮಹಾಛಂದಸ್ಸಿನಲ್ಲಿ ಬಳಸಿಕೊಂಡಿರುವುದು. ಇನ್ನು ಸಮಕಾಲೀನ ಉಪಮೆಗಳ ಬಳಕೆಯಂತೂ ಈ ಕಾವ್ಯದುದ್ದಕ್ಕೂ ಹರಡಿಕೊಂಡಿವೆ. ಈ ಮಹಾಕಾವ್ಯದ ಪದ ವಿಭಜನೆ ಮಾಡಿದಂತೆಲ್ಲಾ ಕಾವ್ಯದ ಭಾವ, ಅರ್ಥಗಳು ಸ್ಪಷ್ಟವಾಗಿ, ಸರಳವಾಗಿ ವಿಸ್ತಾರಗೊಳ್ಳುತ್ತಾ ಒದುಗರನ್ನು ಮೈಮರೆಸಿ ತನ್ನೆಡೆಗೆ ಸೆಳೆದುಕೊಂಡು ಬಿಡುತ್ತದೆ. ಇಂತಹ ಕಾವ್ಯ ಕನ್ನಡದಲ್ಲಿ ರಚಿತವಾಗಿರುವುದು ಕನ್ನಡಿಗರ ಸಾಹಿತ್ಯ ಚರಿತ್ರೆಗೆ ಪೂರಕವಾಗಿದೆ. ಈ ಮಹಾಕಾವ್ಯವನ್ನು ರಚಿಸಿದುದಕ್ಕಾಗಿ ಕುವೆಂಪು ಅವರನ್ನು ಆಧುನಿಕ ವಾಲ್ಮೀಕಿ ಎಂದು ಕರೆದ ವಿನೋಬಾ ಭಾವೆಯವರು ರಾಮಾಯಣ ದರ್ಶನಂ ಅನ್ನು ಈ ಯುಗದ ಮಹಾಕಾವ್ಯ ಎಂದಿದ್ದಾರೆ.

ಶತಮಾನಗಳಿಂದ ಬೆಳೆದು ಬಂದು ಸಮೃದ್ಧವಾಗಿರುವ ಕನ್ನಡ ಸಾಹಿತ್ಯ ಅನೇಕ ನೆಲೆಗಳಲ್ಲಿ ಸಾಹಿತ್ಯ ಪ್ರಿಯರಿಗೆ ವಿವಿಧ ವಿಚಾರಗಳನ್ನೂ, ಭಾವಗಳನ್ನೂ, ಅನುಭವಗಳನ್ನೂ, ಸಂತೃಪ್ತಿಯನ್ನೂ ಒದಗಿಸುತ್ತಿದೆ. ಯಾವುದೇ ಕೃತಿಯ ಕೀರ್ತಿ, ಯಶಸ್ಸುಗಳು ಅದು ಯಾವ ನೆಲೆಯಲ್ಲಿ ಓದುಗರೊಂದಿಗೆ ಸ್ಪಂದಿಸುತ್ತದೆ ಎಂಬುದರ ಮೇಲೆ ಆಧಾರವಾಗಿದೆ. ಯಾವುದೇ ಕಾಲದ, ಜೀವನ ದೃಷ್ಟಿ ಮೌಲ್ಯ, ವಿಚಾರಗಳ ಎಲ್ಲೆಯನ್ನು ಮೀರಿ, ಅಪೂರ್ವವಾದ ಕಲ್ಪನಾಶಕ್ತಿ, ಕಲಾತ್ಮಕವಾದ ನಿರೂಪಣೆಗಳಿಂದ ಸೃಷ್ಟಿಗೊಂಡ ಕೃತಿಗಳು ಸಾಹಿತ್ಯವನ್ನು ಪೂಜ್ಯತೆಯ ಸ್ಥಾನಕ್ಕೆ ಕೊಂಡೊಯ್ಯಲು ಶಕ್ತವಾಗುತ್ತವೆ. ಇಂತಹ ಕೃತಿಗಳು ಕನ್ನಡ ಸಾಹಿತ್ಯದಲ್ಲಿ ಹೇರಳವಾಗಿರುವುದು ನಮ್ಮೆಲ್ಲರ ಸೌಭಾಗ್ಯ. ಇಂತಹ ಭವ್ಯ ಪರಂಪರೆಯನ್ನು ಮುಂದುವರೆಸಿ ಕನ್ನಡ ಸಾಹಿತ್ಯಕ್ಕೆ ನವಚೇತನವನ್ನೇ ಒದಗಿಸಿದ ಶ್ರೀ ಕುವೆಂಪು ಅವರ ಸಾಧನೆ ಭಾರತದ ಅದರಲ್ಲೂ ಕನ್ನಡಿಗರ ಪುಣ್ಯಫಲ. ಕುವೆಂಪು ಅವರಿಗೆ ದೊರೆತಿರುವ ಎಲ್ಲಾ ಪ್ರಶಸ್ತಿಗಳು ಅವರ ವ್ಯಕ್ತಿತ್ವಕ್ಕೆ, ಪಾಂಡಿತ್ಯಕ್ಕೆ, ಸಿದ್ಧಿ ಸಾಧನೆಗಳಿಗೆ ಸಾಟಿಯಾಗಲಾರವು. ಆದರೆ ಆ ಮನ್ನಣೆಗಳು ಅವರಿಗೆ ದೊರೆತಿದ್ದರಿಂದ ಅವುಗಳ ಸ್ಥಾನ, ಗೌರವಗಳು ಇನ್ನೂ ಹೆಚ್ಚಾಗಿವೆ.

ಅನಿಕೇತನವಾದ ಈ ಮಹಾ ಚೇತನದ ವಿಸ್ತಾರದ ಆಳ ಅರಿಯುವುದೂ ನಮ್ಮಂತವರಿಗೆ ಅಸಾಧ್ಯವೆನಿಸುತ್ತದೆ. ಕನ್ನಡದ ಮತ್ತೊಬ್ಬ ಮಹಾಕವಿಯಾದ, ಕಾವ್ಯ ಗಾರುಡಿಗ ಶ್ರೀ ದ.ರಾ. ಬೇಂದ್ರೆಯವರು 'ಜಗದ ಕವಿ, ಯುಗದ ಕವಿ' ಎಂದು ಕುವೆಂಪು ಅವರ ಬಗ್ಗೆ ಹೇಳಿರುವುದರಲ್ಲಿ ಕುವೆಂಪು ಅವರ ವ್ಯಕ್ತಿತ್ವ, ಸಿದ್ಧಿ ಸಾಧನೆಗಳೆಲ್ಲಾ ಅಡಗಿವೆ ಎನಿಸುತ್ತದೆ.

ಹೇ! ವಿಶ್ವ ಮಾನವನೇ
ಎಲ್ಲಾದರೂ ಇರು ಎಂತಾದರೂ ಇರು
ಎಂದೆಂದಿಗೂ ನೀ ಎಮ್ಮ ಹರಸುತ್ತಿರು.

●

# ನಾನು ಅರ್ಥೈಸಿದಂತೆ 'ವಿಶ್ವಮಾನವ ಸಂದೇಶ'

ಶ್ರೀವತ್ಸ ಜೋಶಿ, ಮೇರಿಲ್ಯಾಂಡ್

ಒಬ್ಬ ಕವಿ, ಸಾಹಿತಿ ತನ್ನ ಮೇರುಕೃತಿಗಳ ಮೂಲಕ ಜನಮನದಲ್ಲಿ ಅಚ್ಚಳಿಯದ ಛಾಪನ್ನು ಬಿಟ್ಟುಹೋಗಬಹುದು, ಆದರೆ ಕುವೆಂಪು ಎಂದೊಡನೆ ನನಗೆ ಥಟ್ಟನೆ ಹೊಳೆಯುವುದು ಅವರ ಎಲ್ಲ ಶ್ರೇಷ್ಠ ಕೃತಿಗಳಿಗಿಂತಲೂ ಮಿಗಿಲಾದ 'ವಿಶ್ವ ಮಾನವ ಸಂದೇಶ'. ಕುವೆಂಪು ಅವರ ಜನ್ಮಶತಾಬ್ದಿಯ ಸಂದರ್ಭದಲ್ಲಿ ಅವರಿಗೆ ನಾವು ಸಲ್ಲಿಸಬಹುದಾದ ಅತಿಸೂಕ್ತ ಗೌರವವೆಂದರೆ ಅವರು ಸಾರಿದ ಸಂದೇಶವನ್ನು ಅಕ್ಷರಶಃ ಪಾಲಿಸುವ ಪ್ರಯತ್ನವನ್ನು ಮಾಡುವುದು; ಅವರ ಬರವಣಿಗೆಗಳನ್ನು ಮತ್ತೆಮತ್ತೆ ಓದಿ ಹೊಸ ಅರ್ಥವನ್ನು ಕಂಡುಕೊಂಡಂತೆಯೇ ಅವರ ಉದಾತ್ತ ಚಿಂತನೆಗಳನ್ನೂ ತತ್ವಸಿದ್ಧಾಂತಗಳನ್ನೂ ಅರಗಿಸಿಕೊಂಡು ಅವನ್ನೇ ದಾರಿದೀಪವಾಗಿಟ್ಟುಕೊಳ್ಳುವುದು.

'ವಿಶ್ವಮಾನವ' ಅರ್ಥಗ್ರಹಣದ ಮೊದಲು, ನಮ್ಮ 'ಅಭಿಮಾನ'ದ ಪರಿಧಿ ನಾವು ದೊಡ್ಡವರಾದಂತೆಲ್ಲ ಹೇಗೆ ವಿಸ್ತಾರವಾಗುತ್ತ ಹೋಗುತ್ತದೆ ಎಂಬುದನ್ನು ಸೋದಾಹರಣವಾಗಿ ಅವಲೋಕಿಸೋಣ. ವಿಷಯಾಂತರ ಎಂದು ಅನಿಸಿದರೂ, ಅಭಿಮಾನದ ಹರವಿನ ಬೇಲಿಗಳು ಹೇಗಿರುತ್ತವೆ, ಅದರ ಸಾರ್ವತ್ರಿಕತೆ ಹೇಗೆ ವಿಶ್ವಮಾನವತೆಯ ಮೂಲಹೇತುವಾಗುತ್ತದೆ ಎಂದು ಪ್ರತಿಪಾದಿಸುವುದರಲ್ಲಿ ನನ್ನದೊಂದು ಪ್ರಯತ್ನ ಇದು.

ಸಣ್ಣ ಹಳ್ಳಿಯಲ್ಲಿ ಹುಟ್ಟಿ ಬೆಳೆಯುವ ಒಬ್ಬ ಸಾಮಾನ್ಯ ಬಾಲಕ, ಮನೆಗೆ ಹತ್ತಿರದಲ್ಲೇ ಇರುವ ಶಾಲೆಯಲ್ಲಿ ಒಂದರಿಂದ ನಾಲ್ಕನೆಯ ತರಗತಿಗಳವರೆಗೆ ಪ್ರಾಥಮಿಕ ಶಿಕ್ಷಣ ಪಡೆಯುತ್ತಾನೆ. ಅದಾದ ನಂತರ ಐದನೇ ತರಗತಿಗೆ ಊರ ಕೇಂದ್ರದಲ್ಲಿರುವ ಹಿರಿಯ ಪ್ರಾಥಮಿಕ ಶಾಲೆಗೆ ಹೋಗಬೇಕು. ಇತರ ಮೂರ್ನಾಲ್ಕು ಕಿರಿಯ ಪ್ರಾಥಮಿಕ ಶಾಲೆಗಳ ಮಕ್ಕಳೂ ಈ ಹಿರಿಯ ಶಾಲೆಗೆ ಸೇರಿರುತ್ತಾರೆ. ತರಗತಿಯಲ್ಲಿ, ಆಟದ ಮೈದಾನದಲ್ಲಿ - ಎಲ್ಲರೂ ಒಂದೇ, ಆದರೂ ಬಹಳ ಸೂಕ್ಷ್ಮವಾಗಿ ಗಮನಿಸಿದರೆ ಆಯಾ ಪ್ರಾಥಮಿಕ ಶಾಲೆಯಿಂದ ಬಂದ ವಿದ್ಯಾರ್ಥಿಗಳ ಒಂದು 'ಪ್ರತ್ಯೇಕ ಅಸ್ತಿತ್ವ' ಇದ್ದೇ ಇರುತ್ತದೆ. ಬಾಲಕ, ತನ್ನ ಶಾಲೆಯಿಂದ ಸೇರಿದ ಓರಗೆಯವರನ್ನು 'ತನ್ನವರು' ಎಂದು ಗುರುತಿಸುತ್ತಾನೆ. ಅದೇ ಏಳನೇ ತರಗತಿ ಮುಗಿಸಿ ತಾಲೂಕು ಕೇಂದ್ರದಲ್ಲಿನ ಪ್ರೌಢಶಾಲೆಗೆ ಸೇರಿದಾಗ ಅಲ್ಲಿ ಬೇರೆಬೇರೆ ಹಿರಿಯ ಪ್ರಾಥಮಿಕ ಶಾಲೆಗಳಿಂದ ವಿದ್ಯಾರ್ಥಿಗಳು ಬಂದಿರುತ್ತಾರೆ. ಆಗ ಅಭಿಮಾನ, ತನ್ನವರು ಎಂಬ ಆತ್ಮೀಯತೆ, ಪ್ರತ್ಯೇಕತೆಯ ಅಸ್ತಿತ್ವ ಹಿರಿಯ ಪ್ರಾಥಮಿಕ

ಶಾಲೆಯ ಪರಿಧಿಗೆ ಏರುತ್ತದೆ. ಪ್ರೌಢಶಾಲೆಯ ನಂತರ ಕಾಲೇಜು ಸೇರಿದಾಗ, 'ನಾವೆಲ್ಲ ಇಂಥ ಪ್ರೌಢಶಾಲೆಯಿಂದ ಬಂದವರು-.....' ಎಂಬ ಆತ್ಮೀಯತೆ, ಅಭಿಮಾನ ಬೆಳೆಯುತ್ತದೆ. ಕಾಲೇಜು ಮುಗಿಸಿ ಉದ್ಯೋಗ/ಮನೆವಾರ್ತೆ/ ವ್ಯವಹಾರ ಇತ್ಯಾದಿ ಒಬ್ಬೊಬ್ಬರೂ ಒಂದೊಂದು ದಿಕ್ಕಿನಲ್ಲಿ ಪಯಣ ಬೆಳೆಸಿದಾಗ, 'ನಾವು ಈ ಕಾಲೇಜಲ್ಲಿ ಓದಿದವರು.....' ಎಂಬ ಅಭಿಮಾನ ಉಳಿದುಕೊಂಡಿರುತ್ತದೆ.

ಅಂದರೆ, ನಾವು ಪ್ರಸ್ತುತ ಯಾವ ಪರಿಧಿಯಲ್ಲಿರುತ್ತೇವೊ ಅದಕ್ಕಿಂತ ಒಂದು ಮಟ್ಟ ಕೆಳಗಿನ ಪರಿಧಿಯೆಲ್ಲ ನಮಗೆ 'ಅಸ್ಮದೀಯಂ' ಎನಿಸಿಕೊಳ್ಳುತ್ತದೆ. ನನಗಂತೂ ಇದು ಅನೂಚಾನವಾಗಿ ಅನುಭವವೇದ್ಯವಾಗುತ್ತ ಬಂದಿದೆ. ನನ್ನೂರು ಕಾರ್ಕಳ ಬಿಟ್ಟು ದಾವಣಗೆರೆಯಲ್ಲಿ ಇಂಜಿನಿಯರಿಂಗು ಕಲಿಯುತ್ತಿದ್ದಾಗ, ಅಲ್ಲಿ ಹಾಸ್ಟೆಲಲ್ಲಿ ದಕ್ಷಿಣಕನ್ನಡ ಜಿಲ್ಲೆಯಿಂದ ಯಾರಾದರೂ ಬಂದವರಿದ್ದರೆ ಅವರೆಲ್ಲ 'ನಮ್ಮವರು'. ಇಂಜಿನಿಯರಿಂಗ್ ಮುಗಿಸಿ ಕರ್ನಾಟಕದಿಂದ ಹೊರಗೆ ದೆಹಲಿ, ಹೈದರಾಬಾದ್‌ಗಳಲ್ಲಿ ಉದ್ಯೋಗದಲ್ಲಿದ್ದಾಗ ಯಾರೇ ಕನ್ನಡಿಗರು ಸಿಕ್ಕಿದರೂ ಅವರು 'ನಮ್ಮವರು'. ಭಾರತದಿಂದ ದೂರದೇಶ ಅಮೆರಿಕೆಗೆ ಬಂದು ನೆಲೆಸಿದಾಗ, ಇಲ್ಲಿ ಕಾಣುವ ಭಾರತೀಯರೆಲ್ಲ 'ನಮ್ಮವರು'. ನನ್ನ ಅಭಿಮಾನದ ಭೌಗೋಳಿಕ ಪರಿಧಿಯನ್ನು ಕಾಲಕ್ರಮೇಣ ನಾನೇ ವಿಸ್ತರಿಸಬೇಕಾಗಿ ಬಂದ ಸನ್ನಿವೇಶ ಅದು.

ಭೌಗೋಳಿಕ ಪರಿಧಿಗಳಂತೆಯೇ, ಕುಲ-ಗೋತ್ರ-ಜಾತಿ-ಮತ-ಪಂಗಡಗಳ ವಿಷಯವೂ ಇದೇ ವಿಕಸನ ತತ್ವವನ್ನು ಆಧರಿಸಿದೆ. ಎಷ್ಟು ವಿಸ್ತಾರದ, ವೈಶಾಲ್ಯದ ವರ್ತುಲವನ್ನು ನಾವು ನಮ್ಮದೆಂದು ಗುರುತಿಸಿಕೊಳ್ಳುತ್ತೇವೋ ಅದು ನಮ್ಮ ಜಾತಿ, ಮತವೆನಿಸುತ್ತದೆ. ಆ ವರ್ತುಲದಲ್ಲಿ ನಮ್ಮ ನಂಬಿಕೆಗಳು, ಮೌಲ್ಯಗಳು ನಿರ್ಧರಿತವಾಗುತ್ತವೆ. ಆದರೆ ಅಷ್ಟಕ್ಕೇ ಸೀಮಿತಗೊಳಿಸದೆ 'ನನ್ನದು, ನನ್ನವರು' ಎಂಬ ಪರಿಧಿಯನ್ನು ಇಡಿಯ ವಿಶ್ವಕ್ಕೇ ವಿಸ್ತರಿಸಿದಾಗ ಸಹಜವಾಗಿಯೇ 'ನಾನು ಗುರುತಿಸುವ ಒಂದೇ ಜಾತಿಯೆಂದರೆ ಮನುಷ್ಯಜಾತಿ' ಎಂಬ ಭಾವನೆ ಆವಿರ್ಭವಿಸುತ್ತದೆ. ಆದರೆ ನನಗೊಬ್ಬನಿಗೇ ಈ ಭಾವ ಉದ್ಭವಿಸಿ ಪ್ರಯೋಜನವೇನು ಬಂತು ? ವಿಶ್ವದ ಪ್ರತಿಯೊಬ್ಬನೂ ಇದೇ ಭಾವವನ್ನು ಹೊಂದಬೇಕು. ಅದನ್ನೇ ಅಲ್ಲವೆ ನಮ್ಮ ಪ್ರಾಜ್ಞರು 'ವಸುದೈವ ಕುಟುಂಬಕಂ....'' ಎಂದದ್ದು?

ನಿಜವಾಗಿ ನಾವೆಲ್ಲ ಅದೃಷ್ಟಶಾಲಿಗಳು. ಇವತ್ತಿನ ಆಧುನಿಕ ಯುಗದಲ್ಲಿ, ಮಾನವ ಭೂಮಂಡಲವನ್ನು ದಾಟಿ 'ತಿಂಗಳಿನಿಂದ ಮಂಗಳನತ್ತ' ಪಯಣ ಬೆಳೆಸುವ ಹುನ್ನಾರದ ದಿನಗಳಲ್ಲಿ, ಸಂಪರ್ಕ ಸಾಧನೆಯಲ್ಲಿ ಹೊಸಕ್ರಾಂತಿ ನಿರ್ಮಿಸಿದ ಅಂತರ್ಜಾಲದ ಕಬಂಧಬಾಹುಗಳಲ್ಲಿ ಬಾಳ್ವೆ ನಡೆಸುತ್ತಿರುವ ನಮಗೆ 'ಮನಸ್ಸು ಮಾಡಿದರೆ' ವಿಶ್ವಮಾನವನಾಗುವುದಕ್ಕೆ ಯಾವ ನಿರ್ಬಂಧಗಳೂ ಇಲ್ಲ. ಮೇಲೆ ವಿವರಿಸಿದ ವಿಕಸನತತ್ವದ ಆಧಾರದಲ್ಲಿ, ಮಾನವನ ಅನ್ವೇಷಣೆ-ಆಕಾಂಕ್ಷೆಗಳು ಭೂಮಿಯನ್ನು ಬಿಟ್ಟು ಖಗೋಳದತ್ತ ವಿಸ್ತರಿಸಿವೆಯೆಂದರೆ, ಭೂಮಿಯಲ್ಲಿರುವವರೆಲ್ಲ ನನ್ನವರು ಎಂದಂತೆಯೇ. ಆದರೆ ಇದು

ಬಾಹ್ಯ ಸೌಕರ್ಯ-ಸೌಲಭ್ಯಗಳ ಮಾತಾಯಿತು. ಅಂತರಂಗದಲ್ಲಿ ಇನ್ನೂ ಸಂಕುಚಿತರಾಗುತ್ತ ಹೋಗಿ ಸೇತುವೆಗಳ ಬದಲು ಗೋಡೆಗಳನ್ನೇ ನಿರ್ಮಿಸುತ್ತ ಹೋದರೆ ಅದೆಲ್ಲಿಂದ ಮೊಳೆಯಬೇಕು ಮನುಜಮತ-ವಿಶ್ವಪಥಃ - ವಿಶ್ವಮಾನವತೆಯ ಬೀಜಾಂಕುರ ? ಅದಕ್ಕೇ ಕುವೆಂಪು ಅವರ ವಿಚಾರಧಾರೆಯತ್ತ ಹೊರಳಿದರೆ ಸಿಗುತ್ತದೆ 'ವಿಶ್ವಮಾನವ'ತನಕ್ಕೆ ಅಗತ್ಯವಾದ ಆಶಾಕಿರಣ.

ಪ್ರಾಂತೀಯ ಮಟ್ಟದಲ್ಲಿನ ಅಭಿಮಾನ ಕುವೆಂಪು ಅವರಿಗೆ ಇರಲಿಲ್ಲವೇ? ಖಂಡಿತ ಇತ್ತು. ಆದರೆ ಆ ಪ್ರಾಂತೀಯತೆಯಲ್ಲೇ ಸಾರ್ವತ್ರಿಕತೆ ಅವರ ಅಭಿಮಾನದ ಅಗ್ಗಳಿಕೆ. ಕರ್ನಾಟಕದ ಹಿರಿಮೆಯ 'ಜೈ ಭಾರತ ಜನನಿಯ ತನುಜಾತೆ..... ಜಯಹೇ ಕರ್ನಾಟಕ ಮಾತೆ.....' ಕವಿತೆಯಲ್ಲೂ ಅವರು ಕರ್ನಾಟಕವನ್ನು ವರ್ಣಿಸಿದ್ದು 'ಸರ್ವಜನಾಂಗದ ಶಾಂತಿಯ ತೋಟ....' ಎಂದು! ಕನ್ನಡ ಭಾಷೆಯ ಬಗ್ಗೆ ಕಳಕಳಿಯಿಂದ, 'ಕನ್ನಡಕ್ಕಾಗಿ ಕೊರಳೆತ್ತು, ನಿನ್ನ ದನಿ ಪಾಂಚಜನ್ಯವಾಗುತ್ತದೆ; ಕನ್ನಡಕ್ಕಾಗಿ ಕಿರುಬೆರಳೆತ್ತಿದರೂ ಅದು ಗೋವರ್ಧನಗಿರಿಧಾರಿಯಾಗುತ್ತದೆ!' ಎಂದರು ಕುವೆಂಪು. ಆದರೂ 'ಸರ್ವೋದಯವಾಗಲಿ ಸರ್ವರಲಿ' ಎಂದೇ ಮುಕ್ತಾಯವಾಗುತ್ತದೆ ಅವರ ಕನ್ನಡ ಡಿಂಡಿಮ ಪದ್ಯ!

ಕನ್ನಡ-ಕರ್ನಾಟಕದಿಂದ ವಿಸ್ತರಿಸಿದ ಅಭಿಮಾನದಲ್ಲಿ 'ಭಾರತಾಂಬೆಯೆ ಜನಿಸಿ ನಿನ್ನೊಳು ಧನ್ಯನಾದೆನು ದೇವಿಯೆ.....' ಎಂಬ ಮತ್ತೊಂದು ಕವಿತೆಯಲ್ಲಿ ಕುವೆಂಪು, 'ಅದರೊಲಿಯೆನು ಅನ್ಯರ ಚಿನ್ನವೊಲಿದಿಹ ಧನ್ಯರ.....' ಎಂದರು. ಭಾರತಮಾತೆ ಕುಂದುಕೊರತೆಗಳಿಂದ ಕಳಂಕಿತಳಾಗಿದ್ದಾಳೆಂಬ ಮಾತ್ರಕ್ಕೆ ಅಧೀರನಾಗದೆ, 'ನಿನ್ನ ಅಂಕದ ಮಂಗಳಾಂಗಣದಲ್ಲಿ ನಲಿಯುತ ಬೆಳೆವೆನು.....' ಎಂದು ಹೆಮ್ಮೆಪಟ್ಟರು. ಸಪ್ತಸಮುದ್ರಗಳನ್ನು ದಾಟಿ ದೂರದೇಶದಲ್ಲಿ ಐಷಾರಾಮಿ ಜೀವನ ನಡೆಸುವ ಮಹಾತ್ವಾಕಾಂಕ್ಷಿಗಳಿಗೂ ಅವರ ಕಿವಿಮಾತು - 'ದೇಶ ನನ್ನದು ನನ್ನದು ನಾಡು..... ಎನ್ನದ ಮಾನವನೆದೆ ಸುಡುಗಾಡು..... ದೂರದೇಶಕೆ ಹೋದ ಸಮಯದಿ ತನ್ನ ನಾಡನು ನೆನೆದುಬ್ಬದ..... ಮಾನವನಿದ್ದರೆ ಲೋಕದಲಿ..... ತಾವಿಲ್ಲವನಿಗೆ ನಾಕದಲಿ..... ವೀರ ಲೋಕದಲಿ.....'

ಇಷ್ಟೆಲ್ಲ ಭಾಷಾಭಿಮಾನ, ದೇಶಾಭಿಮಾನಗಳನ್ನು ತೋರಿಕೊಂಡರೂ ಅಭಿಮಾನದ ಪರಿಧಿಯನ್ನು ವಿಶ್ವವ್ಯಾಪ್ತಿಗೇರಿಸುವುದನ್ನೇ, ಅದಕ್ಕೆ ಸಾರ್ವತ್ರಿಕತೆಯನ್ನು ನೀಡುವುದನ್ನೇ ಕುವೆಂಪು ಬಯಸುತ್ತಿದ್ದರು. ಈ ಮಾತಿಗೆ ಇನ್ನೊಂದು ಉದಾಹರಣೆ ಅವರ ಕವಿತೆಯೊಂದರಲ್ಲಿನ ಈ ಸಾಲುಗಳು:

ವಿಶ್ವ ಜೀವನವೊಂದು ಪಾರವಿಲ್ಲದ ಸಿಂಧು
ಮೇಲೆ ತೆರೆನೊರೆ ಎದ್ದು ಭೋರ್ಗರೆಯುತಿರೆ ರೇಗಿ
ಅದರಂತರಾಳದಲಿ ಗುಪ್ತ ಗಾಮಿನಿಯಾಗಿ
ಹೃದಯಗಳು ನಲಿಯುತಿರೆ ಪ್ರೇಮತೀರ್ಥದಿ ಮಿಂದು

ಸರ್ವೋದಯ, ಸಮಾನತೆ - ಇವನ್ನೆಲ್ಲ ಪ್ರತಿಯೊಂದು ಕೃತಿಯಲ್ಲೂ ಪ್ರತಿಬಿಂಬಿಸುವ ಯತ್ನವನ್ನು ಮಾಡಿದ್ದಾರೆ ಕುವೆಂಪು. ಸಾಮಾಜಿಕ ಭದ್ರತೆ ಮತ್ತು ಕಾಳಜಿ ಅವರ ಸಾಹಿತ್ಯದ ಸಾರ ಎಂದರೆ ಅತಿಯಾಗಲಾರದು. ಬರೆದ ಕವಿತೆಗಳಲ್ಲಿ, ನಾಟಕಗಳಲ್ಲಿ, ಕಾದಂಬರಿಗಳಲ್ಲಿ ಕೊನೆಗೆ ಶ್ರೀರಾಮಾಯಣ ದರ್ಶನಂ ಮಹಾಕಾವ್ಯದಲ್ಲೂ ಕುವೆಂಪು ಅವರ ಖಂಡತುಂಡ ಪ್ರತಿಪಾದನೆ ಸಮ ಸಮಾಜದ ನಿರ್ಮಾಣ. ಶ್ರೀಸಾಮಾನ್ಯ ಎಂಬ ಪದವನ್ನು ಬಳಕೆಗೆ ತಂದವರೇ ಕುವೆಂಪು. ತನ್ಮೂಲಕ ಸಾಮಾನ್ಯ ಪ್ರಜೆಯೊಬ್ಬನಿಗೂ ಗೌರವಾದರ ದೊರಕಬೇಕು ಎಂದು ಬಯಸಿದರವರು. ಹೊಸ ಸಾಹಿತ್ಯಕ್ರಾಂತಿಯನ್ನಷ್ಟೇ ಅಲ್ಲದೆ, ಜನರ ಬೌದ್ಧಿಕ ಮಟ್ಟದ ಔನ್ನತ್ಯವನ್ನೂ ಹೆಚ್ಚಿಸಿದ ಶ್ರೇಯಸ್ಸು ಕುವೆಂಪು ಅವರ ಕೃತಿಗಳಿಗೆ ಸಲ್ಲುತ್ತದೆ. ಹಳೆಯ ಮೌಢ್ಯ, ಮೌಲ್ಯಗಳನ್ನು ಪರಾಮರ್ಶಿಸುವ ಹೊಸ ವೈಜ್ಞಾನಿಕ ದೃಷ್ಟಿ ಮತ್ತು ವೈಚಾರಿಕ ಬುದ್ಧಿಯ ಅಗತ್ಯತೆಯನ್ನು ಕುವೆಂಪು ದಶಕಗಳ ಹಿಂದೆಯೇ ಒತ್ತಿಹೇಳಿದ್ದರು. ಹಳ್ಳಿಹಳ್ಳಿಗಳಲ್ಲಿ 'ವಿಚಾರವೇದಿಕೆ'ಗಳು ಸಂಘಟಿತವಾಗಿ ಕಾರ್ಯೋನ್ಮುಖವಾಗಬೇಕೆಂದು ಅವರು ಆಶಿಸಿದ್ದರು. ಮೂಢನಂಬಿಕೆ-ಅಂಧಶ್ರದ್ಧೆಗಳ ವಿರುದ್ಧ ಸಮರವನ್ನೇ ಸಾರಿದ್ದರು.

ಕುವೆಂಪು ಒಬ್ಬ ಮಹಾನ್ ಕವಿಯಷ್ಟೇ ಆಗಿರದೆ ಒಂದು 'ಶಕ್ತಿ'ಯಾಗಿದ್ದರು ಎನ್ನುವುದನ್ನು ಅವರ ಪುತ್ರ ಪೂರ್ಣಚಂದ್ರ ತೇಜಸ್ವಿಯವರೇ ಹೇಳುತ್ತಾರೆ - 'ನಮ್ಮಣ್ಣ ಒಬ್ಬೊಬ್ಬರಿಗೆ ಒಂದೊಂದು ಮೂರ್ತಸ್ವರೂಪದಲ್ಲಿ ಕಂಡಿರಬಹುದು. ಕವಿಯಾಗಿ, ಕಾದಂಬರಿಕಾರನಾಗಿ, ಗುರುವಾಗಿ, ದಾರ್ಶನಿಕನಾಗಿ, ವಿಚಾರವಾದಿಯಾಗಿ..... ಹೀಗೆ. ಆದರೆ ವೈಯಕ್ತಿಕವಾಗಿ ನನಗೆ ಇದಾವುದೂ ಅಲ್ಲದೇ, ನೆಲ-ಜಲ-ವಾಯು-ಆಕಾಶ-ಜ್ಯೋತಿಗಳೆಲ್ಲದಕ್ಕೂ ನಮ್ಮ ತಂದೆ-ತಾಯಿಯರೇ ಮೂಲವೇನೋ ಎನ್ನಿಸುವಷ್ಟು ಅವರೊಬ್ಬ ದಿವ್ಯಶಕ್ತಿಯಾಗಿ ಗೋಚರಿಸುತ್ತಿದ್ದರು'.

ಈ ದಿವ್ಯಶಕ್ತಿಯಿಂದಾಗಿಯೇ ಕುವೆಂಪು ಅವರಿಂದ ರಚಿತವಾಯಿತು 'ಓ ನನ್ನ ಚೇತನ..... ಆಗು ನೀ ಅನಿಕೇತನ.....' ಎಂಬ ಕವನ; ಸಮಾನತೆಯ ಪ್ರಜ್ಞೆಯ ಸಮರ್ಥ ಪ್ರತಿಫಲನ. ಆಸ್ತಿ-ಮನೆ-ಮಠ ಇತ್ಯಾದಿ ಐಹಿಕ ವ್ಯಾಮೋಹಗಳ, ಸುಖ-ಸುಪ್ಪತ್ತಿಗೆಯ ಬಲೆಯನ್ನು ಕತ್ತರಿಸಿ, ಕುಲ-ಮತ-ಭಾಷೆ-ದೇಶಗಳ ಮಾನವನಿರ್ಮಿತ ಗಡಿಗಳನ್ನು ದಾಟಿ ಅನಂತದೆಡೆಗೆ ಕೈಚಾಚುವಂತೆ ಸಂಕಲ್ಪಿಸಿದ ಮಹಾನ್ ಚೇತನ ಕುವೆಂಪು.

ಆ ದಿವ್ಯಚೇತನಕ್ಕಿದೋ ನನ್ನ ನಮನ.

●

# ಕನ್ನಡಕ್ಕೊಬ್ಬ ಕಾರಣಪುರುಷ - ಕುವೆಂಪು*
## - ಒಂದು ರೇಖಾಚಿತ್ರ

ಪ್ರೊ. ಎನ್.ಎಸ್. ಲಕ್ಷ್ಮೀನಾರಾಯಣ ಭಟ್ಟ, ಕರ್ನಾಟಕ

ಯುಗದ ಕವಿಗೆ ಜಗದ ಕವಿಗೆ
ಶ್ರೀ ರಾಮಾಯಣದರ್ಶನ-
ದಿಂದಲೆ ಕೈಮುಗಿದ ಕವಿಗೆ
ಮಣಿಯದವರು ಯಾರು?
ರಾಮಕೃಷ್ಣ ವಚನೋದಿತ
ಪ್ರತಿಭೆ ತೆರೆದ ಕವನ ತತಿಗೆ
ತಣಿಯದವರು ಯಾರು?
ಮಲೆನಾಡಿನ ಸೌಂದರ್ಯಕೆ
ಕುಣಿದಾಡಿದ ಕವಿಯ ಜೊತೆಗೆ
ಕುಣಿಯದವರು ಯಾರು ?

ಇದು ಕುವೆಂಪು ಅವರನ್ನು ಹೃತ್ಪೂರ್ವಕವಾಗಿ ಪ್ರಶಂಸಿಸಿ ಬರೆದ ಕವಿತೆಯ ಒಂದು ಭಾಗ. ಕುವೆಂಪು ಅವರಿಗೆ ಸಮರ್ಪಿಸಲಿದ್ದ ಅಭಿನಂದನ ಗ್ರಂಥಕ್ಕೆ ಬರೆದುಕೊಟ್ಟ ಕವಿತೆ ಅದು. ಅದನ್ನು ಬರೆದವರು ಯಾರೋ ಅಂಥಿಂಥವರಲ್ಲ. ಇದುವರೆಗಿನ ಕನ್ನಡ ಕಾವ್ಯ-ಪರಂಪರೆಯಲ್ಲೇ ಭಾವಗೀತಾತ್ಮಕವಾದ ಕಾವ್ಯದಲ್ಲಿ ಅದ್ವಿತೀಯರು ಎಂದು ವಿಮರ್ಶಕರಿಂದ ಕೀರ್ತಿತರಾದ ವರಕವಿ ದತ್ತಾತ್ರೇಯ ರಾಮಚಂದ್ರ ಬೇಂದ್ರೆ! ಕುವೆಂಪು ಅವರಿಗೆ ಸಂದ ಪ್ರಶಸ್ತಿಗಳಲ್ಲಿ ಬಹುಶಃ ಇದಕ್ಕೆ ಸಮನಾದದ್ದು ಇನ್ನೊಂದು ಇರಲಾರದು.

ಒಬ್ಬ ಸಾಹಿತಿಯಾಗಿ ಈ ದೇಶದಲ್ಲಿ ಏನೆಲ್ಲ ಯಶಸ್ಸು ಸಾಧಿಸಬಹುದೋ ಅದೆಲ್ಲವನ್ನೂ ಸಾಧಿಸಿದ ಅಗ್ಗಳಿಕೆ ಕುವೆಂಪು ಅವರದು. ಅವರಿಗೆ ಎಷ್ಟೆಲ್ಲ ಪ್ರಶಸ್ತಿ ಗೌರವಗಳು ಸಂದಿವೆ ಎನ್ನುವುದು ಎಲ್ಲರಿಗೂ ಗೊತ್ತಿದೆಯಾಗಿ ಅವುಗಳನ್ನು ಇಲ್ಲಿ ಮತ್ತೆ ಹೇಳುವ ಅಗತ್ಯವಿಲ್ಲ. ''ಕಾವ್ಯಂ ಯಶಸೇ ಅರ್ಥಕೃತೇ ವ್ಯವಹಾರವಿದೇ ಶಿವೇತರಕ್ಷತಯೇ ಸದ್ಯಃ ಪರನಿರ್ವೃತಯೇ, ಕಾಂತಾಸಂಮಿತತಯೋಪದೇಶಯುಜೇ''' ಎಂದು ಮಮ್ಮಟ ಎಂಬ ಒಬ್ಬ ಕಾವ್ಯಮೀಮಾಂಸಕಾರ ಕೆಲವು ಶತಮಾನಗಳ ಹಿಂದೆ ಹೇಳಿದ. ಕಾವ್ಯದಿಂದ ಯಶಸ್ಸು, ಧನ, ವ್ಯವಹಾರಜ್ಞಾನ, ಅಮಂಗಳ ಪರಿಹಾರ, ಆನಂದ - ಇದೆಲ್ಲ ಸಿಗುತ್ತದೆಂದು ಆ

---
*ಕುವೆಂಪು ನಿಧನರಾದಾಗ ಕನ್ನಡ ಪತ್ರಿಕೆಯೊಂದಕ್ಕೆ ಬರೆದ ಲೇಖನ

ಮಾತಿನ ಅರ್ಥ. ವಾಸ್ತವವಾಗಿ ಇವುಗಳಲ್ಲಿ ಒಂದೆರಡು ದೊರೆತರೂ ಒಬ್ಬ ಲೇಖಕ ಪುಣ್ಯವಂತ. ಆದರೆ ಕುವೆಂಪು ಅವರಿಗೆ ಮಾತ್ರ ಇವುಗಳಲ್ಲಿ ಒಂದೂ ತಪ್ಪದೆ ಎಲ್ಲವೂ ಒಲಿದುಬಂದವು.

ಶ್ರೇಷ್ಠರೇ ಆಗಿದ್ದರೂ ಎಲ್ಲ ಸಾಹಿತಿಗಳಿಗೂ ಇದು ಲಭ್ಯವಲ್ಲ. ಮುದ್ದಣ ಒಳ್ಳೆಯ ಕವಿಯೇ ಆದರೂ ತಾನು ಬರೆದಿದ್ದ 'ರಾಮಾಶ್ವಮೇಧ'ವನ್ನು ತನ್ನದೆಂದು ಹೇಳಿಕೊಳ್ಳದೆ ಮಹಾಲಕ್ಷ್ಮಿ ಎಂಬ ಪ್ರಾಚೀನ ಕವಯಿತ್ರಿಯೊಬ್ಬಳ ಕಾವ್ಯವೆಂದು ಆಟ ಕಟ್ಟಿದ ! ಒಂದು ಹೈಸ್ಕೂಲಿನಲ್ಲಿ ವ್ಯಾಯಾಮ ಶಿಕ್ಷಕನಾದ ತಾನು ಇಂಥ ಕಾವ್ಯ ಬರೆದಿದ್ದೇನೆಂದರೆ ಯಾರೂ ಅದನ್ನು ನೋಡುವ ಗೋಜಿಗೇ ಹೋಗದಿರಬಹುದು, ಅದಕ್ಕೆ ತಕ್ಕ ನ್ಯಾಯ ದೊರೆಯದಿರಬಹುದು ಎನ್ನುವುದು ಅವನ ಎಣಿಕೆಯಾಗಿತ್ತು. ಪ್ರೈಡ್ ಅಂಡ್ ಪ್ರೆಜಾಡಿಸ್‌ನಂಥ ಮಹತ್ವದ ಕಾದಂಬರಿ ಬರೆದ ಜೇನ್ ಆಸ್ಟಿನ್ ತನ್ನ ಕೃತಿಗಳ ಮೇಲೆ ತನ್ನ ಹೆಸರು ಹಾಕದೆ 'ಒಬ್ಬ ಲೇಖಕಿಯಿಂದ' ಎಂದಷ್ಟೇ ಅಚ್ಚು ಮಾಡಿಸುತ್ತಿದ್ದಳು! ಕಾದಂಬರಿ ಬರೆಯುವುದು ಆ ಕಾಲದಲ್ಲಿ ಸಭ್ಯ ಹೆಣ್ಣುಮಕ್ಕಳು ಮಾಡಬಾರದ ಕೆಲಸವಾಗಿತ್ತು. ಪಂಪ ಎಷ್ಟೇ ದೊಡ್ಡ ಕವಿಯಾದರೂ ಒಬ್ಬ ಸಾಮಂತರಾಜನ ಆಸ್ಥಾನದಲ್ಲಿ ಇದ್ದುದರಿಂದ ಅವನಿಗಿಂತ ತುಂಬ ಕಡಮೆ ಮಟ್ಟದ ಕವಿಯಾದ (ಆದರೆ ಚಕ್ರವರ್ತಿಯ ಆಸ್ಥಾನದಲ್ಲಿದ್ದ) ಪೊನ್ನನಿಗೆ ಸಿಕ್ಕ ಕವಿಚಕ್ರವರ್ತಿ ಬಿರುದು ಅವನಿಗೆ ಸಿಗದೆ ಹೋಯಿತು!

ಕುವೆಂಪು ಪ್ರತಿಭಾವಂತರು; ಸಂತತ ಸಾಧನೆ ಮಾಡಿದವರು, ಮಾತ್ರವಲ್ಲ ತುಂಬ ಅದೃಷ್ಟವಂತರು ಕೂಡ. ಅವರು ತಮ್ಮ ಅರ್ಹತೆಗೆ ತಕ್ಕದ್ದೆಲ್ಲವನ್ನೂ ಪಡೆದರು. ಅಷ್ಟೇ ಅಲ್ಲ, ತಮ್ಮ ಪಾಲಿನ ದೈವ ಹಲವು ಸಂದರ್ಭಗಳಲ್ಲಿ ತಮಗೇ ತಿಳಿಯದಂತೆ ಕಾವಲಿದ್ದು ತಮ್ಮನ್ನು ರಕ್ಷಿಸಿಕೊಂಡಿತು ಎನ್ನುವುದನ್ನು ಕುವೆಂಪು ಅವರೇ ಅಲ್ಲಲ್ಲಿ ಹೇಳಿಕೊಂಡಿರುವುದುಂಟು.

ಓದುವ ಸಲುವಾಗಿ ಮೈಸೂರಿಗೆ ಬಂದು ಮಹಾರಾಜ ಹೈಸ್ಕೂಲಿಗೆ ಸೇರಿದ್ದ ಕುವೆಂಪು ಸಂತೆಪೇಟೆಯಲ್ಲಿ ಒಂದು ಬಾಡಿಗೆ ರೂಮಿನಲ್ಲಿ ವಾಸಮಾಡುತ್ತಿದ್ದರು. ಆಗಾಗ ರಾಮಕೃಷ್ಣಾಶ್ರಮಕ್ಕೆ ಹೋಗಿ ಬರುವುದು ಅವರ ಪರಿಪಾಠಿಯಾಗಿತ್ತು. ಒಮ್ಮೆ ಒಟ್ಟಿಗೇ ಕೆಲವು ದಿನ ಅವರು ಆಶ್ರಮಕ್ಕೆ ಹೋಗಲಿಲ್ಲ. ಇದು ಆಶ್ರಮದ ಅಧ್ಯಕ್ಷರಾಗಿದ್ದ ಸಿದ್ದೇಶ್ವರಾನಂದರ ಗಮನಕ್ಕೆ ಬಂತು. ಕೂಡಲೇ ಅವರು ಆಶ್ರಮಕ್ಕೆ ಬರುತ್ತಿದ್ದ ಇನ್ನೊಬ್ಬ ಯುವಕ ನಾ. ಕಸ್ತೂರಿಯವರನ್ನು ಕರೆದು ''ನೋಡಿ ಕಸ್ತೂರಿ, ಪುಟ್ಟಪ್ಪ ಅಂತ ಒಬ್ಬ ಕವಿ ಬರುತ್ತಿದ್ದರಲ್ಲ. ಯಾಕೋ ಕಳೆದ ಕೆಲವು ದಿನದಿಂದ ಅವರು ಆಶ್ರಮಕ್ಕೆ ಬರುತ್ತಿಲ್ಲ. ಅವರು ಎಲ್ಲಿದ್ದಾರೆ, ಯಾಕೆ ಬರುತ್ತಿಲ್ಲ ತಿಳಿದುಕೊಂಡು ಬನ್ನಿ ಅಂತ ಕೆಲಸ ಹಚ್ಚಿದರು. ನಾ. ಕಸ್ತೂರಿ ಆಗ ಸ್ಕೌಟ್‌ನಲ್ಲಿ ಒಬ್ಬ (ಪೆಟ್ರೋಲ್) ಲೀಡರ್. ಅವರ ಬೆನ್ನಿಗೆ ಸದಾ ಐದಾರು ಹುಡುಗರು. ಕಸ್ತೂರಿ ಆ ಬಂಟರನ್ನು ಕಟ್ಟಿಕೊಂಡು ಎಲ್ಲ ಕಡೆ ಅಲೆದು ಪುಟ್ಟಪ್ಪನವರ ರೂಮು ಪತ್ತೆ ಮಾಡಿದರು. ಅಲ್ಲಿ ನೋಡಿದರೆ ಪುಟ್ಟಪ್ಪ ಸುಡುಜ್ವರದಲ್ಲಿ ಮಲಗಿದ್ದಾರೆ!

ನೋಡಿಕೊಳ್ಳುವವರು ಯಾರೂ ಇಲ್ಲ. ಸಿದ್ಧೇಶ್ವರಾನಂದರಿಗೆ ಈ ವಿಷಯ ತಿಳಿಯಿತು. ಪುಟ್ಟಪ್ಪನವರನ್ನು ಬಲಾತ್ಕಾರದಿಂದ ಆಸ್ಪತ್ರೆಗೆ ಸೇರಿಸಿ ಅನಂತರ ಅವರನ್ನು ರಾಮಕೃಷ್ಣಾಶ್ರಮಕ್ಕೇ ಕರೆದುಕೊಂಡು ಹೋಗಿಬಿಟ್ಟರು ಸ್ವಾಮೀಜಿ. ಪುಟ್ಟಪ್ಪನವರು ರಾಮಕೃಷ್ಣಾಶ್ರಮದ ಪೂರ್ಣ ತೆಕ್ಕೆಗೆ ಒಳಗಾದದ್ದು ಹೀಗೆ. ಮುಂದೆ ತಮ್ಮ ವಿವಾಹವಾಗುವವರೆಗೆ ಅವರು ಅಲ್ಲಿಯೇ ಉಳಿದರು. ಆಶ್ರಮದ ವಾತಾವರಣ, ಲೈಬ್ರರಿ, ಸ್ವಾಮೀಜಿಯವರ ಸಹವಾಸ ಇವೆಲ್ಲ ಬೆಳೆಯುತ್ತಿದ್ದ ಬಾಲಕನ ವ್ಯಕ್ತಿತ್ವದ ಮೇಲೆ ಗಾಢವಾದ ಪ್ರಭಾವ ಬೀರಿದುವು. ಅಲ್ಲಿ ಲಭ್ಯವಾದ ಪರಮಹಂಸರ ಚಿಂತನೆಗಳು, ವಿವೇಕಾನಂದರ ಉಜ್ವಲ ಬರೆಹಗಳು ಪುಟ್ಟಪ್ಪನವರಿಗೆ ಹೊಸ ಜನ್ಮವನ್ನೇ ನೀಡಿದುವು. ಕುವೆಂಪು ರಾಮಾಯಣ ದರ್ಶನದಲ್ಲಿ-

> ಕೌಸಲೆಯ ನಂದನಂ ದೇವಕಿಯ ಕಂದನುಂ
> ತಾವೊಂದೆ ಮೈಯೊಳಿಂದವತಾರ ಮೆತ್ತಿದಾ
> ಶ್ರೀರಾಮಕೃಷ್ಣ ಭಗವತ್ ಗೋತ್ರ ಸಂಜಾತನ್

ಎಂದು ತಮ್ಮನ್ನು ಕರೆದುಕೊಂಡಿದ್ದಾರೆ! ಕೌಸಲ್ಯೆಯ ಮಗನಾದ ರಾಮ, ದೇವಕಿಯ ಮಗನಾದ ಕೃಷ್ಣ ಇಬ್ಬರೂ ಒಟ್ಟು ಸೇರಿ ಒಂದೆ ಮೈಯಲ್ಲಿ ರಾಮಕೃಷ್ಣ ಪರಮಹಂಸರಾಗಿ ಅವತರಿಸಿದರಂತೆ. ಆ ರಾಮಕೃಷ್ಣ ಋಷಿಯ ಗೋತ್ರದಲ್ಲಿ ಮೂಡಿಬಂದವನು ನಾನು ಎನ್ನುವುದು ಆ ಮಾತಿನ ಅರ್ಥ. ಇಂಥ ಸೌಭಾಗ್ಯಕರವಾದ ಪ್ರಭಾವ ಅವರಿಗೆ ಲಭಿಸಿದುದು ಒಂದು ಬೇನೆಯ ಕಾರಣದಿಂದ! ತತ್ಕಾಲಕ್ಕೆ ನಮ್ಮ ದೃಷ್ಟಿಗೆ ಕೇಡುಗಳಾಗಿ ಕಾಣುವ ಕೆಲವು ಘಟನೆಗಳು ಮುಂದೆ ನಮ್ಮನ್ನು ಶ್ರೇಯಸ್ಸಿಗೆ ಒಯ್ಯುವ ಸಂಭವವೂ ಉಂಟು. ಕುವೆಂಪುವೇ ಹೇಳುತ್ತಾರೆ : ''ಇಂದಿನ ಅನರ್ಥಮೆಯೆ ತೊಟ್ಟಿಲಾಗದೆ ಮುಂದಣಭ್ಯುದಯ ಶಿಶುಗೆ?''

ಪುಟ್ಟಪ್ಪನವರು ಮಹಾರಾಜಾ ಕಾಲೇಜಿನಲ್ಲಿ ಬಿ.ಎ. ಪದವಿ ಮುಗಿಸಿದರು. ಮುಂದೆ ತತ್ವಶಾಸ್ತ್ರದ ಎಂ.ಎ. ತರಗತಿಗೆ ಸೇರುವುದೆಂದು ತೀರ್ಮಾನಿಸಿದ್ದೂ ಆಯಿತು. ಆ ಕಾಲದಲ್ಲಿ ಬಹಳ ಮೇಧಾವಿಗಳಾದ ವಿದ್ಯಾರ್ಥಿಗಳು ತತ್ವಶಾಸ್ತ್ರದ ಅಧ್ಯಯನ ಮಾಡುವುದು ಒಂದು ಅಗ್ಗಳಿಕೆಯ ಎನಿಸಿತ್ತು. ಅಲ್ಲದೆ ಪ್ರೊ. ವಾಡಿಯಾರಂಥ ಅಂತರರಾಷ್ಟ್ರೀಯ ಖ್ಯಾತಿಯ ಅಧ್ಯಾಪಕರು ಆಗ ತತ್ವಶಾಸ್ತ್ರ ವಿಭಾಗದಲ್ಲಿ ಪ್ರಾಧ್ಯಾಪಕರಾಗಿದ್ದು, ಅವರ ಶಿಷ್ಯರಾಗಿ ಅಧ್ಯಯನ ಮಾಡುವುದು ಒಂದು ಹೆಮ್ಮೆಯ ಸಂಗತಿಯಾಗಿತ್ತು. ಸಾಲದ್ದಕ್ಕೆ ತತ್ವಶಾಸ್ತ್ರದ ಅಭ್ಯಾಸಕ್ಕೆ ಸ್ವಾಮಿ ಸಿದ್ಧೇಶ್ವರಾನಂದರ ಪೂರ್ಣ ಅನುಮೋದನೆಯೂ ಇತ್ತು! ಆ ತರಗತಿಗೆ ಸೇರಲು ಕುವೆಂಪು ಇತರ ವಿದ್ಯಾರ್ಥಿಗಳ ಜೊತೆ ಹೋಗುತ್ತಿದ್ದಾರೆ. ಆ ಹೊತ್ತಿಗೆ ಅಲ್ಲಿ ಕನ್ನಡದ ಅಧ್ಯಾಪಕರಾಗಿದ್ದ ಎ.ಆರ್. ಕೃಷ್ಣಶಾಸ್ತ್ರಿಗಳು ಪುಟ್ಟಪ್ಪನವರಿಗೆ ತಮ್ಮನ್ನು ಕಾಣಲು ಕರೆಕಳಿಸಿದರು. ಪುಟ್ಟಪ್ಪನವರು ಅವರಲ್ಲಿಗೆ ಹೋದಾಗ ಕೃಷ್ಣಶಾಸ್ತ್ರಿಗಳು ಕೇಳಿದರು.

''ಎಂ.ಎ.ಗೆ ಅಪ್ಲಿಕೇಷನ್ ಹಾಕಿದ್ದೀರಾ ಪುಟ್ಟಪ್ಪ?''

''ಹೌದು ಸಾರ್, ಹಾಕಿದ್ದೇನೆ.''

''ಯಾವ ಎಂ.ಎ.ಗೆ ಹಾಕಿದ್ದೀರಿ?''

''ಫಿಲಾಸಫಿಗೆ''

''ಈ ವರ್ಷದಿಂದ ಕನ್ನಡ ಎಂ.ಎ. ಆರಂಭವಾಗುತ್ತಿದೆ. ನೀವು ಕನ್ನಡ ಎಂ.ಎ.ಗೆ ಯಾಕೆ ಬರಬಾರದು?''

''ಫಿಲಾಸಫಿಗೆ ಹಾಕಿಬಿಟ್ಟಿದ್ದೇನೆ. ನನಗೆ ಸೀಟೂ ಕೊಟ್ಟುಬಿಟ್ಟಿದ್ದಾರೆ''

''ಫಿಲಾಸಫಿ ಏನಪ್ಪಾ? ನೀವೇ ಅದನ್ನು ಓದಿಕೊಳ್ಳುವ ಸಾಮರ್ಥ್ಯ ಪಡೆದಿದ್ದೀರಿ. ಹೇಗಿದ್ದರೂ ಆಶ್ರಮದಲ್ಲಿ ಇದ್ದೀರಿ. ಮೂರುಹೊತ್ತೂ ಅಲ್ಲಿ ಅದೇ ತಾನೆ? ನೀವು ಒಳ್ಳೆಯ ಕವಿಗಳು; ಕನ್ನಡ ಸಾಹಿತ್ಯಕ್ಕೆ ಸೇವೆ ಸಲ್ಲಿಸುವ ಸಾಮರ್ಥ್ಯ ಇರುವವರು. ನಿಮ್ಮ ಅಗತ್ಯ ಇರುವುದು ಫಿಲಾಸಫಿಗಿಂತ ಹೆಚ್ಚಾಗಿ ಕನ್ನಡಕ್ಕೆ. ನಮಗೆ ನಿಮ್ಮಂಥ ಪ್ರತಿಭಾವಂತ ವಿದ್ಯಾರ್ಥಿಗಳೇ ಬೇಕಪ್ಪಾ.''

ಅದೇನಾಯಿತೋ! ಫಿಲಾಸಫಿ ತೆಗೆದುಕೊಳ್ಳುವ ಪುಟ್ಟಪ್ಪನವರ ನಿರ್ಧಾರ ಕ್ರಮೇಣ ಕರಗಿಹೋಯಿತು. ಕುವೆಂಪು ಕನ್ನಡ ಎಂ.ಎ.ಗೆ ಬಂದುಬಿಟ್ಟರು! ಆಗ ಅದು ಒಂದು ಸಾಧಾರಣ ಘಟನೆಯಾಗಿ ಕಂಡರೂ ಅದು ತಮ್ಮ ಜೀವನದ ಬಹು ಮಹತ್ವದ ಪ್ರಸಂಗವಾಯಿತು ಎನ್ನುವುದನ್ನು ಮುಂದೆ ಕುವೆಂಪು ಕಂಡುಕೊಂಡರು. ಪಂಪ, ರನ್ನ, ಜನ್ನ ನಾಗವರ್ಮ, ರಾಘವಾಂಕ, ಕುಮಾರವ್ಯಾಸ, ಲಕ್ಷ್ಮೀಶರಂಥ ಶ್ರೇಷ್ಠ ಕವಿಗಳ ಅಧ್ಯಯನ ಮಾಡದೆ, ಕನ್ನಡ ಅಧ್ಯಾಪಕನಾಗಿ ಪಾಠ ಹೇಳದೆ ಇದ್ದಿದ್ದರೆ ರಾಮಾಯಣದರ್ಶನದಂಥ ಕೃತಿಯನ್ನು ಬರೆಯಲು ಬೇಕಾಗುವ ಪದಸಂಪತ್ತಿ ಶೈಲಿಗಳು ಅವರಿಗೆ ಖಂಡಿತವಾಗಿ ಸಿದ್ಧಿಸುತ್ತಿರಲಿಲ್ಲ. ಕೃಷ್ಣಶಾಸ್ತ್ರಿಗಳ ಬಗ್ಗೆ ತಮ್ಮ ಕೃತಜ್ಞತೆಯನ್ನು ಹೇಳುತ್ತ ಕುವೆಂಪು ಅವರೇ ಈ ಮಾತನ್ನು ದಾಖಲಿಸಿರುವುದುಂಟು.

ಪ್ರೊ. ಬಿ.ಎಂ. ಶ್ರೀಕಂಠಯ್ಯನವರು ಆ ಕಾಲದ ಪ್ರಸಿದ್ಧ ಇಂಗ್ಲಿಷ್ ಪ್ರಾಧ್ಯಾಪಕರಲ್ಲಿ ಒಬ್ಬರಾಗಿದ್ದುದಲ್ಲದೆ ಕನ್ನಡದ ಗೌರವ ಪ್ರಾಧ್ಯಾಪಕರೂ ಆಗಿದ್ದವರು; ಕನ್ನಡಕ್ಕಾಗಿ ಅಹರ್ನಿಶಿ ದುಡಿದು ಕನ್ನಡದ ಕಣ್ವ ಎಂದು ಕರೆಸಿಕೊಂಡಿದ್ದವರು. ಕುವೆಂಪುವಿಗೂ ಗುರುಗಳಾಗಿದ್ದವರು. ಒಮ್ಮೆ ಅವರು ತುಂಬಿದ ಸಾಹಿತ್ಯ ಸಭೆಯೊಂದರಲ್ಲಿ ಮಾತನಾಡುತ್ತಿದ್ದಾರೆ. ಕನ್ನಡದಲ್ಲಿ ಎಂಥ ಉತ್ತಮೋತ್ತಮ ಸಾಹಿತ್ಯ ಸೃಷ್ಟಿಯಾಗುತ್ತಿದೆ ಎಂದು ಹೇಳುತ್ತ ಹಠಾತ್ತನೆ ಅವರು ಸಭೆಯಲ್ಲಿ ಕೂತಿದ್ದ ಕುವೆಂಪು ಅವರ ಕಡೆ ಎಲ್ಲರ ಗಮನ ಸೆಳೆಯುತ್ತ ಹೇಳಿದರು.

''ರೌರವನರಕ ಅಂತ ಒಂದು ನರಕ ಇದೆ ಎಂದು ಹೇಳುತ್ತಾರಷ್ಟೆ. ಅಂಥದೊಂದು ನರಕ ಇದೆಯೋ ಇಲ್ಲವೋ ನನಗೆ ತಿಳಿಯದು. ಅಂಥ ನರಕವೊಂದು ಇರುವುದೇ ಆದರೆ

ಅದಕ್ಕೆ ಹೋಗುವ ಕನ್ನಡಿಗರು ಬೇರೆ ಯಾರೂ ಅಲ್ಲ, ಈ ಪುಟ್ಟಪ್ಪನವರ ಕವಿತೆಗಳನ್ನು ಓದದಿರುವ ಕನ್ನಡಿಗರು!''

ಸಭೆಯಲ್ಲಿ ಭಾರೀ ಹರ್ಷೋದ್ಗಾರವೆದ್ದಿತು. ಇತರ ಸಭಿಕರ ನಡುವೆ ಕೂತಿದ್ದ ಯುವಕ ಕುವೆಂಪು ಈ ಅನಿರೀಕ್ಷಿತ ಪ್ರಶಂಸೆಯಿಂದ ನಾಚಿ ನೀರಾಗಿ ಹೋಗಿದ್ದರು !

ಕುವೆಂಪುರವರಿಗೆ ದೊರೆತಿದ್ದ ಗುರುಗಳು ಅಂಥಿಂಥವರಲ್ಲ. ಬಿಎಂಶ್ರೀ, ಕೃಷ್ಣಶಾಸ್ತ್ರಿ ಟಿ.ಎಸ್. ವೆಂಕಣ್ಣಯ್ಯ – ಈ ಒಬ್ಬೊಬ್ಬರೂ ವ್ಯಕ್ತಿಗಳಾಗಿ, ವಿದ್ವಾಂಸರಾಗಿ ಬಹಳ ಎತ್ತರದಲ್ಲಿದ್ದವರು. ಟಿ.ಎಸ್. ವೆಂಕಣ್ಣಯ್ಯನವರು ವಿಶ್ವವಿದ್ಯಾನಿಲಯದ ಕನ್ನಡ ಎಂ.ಎ. ವಿಭಾಗದಲ್ಲಿ ಪ್ರೊಫೆಸರ್ ಆಗಿದ್ದರು. ಅವರು ಆಗಾಗ ರಾಮಕೃಷ್ಣಾಶ್ರಮಕ್ಕೆ ಹೋಗಿಬರುತ್ತಿದ್ದುದುಂಟು. ಹಾಗೆ ಹೋದಾಗಲೆಲ್ಲ ಆಶ್ರಮದಲ್ಲೇ ಇದ್ದ ಕುವೆಂಪು ಅವರ ಕೊಠಡಿಗೆ ಹೋಗದೆ ಅವರ ಯಾತ್ರೆ ಪೂರ್ಣವಾಗುತ್ತಿರಲಿಲ್ಲ. ಕುವೆಂಪುವಿಗೆ ತಮ್ಮ ಗುರುಗಳಲ್ಲಿ ತುಂಬ ವಿನಯ, ಗೌರವ. ಇಷ್ಟು ದೊಡ್ಡವರು, ಹೀಗೆ ಸಾಮಾನ್ಯರೆಂಬಂತೆ ತಮ್ಮ ರೂಮಿಗೆ ಬಂದುಬಿಡುತ್ತಾರಲ್ಲ ಅಂತ ಅವರಿಗೆ ಎಲ್ಲಿಲ್ಲದ ಸಂಕೋಚ, ಮುಜುಗರ. ಕುವೆಂಪು ರೂಮಿಗೆ ಹೋದ ವೆಂಕಣ್ಣಯ್ಯನವರು ಅವರು ಬರೆದಿದ್ದ ಹೊಸ ಕವನಗಳನ್ನು ಬಲಾತ್ಕಾರವಾಗಿ ತೆಗೆಸಿ, ಓದಿಸಿ ಕೇಳಿ ಅವುಗಳನ್ನು ಅಡಿಯಿಂದ ಮುಡಿವರೆಗೆ ಪ್ರಶಂಸಿಸುತ್ತಿದ್ದರು. ಮುಂದೆ ತೀರಿಕೊಳ್ಳುವ ಮುಂಚೆ ಒಂಟಿಕೊಪ್ಪಲಿನಲ್ಲಿದ್ದ ಕುವೆಂಪು ಮನೆಗೂ ಒಮ್ಮೆ ಹೋಗಿದ್ದ ವೆಂಕಣ್ಣಯ್ಯನವರು ಬೆಳಗಿನಿಂದ ಸಂಜೆವರೆಗೆ ತಮ್ಮ ಕವನಗಳನ್ನು ಓದಿಸಿ, ಪಟ್ಟ ಸಂಭ್ರಮವನ್ನು ಕುವೆಂಪು ಅವರೇ ಒಂದೆಡೆ ಪ್ರಸ್ತಾಪಿಸಿದ್ದಾರೆ. ಕವನವಾಚನದ ಸಭೆಗಳಲ್ಲಿಯೂ ಅಷ್ಟೆ ವೆಂಕಣ್ಣಯ್ಯನವರಿದ್ದರೆ ಸಾಕು ಕುವೆಂಪು ಭಾವಪರವಶರಾಗಿ ಬಿಡುತ್ತಿದ್ದರು. ''ನನಗಂತೂ ಅವರೊಬ್ಬರ ಸಾನ್ನಿಧ್ಯವೆ ಉಳಿದ ಸಾವಿರಾರು ಮಂದಿಯ ಇರುವಿಕೆಯನ್ನು ನುಂಗಿ ನಿಂತಂತಾಗುತ್ತಿತ್ತು; ಅವರೊಬ್ಬರಿಗಾಗಿಯೆ ಗಂಟೆಗಟ್ಟಲೆ ಬೇಕಾದರೂ ಕವನ ವಾಚನ ಮಾಡುವ ಹುಮ್ಮಸ್ಸು ಉಂಟಾಗುತ್ತಿತ್ತು. ಅವರು ಅಂಥ ಸಹೃದಯವರೇಣ್ಯರಾಗಿದ್ದರು ಎಂದು ಕುವೆಂಪುವೇ ಹೇಳಿದ್ದಿದೆ. ಕುವೆಂಪು ಅವರ 'ಮಲೆನಾಡಿನ ಚಿತ್ರಗಳು' ಎಂಬ ಸುಂದರ ಪ್ರಬಂಧ ಸಂಕಲನ ರಚನೆಯಾಗಲು ವೆಂಕಣ್ಣಯ್ಯನವರೇ ಮುಖ್ಯ ಪ್ರೇರಣೆ.

ಕುವೆಂಪು ಅಧ್ಯಾಪಕರಾಗಿ ಕೆಲಸ ಮಾಡುತ್ತಿದ್ದ ದಿನಗಳು. ಒಮ್ಮೆ ಅವರು ಶ್ರೀರಂಗಪಟ್ಟಣದಲ್ಲಿ ಒಂದು ಉಪನ್ಯಾಸ ನೀಡಿದರು! ಯುವಕರು ನಿರಂಕುಶಮತಿಗಳಾಗಬೇಕು' ಎನ್ನುವುದು ಅವರ ಭಾಷಣದ ವಸ್ತು. ಪರಂಪರಾಗತವಾಗಿ ನಮಗೆ ಬಂದಿರುವ ವಿಚಾರ ಸಂಪತ್ತನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸಿಯೇ ಸ್ವೀಕರಿಸಬೇಕು. ಕೇವಲ ಮೂಢನಂಬಿಕೆಯಷ್ಟರಿಂದಲೇ ಯಾವುದಕ್ಕೂ ಜೋತುಬೀಳಬಾರದು, ಎನ್ನುವುದು ಅವರ ಉಪನ್ಯಾಸದ ಒಟ್ಟು ಸಾರಾಂಶ. ಕೆಲವರು

ಸಂಪ್ರದಾಯವಾದಿಗಳು ಈ ಭಾಷಣದಿಂದ ಕೆರಳಿದರು. ಸಂಪ್ರದಾಯವನ್ನು ಟೀಕಿಸುತ್ತಿರುವ ಈ ಅಧ್ಯಾಪಕರನ್ನು ವಿಶ್ವವಿದ್ಯಾಲಯ ಶಿಕ್ಷಿಸಬೇಕು ಎಂದು ಅವರು ವಿಶ್ವವಿದ್ಯಾಲಯಕ್ಕೆ ದೂರು ಸಲ್ಲಿಸಿ ಒತ್ತಾಯ ಹೂಡಿದರು. ವಿಶ್ವವಿದ್ಯಾನಿಲಯ ಸುಮ್ಮನೆ ಕೂರುವಂತಿರಲಿಲ್ಲ. ಆಗ ಕನ್ನಡ ಪ್ರಾಧ್ಯಾಪಕರಾಗಿದ್ದ ವೆಂಕಣ್ಣಯ್ಯನವರನ್ನು ಅದು ಈ ದೂರಿನ ಬಗ್ಗೆ ತನಿಖೆ ನಡೆಸಲು ನೇಮಿಸಿತು. ಅವರು ಆ ಭಾಷಣದ ಪ್ರತಿ ತರಿಸಿಕೊಂಡು ಓದಿ ವಿಶ್ವವಿದ್ಯಾಲಯಕ್ಕೆ ಬರೆದರು: ''ನಾನು ಪುಟ್ಟಪ್ಪನವರ ಭಾಷಣವನ್ನು ಆಮೂಲಾಗ್ರವಾಗಿ ಓದಿದೆ. ನನ್ನ ಮಗನಿಗೆ ನಾನು ಬುದ್ಧಿ ಹೇಳಬೇಕಾದರೆ ಇದಕ್ಕಿಂತ ಉತ್ತಮವಾಗಿ ಮತ್ತು ಸಮರ್ಪಕವಾಗಿ ಏನನ್ನೂ ಹೇಳಲಾರೆ.''

ವಿಶೇಷ ಪ್ರತಿಭೆ, ನಿರಂತರ ಸಾಧನೆ, ಶ್ರೇಷ್ಠ ಗುರುಗಳ ಶ್ರೀರಕ್ಷೆ ಇವುಗಳ ಬಲದಿಂದ ಬೆಳೆದ ಕುವೆಂಪು ಕನ್ನಡದ ಸರ್ವಕಾಲದ ಶ್ರೇಷ್ಠ ಸಾಹಿತಿಗಳಲ್ಲಿ ಒಬ್ಬರಾಗಿದ್ದಾರೆ. ತಮ್ಮ ಕಾಲದಲ್ಲಿ ಪ್ರಚಲಿತವಾಗಿದ್ದ ಕನ್ನಡದ ಎಲ್ಲ ಸಾಹಿತ್ಯ ಪ್ರಕಾರಗಳಲ್ಲಿಯೂ ಅವರು ಕೃಷಿ ಮಾಡಿದರು. ಕೆಲವು ಪ್ರಕಾರಗಳಲ್ಲಿ ಉತ್ಕೃಷ್ಟವಾದ ಬೆಳೆ ತೆಗೆದರು. ಅವರ ಲಕ್ಷ್ಯ ವಿಶೇಷವಾಗಿ ಹರಿದದ್ದು ಕಾವ್ಯಕ್ಷೇತ್ರದಲ್ಲಿ. ನವಿಲು, ಕೊಳಲು, ಪಾಂಚಜನ್ಯ, ಕಲಾಸುಂದರಿ, ಅಗ್ನಿಹಂಸ, ಕೋಗಿಲೆ ಮತ್ತು ಸೋವಿಯೆಟ್ ರಷ್ಯಾ, ಪಕ್ಷಿಕಾಶಿ - ಮೊದಲಾದ ಅನೇಕ ಭಾವಗೀತೆ ಸಂಗ್ರಹಗಳನ್ನು ಅವರು ರಚಿಸಿದ್ದಾರೆ. ಬಾ ಫಾಲ್ಗುಣ ರವಿ ದರ್ಶನಕೆ, ದೇವರು ರುಜು ಮಾಡಿದನು, ಗಗನಗುರು, ಪಟ್ಟಣದಲ್ಲಿ ಹೊರಸು ಹಕ್ಕಿ, ಮುಂಗಾರು, ಹೋಗುವೆನು ನಾ, ಕೋಗಿಲೆ ಮತ್ತು ಸೋವಿಯೆಟ್ ರಷ್ಯಾ ಒಂದು ಸಣ್ಣ ಹಕ್ಕಿಗೆ - ಮೊದಲಾದುವು ಸುಂದರವಾದ ಭಾವಗೀತೆಗಳು. ಕುವೆಂಪು ಕಾವ್ಯದ ಸೌಂದರ್ಯ 'ಸತ್ಯ' 'ಶಿವ'ಗಳ ಭವ್ಯ ಕಲ್ಪನೆಗಳನ್ನೇ ಶ್ರುತಿಯಾಗಿಸಿಕೊಂಡು ಸೃಷ್ಟಿಯಾದದ್ದು.

ಆನಂದಮಯ ಈ ಜಗಹೃದಯ
ಏತಕೆ ಭಯ ಮಾಣೊ
ಸೂರ್ಯೋದಯ ಚಂದ್ರೋದಯ
ದೇವರ ದಯ ಕಾಣೊ

ಎಂದು ಶ್ರದ್ಧೆಯಿಂದ ಸಾರಿದ ಕವಿ ಅವರು. ದೃಷ್ಟಾರನ ಗುಣವುಳ್ಳವನು ಮಾತ್ರವೇ ಸೃಷ್ಟಿಶೀಲ ಕವಿಯಾಗಬಲ್ಲ ಎಂಬ ನಂಬಿಕೆ ಅವರದ್ದಾಗಿತ್ತು. ಈ ಶತಮಾನದಲ್ಲಿ ಮಹಾಕಾವ್ಯ ಸಂಪ್ರದಾಯದಲ್ಲಿ ಐದಾರು ಕಾವ್ಯಗಳು ರಚಿತವಾಗಿದ್ದರೂ ರಾಮಾಯಣ ದರ್ಶನ ಅವೆಲ್ಲಕ್ಕೂ ಅಗ್ರಸ್ಥಾನದಲ್ಲಿದೆ ಎಂದು ನಿಸ್ಸಂದೇಹವಾಗಿ ಹೇಳಬಹುದು. ಮಹಾಕಾವ್ಯವೊಂದನ್ನು ರಚಿಸುವ ಮಹತ್ವಾಕಾಂಕ್ಷೆ ಪುಟ್ಟಪ್ಪನವರಿಗೆ ಮೊದಲಿನಿಂದ ಇದ್ದು, ಅದಕ್ಕಾಗಿ ಅವರು ವಿಶೇಷ ಸಾಧನೆ ಮಾಡಿದ್ದರೆನ್ನುವುದನ್ನು ಅಲ್ಲಗಳೆಯುವಂತಿಲ್ಲ. ಈ ವಿಷಯದಲ್ಲಿ ಅವರು ಇಂಗ್ಲಿಷಿನ ಮಹಾಕವಿ ಮಿಲ್ಟನ್ನನನ್ನೆ ಹೋಲುತ್ತಾರೆ. ಕುವೆಂಪು ಅವರ

ಮಹಾಕಾವ್ಯ ಭಾರತೀಯ ಮಹಾಕಾವ್ಯ ಸಂಪ್ರದಾಯವನ್ನಷ್ಟೇ ತದ್ವತ್ತಾಗಿ ಅನುಸರಿಸಿದ್ದಲ್ಲ, ಪಾಶ್ಚಾತ್ಯ ಮಹಾಕಾವ್ಯಗಳ ಗಾಢ ಅಧ್ಯಯನದ ಫಲವಾಗಿ ಕುವೆಂಪು ಕೆಲವು ಹೊಸ ಅಂಶಗಳನ್ನು ಸೃಜನಾತ್ಮಕವಾಗಿ ಅದರಲ್ಲಿ ಅಳವಡಿಸಿಕೊಂಡಿದ್ದಾರೆ. ಇದರ ಫಲವಾಗಿ ಅವರ ಮಹಾಕಾವ್ಯ ಭಾರತೀಯ ಪಾಶ್ಚಾತ್ಯ - ಎರಡೂ ಸಂಪ್ರದಾಯಗಳ ಒಂದು ಸುವರ್ಣ ಮಾಧ್ಯಮವಾಗಿದೆ ಎನ್ನಬಹುದು. ರಾಮಾಯಣ ದರ್ಶನ ಕೇವಲ ವಾಲ್ಮೀಕಿ ರಾಮಾಯಣದ ನೆರಳಾಗಿರದೆ ಹೊಸ ಪಾತ್ರ, ಪ್ರಸಂಗ, ಸಂವೇದನೆ, ವಿಚಾರಗಳನ್ನು ಗರ್ಭೀಕರಿಸಿಕೊಂಡು ಆಧುನಿಕ ಲೋಕದರ್ಶನವೊಂದರ ಮಹಾಪ್ರತಿಮೆಯಾಗಿದೆ. ಪ್ರಜಾಪ್ರಭುತ್ವದ ಕೇಂದ್ರಬಿಂದುವಾದ ಸಾಮಾನ್ಯನನ್ನು ಮೊದಲ ಬಾರಿಗೆ ವಿಶೇಷವಾಗಿ ಗಣನೆಗೆ ತೆಗೆದುಕೊಳ್ಳುವ ಮಹಾಕಾವ್ಯ ಇದೊಂದೇ. ಆದರೂ ಅದು ಸಾಮಾನ್ಯನಿಗೆ ಎಂದೂ ಎಟುಕದ ಸಂಸ್ಕೃತ ಭೂಯಿಷ್ಠಶೈಲಿಯಲ್ಲಿ ರಚಿತವಾಗಿರುವುದು ಮಾತ್ರ ಒಂದು ವಿಪರ್ಯಾಸ.

ಅನೇಕ ಆಧುನಿಕ ವಿಮರ್ಶಕರ ಪ್ರಕಾರ ಕುವೆಂಪು ಅವರ ಅಪೂರ್ವ ಕೊಡುಗೆಯೆಂದರೆ 'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಎಂಬ ಅವರ ಎರಡು ಭವ್ಯ ಕಾದಂಬರಿಗಳು. ಕುವೆಂಪು ಅವರ ನಿಜವಾದ ಮಹಾಕಾವ್ಯವೆಂದರೆ ಇವೇ ಎನ್ನಬಹುದು. ಮಲೆನಾಡಿನ ಪ್ರಾದೇಶಿಕ ಕಸುವನ್ನು ಹೀರಿ ಬೆಳೆದ ಈ ಎರಡು ಮಹಾಕೃತಿಗಳು ವಿಶ್ವದ ಶ್ರೇಷ್ಠ ಕಾದಂಬರಿಗಳ ಸಾಲಿನಲ್ಲಿ ನಿಲ್ಲಲು ಅರ್ಹವಾಗಿವೆ. ಮನುಷ್ಯ ಸ್ವಭಾವದ ಗಾಢ ಪರಿಚಯ, ಅವನನ್ನು ಆವರಿಸಿ ನಿಂತ ಪ್ರಕೃತಿಯ ಅದಮ್ಯ ಚೇತನದ ಅರಿವು, ಮಾನವನ ಶಕ್ತಿ ದೌರ್ಬಲ್ಯ, ಪಶುತ್ವ ದೈವಿಕತೆಗಳ ಬೆರಗುಗೊಳಿಸುವ ಗ್ರಹಿಕೆ ಈ ಕೃತಿಗಳ ಬುಡಕ್ಕೆ ಇವೆ. ಕುವೆಂಪು ಅವರ ಅಸಾಧಾರಣ ಸೃಷ್ಟಿಶಕ್ತಿ ಪ್ರಕಟವಾಗಿರುವುದು ಇವುಗಳ ಮೂಲಕವೇ. ಕುವೆಂಪು ತಮ್ಮ ಕಾವ್ಯಕ್ಕೇ ಮೊದಲ ಮನ್ನಣೆ ನೀಡುವಂತೆ ಕಾಣುತ್ತದೆ. ಆದರೆ ಅನೇಕ ಪ್ರತಿಷ್ಠಿತ ವಿಮರ್ಶಕರ ಮೊದಲ ಮನ್ನಣೆಗೆ ಪಾತ್ರವಾಗಿರುವುದು ಅವರ ಕಾವ್ಯವಲ್ಲ, ಕಾದಂಬರಿಗಳು.

ಕುವೆಂಪು ಹಲವು ನಾಟಕಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಸ್ಮಶಾನ ಕುರುಕ್ಷೇತ್ರ, ಶೂದ್ರತಪಸ್ವಿ ಹೆಚ್ಚು ಗಮನಸೆಳೆಯುವಂಥವು. ಜಲಗಾರ ಮತ್ತು ಶೂದ್ರತಪಸ್ವಿಗಳ ಬೆನ್ನಿಗಿರುವ ಪ್ರತಿಭಟನೆಯ ನಿಲುವನ್ನು ನೋಡಿದಾಗ ಕನ್ನಡದ ಮೊದಲ ಬಂಡಾಯಸಾಹಿತಿ ಕುವೆಂಪು ಅವರೇ ಎನಿಸುತ್ತದೆ. ಇವು ಹೊರಬಂದಾಗ ಸಂಪ್ರದಾಯವಂತರ ವಲಯದಲ್ಲಿ ಅಸಮಾಧಾನದ ಬಿರುಗಾಳಿ ಬೀಸಿದ್ದೂ ಉಂಟು. ಸಂಪ್ರದಾಯವಂತರನ್ನು ಪ್ರತಿನಿಧಿಸುವ ಪಾತ್ರಗಳ ಮೇಲೆ ಕುವೆಂಪು ಅಗತ್ಯಕ್ಕಿಂತ ಹೆಚ್ಚು ಪ್ರಹಾರ ಮಾಡಿದ್ದಾರೆ ಎಂದು ಕೆಲವರು ಹಿರಿಯ ಸಾಹಿತಿಗಳೂ ಭಾವಿಸಿದ್ದುಂಟು. ಆದರೆ ಕೃತಿಯಲ್ಲಿ ಕುವೆಂಪು ಸೃಷ್ಟಿಸುವ ವಾತಾವರಣದ ನಡುವೆ ಅವರ ಪಾತ್ರ ನಿರ್ವಹಣೆ ಔಚಿತ್ಯಕ್ಕೆ ಹೊರತಾಗಿದೆ ಎನ್ನುವಂತಿಲ್ಲ.

ಕುವೆಂಪು ತಮ್ಮ ಎಲ್ಲ ಬರೆಹಗಳಲ್ಲಿಯೂ ಅವೈಚಾರಿಕತೆ ವೈಷಮ್ಯಗಳನ್ನು ವಿರೋಧಿಸಿಕೊಂಡು ಬಂದವರೇ. ಕಾರಂತರೋ ಶ್ರೀರಂಗರೋ ಇದೇ ಬಗೆಯ ವೈಚಾರಿಕತೆಯನ್ನು ಪ್ರಕಟಿಸಿದಾಗ ಅಸಮಾಧಾನ ಪಡದವರು ಕುವೆಂಪು ಅವರಲ್ಲಿ ಅಂಥ ನಿಲುವು ಕಂಡಾಗ ಆಕ್ಷೇಪಿಸುವುದು ಸಮರ್ಪಕವೆನಿಸುವುದಿಲ್ಲ.

ಉತ್ತಮ ಕೃತಿಗಳನ್ನು ಕುರಿತ ಅಭಿರುಚಿ ನಿರ್ಮಾಣ ಮತ್ತು ಪರಂಪರೆಯ ಬಗ್ಗೆ ಅಭಿಮಾನ ಕುವೆಂಪು ಕಾಲದ ಸಾಹಿತಿಗಳು ಸಾಧಿಸಬೇಕಾದ ಒಂದು ಸಾಹಿತ್ಯಕ ಮೌಲ್ಯವಾಗಿತ್ತು. ಹಾಗೆಂದೇ ಕನ್ನಡ ಕಾವ್ಯ-ಪರಂಪರೆಯಲ್ಲಿ ಬಂದ ಅನೇಕ ಶ್ರೇಷ್ಠ ಕೃತಿಗಳನ್ನು ಕುರಿತು, ರುಚಿಸೃಷ್ಟಿ ಮಾಡುವ ರಸಾತ್ಮಕ ವಿಮರ್ಶೆಗಳನ್ನು ಕುವೆಂಪು ಬರೆದರು. ಪಂಪ, ರನ್ನ, ನಾಗವರ್ಮ, ಜನ್ನ, ಕುಮಾರವ್ಯಾಸ, ಲಕ್ಷ್ಮೀಶ – ಇಂಥ ಶ್ರೇಷ್ಠ ಕವಿಗಳ ಕೃತಿಗಳ ಬಗ್ಗೆ ಅವರು ಬರೆದ ವಿಮರ್ಶೆ ಓದುಗನಲ್ಲಿ ಮೆಚ್ಚಿಗೆ ಕುತೂಹಲಗಳನ್ನು ಹುಟ್ಟಿಸಿ ಆ ಕೃತಿಗಳನ್ನು ಓದಬೇಕೆಂಬ ಕಾತರತೆಯನ್ನು ಉಂಟುಮಾಡುವಂಥವು. 'ಮಹಾಶ್ವೇತೆಯ ತಪಸ್ಸು' ಎಂಬ ಅವರ ಲೇಖನ ಆ ಕಾಲದ ರಸವಿಮರ್ಶೆಗೆ ಮಾದರಿ ಎನ್ನಬಹುದಾದ ಬರೆಹ.

ಆಡು ಮುಟ್ಟದ ಸೊಪ್ಪಿಲ್ಲ ಎನ್ನುವಂತೆ ಕುವೆಂಪು ಕೈಯಾಡಿಸದ ಸಾಹಿತ್ಯಪ್ರಕಾರವಿಲ್ಲ. ಮೇಲೆ ಹೇಳಿದ ಪ್ರಕಾರಗಳಷ್ಟೇ ಅಲ್ಲದೆ ಅವರು ಸಣ್ಣಕಥೆ, ಪ್ರಬಂಧ, ಕಾವ್ಯಮೀಮಾಂಸೆ, ಜೀವನಚರಿತ್ರೆ, ಮಕ್ಕಳ ಸಾಹಿತ್ಯಗಳಲ್ಲೂ ಗಣ್ಯವಾದ ಬರೆಹ ಹೊರತಂದಿದ್ದಾರೆ. ಮಾತ್ರವಲ್ಲ (ತಮ್ಮ ಸಾಹಿತ್ಯ ಸೃಷ್ಟಿಯ ಮೇಲೆ ಬೆಳಕು ಚೆಲ್ಲುವಂಥ ಕೆಲವು ಪ್ರಸಂಗಗಳೂ ಇರುವ) 'ನೆನಪಿನ ದೋಣಿ' ಎಂಬ ಘಟನಾಭರಿತ ಆತ್ಮಕಥನದ ಒಂದು ಮಹಾಸಂಪುಟವನ್ನೂ ಪ್ರಕಟಿಸಿದ್ದಾರೆ.

ಇತರ ಲೇಖಕರಿಂದ ಕುವೆಂಪು ಅವರನ್ನು ಸ್ಪಷ್ಟವಾಗಿ ಪ್ರತ್ಯೇಕಿಸುವ ಒಂದು ವಿಶಿಷ್ಟ ಲಕ್ಷಣವೆಂದರೆ ಅವರ ಎರಡರಿಯದ ಕನ್ನಡ ಪ್ರೇಮ. ಅದನ್ನು ಅವರು ಸಾಂಕ್ರಾಮಿಕವಾಗಿ ನಾಡಿನ ಉದ್ದಗಲಕ್ಕೆ ಹಬ್ಬಿಸಿದರು. ಸುಮಾರು ಅರವತ್ತು ವರ್ಷಗಳಷ್ಟು ಹಿಂದೆಯೇ, ಇನ್ನೂ ಯುವಕರಾಗಿದ್ದಾಗಲೇ ಕುವೆಂಪು–

ಕನ್ನಡವೆನೆ ಕುಣಿದಾಡುವುದೆನ್ನೆದೆ
ಕನ್ನಡವೆನೆ ಕಿವಿ ನಿಮಿರುವುದು,
ಕಾಮನ ಬಿಲ್ಲನು ಕಾಣುವ ಕವಿವೊಲು
ತೆಕ್ಕನೆ ಮನ ಮೈ ಮರೆಯುವುದು.
ಕನ್ನಡ ಕನ್ನಡ ಹಾ ಸವಿಗನ್ನಡ
ಬಾಳುವುದೇತಕೆ ನುಡಿಯೆಲೆ ಜೀವ
ಸಿರಿಗನ್ನಡದಲಿ ಕವಿತೆಯ ಮಾಡೆ
ಸಿರಿಗನ್ನಡದೇಳಿಗೆಯನು ನೋಡೆ.

ಎಂದು ಬರೆದರು. ಜೀವನದ ಪರಮಧ್ಯೇಯವೆಂದರೆ ಕನ್ನಡದ ಏಳಿಗೆಯನ್ನು ನೋಡುವುದೇ ಎಂದು ಭಾವವಶರಾಗಿ ಹಾಡಿದವರು ಅವರೊಬ್ಬರೇ. ಈಗ ಕನ್ನಡಪ್ರೇಮ ತೋರಿಸುವವರು ಕಾಸಿಗೊಬ್ಬರು ಕೊಸರಿಗೊಬ್ಬರು ಸಿಗುತ್ತಾರೆ. ಅದರಿಂದ ಈಗ ಕುರ್ಚಿ, ಕಾಸು ಪ್ರಸಿದ್ಧಿ ಎಲ್ಲ ಸಿಗುವ ಸಂಭವವಿದೆ. ಕುವೆಂಪು ಈ ಪದ್ಯ ಬರೆದಾಗ ಅದಕ್ಕಾಗಿ ಅವರನ್ನು ಹಾಸ್ಯಮಾಡಬಹುದಾದ ವಾತಾವರಣ ಮಾತ್ರ ಇತ್ತು. ಆದರೆ ಪುಟ್ಟಪ್ಪನವರು ಅದಕ್ಕೆ ಲಕ್ಷ್ಯ ಕೊಟ್ಟವರೇ ಅಲ್ಲ. ಮುಂದೆ ಉಪಕುಲಪತಿಯಾದಾಗ ಅವರು ಪದವಿ ತರಗತಿಗಳಲ್ಲಿ ಕನ್ನಡ ಮಾಧ್ಯಮ ಜಾರಿಗೆ ತಂದರು. ದ್ವಿತೀಯ ಭಾಷೆಯಾಗಿ ಕನ್ನಡದ ಬೋಧನೆಯನ್ನು ವಾರಕ್ಕೆ ಎರಡರಿಂದ ನಾಲ್ಕುಗಂಟೆಗಳಿಗೆ ಹೆಚ್ಚಿಸಿದರು. ಮೈಸೂರು ಮಹಾರಾಣಿ ಕಾಲೇಜಿನಲ್ಲಿ ಐದಾರು ಜನ ಹೆಣ್ಣುಮಕ್ಕಳು ಪದವಿ ತರಗತಿಗೆ ಕನ್ನಡ ಮೀಡಿಯಂ ಆರಿಸಿಕೊಂಡಾಗ ಅವರಿಗಾದ ಸಂತೋಷ ಅಷ್ಟಿಷ್ಟಲ್ಲ. ನೋಡಲು ಸಹ ಯಾರಿಗೂ ಸುಲಭವಾಗಿ ಸಿಗದೆ ಇದ್ದ ಕುವೆಂಪು ಆ ವಿದ್ಯಾರ್ಥಿನಿಯರ ಜೊತೆ ಕೂತು ಟೀ ತೆಗೆದುಕೊಳ್ಳಲು ಒಪ್ಪಿದರು. ವಿದ್ಯಾಕ್ಷೇತ್ರದಲ್ಲಿ ಅವರು ಮಾಡಿದ ಹಿರಿಯಸಾಧನೆಗೆ ಮಾನಸ ಗಂಗೋತ್ರಿ ಮತ್ತು ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗಗಳೇ ಸಾಕ್ಷಿ.

ಕುವೆಂಪು ಕಣ್ಮರೆಯಾಗಿದ್ದಾರೆ ನಿಜ. ಆದರೆ ಇನ್ನೊಂದು ರೀತಿಯಲ್ಲಿ ಅವರು ತಮ್ಮ ಕೃತಿಗಳೊಳಗೆ ಹರಡಿಕೊಂಡಿದ್ದಾರೆ. ಕನ್ನಡ ಇರುವವರೆಗೆ ಅವರ ಹೆಸರು ಅಜರಾಮರವಾಗಿರುತ್ತದೆ; ಕನ್ನಡವೇ ಆಗಿರುತ್ತದೆ.

●

# ಕುವೆಂಪು ದರ್ಶನ - ಅವರ ವಿಮರ್ಶೆಗಳ ಮೂಲಕ

ಲಕ್ಷ್ಮೀನಾರಾಯಣ ಗಣಪತಿ, ನಾರ್ತ್ ಕೆರೊಲಿನ

ಸ್ವತಂತ್ರ ಭಾರತದಲ್ಲಿನ ಉತ್ಕೃಷ್ಟ ಪ್ರತಿಭೆಗಳಲ್ಲೊಬ್ಬರಾದ ಕುವೆಂಪು ಅವರನ್ನು ಅರ್ಥ ಮಾಡಿಕೊಳ್ಳುವುದು ಹಲವು ಕಾರಣಗಳಿಂದ ಕಷ್ಟವಾಗಬಹುದು. ಆದರೆ, ಅವರು ಬರೆದ ವಿಮರ್ಶೆಗಳು ನನಗೆ ಸುಲಭವಾಗಿ ದಕ್ಕುವಂತಾಗಿದೆ. ಇಂತಹ ರಸಋಷಿಯು ಸೃಷ್ಟಿಸಿದ ವಿಮರ್ಶೆಗಳು ಅವರ ಅದ್ಭುತ ಸೃಜನಶೀಲ ಪ್ರತಿಭೆಯ ಕಾರ್ಯಗಳೆಂದೇ ಹೇಳಬಹುದು. ಇವು ಕುವೆಂಪು ಬಗ್ಗೆ ಇನ್ನೊಂದು ದೃಷ್ಟಿಕೋನವನ್ನು ಒದಗಿಸುತ್ತದೆ. ಮಲೆನಾಡಿನ ಸೊಂಪಿನ ಮೂಲೆಯಲ್ಲಿ ಅರಳಿದ ಈ ಕಾಡು ಮಲ್ಲಿಗೆಯ ಹಾಡಿನ ವಿಷಯ ವೈವಿಧ್ಯಕ್ಕೆ, ಆಳಕ್ಕೆ, ಇರುವ ಈ ಹೊಸತನ ನನ್ನಲ್ಲಿ ಕೌತುಕ ಮೂಡಿಸಿದಂತೆ ನಿಮ್ಮಲ್ಲಿಯೂ ಮೂಡಿಸಿರಲೇಬೇಕು. ಆ ಸವಿ ನೆನಪನ್ನು ನಿಮಗೆ ಮತ್ತೆ ಜ್ಞಾಪಿಸುವುದಷ್ಟೇ ಈ ಲೇಖನದ ಆಶಯ.

ಕುವೆಂಪು ವಿರಚಿತ, 'ದ್ರೌಪದಿಯ ಶ್ರೀಮುಡಿ', 'ತೋರಣ ನಾಂದಿ' ಮತ್ತು 'ಕಾವ್ಯ ವಿಹಾರ' ಈ ಮೂರು ಕೃತಿಗಳೇ ನನ್ನ ಲೇಖನಕ್ಕೆ ಮುಖ್ಯ ಆಧಾರ. ಉಳಿದಂತೆ, ನಲ್ಮೆಯಿಂದ ತಮ್ಮ ಅನಿಸಿಕೆಗಳನ್ನು ನನ್ನೊಡನೆ ಹಂಚಿಕೊಂಡ ಮಿತ್ರರುಗಳಿಗೂ ನಾನು ಆಭಾರಿಯಾಗಿದ್ದೇನೆ.

ಪಂಪನ ಭಾರತವನ್ನು ಒಂದು ಘಟ್ಟದಲ್ಲಿ ಮಾನವ ಬದುಕಿನ ಮಹತ್ ಕಥನವಾಗಿರುವುದನ್ನು ಗುರುತಿಸುವ ಕುವೆಂಪು, ಪಂಪನ ನಂತರ ಬಂದ ಕುಮಾರವ್ಯಾಸನ ಕೈಯಲ್ಲಿ ಮಹಾಭಾರತ ಒಂದು ಆಧ್ಯಾತ್ಮಿಕ ಆಯಾಮವನ್ನು ಕಂಡುಕೊಳ್ಳುವುದನ್ನು ಮೆಚ್ಚುತ್ತಾರೆ. ಇಪ್ಪತ್ತನೆಯ ಶತಮಾನದಲ್ಲಿ ಬದುಕುವ ಕುವೆಂಪು ತಮ್ಮ ಸಮಕಾಲೀನ ಸಮಾಜದ ಎಲ್ಲ ಭ್ರಷ್ಟ ನಿಲುವುಗಳನ್ನು ಖಂಡಿಸುತ್ತಾ ಜೀವಿಸಿದರೂ, ಮಾನವ ಬದುಕಿನಲ್ಲಿ ಆಧ್ಯಾತ್ಮಿಕ ಮಜಲಿನ ಮೇಲಿನ ತಮ್ಮ ಪ್ರೀತಿಯನ್ನು ತೋರ್ಗಾಣಿಸುವ ರೀತಿಯಿಂದಾಗಿ ನಾರಣಪ್ಪನನ್ನು ಪಂಪನಿಗಿಂತ ಶ್ರೇಷ್ಠನನ್ನಾಗಿಸುತ್ತಾರೆ. ಕಾಲದೊಡನೆ ಒಂದು ಸಂಸ್ಕೃತಿ ಸಾತತ್ಯ ಉಳಿಸಿಕೊಂಡಾಗ ಎಲ್ಲ ರೀತಿಯ ಕಲಾತ್ಮಕ ಸೃಷ್ಟಿ ಸಹಜವೆನಿಸುತ್ತದೆ. ಕಾಲನ ನೆಗೆಯಲ್ಲಿ, ಒಂದು ಸಂಸ್ಕೃತಿಯ ಬೆಳವಣಿಗೆಯಲ್ಲುಂಟಾಗುವ ತಡೆಯಿಂದಾಗಿ ಆಧ್ಯಾತ್ಮಿಕದಂತಹ ಸಂಕೀರ್ಣ ವಿಷಯಗಳು ಮುಂದಿನ ತಲೆಮಾರಿಗೆ ಹೊಸದೇ ಅರ್ಥ ಕೊಡುತ್ತವೆ. ಕಲಾತ್ಮಕ ಪ್ರತಿಭೆಯೊಂದರ ಸುಂದರ ವೈಚಾರಿಕ ಸೃಷ್ಟಿಗಿಂತ ಹೆಚ್ಚಿನದೇನೋ ಆಗಿ, ಪುರಾಣದ ಪ್ರತಿಮೆಗಳಾಗುತ್ತವೆ; ಧಾರ್ಮಿಕ ಆಣತಿಗಳಾಗುತ್ತವೆ. ಈ ಅಪಾಯವನ್ನು ಗುರುತಿಸದೇ ಹೋಗುವಷ್ಟು ಆಧ್ಯಾತ್ಮಿಕತೆಯ ಒಲವಿದೆ, ಕುವೆಂಪು ಅವರಿಗೆ. ಜಾತಿ ಪದ್ಧತಿಯ ಎಲ್ಲ

ದುರಂತಗಳನ್ನೂ ಅವರು ಮನಗಂಡಿದ್ದಾರೆ. ಆಧ್ಯಾತ್ಮದ ಹೆಸರಿನಲ್ಲಿ ಪುರೋಹಿತಶಾಹಿ ಎಸಗುವ ಎಲ್ಲ ಅನ್ಯಾಯದ ಸಾಧ್ಯತೆಗಳ ಅರಿವಿದೆ ಅವರಿಗೆ. ಆದರೂ ಸಹ, ಪಂಪನ ಐಹಿಕ ಕಥನಕ್ಕಿರುವ ಸೌಮ್ಯ ಸುಂದರ ಬದುಕಿನ ಆಯಾಮದ ಅನನ್ಯತೆಯನ್ನು ಮೆಚ್ಚಿಕೊಳ್ಳದೆ, ಕುಮಾರವ್ಯಾಸನ ಆಧ್ಯಾತ್ಮಿಕ ಮಜಲಿನ ನಿರೂಪಣೆಗಳು ಸಮಾಜವೊಂದರ ಆಟದಲ್ಲಿ ಗೊಡ್ಡು ಆಣತಿಗಳಾಗಿ, ಪ್ರತಿಗಾಮಿ ಆಚರಣೆಗಳನ್ನು ಸೃಷ್ಟಿಸಬಲ್ಲ ದುರಂತದತ್ತಗಳಾಗಿದ್ದರೂ, ಆ ಕಡೆ ಬೆರಳು ತೋರಿಸದೇ ಹೋಗುತ್ತಾರೆ. ಇದು ಮಾತ್ರ ಕುವೆಂಪು ಅವರ ವೈಚಾರಿಕ ಆಯಾಮದ ನಿಜ ವಿಸ್ತಾರವನ್ನು ತೋರ್ಪಡಿಸದೆ ಹೋಗುತ್ತದೆ.

ಭಗವಾನ್ ಕೃಷ್ಣನ ವಿಶ್ವರೂಪಕ್ಕೆ ಮಾರುಹೋಗುವ ಕವಿಯ ಮನಸ್ಸು, ಪ್ರಸ್ತುತ ಸಮಾಜದಲ್ಲಿನ ಶ್ರೀಕೃಷ್ಣನ ಅಥವಾ ಇನ್ನಾವುದೇ ದೈವದ ಅನುಯಾಯಿಗಳ ಆಚರಣೆಯಲ್ಲಿನ ದೌಷ್ಟ್ಯ ನೆನಪಿಸಿಕೊಳ್ಳದೇ ಹೋಗುವ ಮಟ್ಟಿಗೆ ಕವಿಯ ನಿಲುವಿನ ಜೊತೆ ತಾದಾತ್ಮ್ಯವನ್ನು ತೋರಿಸುತ್ತದೆ.

'ವಿಮರ್ಶೆ ಎಂದರೆ ಕವಿಪ್ರತಿಭೆಯಿಂದ ಹೊರಹೊಮ್ಮುವ ಸುಂದರ ಭಾವಮಯ ಕಾವ್ಯಕ್ಷೇತ್ರಗಳಲ್ಲಿ ಸೂಕ್ಷ್ಮಮತಿಯಾದ ಸಹೃದಯನು ಕೈಕೊಳ್ಳುವ ವಿಹಾರ ಯಾತ್ರೆ ಅಥವಾ ಸಾಹಸ ಯಾತ್ರೆಯ ಕಥನಕಾರ್ಯ' ಎಂಬ ಅವರದೇ ಮಾತುಗಳನ್ನು ನೆನಪಿಸಿಕೊಂಡಾಗ, ಅವರ ವಿಮರ್ಶೆಯ ಮೂಲ ಉದ್ದೇಶ, ರಸಾಸ್ವಾದನೆಯಷ್ಟೇ ಎಂಬುದರ ಅರಿವಾಗುತ್ತದೆ.

ಕುವೆಂಪು ಅವರ ಕವಿ ಮನಸ್ಸಿಗೆ ಸಾಧ್ಯವಾಗುವ ಆಧ್ಯಾತ್ಮಿಕತೆಯ ಸ್ಫುರಣಕ್ಕೂ ಮೊದಲೇ ಕುಮಾರವ್ಯಾಸನ ಭಗವಾನ್ ಕೃಷ್ಣನನ್ನು ಓದುವ ಸಾಮಾನ್ಯ ಮನಸ್ಸಿಗೆ ತಟ್ಟುವುದು, ಅವನ ಭಗವದ್ ಉಕ್ತಿಗಳ ಸೀಮಿತ ಅರ್ಥ. ಹಾಗಾದಾಗಲೇ ಸಮಾಜವೊಂದು, ನಾರಣಪ್ಪನ ಆಧ್ಯಾತ್ಮಿಕ ಭಾರತವನ್ನು ಇನ್ನೊಂದು ಬೈಬಲ್ ಅಥವಾ ಕುರಾನ್ ಆಗಿ ಪರಿವರ್ತಿಸಿಕೊಳ್ಳುತ್ತದೆ. ಸೃಷ್ಟ್ಯಾತ್ಮಕ ಪ್ರತಿಭೆಯೊಂದು ಸಾಮಾಜಿಕ ಜವಾಬ್ದಾರಿಯಿಂದ ಯೋಚಿಸಿದಾಗ ತನ್ನ ಕಲಾತ್ಮಕ ಆಯಾಮಗಳಿಗೆ ಒಂದು ಮೂಗುದಾರ ಹಾಕಿಕೊಂಡರೆ ಅದನ್ನು ನಾವು ಮೆಚ್ಚಿಕೊಳ್ಳಬೇಕೇನೋ ಎನಿಸುತ್ತದೆ ಒಮ್ಮೊಮ್ಮೆ. ಈ ದೃಷ್ಟಿಯಿಂದ ಪಂಪನ ಆಯಾಮ, ಅವನಿಗಿದ್ದ ರಾಜನಿಷ್ಠೆಯಷ್ಟೇ ಅಲ್ಲದೆ ಸಾಮಾಜಿಕ ಬದ್ಧತೆಯಿಂದಲೂ ಪ್ರಭಾವಿತವಾಗಿದ್ದಿರಬಹುದಾದ ಸಾಧ್ಯತೆಗಳಿವೆ. ಇಂತಹ ಉದಾಹರಣೆಗಳನ್ನು ಮಹಾಭಾರತದ ಶ್ರೀಕೃಷ್ಣ ರಾಮಾಯಣದ ರಾಮನಲ್ಲಿ ನೋಡಬಹುದು. ಕುವೆಂಪು ಈ ಸಾಧ್ಯತೆಗಳತ್ತ ಬೆರಳು ತೋರಿಸದಿರುವುದು ಅವರ ಆಧ್ಯಾತ್ಮಿಕ ಮಜಲಿನ ಸ್ಫುರಣ ಹೇಗೋ ಹಾಗೆಯೇ ಅವರ ವೈಚಾರಿಕ ಮನಸ್ಸಿನ ವಿಮುಖತೆಯೂ ಹೌದೆಂಬಂತೆ ಕಾಣುವುದು. ತಮ್ಮ ಕೃತಿಗಳಲ್ಲಿ ಯಾವುದೇ ವ್ಯಕ್ತಿಯನ್ನೂ ದೈವತ್ವಕ್ಕೆ ಏರಿಸದ ಕುವೆಂಪು, ಸನಾತನ ಕಾಲದಿಂದ ತಮಗೆ ಹರಿದುಬಂದ ನಾರಣಪ್ಪನ ಕಾವ್ಯಸೃಷ್ಟಿಯಲ್ಲಿನ ದೈವತ್ವಕ್ಕೆ ಮಾರುಹೋಗುವುದೊಂದು ಕೌತುಕದ

ವಿಷಯವಾಗಿಬಿಡುತ್ತದೆ. 'ಗುಡಿ ಚರ್ಚು ಮಸಜೀದಿಗಳ ಬಿಟ್ಟು ಹೊರ ಬನ್ನಿ' ಎಂದು ಹಾಡುವ ಕವಿ-ಮನಸ್ಸು, ನಾರಣಪ್ಪನ ದೈವತ್ವದ ಹಾಡಿಗೆ, ಆಧ್ಯಾತ್ಮಿಕದ ಸೋಗಿಗೆ, ಮಾರು ಹೋಗುವುದು ಇಪ್ಪತ್ತನೇ ಶತಮಾನದ ಕುವೆಂಪುವಿಗೆ ನಿರಪಾಯಕಾರಿಯಾಗಿ ಕಂಡಿದ್ದಿರಬೇಕು. ಹಾಗೆಂದೇ, ತಮಗೆ ಜನ್ಮದತ್ತವಾದ, ಅತಿ ಮುಗ್ಧ ಮತ್ತು ಸಹಜವಾದ, ಪ್ರಕೃತಿ ದೈವದ ಮಹಿಮೆಗೆ, ಸೃಷ್ಟಿಯ ಲೀಲೆಗೆ, ಪೊಡಮಡುವ ಭಾವನೆಯಲ್ಲೇ, ನಾರಣಪ್ಪನ ದೈವಕಥೆಯಾದ ಮಹಾಭಾರತಕ್ಕೆ ಮಾರುಹೋಗಿದ್ದಾರೆ ಕುವೆಂಪು. ತಮ್ಮ ಸಮಕಾಲೀನ ಬದುಕಿನಲ್ಲಿನ ಜಾತಿಪದ್ಧತಿ, ಮತ್ತಿತರ ಶೋಷಣೆಗಳನ್ನು ಹೃತ್ಪೂರ್ವಕವಾಗಿ ಖಂಡಿಸಿದ ರಸಋಷಿ ಕುವೆಂಪು, ತಮ್ಮ ಸಂಸ್ಕೃತಿಯ ಗತ ವೈಭವವನ್ನು ಮೆಲುಕುಹಾಕುವಾಗ ಮಾತ್ರ ಅದನ್ನು ರಸಪ್ರಜ್ಞೆಯಿಂದಷ್ಟೇ ನೋಡಿ, ಆಸ್ವಾದಿಸಿ, ಮೆಚ್ಚಿಕೊಳ್ಳುತ್ತಾರೆ.

ಕೃಷ್ಣನ ಭಗವತ್ ಸ್ಥಾನವನ್ನು ಪ್ರಸ್ತುತ ಬದುಕಿನ ಚೌಕಟ್ಟಿನಲ್ಲಿ ಅರ್ಥೈಸಿಕೊಳ್ಳುವ ಸಾಮರ್ಥ್ಯ ಕುವೆಂಪುರವರ ಪ್ರಾಜ್ಞ ಮನಸ್ಸಿಗಿದೆ. ಆದರೆ, ಜನಸಾಮಾನ್ಯರ ಮನಸ್ಸಿಗೆ ರಸಾಸ್ವಾದನೆಗಿಂತಲೂ ಮೇಲಾಗಿ ಸೋಗಿನ ಆಧ್ಯಾತ್ಮಿಕತೆಯೇ ತಟ್ಟುವ ಸಾಧ್ಯತೆಗಳು ಹೆಚ್ಚು. ಹಾಗಾಗಿಯೇ ಒಂದು ಸಮಾಜ, ಮಹಾಭಾರತವನ್ನು ಒಂದು ಮಹಾಕಾವ್ಯವೂ ಹೌದೆನ್ನುವ ಬದಲು, ಅದರ ತುಣುಕುಗಳನ್ನು ಭಗವತ್ ನಿರ್ಣಯವಾಗಿ ಸ್ವೀಕರಿಸುತ್ತದೆ. ಭಗವದ್ಗೀತೆಯನ್ನು, ಬದುಕಿನ ಸಾರದ ಗಟ್ಟಿಯಾಗಿ ತಿಳಿಯದೆ, ಶೂನ್ಯದಿಂದ ಉದ್ಭವಿಸಿದ ಪರಮ ಶ್ರೇಷ್ಠ ಆಣತಿಗಳಂತೆ ನೋಡುತ್ತದೆ. ಕಲಾಕಾರನೊಬ್ಬ ತನ್ನ ಪ್ರತಿಭೆಗೆ ಪಕ್ಕಾಗಿ ಮಣಿದು ಸೃಷ್ಟಿಸುವ ಕೃತಿಗಳೇ ರಸಭರಿತ ಕಲಾಕೃತಿಗಳಾಗುತ್ತವೆ. ಕುಮಾರವ್ಯಾಸನ ಸಾಧನೆ ಇದೇ. ರಾಜಾಶ್ರಯದ ಉಚ್ಛ್ರಾಯ ಕಾಲದಲ್ಲಿ ಬರೆದ ರನ್ನ, ಪಂಪ, ನಾರಣಪ್ಪರಿಗೆ ಒದಗಿದ ನಿರ್ಮಲ, ನಿರ್ಭಯ ಸೃಷ್ಟಿಯ ಕ್ಷಣಗಳು, ಕಳೆದ ಎರಡು ಶತಮಾನದಲ್ಲಿ ಬರೆದ ಯಾವ ಭಾರತೀಯ ಕವಿಗೂ ಸಾಧ್ಯವಾಗುವುದು ಕಷ್ಟ. ಒಬ್ಬ ಕಲಾಕಾರ ಸಾಮಾಜಿಕ ಬದ್ಧತೆಯ ಚೌಕಟ್ಟಿನಲ್ಲಿ ಕೃತಿಗಳನ್ನು ಸೃಷ್ಟಿಸಿದಾಗ, ಅವುಗಳಿಗೆ ಲಗಾಮು ಹಾಕಿದಂತಾಗಿ ಅವುಗಳ ಕಲಾತ್ಮಕತೆಗೆ ಒಂದು ಮಿತಿ ಅಥವಾ ಹೊಸದೇ ಒಂದು ಬಣ್ಣ ಬರಬಹುದು. ಪಂಪನ ಸೃಷ್ಟಿಯ ಹಿಂದಿದ್ದ ಪ್ರೇರಣೆಗಳಲ್ಲಿ ಈ ಅಂಶವಿರಬಹುದೆಂಬ ಶಂಕೆಯನ್ನು ನಮ್ಮಲ್ಲಿ ಮೂಡಿಸುವ ಕುವೆಂಪು, ತಮಗರಿವಿಲ್ಲದೆಯೂ ಸಮಕಾಲೀನ ವೈಚಾರಿಕತೆಯ ಆಯಾಮಕ್ಕೊಂದು ಕಿಂಡಿ ಕೊರೆದಿದ್ದಾರೆ.

ಪುಟ್ಟಪ್ಪನವರ ಕೃತಿಗಳ ಉತ್ಕಟ ರಸಾಭಿಜ್ಞತೆಗೆ ಕಾರಣವಾಗುವ ಅಂಶ ಅವರ ಪ್ರತಿಭಾ-ಬದ್ಧತೆ. ಹದಿವಯಸ್ಸಿನಿಂದಲೇ ಅವರಲ್ಲಿ ಅಭಿವ್ಯಕ್ತಿಗೊಳ್ಳುವ ಕಾವ್ಯಪ್ರತಿಭೆಗೆ, ಸಮಕಾಲೀನ ಬದುಕಿನ ಕಾರ್ಪಣ್ಯಗಳು ತಳುಕಿಕೊಂಡು, ಅವರ ಕೃತಿಗಳಿಗೆ ಸಮಕಾಲೀನತೆಯ ಚೌಕಟ್ಟು ತೊಡಿಸುತ್ತವೆ. ಕುವೆಂಪುವಿನ ಬದುಕಿನ ಸಂದರ್ಭದ ಸಂಕೀರ್ಣತೆಯಿಂದಾಗಿ, ಕೇವಲ ತಮ್ಮ ಪ್ರತಿಭೆಗಷ್ಟೇ ಬದ್ಧರಾಗಿ ಸೃಷ್ಟಿಸುವುದು ಅವರಿಗೆ ಸಾಧ್ಯವಾಗದೆ ಹೋಗುತ್ತದೆ. ಇದೊಂದು ಕಾಲ-ದೇಶಗಳ ದುರಂತವೆಂದು ಹೇಳಬಹುದು

ದಾಸ್ಯದ ಸಂಕೋಲೆಯಲ್ಲಿದ್ದ ದೇಶದ ಸ್ವಾತಂತ್ರ್ಯ ಹೋರಾಟಕ್ಕೆಳಸುವ ಮನಸ್ಸು ಅದೇ ದೇಶದ ಭ್ರಷ್ಟ ಜಾತಿವ್ಯವಸ್ಥೆಯ ವಿರುದ್ಧವೂ ಹೋರಾಡುತ್ತಿರುತ್ತದೆ. ಈ ಎಲ್ಲ ಸಂಕೀರ್ಣ ಪ್ರಭಾವಗಳಿಗೆ ಪಕ್ಕಾಗಿ ಸೃಷ್ಟಿಸಬೇಕಾದ ಅನಿವಾರ್ಯತೆ ಕುವೆಂಪು ಅವರ ಪ್ರತಿಭೆಗೆ ಒದಗುತ್ತದೆ.

ಮುಂದೆ ಇವರ ಪ್ರತಿಭೆಯ ಕುಂಚಕ್ಕೆ, ಬುದ್ಧಿಯ ಸೆಲೆಯಿಂದ ಸೀಳಿ, ತರ್ಕ ಮತ್ತು ನೈತಿಕತೆಯ ನೆಲೆಯಲ್ಲಿ ಸೋಸಿ ಬಂದ ವಿಷಯಗಳಷ್ಟೆ ದಕ್ಕುತ್ತವೆ. ತಮ್ಮ ಜೀವನದ ಅತಿ ಮುಖ್ಯ ಸಂದೇಶವಾಗಿ ಸಾರುವ 'ವಿಶ್ವ ಮಾನವತ್ವ' ಕುವೆಂಪು ಅವರ ಈ ಪ್ರಕ್ರಿಯೆಗೆ ಸಾಕ್ಷಿಯಾಗುತ್ತದೆ. ಈ ಎಲ್ಲ ಬಂಧನಗಳನ್ನು ತೊರೆದು ರಸಾಸ್ವಾದಿಸುವ ಅವಕಾಶ ವಿಮರ್ಶಕ ಕುವೆಂಪುವಿಗೆ ದೊರಕುವುದು ಗತಕಾಲದ ಮೆಲುಕಿನಲ್ಲಿ. ಹಾಗೆಂದೇ ಸಿಕ್ಕ ಈ ಅವಕಾಶವನ್ನು ಸ್ವಲ್ಪವೂ ವ್ಯರ್ಥಗೊಳಿಸದೆ, ಈ ರಸಋಷಿ, ಕಾವ್ಯಾರಾಧನೆಯಲ್ಲಿ ಮುಳುಗಿಬಿಡುತ್ತಾರೆ. ಸದ್ಯದ ಮನುಷ್ಯ ಬದುಕನ್ನು ಘಾಸಿಗೊಳಿಸಲಾರದೆಂಬ ಆಶ್ವಾಸನೆಯನ್ನು ಕಾಲನಿಂದ ದೊರಕಿಸಿಕೊಂಡ ಕುವೆಂಪು ಕುಮಾರವ್ಯಾಸನ ಕಾವ್ಯಕುಂಚಕ್ಕೆ ಮನಸೋತಿದ್ದಾರೆ. ಕೇವಲ ಪ್ರತಿಭೆಗಳ ತುಲನೆಗಳಷ್ಟೇ ಆಗಿ ಬಿಡುವ ಕುವೆಂಪು ಅವರ ಈ ನೋಟ, ಉಳಿದೆಡೆ ಕುಂಠಿತ ಹೊಂದಿರಬಹುದಾದ ಅವರ ಉತ್ಕಟ ರಸಪ್ರೀತಿಗೆ ಸಾಕ್ಷಿಯಾಗುತ್ತದೆ.

ಉಪಮೆಗಳ ನಾಟ್ಯಕ್ಕೆ, ಶಬ್ದಗಳ ಸಂಗೀತಕ್ಕೆ ಮನಸೋತ ವಿಮರ್ಶಕ, ಸುಸಂಸ್ಕೃತ ಶ್ರೋತೃವಾಗಿಬಿಡುತ್ತಾನೆ. ವಿಮರ್ಶೆಯ ಪ್ರಾಮಾಣಿಕತೆಗೆ ಕಟುನುಡಿಯ ವೇಷ ಬೇಕಿಲ್ಲವೆಂಬುದು ಕುವೆಂಪು ಅವರ ಖಂಡಿತ ಅಭಿಪ್ರಾಯವಿದ್ದಂತಿದೆ.

ತೋರಣನಾಂದಿಯಲ್ಲಿನ ಅವರ ಕೆಲ ವಿಮರ್ಶೆಯ ತುಣುಕುಗಳನ್ನು ನೋಡಿ:

'ಅರೆದುದೋ ಪರಬಲವ, ಕಾಲನ
ಹೊರೆದುದೋ, ಮಾರಣದ ಮಂತ್ರವ
ಬರೆದುದೋ, ಬವರಕ್ಕೆ ಬಲುಗೈಗಳನು ಕೈ ನೆಗಹಿ
ಕರೆದುದೋ, ಬಲವೆಲ್ಲ ನೀರಲಿ
ನೆರೆದುದೋ, ಮಾರ್ಬಲದ ವೀರರ
ಹರೆದುದೋ!.....'

'ಇಷ್ಟು ಶ್ರೀಮಂತನಾದ ಕುಮಾರವ್ಯಾಸ ವ್ಯಾಸ ಪಂಪರಾದ ಮೇಲೆ ಬಂದರೇನಂತೆ?' ಎನ್ನುವಲ್ಲಿ ಕುವೆಂಪುವಿನ ಮೆಚ್ಚಿಕೆ ನಿಚ್ಚಳವಾಗಿ ಕಾಣುತ್ತದೆ. ಮುಂದೆ ಸಾಗಿ: '..... "ಆರ ದೀಪನ ಚೂರ್ಣ ಬಲದಲಿ ವೀರ ರುದ್ರನು ಜಗವ ನುಂಗುವ" ಎನ್ನುವ ಮಾತು ಅವನ ರೂಪಕ ರುದ್ರ ಶಕ್ತಿಗೆ ಎತ್ತಿದ ಮಂಗಳಾರತಿಯಾಗಿದೆ' ಎನ್ನುತ್ತಾರೆ.

ಇನ್ನೂ ಮುಂದೆ ಸಾಗಿ, ಕುವೆಂಪು ನಾರಣಪ್ಪನ ರೂಪಕ ನಟರಾಜಶಕ್ತಿಯನ್ನು ಮೆಚ್ಚಿಕೊಳ್ಳುತ್ತಲೇ, 'ಈ ಒಂದು ಶಕ್ತಿಯೇ ದೋಷವಾದುದೂ ಉಂಟು. ಪದವನ್ನೇ ಅಲ್ಲ,

ಪಂಕ್ತಿಯನ್ನೇ ಅಲ್ಲ, ಸಂಧಿಗಳನ್ನೂ ತೊಡೆದುಹಾಕಿದ್ದರೆ ಅವನ ಖ್ಯಾತಿ ಹೆಚ್ಚುತ್ತಿತ್ತು' ಎಂದು ಯೋಚಿಸಿದ ಬೆನ್ನಿನಲ್ಲೇ, 'ಆದರೂ ಯಾವೆಡೆಯಲ್ಲಿಯೂ ಅಯುಕ್ತ ಪದದ ಪ್ರಸಾರವಿಲ್ಲ; ಅದಕ್ಕಾಗಿ ನಾವು ಕವಿಯನ್ನು ಹೊಗಳಲೇ ಬೇಕು. ಸಾವಿರಾರು ಮಾತುಗಳು ನಿರಂಕುಶವಾಗಿ ನಡೆದಿದ್ದರೂ ಸಮಯ ಸಂದರ್ಭಗಳಿಗೆ ವಿರೋಧವಾದ ಪ್ರಯೋಗಗಳು ಅಪರೂಪ, ಪ್ರಾಯಶಃ ಇಲ್ಲವೇ ಇಲ್ಲ.... ಆಗ ಕವಿಯ ನಿರ್ಮಾಣ ಕೌಶಲವು ಕಣ್ಣು ಮುಚ್ಚಿ ತೂಕಡಿಸುವ ಹಾಗೆ ತೋರುತ್ತದೆಯೇ ಹೊರತು ಕವಿಯ ನಾಲಿಗೆ ಕೊಂಕಿ ತೊದಲಿದಂತೆ ಭಾಸವಾಗುವುದಿಲ್ಲ' ಎಂದು ನವಿರಾಗುವ ವಿಮರ್ಶಕ ಕುವೆಂಪು ಮೂಲತಃ ಒಬ್ಬ 'ಜಂಟಲ್ಮನ್' ಆಗಿದ್ದಾರೆ.

'ಕುಮಾರ ವ್ಯಾಸನು ಹಾಡಿದನೆಂದರೆ
ಕಲಿಯುಗ ದ್ವಾಪರವಾಗುವುದು!
ಭಾರತ ಕಣ್ಣಲಿ ಕುಣಿವುದು; ಮೈಯಲಿ
ಮಿಂಚಿನ ಹೊಳೆ ತುಳುಕಾಡುವುದು!

ಎಂದು ಹಾಡಿ ಹೊಗಳಿದ ಕುವೆಂಪು, ನಾರಣಪ್ಪನ ಕೊರೆಗಳನ್ನು ಹೇಳುವಾಗ ನವಿರಾಗಿ, ಮೃದುವಾಗಿ ಹೇಳಿ ಮುಗಿಸುತ್ತಾರೆ. ಕೆಳಗಿನ ಉದಾಹರಣೆಗಳನ್ನು ನೋಡಿ :

'ಇಷ್ಟು ಸರಸಿಯಾದ ಕವಿ ಆದರೇಕೋ ರಸವತ್ತಾಗಿ ಅಳಲಾರ ಎಂಬ ಭಾವನೆಗೆ ಪಕ್ಕಾಗಿದ್ದಾನೆ.... ಕುಮಾರವ್ಯಾಸ ಯೋಗಿಯ ಕಾವ್ಯಪದ್ಧತಿಯಲ್ಲಿ ಹಲವು ದೋಷಗಳಿರಬಹುದು. ಆದರೆ ಶೃಂಗಾರಪ್ರಿಯತೆಯಿಂದ ತನ್ನ ಕೃತಿಗಳನ್ನು ಹದಗೆಡಿಸಿದನೆಂದು ಮಾತ್ರ ಅವನನ್ನು ದೂರುವ ಹಾಗಿಲ್ಲ.'

ಇಲ್ಲಿ ಕುವೆಂಪು, ನಾರಣಪ್ಪನನ್ನು ಅವನಿದ್ದ ಹಾಗೆಯೇ ಒಪ್ಪಿಕೊಂಡು, ಅವನ ಲೋಪಗಳ ಇನ್ನೊಂದು ಮುಖವನ್ನು ಹೊಗಳುವ ಅವಕಾಶವನ್ನು ಬಿಡುವುದಿಲ್ಲ.

ಆಂಟೊನಿ ತನ್ನ ವಾಕ್ಚಾತುರ್ಯದಿಂದ ಜೂಲಿಯಸ್ ಸೀಝರ್‌ನನ್ನು ದೈವಸಮಾನವಾಗಿಸಿದಂತೆ, ಕುವೆಂಪು ತಮ್ಮ ವಿಮರ್ಶೆಯಿಂದ ನಾರಣಪ್ಪನನ್ನು 'ನ ಭೂತೋ ನ ಭವಿಷ್ಯತಿ' ಮಟ್ಟಕ್ಕೆ ಒಯ್ಯುತ್ತಾರೆ.

ವಿಮರ್ಶೆಯ ಕಾಠಿಣ್ಯ ಒಮ್ಮೊಮ್ಮೆ ಸೃಷ್ಟಿಕಾರ್ಯದ ಅರಿವು ಇಲ್ಲದ್ದರಿಂದಾಗಿ ಉದ್ಭವಿಸುವ ತರ್ಕಜಾಲದಂತೆ ಕಂಡುಬರುವುದುಂಟು. ಈ ರೀತಿಯ ನಿಷ್ಠುರ ವಿಮರ್ಶೆಯ ಸಾಧಕ ಬಾಧಕಗಳು ಈ ಲೇಖನದ ಗುರಿಯಲ್ಲ. ಇಲ್ಲಿ ನಾವು ಮನಗಾಣಬೇಕಾದ ಅಂಶವೆಂದರೆ, – ಉತ್ಕಟ ರಸಸೃಷ್ಟಿ ಸಾಧ್ಯವಿರುವ ಪ್ರತಿಭೆಯೊಂದು ವಿಮರ್ಶೆ ಮಾಡುವಾಗ, ತಾನು ವಹಿಸುವ ಎಲ್ಲ ಎಚ್ಚರಗಳನ್ನೂ ಕುವೆಂಪು ಅವರು ತೋರಿಸುತ್ತಾರೆಂಬುದು. ಈ ರೀತಿಯ ಶಿಷ್ಟ ಮತ್ತು ಸೌಮ್ಯ ರೀತಿಯೇ ಶ್ರೇಷ್ಠವೆಂಬ ಅಭಿಪ್ರಾಯ ಹುಟ್ಟಿಸುವ ಇಚ್ಛೆಯೂ ನನ್ನದಲ್ಲ. ಅಸಲು, ವಿಮರ್ಶಕನ ಪಾತ್ರದಲ್ಲಿ ಕಾಣಿಸಿಕೊಳ್ಳುವ ಕುವೆಂಪು ಅವರ ಪರಿಪೂರ್ಣ

ರಸ ಪ್ರಜ್ಞೆಯತ್ತ ಗಮನ ಸೆಳೆಯುವುದಷ್ಟೇ ಇಲ್ಲಿನ ಉದ್ದೇಶ. ಇದೇ ಉತ್ಕಟ ರಸಪ್ರಜ್ಞೆಯನ್ನು, ಕುವೆಂಪು ಆಂಗ್ಲ ಕವಿಗಳ ಬಗ್ಗೆ ಬರೆಯುವಾಗಲೂ ನೋಡಬಹುದು. ವರ್ಡ್ಸ್‌ವರ್ತ್‌ನನ್ನು ಮೆಚ್ಚಿಕೊಳ್ಳುವಾಗ,

ಆಂಗ್ಲ ಕವಿಗಳಲಿ ನೀನೆನ್ನೆದೆಯ ಸೆಳೆದಂತೆ
ಉಳಿದವರು ಸೆಳೆದಿಲ್ಲ, ನರನಾಟಕವ ನೋಡಿ
ರಂಗದಲಿ ಚಿತ್ರಿಸಿದ ಷೇಕ್ಸ್ಪಿಯರನುಂ ಕೂಡಿ.
ನೀನೊಂದು ಪರ್ಣ ಕುಟಿ; ಆತನೋ ಪಿರಿಯ ಸಂತೆ!

ಎಂದು ಹೇಳಿದ ಮಾತುಗಳಲ್ಲಿ, ನಿರ್ಭೀತ ರಸಪ್ರಜ್ಞೆ ಮತ್ತು ಆಧ್ಯಾತ್ಮಿಕತೆ ಎದ್ದು ಕಾಣುತ್ತದೆ. ಪಂಪ, ನಾರಣಪ್ಪರ ತುಲನೆಯಲ್ಲಿ ಕಾಲದಲ್ಲಿ ಬೇರೆಯಾಗಿ, ಕಾಲನಿಂದ ಆಶ್ವಾಸನೆ ದೊರಕಿಸಿಕೊಳ್ಳುವ ಕುವೆಂಪು, ಆಂಗ್ಲ ಕವಿಗಳ ತುಲನೆ ಮತ್ತು ವಿಮರ್ಶೆಗಿಳಿದಾಗ ದೇಶ (ಅವಕಾಶ)ದಿಂದ ಆಶ್ವಾಸನೆ ಪಡೆದು ನಿಷ್ಠುರರಾಗುತ್ತಾರೆ. ಅಂದರೆ, ಬೇರೊಂದೇ ದೇಶ ಮತ್ತು ಸಂಸ್ಕೃತಿಯ ಫಲಗಳಾದ ಆಂಗ್ಲ ಕವಿ ಮತ್ತು ಕೃತಿಗಳನ್ನು ಮೆಚ್ಚಿಕೊಳ್ಳುವಲ್ಲಿ ಅಥವಾ ವಿಮರ್ಶಿಸುವಲ್ಲಿ ಕುವೆಂಪು ನಿಷ್ಠುರ ರಸಋಷಿಯಾಗುತ್ತಾರೆ. ದಿಟ್ಟತನದಿಂದ ತಮ್ಮ ಜೀವನ ದೃಷ್ಟಿಯ ಚೌಕಟ್ಟಿನಲ್ಲಿ ಆ ಕೃತಿಗಳಲ್ಲಿನ ಅಭಿಪ್ರಾಯಗಳನ್ನು ರೂಢಿಸಿಕೊಂಡು, ಅದನ್ನು ವ್ಯಕ್ತಪಡಿಸುತ್ತಾರೆ. ಬೇರೊಂದು ಸಮಾಜ ಮತ್ತು ಸಂಸ್ಕೃತಿಯನ್ನು ಅವಲೋಕಿಸುವಾಗ ಮಾತ್ರ ಸಾಧ್ಯವಾಗುವ ನಿಷ್ಪಕ್ಷಪಾತ ವಿಮರ್ಶೆ ಮತ್ತು ಅವಗಾಹನೆ ಈ ಸಂದರ್ಭಗಳಲ್ಲಿ ವ್ಯಕ್ತವಾಗಿದೆ. ಅದೇ ಕಾರಣಕ್ಕೆ, ಕುವೆಂಪು ಅವರು ಮೂಲತಃ ಆಧ್ಯಾತ್ಮದ ಸೆಳೆತವುಳ್ಳ ಜೀವವೆಂಬುದೂ, ಪ್ರಕೃತಿಯ ಕೂಸೆಂಬುದೂ ಇಲ್ಲಿ ಸ್ಪಷ್ಟವಾಗುತ್ತದೆ. ''ಕಾಡಿನ ಕವಿ''ಯೆಂಬುದು ಬರೀ ಸ್ವಯಂ ಘೋಷಣೆಯಲ್ಲವೆಂಬ ಅಂಶವೂ ಇವರ ಈ ಸಂದರ್ಭದಲ್ಲಿನ ದೃಷ್ಟಿಕೋನದಿಂದ ತಿಳಿಯುತ್ತದೆ. ಅಷ್ಟೇ ಅಲ್ಲದೆ, ತಮ್ಮ ಸಂಸ್ಕೃತಿಯ ವೈಭವವನ್ನು ವಿಶ್ಲೇಷಿಸುವಲ್ಲಿ ವಹಿಸುವ ಎಚ್ಚರ, ಪರ ಸಂಸ್ಕೃತಿಯೊಂದನ್ನು ನೋಡುವಾಗ, ಬರೀ ಕುತೂಹಲಭರಿತ ನಿರ್ಭೀತ ವಿಮರ್ಶೆಯಾಗುವಲ್ಲಿ, ಕುವೆಂಪು ತಮ್ಮ ಆತ್ಮ ವಿಶ್ವಾಸವನ್ನು ವ್ಯಕ್ತಪಡಿಸುತ್ತಾರೆ.

ಹೋಮರ್, ನಿನ್ನ ಕಲೆ ಪಿರಿದಾದೊಡಂ ನಿನ್ನ
ಕಥೆ ಪಿರಿದಲ್ತು. ಲೋಕ ಸುಂದರಿ ನಿನ್ನ ಹೆಲೆನ್
ಚೆಲುವೆ ದಲ್; ಮತ್ತೇನುಮಲ್ತು: ನಾಂ ಪೇಸುವೆನ್
ನಾಡು ಮನೆ ಅಣ್ಣ ತಮ್ಮಂದಿರಂ ಮೇಣ್ ತನ್ನ
ಪತಿಯುಮಂ ಪೆಣ್ಗೂಸುಮಂ ತ್ಯಜಿಸಿ, ತನುರುಚಿಗೆ
ಸೋತು, ಪಾಣ್ಬಂ ಬೆರೆಸುತೋಡಿವೋದಾ ಪೆಣ್ಗೆ
ಈಲಿಯಡ್ಡಿನ ಮಹಾಕಲೆಯ ನೆತ್ತರ್ಗಣ್ಗೆ
ಬೆಲೆವೆಣ್ಣೆ ಗುರಿಯಾಯ್ತೆ? – ಕ್ಷಮಿಸು: ಸೀತೆಯ ಶುಚಿಗೆ

ರಾಮಾಯಣವನೊರೆದನಾದಿಕವಿ ವಾಲ್ಮೀಕಿ.
ಆ ಶುಚಿಯ ಗಂಗೆಯೊಳ್ ಮಿಂದೆನಗೆ ಸಹಿಸದಯ್
ಕೆಸರಿನೋಕುಳಿಯ ನಿನ್ನದ್ಭುತ ರಣಕ್ರೀಡೆ!
ದಿವ್ಯಕಲೆಗಿರವೇಳ್ಕು ಭವ್ಯ ವಿಷಯಂ: ಪಿನಾಕಿ
ಬಿಲ್ಲೆಳೆವನೇನಲ್ಪ ಕುರಿಗಾಗಿ ? ಸಿಡಿಲೆ ಸಯ್
ಠಂಕಾರಮಾದೊಡೇಂ? ನಾಣ್ಚುವೆ, ಗುರಿಯ ನೋಡೆ!

ಎಂದು, ಹೋಮರನ ಸೃಷ್ಟಿಯಲ್ಲಿನ, ಐಹಿಕ ಜಗತ್ತಿನ ಪಾತಳಿಯನ್ನು ತಿರಸ್ಕರಿಸುವಲ್ಲಿ ಯಾವ ದಾಕ್ಷಿಣ್ಯವನ್ನೂ ತೋರಿಸುವುದಿಲ್ಲ. ಕುವೆಂಪುವಿಗೆ ಬದುಕಿನಲ್ಲಿ ಖಂಡಿತವಾಗಿಯೂ ಆಧ್ಯಾತ್ಮಿಕ ಆಯಾಮದ ಅಗತ್ಯವಿದೆ. ಹಾಗೆಂದೇ, ಜಗತ್ತನ್ನೇ ತನ್ನ ರಂಗಸೃಷ್ಟಿಯಲ್ಲಿ ಕೂಡಿಸಿಟ್ಟ ಶೇಕ್ಸ್‌ಪಿಯರ್‌ಗಿಂತ, ಪ್ರಕೃತಿಯ ಆರಾಧಕನಾದ ವರ್ಡ್ಸ್‌ವರ್ತ್ ಮುಖ್ಯವಾಗುತ್ತಾನೆ. ಮಹಾಕಾವ್ಯಕ್ಕೆ ಯೋಗ್ಯವಾಗುವುದು ''ಸೀತೆ'' ಯಂತಹ ದೈವಸ್ತ್ರೀಯೇ ಹೊರತು ''ಹೆಲೆನ್'' ನಂತಹ ಐಹಿಕ ರೂಪ ಸಂಪತ್ತಲ್ಲವೆಂದು ಕುವೆಂಪುವಿನ ಖಚಿತ ಅಭಿಪ್ರಾಯ. ಇದರ ಪ್ರತಿಫಲನದಂತೆ, ಅವರು ತಮ್ಮ ಮುಖ್ಯ ಕೃತಿಗೆ ಆರಿಸಿಕೊಳ್ಳುವ ವಿಷಯವೂ ರಾಮಾಯಣವಾಗುತ್ತದೆ. ಇದೇ ದೃಷ್ಟಿಯಿಂದ ವಿಮರ್ಶಿಸುವ ಕುವೆಂಪು ಅವರ ಮಾತುಗಳನ್ನು 'ದ್ರೌಪದಿಯ ಶ್ರೀಮುಡಿ'ಯಲ್ಲಿ ಕಾಣಬಹುದು.

'ಕನ್ನಡ ಸಾಹಿತ್ಯರಂಗದಲ್ಲಿ ದ್ರೌಪದಿಯ ಶ್ರೀಮುಡಿಗೆ ಕೈಯಿಟ್ಟ ನಾಲ್ವರು ಸಮರ್ಥರಲ್ಲಿ ಇಬ್ಬರು ಮಹಾಕಲಿಗಳು, ಇನ್ನಿಬ್ಬರು ಮಹಾಕವಿಗಳು: ಭೀಮ, ದುಶ್ಯಾಸನ; ಪಂಪ, ನಾರಣಪ್ಪ, ಒಬ್ಬ ಮುಡಿ ಬಿಚ್ಚಿದ ಕಲಿ, ಇನ್ನೊಬ್ಬ ಮುಡಿ ಕಟ್ಟಿದ ಕಲಿ....' ಎಂದೇ ಆರಂಭಿಸುವ ಕುವೆಂಪುವಿನ ಮುಖ್ಯಾಂಶ, ಕುಮಾರವ್ಯಾಸನ ಭಾರತದಲ್ಲಿ ಪವಿತ್ರ 'ದ್ರೌಪದಿಯ ಶ್ರೀಮುಡಿ'ಯಾಗಿ ಮುಂದೆ ಬರುವ ಕೌರವರ ಅಧಃಪತನಕ್ಕೆ ಕಾರಣೀಭೂತವಾಗುವ ಕೇಶ, ಪಂಪನಿಗೆ ಕೇವಲ 'ಕೃಷ್ಣಕಬರೀಭಾರ' ವಾಗಿ ಪಾರಮಾರ್ಥದ ಆಯಾಮವನ್ನು ಕಳೆದುಕೊಳ್ಳುತ್ತದೆ ಎಂಬ ನಿರಾಸೆ. ಅವರದೇ ಮಾತುಗಳಲ್ಲಿ ನೋಡಿ :

'ಪಂಪನಿಗೆ ಕೃಷ್ಣೆಯ ಕೃಷ್ಣಕಬರೀಭಾರ ನಾರಣಪ್ಪನಿಗೆ ತೋರುವಂತೆ ''ಶ್ರೀಮುಡಿ'' ಆಗಿಲ್ಲ ಅದಕ್ಕೆ ರಾಜಸೂಯಯಾಗದ ಸಮಯದಲ್ಲಿ ತೀರ್ಥಜಲಾಭಿಷೇಕ ಆಗಿಲ್ಲ, ಮುನಿವರ್ಯರ ಮಂತ್ರಘೋಷದಿಂದ ಪವಿತ್ರವೂ ಆಗಿಲ್ಲ. ದುಶ್ಯಾಸನನು ಅದನ್ನು ಹಿಡಿದಾಗ ಮುಂದೆ ಒದಗುವ ಕೇಡನ್ನೇನೋ ಸೂಚಿಸುತ್ತಾನೆ. ಆ ಕೇಡು ಲೌಕಿಕ ಅಪರಾಧಕ್ಕೆ ಒದಗುವ ಶಿಕ್ಷೆಯ ರೂಪದ್ದೆ ಹೊರತು ಪಾಪರೂಪದ ಮಹಾಪಾತಕಕ್ಕೆ ಒದಗುವ ಉಗ್ರತಮ ಧರ್ಮದಂಡನೆ ಅಲ್ಲ. ''ಕೃಷ್ಣೋರಗನಂ ಪಿಡಿದ ಬೆಳ್ಳಾಳಂತುಮ್ಮನೆ ಬೆಮರುತ್ತಮಿರ್ದ'' ಎಂಬುದು ಅವನ ಆಗಿನ ದುಶ್ಯಾಸನನ ವರ್ಣನೆ.

‘ಇಲ್ಲಿಯವರೆಗೆ ಒಳ್ಳೆಯಂತಿದ್ದ ಪಂಪನ ಪ್ರತಿಭಾಗ್ನಿ ಮುಂದೆ ತೆಕ್ಕನೆ ಕಾಳಿಂಗನಂತೆ ಹೆಡೆಯೆತ್ತಿ ಭಯಂಕರವಾಗುವುದನ್ನು ಕಾಣುತ್ತೇವೆ’ ಎನ್ನುವಲ್ಲಿ ಕುವೆಂಪು ಪಂಪನ ಮೇಲಿನ ತಮ್ಮ ಅಸಮಾಧಾನವನ್ನು ‘ಒಳ್ಳೆ’ಯೆಂದು ಸೂಚಿಸುವಲ್ಲಿ ತೋರಿಸಿಕೊಳ್ಳುತ್ತಾರೆ. ಇವೆಲ್ಲಕ್ಕೂ ಮಿಗಿಲಾಗಿ ನಮ್ಮ ಗಮನ ಸೆಳೆಯಬೇಕಾದ ಅಂಶ, ದುಶ್ಯಾಸನನನ್ನು ‘ಮಹಾ ಕಲಿ’ಯ ಸ್ಥಿತಿಗೆ ಏರಿಸಿದುದರ ಹಿನ್ನೆಲೆ. ಕವಿ ಸಮಯದಲ್ಲಿ ಎಷ್ಟೋಸಲ, ದುರ್ಯೋಧನನ ಪಾತ್ರಕ್ಕೆ ‘ದುರಂತನಾಯಕ’ನ ಪಟ್ಟ ದೊರೆತು ಅವನ ತುಮುಲಗಳ ಒಳಗೆ ಹೊಕ್ಕು ಓದುಗರ ಸಹಾನುಭೂತಿಗೆ ಪಾತ್ರನನ್ನಾಗಿಸುವ ಪ್ರಯತ್ನಗಳ ಅರಿವಿದ್ದರೂ, ದುಶ್ಯಾಸನನನ್ನು, ಮಹಾ ಕಲಿಯೆಂದು ಕರೆದ ಕವಿ-ಮನಸ್ಸಿನ ಗುಟ್ಟು ಮಾತ್ರ ನಮ್ಮಲ್ಲಿ ಕುತೂಹಲ ಹುಟ್ಟಿಸಲೇಬೇಕು. ಕೌರವರಲ್ಲಿ ಎರಡನೆಯವನಾಗಿ, ಅಣ್ಣನ ಕ್ರೌರ್ಯ ಮತ್ತು ಅನ್ಯಾಯಗಳ ಕನ್ನಡಿಯೆಂದೇ ಕರೆಯಬಹುದಾದ ದುಶ್ಯಾಸನನಿಗೆ ಮಹಾಕಲಿಯ ಪಟ್ಟವನ್ನು ಒಂದು ಪ್ರಮುಖ ಘಳಿಗೆಯಲ್ಲಿ ನೀಡುವ ಕವಿ-ಮನಸ್ಸಿನ ಹಿಂದೆ, ‘ದ್ರೌಪದಿಯ ಶ್ರೀಮುಡಿ’ ಇದೆ ಎಂಬುದು ನನ್ನ ಅಭಿಪ್ರಾಯ. ಸನಾತನ ಭಾರತದ ದೈವಕಥೆಯಾದ ನಾರಣಪ್ಪನ ಭಾರತದಲ್ಲಿನ ಶ್ರೀಮುಡಿಗೆ ಕೈ ಹಾಕುವ ಕ್ರಿಯೆಯಲ್ಲೇ ಕಲಿತನವನ್ನು ಸಂಪಾದಿಸುವ ದುಶ್ಯಾಸನ, ಆ ಘಳಿಗೆಯ ಮಟ್ಟಿಗೆ ಕುವೆಂಪುವಿಗೆ ‘ಮಹಾಕಲಿ’ಯಾಗಿ ಬಿಡುತ್ತಾನೆ. ಇಲ್ಲಿ ಶ್ರೀಮುಡಿಯೊಂದಕ್ಕೆ ಕೈ ಹಾಕಲು ಕ್ಷುದ್ರ ಖಳನಾಯಕರಿಗೆ ಸಾಧ್ಯವಿಲ್ಲವಾಗಿ, ಕಲಿತನದ ಅಗತ್ಯವಿದ್ದೇ ಇದೆ ಎಂಬುದನ್ನು ಸೂಚಿಸುವಲ್ಲಿ, ಕುವೆಂಪುವಿಗೆ ಮಹಾಭಾರತದಲ್ಲಿನ ಆಧ್ಯಾತ್ಮಿಕ ಆಯಾಮದ ಅನಿವಾರ್ಯತೆ ವ್ಯಕ್ತವಾಗುತ್ತದೆ. ಇದೇ ರೀತಿಯ ಕಥಾಪ್ರಯತ್ನಗಳನ್ನು ನಾವು ನಮ್ಮ ಪುರಾಣಗಳ ಉದ್ದಕ್ಕೂ ಕಾಣುತ್ತೇವೆ. ದೇವಿಯ ಕಥೆಯಲ್ಲಿ ಬರುವ ಖಳನಾಯಕರೆಲ್ಲ, ಕೊನೆಗೂ ಅವಳ ಕೈಯಲ್ಲಿ ಸಾಯುವ ಕ್ರಿಯೆಯಲ್ಲಿ ತಮ್ಮ ಯಾವುದೋ ಪಾಪಗಳನ್ನು ಪರಿಹರಿಸಿಕೊಂಡ ಭಕ್ತರುಗಳೆ ಆಗಿರುತ್ತಾರೆ. ಮಾತೃಪ್ರಧಾನ ಸಮಾಜದ ಅರಿವಿರುವ ನಮ್ಮ ಸಂಸ್ಕೃತಿಯ ಹಿನ್ನೆಲೆಯಲ್ಲಿ, ಕುವೆಂಪುವಿಗೆ ಹೆಣ್ಣು ಇನ್ನೇನೋ ಆಗಿಹೋಗುವಲ್ಲಿ ತಿರಸ್ಕಾರವಿದೆ. ‘ಹೋಮರ್’ನ ಜೀವನಗಾಥೆಗಿಂತ, ಸನಾತನ ಧರ್ಮದ ಕೇಂದ್ರಬಿಂದುವಾದ ರಾಮಾಯಣದ ಸೀತೆಯನ್ನು ಮೆಚ್ಚಿಕೊಳ್ಳುವುದಲ್ಲದೆ, ತಮ್ಮ ಮಹಾಕೃತಿಗೂ ಒಪ್ಪಿಸಿಕೊಳ್ಳುತ್ತಾರೆ.

ತಮ್ಮ ಬರವಣಿಗೆಯ ಮೊದಲಿನಲ್ಲಿ ಆಂಗ್ಲಭಾಷೆಯನ್ನು ಉಪಯೋಗಿಸಿದ್ದಕ್ಕೆ ನಾವು ಕೊಡಬಹುದಾದ ಕಾರಣಗಳ ದೃಷ್ಟಿಯಿಂದ ಈ ಅಂಶದ ಪ್ರಾಮುಖ್ಯತೆ ಗಣನೀಯ. ಇಷ್ಟು ನಿಷ್ಠುರವಾಗಿ ಪಾಶ್ಚಿಮಾತ್ಯ ಸಾಹಿತ್ಯದ ವಿಮರ್ಶೆ ಮಾಡಬಲ್ಲ ಮನಸ್ಸು, ಇಂಗ್ಲೀಷಿನಲ್ಲಿ ಬರೆಯಲಾರಂಭಿಸಿದ್ದು, ಕೇವಲ ಕಾಕತಾಳೀಯವೇ? ಅಲ್ಲಿಯವರೆಗೂ ಹೆಚ್ಚಾಗಿ ಇಂಗ್ಲೀಷ್ ಸಾಹಿತ್ಯವನ್ನೇ ಅಭ್ಯಸಿಸಿದ್ದ ಕುವೆಂಪುವಿಗೆ, ಸಹಜವಾಗಿಯೇ ಇಂಗ್ಲೀಷ್ ತಮ್ಮ ಅಭಿವ್ಯಕ್ತಿ ಮಾಧ್ಯಮವಾಗಿ ಕಂಡಿರಬೇಕು. ಅಷ್ಟೇ ಅಲ್ಲದೆ, ವಿಶ್ವಮಾನವತ್ವದತ್ತ ಒಲೈಸುವ ಕವಿ-ಮನಸ್ಸಿಗೆ ಭಾಷೆಯೆಂಬುದು ಒಂದು ಮಾಧ್ಯಮವಷ್ಟೇ ಆಗಿ ಕಂಡಿರುವುದು ಸಹಜ.

ಮುಂದೆ, 'ಎಲ್ಲಾದರು ಇರು ಎಂತಾದರು ಇರು....' ಎಂದು ಹಾಡಿದ ಕವಿ-ಮನಸ್ಸು ತನ್ನ ಕಾಲದ ಸಾಮಾಜಿಕ ಅಗತ್ಯಗಳಿಗೆ ಬದ್ಧವಾಗಿದೆ. ತನ್ನ ಸಂಸ್ಕೃತಿಯಲ್ಲಿನ ಒಳ್ಳೆಯ ಅಂಶಗಳ ಪಕ್ಷಪಾತಿಯಾಗಿ ಹೆಮ್ಮೆಯಿಂದ ಲೋಕಕ್ಕೇ ಸಾರುವ 'ಸಮಾಜ ಪ್ರೀತಿ'ಯಿದೆ. ಹೀಗೆಲ್ಲಾ ಪಕ್ವಗೊಳ್ಳುತ್ತಾ ಸಾಗುವ ಕವಿ-ಮನಸ್ಸಿನ ಮೂಲಕ ತುಡಿತ ಮಾತ್ರ ವಿಶ್ವವನ್ನೇ ಕುಟುಂಬವನ್ನಾಗಿಸಿಕೊಳ್ಳುತ್ತದೆ. ಈ ಸಂದರ್ಭದಲ್ಲಿ ನನಗನಿಸಿದ ವೈಯಕ್ತಿಕ ಅಭಿಪ್ರಾಯವೊಂದನ್ನು ಧೈರ್ಯದಿಂದ ಹೇಳಬಯಸುತ್ತೇನೆ. ಕುವೆಂಪು ಮುಂದುವರಿದು, ಇಂಗ್ಲೀಷಿನಲ್ಲೇ ಅಥವಾ ಕನಿಷ್ಠ ಇಂಗ್ಲೀಷಿನಲ್ಲೂ ಸಾಕಷ್ಟು ಬರೆಯುತ್ತಾ ಮುಂದುವರಿದಿದ್ದರೆ, ಚೆನ್ನಿತ್ತೇನೋ ಎನಿಸುತ್ತದೆ; ಮನಸ್ಸು ಕನಸುತ್ತದೆ. ಜಗತ್ತಿನ ಎಲ್ಲ ಸಮಾಜಗಳಿಗೆ ಸುಲಭವಾಗಿ ದಕ್ಕುವ, 'ವಿಶ್ವಕುಟುಂಬ'ದ ಕಲ್ಪನೆಯಾಗಲೀ ಅದರಿಂದ ಪ್ರೇರಿತವಾಗಿ ಸೃಷ್ಟಿಸಿದ ಕೃತಿಗಳಾಗಲೀ ವಿಶ್ವದ ಗಮನವನ್ನು ಸುಲಭವಾಗಿ ಸೆಳೆದು, ಮಲೆನಾಡಿನ ಮೂಲೆಗಳಲ್ಲಿ ಅರಳುವ ಕಾಡು ಕುಸುಮಗಳ ಮೌಲ್ಯ ಪಾಶ್ಚಿಮಾತ್ಯ ಸಮಾಜಕ್ಕೂ ದಕ್ಕುತ್ತಿತ್ತೇನೋ! ಇದರ ಹಿಂದಿರುವುದು, ಕನ್ನಡಾಭಿಮಾನಿಯೊಬ್ಬನ ಆಸೆಯ ಕನಸುಗಳಷ್ಟೇ. ಇಂಗ್ಲೀಷಿನಲ್ಲಿಯೂ ಅಭಿವ್ಯಕ್ತಿಸಿಕೊಳ್ಳಲು ತಯಾರಿದ್ದ ಕುವೆಂಪು ಅವರ ಕೃತಿಗಳು ಯಾವುದೇ ಭಾಷಾಂತರಕ್ಕಿಂತ ಚೆನ್ನಾಗಿ ಕನ್ನಡ ಸಂಸ್ಕೃತಿಯ ಸ್ಪಂದನಗಳನ್ನು ಹೊರ-ಸಂಸ್ಕೃತಿಗಳಿಗೆ ಪರಿಚಯಿಸುತ್ತಿದ್ದುವೆಂಬುದರ ಬಗ್ಗೆ ಯಾವ ಸಂಶಯವೂ ಕಂಡು ಬರುವುದಿಲ್ಲ. ಇರಲಿ, ಬೇರೆಯವರ ನಷ್ಟ, ಕನ್ನಡಿಗರ ಅದೃಷ್ಟ... ಎನ್ನೋಣ. ಒಟ್ಟಿನಲ್ಲಿ ಹೀಗೆ ಕಾಲ-ದೇಶಗಳಿಂದ ಹೊರ ನಿಂತು ಅವಲೋಕಿಸುವ ಪ್ರಾಮಾಣಿಕ ವಿಮರ್ಶಕ ಕುವೆಂಪುವಿನದೊಂದು ಹೊಸಲೋಕ, ಅವರನ್ನು ಅರ್ಥ ಮಾಡಿಕೊಳ್ಳಲು ನಮಗೊಂದು ಹೊಸ ಕಣ್ಣು-ದೃಷ್ಟಿ

ಈ ರೀತಿಯಲ್ಲಿ ಕುವೆಂಪು ತಾವು, ಕಾಲದೇಶಗಳ ಮಿತಿಯಲ್ಲಿ ಅಭಿವ್ಯಕ್ತಿಗೊಳ್ಳುವ ಉತ್ಕಟ ರಸ-ಪ್ರತಿಭೆಯೆಂಬುದನ್ನು, ತಮ್ಮ ವಿಮರ್ಶಕನ ನೋಟದಲ್ಲಿಯೂ ತೋರಿಸಿಕೊಡುತ್ತಾ ನಮಗೆ ತಿಳಿಯಪಡಿಸುವ ಅಂಶಗಳಿಗೆ ಒಂದು ಹೊಸತನವಿದೆ. ಕಾರಂತರ ನಿಷ್ಠುರ ವೈಚಾರಿಕತೆಯಾಗಲೀ, ಬೇಂದ್ರೆಯವರ ನಿಷ್ಠುರ ಕಲಾ ಸೌಂದರ್ಯವಾಗಲೀ ಸಾಧ್ಯವಾಗದೇ ಹೋಗುವ ಕುವೆಂಪು, ಈ ಎರಡೂ ಕೊನೆಗಳ ನಡುವೆ ಕಟ್ಟುವ ಸೇತುವೆಯೇ ಅವರ ಕೃತಿಗಳೆಂಬ ಅನಿಸಿಕೆಯೂ ನನಗೆ ಮೂಡಿದ್ದುಂಟು. ಈ ಸಂದರ್ಭದಲ್ಲಿ ನಾವು ಕಾರಂತ ಮತ್ತು ಬೇಂದ್ರೆಯವರ ಸೃಜನಶೀಲ ಮನಸ್ಸಿನೊಡನೆ ಹೋಲಿಸಿ ನೋಡಿದಾಗ ನಮಗೆ ಕಾಣುವ ಕುವೆಂಪುವಿಗೊಂದು ಹೊಸ ರಂಗಿದೆ. ಇದು ತುಲನಾತ್ಮಕ ಚರ್ಚೆಯಲ್ಲವೆಂಬುದನ್ನು ಮರೆಯದೆ, ಕೇವಲ, ಗುಲಾಬಿಯನ್ನು, ಜಾಜಿ ಮಲ್ಲಿಗೆಗಳ ನಡುವೆ, ಕೇದಿಗೆ ಸಂಪಿಗೆಗಳ ನಡುವೆ ಜೋಡಿಸಿ ಅದರ ಸೌಂದರ್ಯದ ಹೊಸ ಆಯಾಮಗಳನ್ನು ಆಸ್ವಾದಿಸುವ ಪ್ರಯತ್ನವೆಂದು ತಿಳಿಯಬೇಕು. ಆಧುನಿಕ ಕನ್ನಡ ಸಾಹಿತ್ಯದ ಮುಕುಟಗಳಾದ ಈ ಮೂರು ಕಲಾಪ್ರತಿಭೆಗಳು, ವ್ಯಕ್ತಗೊಳ್ಳುವ ರೀತಿಯಲ್ಲಿನ ವೈವಿಧ್ಯತೆಯಲ್ಲಿ ನಾವು ತಿಳಿದುಕೊಳ್ಳಬೇಕಾದುದು ಬಹಳಷ್ಟಿದೆ. ಮುಖ್ಯವಾಗಿ, ಈ

ಮೂವರೂ ಬದುಕಿ ಬರೆದ ೪೦-೬೦ ರ ದಶಕಗಳ ಸಂಕೀರ್ಣ ರಾಜಕೀಯ ಮತ್ತು ಸಾಮಾಜಿಕ ಪರಿಸ್ಥಿತಿಯಲ್ಲಿ ಈ ಕಲಾ-ಪ್ರತಿಭೆಗಳು ವ್ಯಕ್ತಗೊಳ್ಳುವ ರೀತಿಯಿಂದಾಗಿ, ಸ್ವತಂತ್ರ ಸೌಂದರ್ಯದಿಂದ ತುಂಬಿಕೊಂಡ ಕೃತಿಗಳ ಸೃಷ್ಟಿ ಸಾಧ್ಯವಾಗುತ್ತದೆ. ಇದೇ ಬೇಂದ್ರೆಯವರಿಗೆ ದಕ್ಕಿ ಅವರಲ್ಲಿ ಅಭಿವ್ಯಕ್ತಿಗೊಳ್ಳುವ ಉತ್ಕಟ ಅಧ್ಯಾತ್ಮಿಕ ಜೀವನ ಸೌಂದರ್ಯ, ಅದೇ ಕಾಲದಲ್ಲಿ ಕಾರಂತರಲ್ಲಿ ಸ್ಫುರಿಸಿ ತೀಕ್ಷ್ಣಗೊಳ್ಳುವ ನಿಷ್ಠುರ ವೈಚಾರಿಕತೆ, ಹಾಗೂ ಇವೆರಡನ್ನೂ ಬಿಡಲಾರೆನೆಂದು ಮಧ್ಯೆ ಸೇತುವಾಗುವ, ಸಾಮಾಜಿಕ ಸತ್ಯಗಳಿಗೆ ಬದ್ಧವಾದ ಕುವೆಂಪು ಅವರ ರಸಪ್ರಜ್ಞೆ. ಕಾರಂತರ ರಸಸೃಷ್ಟಿಗೆ ವೈಜ್ಞಾನಿಕತೆಯ ರಂಗು ಮತ್ತು ಆಯಾಮಗಳಿರುವುದನ್ನು ನಾವು 'ಮೂಕಜ್ಜಿಯ ಕನಸುಗಳಲ್ಲಿ' ಉದಾಹರಣೆಯಾಗಿ ಕಾಣಬಹುದಾದರೆ, ಅವರ ಸಾಮಾಜಿಕ ಬದ್ಧತೆಗೆ ಪೋಷಕವಾಗುವುದು ಅವರ ಕೃತಿಗಳಲ್ಲಿ ಜೀವ ತಾಳುವ ಪಾತ್ರಗಳು. ಸೃಷ್ಟಿಯ ಮೆರುಗಿಗೆ, ಬದುಕಿನ ದಿವ್ಯ ಭಾವಕ್ಕೆ ಪರಿಪೂರ್ಣವಾಗಿ ಶರಣಾದ, ಬೇಂದ್ರೆಯವರ ರಸ ಪ್ರತಿಭೆಗೆ ಅನಿವಾರ್ಯವಾದದ್ದು ಆಧ್ಯಾತ್ಮಿಕ ಸೌಂದರ್ಯ. ಹಾಗೆಂದೇ, ಸಾಮಾನ್ಯರಿಗೆ ಸಾಧ್ಯವಾಗದ ವೈರಾಗ್ಯ ಮತ್ತು ಪ್ರೀತಿ ಭರಿತ ಜೀವನದೃಷ್ಟಿ ಬೇಂದ್ರೆಯವರದ್ದಾಗುತ್ತದೆ.

ಬೇಂದ್ರೆಯವರ ಧಾಟಿಯಲ್ಲೆ ನಿರ್ಮಲ ಸ್ವಾತಂತ್ರ್ಯದಲ್ಲಿ ಹರಿದುಹೋಗುವ ಹಂಬಲವನ್ನು ಕುವೆಂಪು ಅವರಿಂದ ಕಸಿದುಕೊಳ್ಳುವುದು ಅವರ ಸುತ್ತಣ ಕಾಲ-ದೇಶಗಳು. ರಸಸೃಷ್ಟಿಯ ಉತ್ಕಟ ಇಚ್ಛೆಯಿರುವ ಕವಿ-ಮನಸ್ಸಿಗೆ ಸಾಮಾಜಿಕ ನ್ಯಾಯಾನ್ಯಾಯಗಳ ಚೌಕಟ್ಟು ಮೂಗುದಾರವಾಗಿ ಬಿಡುತ್ತದೆ. ಹಾಗೆಂದೇ ಆಧ್ಯಾತ್ಮಿಕತೆಯತ್ತ ಸದಾ ತುಡಿದು ಎಳಸುವ ಕುವೆಂಪುವಿಗೆ ವೇದೋಪನಿಷತ್ತುಗಳಂತಹ ವೈದಿಕ ಸಾಹಿತ್ಯ ಹಾಗೂ ಆಧ್ಯಾತ್ಮಿಕತೆಗಳ ನಡುವಣ ಆಭಾಸದ ಅರಿವು ಸದಾ ಇದೆ. ಹಾಗಾಗಿ ನಿರ್ಭೀತ ಸ್ವಚ್ಛಂದ ಸಹಜ ರಸಸೃಷ್ಟಿಗೆ ಅವರ ಕವಿ-ಮನಸ್ಸು ಪಕ್ಕಾಗುವುದಿಲ್ಲ. ಹಾಗಾಗಿದ್ದಲ್ಲಿ, ವರ್ಡ್ಸ್‌ವರ್ತ್‌ಗೂ ಮಿಗಿಲಾಗಿ ನಮ್ಮನ್ನು ಈ 'ಕಾಡಿನ ಕವಿ' ತಟ್ಟುತ್ತಿದ್ದರೆನ್ನುವುದರಲ್ಲಿ ಸಂಶಯವೂ ಬೇಕಿಲ್ಲ. ಆದರೆ ರಸ ಸೃಷ್ಟಿಯಲ್ಲಷ್ಟೇ ಮಗ್ನನಾಗಲು ಬಿಡದ ಸಮಾಜವೊಂದು, ಅವರ ಪ್ರತಿಭೆಯ ಮೂಲಕ ಪಕ್ವತೆಯ ಸೃಷ್ಟಿಯಾಗಿಸುವುದು, 'ವಿಶ್ವಮಾನವತ್ವ' ದಂತಹ ತತ್ವವನ್ನು, ಶ್ರೀ ಅರಬಿಂದೋ ಅಂತಹ ದಾರ್ಶನಿಕರ ಮಾತುಗಳಲ್ಲಿ, ಒಂದು ಸಿದ್ಧಾಂತವಷ್ಟೇ ಆಗಿಹೋಗುವ, ಈ ಉದಾತ್ತ ತತ್ವಗಳು, ''ರಸ ಋಷಿಯ'' ಕುಂಚದಲ್ಲಿ ಗೇಯತೆಯಿಂದ ತುಂಬಿ, ಹಾಡಾಗಿ ಹೊಮ್ಮಿ, ಶಾಲೆಯ ವಿದ್ಯಾರ್ಥಿಗಳಿಗೂ ಅರ್ಥವಾಗಿ, ಹದಿಹರೆಯದ ಬಾಲರನ್ನೂ ಪ್ರಚೋದಿಸುವಷ್ಟು ಶಕ್ತಿ ಪಡೆದುಕೊಳ್ಳುತ್ತದೆ.

ಒಟ್ಟಿನಲ್ಲಿ,

> ಕಲೆಯ ಬಾಳ್ವೆಗೆ ಮಿಗಿಲ್ ಬಾಳ್ವೆಯು ಕಲೋಲ್ಲಾಸ:
> ಕಲೆ ಸಂಸ್ಕೃತಿ ವಿಲಾಸ; ಬಾಳ್ ಸೃಷ್ಟಿಗೆ ವಿಕಾಸ

ಎಂದು ಗೋವಿಂದ ಪೈಗಳನ್ನು ಮೆಚ್ಚಿಕೊಂಡು, ಶ್ರೇಷ್ಠ ಬದುಕೊಂದನ್ನು, ಶ್ರೇಷ್ಠ ಕಲೆಗಿಂತಲೂ ಹೆಚ್ಚೆಂದು ಹಚ್ಚಿಕೊಳ್ಳುವ ಈ ರಸಋಷಿಯ ಸೃಜನಶೀಲ ಪ್ರತಿಭೆಗೆ ನಮ್ಮ ಸಮಾಜ ಮತ್ತು ಬದುಕಿನ ಕಾರ್ಪಣ್ಯಗಳು ಒಂದು ಚೌಕಟ್ಟನ್ನು ತೊಡಿಸಿದೆ. ಈ ಚೌಕಟ್ಟಿನ ನಡುವೆಯೇ, ಸಾಹಿತ್ಯಕೃಷಿ ನಡೆಸಿ, ಜಗತ್ತಿಗೇ ಅರ್ಥಪೂರ್ಣವಾದ ಜೀವನದೃಷ್ಟಿ ಕೊಡುವ, ಪ್ರಕ್ರಿಯೆ ಕುವೆಂಪು ಅವರ ಜೀವನವೂ ಹೌದು. ಇದನ್ನು ಅವರ ವಿಮರ್ಶೆಗಳಲ್ಲಿ ಗುರುತಿಸಬಹುದು. ಸ್ವತಃ ಅದ್ಭುತ ಕಲಾಪ್ರತಿಭೆಯಾಗಿಯೂ, ''ಬಾಳ್ವೆಯ ಕಲೋಲ್ಲಾಸ''ವನ್ನು ಎತ್ತಿ ಹಿಡಿಯುವಲ್ಲಿ, ಕುವೆಂಪು ಅವರ ಆಂತರ್ಯದ ಅಧ್ಯಾತ್ಮಿಕ ಸೌಂದರ್ಯ ಹಣಕಿ ನೋಡುತ್ತದೆ.

●

# ಭಾಗ ೨

## ಕವನ-ಕಥನ ಸಾಹಿತ್ಯ

"ಯಾವ ಗುಡಿ ಮಿಗಿಲು ಈ ಭುವನ ದೇವಾಲಯಕೆ ?"

# ಕೊಳಲು - ಸೌಂದರ್ಯ ಮತ್ತು ಸರಳತೆಗಳ ಜೀವನ ದರ್ಶನ

## ಎಮ್.ಆರ್. ದತ್ತಾತ್ರಿ, ಕ್ಯಾಲಿಫೋರ್ನಿಯ

ಆ ಇಬ್ಬರೂ ಬಹುಶಃ ಇಪ್ಪತ್ತೆರಡರಿಂದ ಇಪ್ಪತ್ತೈದು ಇಪ್ಪತ್ತಾರರ ತರುಣರು. ಒಬ್ಬ ತತ್ವಶಾಸ್ತ್ರಜ್ಞ, ಮತ್ತೊಬ್ಬ ಕವಿ. ಒಬ್ಬ ದೂರದ ಅಲ್ಜೇರಿಯಾ ಮತ್ತು ಫ್ರಾನ್ಸ್‌ಗಳಲ್ಲಿ ಕುಳಿತು ತನ್ನ ಪ್ರಬಂಧಗಳಲ್ಲಿ ಒಂದು ವಿಶಿಷ್ಟವಾದ ಸತ್ಯವನ್ನು ಕಂಡುಕೊಂಡ. ''ಈ ಬಾನು, ಹಾರುವ ಹಕ್ಕಿಗಳು, ದೂರದ ಬೆಟ್ಟ, ಅರಳಿ ನಿಂತ ಹೂವು, ಋತು ಬದಲಾವಣೆಗಳು ತರುವ ಬಣ್ಣ, ಸುರಿವ ಮಳೆ, ಉರಿಯುವ ಬಿಸಿಲು ಇವೆಲ್ಲಾ ಸತ್ಯವನ್ನು ಮತ್ತೆಲ್ಲೋ ಆಳದಲ್ಲಿ ಅಡಗಿಸಿಟ್ಟು ನಮ್ಮ ದೃಷ್ಟಿಯಲ್ಲಿ, ನಮ್ಮ ಸೌಂದರ್ಯ ಮೀಮಾಂಸೆಗೆ ತಕ್ಕಂತೆ, ನಮ್ಮ ಕಲ್ಪನೆಯ ಬಟ್ಟೆಗಳಲ್ಲಿ, ಚಿತ್ರಗಾರನ ಕುಂಚದಲ್ಲಿ ಅರಳಿದಂತೆ ನಿಲ್ಲುವಾಗ ನಾವು ಕಾಣುವುದು ನಿಜವಾಗಿಯೂ ಅಲ್ಲಿರದ, ನಮ್ಮ ಬಯಕೆಗಳಿಗೆ ಅನುಗುಣವಾಗಿ ನಾವು ಮಾರ್ಪಡಿಸಿಕೊಂಡ ಸೌಂದರ್ಯ. ಬದುಕಿನ ನಿಜವಾದ ಅರಿವಿಗೆ ಈ ಸೌಂದರ್ಯದ ಹೆಸರಿನ ಮಾಯೆಯ ವಸ್ತ್ರಗಳನ್ನು ಒಂದೊಂದಾಗೇ ಕಳಚಿ ಸತ್ಯವನ್ನು ಬೆತ್ತಲಾಗಿಸಬೇಕು'' ಎಂದು ಹೇಳಿದ.

Existentialismನ ಪ್ರಾಥಮಿಕ ಸತ್ಯದ ಎಳೆಗಳನ್ನು ಆ ತರುಣ ಬಿಡಿಸುತ್ತಿರುವ ಹೊತ್ತಿಗೆ ಸುಮಾರು ಅದೇ ವಯಸ್ಸಿನ ತರುಣನೊಬ್ಬ ಮೈಸೂರಿನಲ್ಲಿ ಕುಳಿತು ಕವಿತೆಗಳನ್ನು ಬರೆದ :

ಬನಗಳೆ, ಗಿರಿಗಳೆ, ಹೊಳೆಗಳೆ, ತೊರೆಗಳೆ,
ಕೆರೆಗಳೆ, ಹೊಲಗಳೆ, ತೋಟಗಳೆ;

ತಾಯೀ ತುಂಗೆಯೆ, ಸಿರಿ ಮಲೆನಾಡಿನ
ಪಚ್ಚೆಯ ಪಸುರಿನ ನೋಟಗಳೆ;

ಬನಗಳ ಹೂಗಳ ಸೊಬಗನು ಮೀರುವ
ಚೆಲುವಿನ ಹೊಲಬಿಗ ಬಾಲೆಯರೆ;

ಬನದಲಿ ಬಯಲಲಿ ಹೊಳೆಯಲಿ ಮಳೆಯಲಿ
ನನ್ನೊಡನಾಡಿದ ಬಾಲಕರೆ;

.....

ದನ, ಬನ, ಕಲ್ಗಳು ಮೆಚ್ಚಿದ ಕೊಳಲನು
ರಸಿಕರು ಮೆಚ್ಚದೆ ಮಾಣುವರೆ ?

ಕಲ್ಗಳ ಕರಗಿಸಿದಿಂಚರವೆನ್ನದು
ಎದೆಗಳನೊಲಿಸದೆ ಮಾಣುವುದೆ ?

(ಕವಿತೆ - ಕೊಳಲು)

ಪ್ರಕೃತಿಯನ್ನು ಬೆತ್ತಲಾಗಿಸಿ ನಿರ್ಭಾಗ್ಯ ಸ್ಥಿತಿಯಲ್ಲಿ ಸತ್ಯ ಮತ್ತು ಸೌಂದರ್ಯವನ್ನು ಅರಸುವುದಕ್ಕಿಂತ ಪ್ರಕೃತಿಯಲ್ಲಿ ಬೆರೆತ ನಮ್ಮ ಅನುಭೂತಿಯಲ್ಲೇ, ಸ್ನೇಹಿತನಂತೆ ನಮ್ಮೊಡನೆ ಅದು ಇಟ್ಟ ಹೆಜ್ಜೆ ಹೆಜ್ಜೆಗಳಲ್ಲೇ, ಹಾದು ಹೋದ ಹರಿಣಿಯ ಮಿಂಚಿನ ಕಣ್ಬೆಳಕಲ್ಲೇ, ''ಘೋರಾಂಧಕಾರದೊಳು ಕಾರ್ಮುಗಿಲನುಟ್ಟು; ಮಿಂಚೆಂಬ ತೇಜಸದ ಬಳೆಯ ತೊಟ್ಟು'' ಬರುವ ಬಂದೆಚ್ಚರಿಸುವ ಜನನಿಯಲ್ಲೇ, ''ನೇಗಿಲ ಹಿಡಿದಾ ಹೊಲದೊಳು ಹಾಡುತ; ಉಳುವಾ ಯೋಗಿಯ ನೋಡಲ್ಲಿ'' ಎನ್ನುವಲ್ಲಿಯ ಕರ್ಮ ಧರ್ಮಗಳ ಸಂಗಮದಲ್ಲಿಯೇ, ''ಅಲ್ಲಿ ಗಿಳಿ ಗೊರವಂಕ ಕೋಗಿಲೆಗಳಿಂಚರವು; ಕಲೆಯುತಲೆಯಲೆಯಾಗಿ ತೇಲಿ ಬರುತಿರಲಿ'' ಎನ್ನುವಲ್ಲಿ ಹೊರಡುವ ಸ್ವಾಭಾವಿಕ ಬಯಕೆಯಲ್ಲೇ, ''ಮಿಂಚಿನ ಹನಿಗಳ ಮಳೆಯಂತೆ; ಹೊನ್ನೆಯ ಹುಳಗಳು, ಕಾಂತಿಯ ಕಿಡಿಗಳು; ಹೊಳೆದು, ಅಳಿದು; ಅಳಿದು, ಹೊಳೆದು; ಚಿಮ್ಮುತ ಎಲೆಯಿಂದೆಲೆಯೆಡೆಗೆ; ಚಿಮುಕಿಸಿ ಮೋಹವನಡಿಗಡಿಗೆ'' ಕಲ್ಪನೆಯ ಬಾನಿನಲ್ಲಿ ಮಿಂಚಿ ಮಾಯವಾಗುವ ಕವಿತೆಯ ಸಾಲುಗಳಂತೆ ಮಿಂಚು ಹುಳದ ಬೆಳಕಿನಲ್ಲೇ ಸತ್ಯವನ್ನು ಅರಸಿದ ಈ ಕವಿ. ಒಬ್ಬ ಜ್ಞಾನಿಯು ಸತ್ಯ ಮತ್ತು ಸೌಂದರ್ಯವನ್ನು ಬೇರ್ಪಡಿಸುವ ಬಗ್ಗೆ ಚಿಂತಿಸಿದರೆ ಮತ್ತೊಬ್ಬ ಜ್ಞಾನಿ ಮತ್ತು ಕವಿಯು ಸತ್ಯ ಮತ್ತು ಸೌಂದರ್ಯದ ಒಂದಾಗುವಿಕೆಯ ರಸದ ಬಗ್ಗೆ ಮಾತನಾಡಿದರು. ಆ ರಸಾಯನವನ್ನು ಉಣಬಡಿಸಿದರು.

ಆ ತತ್ವಶಾಸ್ತ್ರಜ್ಞ ಆಲ್ಬರ್ಟ್ ಕಮೀ (Albert Camus) ಮತ್ತು ಆ ಕವಿ ಕುವೆಂಪುರವರು.

* * * *

ಕುವೆಂಪುರವರ ಕಾವ್ಯದಲ್ಲಿ ನಮಗೆ ತಟ್ಟನೆ ಎದ್ದು ಕಾಣುವ ಅಂಶವೆಂದರೆ ಅದರ ಸರಳತೆ. ಅವರ ಕೊಳಲು ಸಂಕಲನದಲ್ಲಂತೂ ಇದು ಪುಟ ಮೀರಿ ಹೊರ ಹೊಮ್ಮುತ್ತದೆ. ಘನ ಸತ್ಯಗಳೆಲ್ಲಾ ಸರಳವೇ ಎಂಬುವುದರ ನೇರ ಅಳವಡಿಕೆಯೋ ಎನ್ನುವಂತೆ:

ಚೋರರು ಹೃದಯದೊಳಡಗಿಹರು,
ಮನವೇ, ಬಲು ಜೋಕೆ !

ನಿನ್ನೈಶ್ವರ್ಯವನಪಹರಿಸೆ
ಹೊಂಚುತಲಡಗಿಹರು.
ತಿಮಿರವು ಹೃದಯವನಾವರಿಸೆ
ಕನ್ನವ ಹಾಕುವರು.

ಬೆಳಕಲಿ ತಾವನು ಬೇಡುವರು,
ನಿಶೆಯಲಿ ಸುಲಿಗೆಯ ಮಾಡುವರು.
ಚೋರರು ಹೃದಯದೊಳಡಗಿಹರು
ಮನವೇ, ಬಲು ಜೋಕೆ!

(ಕವಿತೆ - ಮನವೇ ಬಲು ಜೋಕೆ)

ಚೋರತೆ ಮತ್ತು ಸಭ್ಯತೆಗಳೆರಡನ್ನೂ ಉಳ್ಳ ಮಾನಸಿಕ ದ್ವಂದ್ವತೆ ಸಾಹಿತ್ಯಕ್ಕೆ ರೂಪದರ್ಶಿಯಾಗಿ ನಿಂತಷ್ಟು ಮತ್ಯಾವ ಭಾವನೆಗಳು, ತೊಳಲಾಟಗಳು ನಿಂತಿಲ್ಲವೇನೋ. ಅದೇ ದ್ವಂದ್ವ ಇಲ್ಲಿ ಕುವೆಂಪುರವರ ಕವಿತೆಯಲ್ಲಿ ಎಷ್ಟು ಸರಳ ಮತ್ತು ನೇರವಾಗಿ ವ್ಯಕ್ತವಾಗಿದೆ! ಈ ಕವಿತೆಯನ್ನು ಅರ್ಥ ಮಾಡಿಕೊಳ್ಳಲು ತಿಣುಕಾಡಬೇಕಿಲ್ಲ. ಪ್ರತೀಕ ಪ್ರತೀಕಗಳನ್ನು ಬಿಡಿಸಿ ಬರಹಗಾರ ಓದುಗನ ಮನವನ್ನು ಹೊಗುವ ಬದಲು ಓದುಗನೇ ಬರಹಗಾರನ ಎದೆಯನ್ನು ಹೊಕ್ಕು 'ಇದರ ಅರ್ಥ ಏನು ಮಹರಾಯ' ಎಂದು ತಲೆ ಕೂದಲು ಕಿತ್ತುಕೊಳ್ಳುವ ಸಂಗತಿಯಲ್ಲ. 'ಪುಟ್ಟಪ್ಪನವರ ಕವಿತೆಗಳೆಲ್ಲಾ ಹೃದಯದಿಂದ ಬಂದುವೇ; ನೇರವಾಗಿ ಹೃದಯಕ್ಕೆ ಹೋಗತಕ್ಕವೇ' ಎನ್ನುತ್ತಾರೆ 'ಕನ್ನಡದ ಕಣ್ವ' ಬಿ.ಎಂ. ಶ್ರೀಕಂಠಯ್ಯನವರು 'ಕೊಳಲು' ಸಂಕಲನದ ಮುನ್ನುಡಿಯಲ್ಲಿ. ಈ ರೀತಿಯ 'ಹೃದಯದಿಂದ ಹೃದಯಕ್ಕೆ' ನಡೆವ ನೇರ ಸಂಭಾಷಣೆಯೇ, ನೇರ ಸ್ಪಂದನೆಯೇ ಮಹಾನ್ ಕವಿತೆಗಳ ವಿಶೇಷ. ಕುವೆಂಪುರವರನ್ನು ಹೊರತುಪಡಿಸಿ ಇಷ್ಟು ನೇರವಾಗಿ ಹೃದಯ ಸಂಭಾಷಣೆಯನ್ನು ಮಾಡಿದ ಮತ್ತೊಬ್ಬ ಕನ್ನಡ ಕವಿಗಳೆಂದರೆ ದ.ರಾ. ಬೇಂದ್ರೆಯವರು. ಪಾತರಗಿತ್ತಿಯ ಬಣ್ಣದ ರೆಕ್ಕೆಗಳಲ್ಲಿ, ಹಸುರು ಚುಕ್ಕಿಗಳಲ್ಲಿ ಜೀವನವನ್ನು ತೆರೆದವರು, ನಂದನವನ್ನು ಇಳೆಗೆ ಇಳಿಸಿದವರು ಅವರು. ಒಂದೇ ತಲೆಮಾರಿನಲ್ಲಿ ಈ ಇಬ್ಬರು ಮಹಾನ್ ಕವಿಗಳನ್ನು ಕಂಡ ನನಗಿಂತ ಹಿಂದಿನ ತಲೆಮಾರಿನ ಕನ್ನಡಿಗರ ಅದೃಷ್ಟಕ್ಕೆ ನಾನು ಅಸೂಯೆ ಪಡುತ್ತೇನೆ.

* * * *

ಕುವೆಂಪುರವರು ಪಕ್ಕಾ ಮಲೆನಾಡಿನವರು. ಮಲೆನಾಡಿನ ಬಗ್ಗೆ ಬರೆಯುವಾಗ ಈ ಕವಿ ಸ್ವತಃ ಅನುಭವಗಳಿಂದ ಭಾವುಕರಾಗುತ್ತಿದ್ದರು ಎನ್ನುವಲ್ಲಿ ಯಾವ ಸಂದೇಹವೂ ನಮ್ಮಲ್ಲಿ ಉದ್ಭವಿಸುವುದಿಲ್ಲ. 'ಕೊಳಲು' ಸಂಗ್ರಹದಲ್ಲಂತೂ ಮಲೆನಾಡು ತನ್ನ ಶ್ರೀಮಂತಿಕೆಯಿಂದ ಪುಟ ಪುಟಗಳಲ್ಲಿ ತುಂಬಿ ನಿಂತಿದೆ.

ಸಿರಿಬನದೇವಿಯ ಬೊಕ್ಕಸದಿಂದ
ಕದ್ದವು ಕೆಲವಿವು ಹಾಡುಗಳು;

ಸುಂದರ ಋತುಗಳ ಸಿರಿಗೈಯಿಂದ
ಸುಲಿದವು ಕೆಲವಿವು ಹಾಡುಗಳು;

ನೇಸರು ಚಂದಿರ ತಾರೆಗಳಿಂದ
ಕೆಲವನು ಭಿಕ್ಷೆಯ ಬೇಡಿದೆನು;

ಬೈಗಿನ ಹೆಣ್ಣನು ಬೆಳಗಿನ ಹೆಣ್ಣನು
ಕಾಡಿಸಿ ಕೆಲವನು ಕೂಡಿದೆನು.

......

ಜೀವನ ದೇವನ ನವ ಅನುರಾಗವು
ನೀಡಿದವಿವು ಕೆಲ ದಾನಗಳು !

(ಕವಿತೆ - ಕೊಳಲು)

ಹೃದಯದ ಬಡಿತಕ್ಕೂ ಅವಕಾಶ ನೀಡದಂತಹ ಪ್ರತಿನಿತ್ಯದ ವೇಗದ ಬದುಕಿನಲ್ಲಿ, ರಸ್ತೆ ಬದಿಯ ಮರದ ಹೇಮಂತ ಚೆಲುವನ್ನು ನೋಡಲೂ ಕ್ಷಣಾರ್ಧದ ಪುರುಸೊತ್ತಿಲ್ಲದ ನಾವು ಇನ್ನು ಎಷ್ಟರಮಟ್ಟಿಗೆ ಕುವೆಂಪು ಬಣ್ಣಿಸಿದ ಮಲೆನಾಡ ಚೆಲುವನ್ನು ಅರಗಿಸಿಕೊಂಡೇವು? ಚೆಲುವನ್ನು ಮೆಚ್ಚದಿದ್ದರೆ ಅದರ ಮೇಲೆ ಪ್ರೀತಿ ಮೊಳೆಯುವುದಿಲ್ಲ. ಪ್ರೀತಿ ಮೂಡದಿದ್ದರೆ ಅವುಗಳನ್ನು ಉಳಿಸಿಕೊಳ್ಳುವಲ್ಲಿ ಯಾವ ಕಾತರತೆಯೂ ನಮ್ಮಲ್ಲಿ ಉಳಿಯುವುದಿಲ್ಲ. ಕಾಡು ನಮ್ಮ ಬದುಕಿನ ಭಾವನಾತ್ಮಕ ಲೋಕದಿಂದ ದಿನದಿನಕ್ಕೂ ಕಣ್ಮರೆಯಾಗುತ್ತಿದೆ. ಇದರ ಪರಿಣಾಮವಾಗಿಯೇ ಸಂಪನ್ಮೂಲಗಳ ಹೆಸರಲ್ಲಿ ಮಲೆನಾಡು ಸಾಫಾಗುತ್ತಿದೆ. ಗುಡ್ಡ ಬೆಟ್ಟಗಳು ಬೋಳಾಗುತ್ತಿವೆ. ತುಂಗೆ ಕಲುಷಿತಳಾಗುತ್ತಿದ್ದಾಳೆ. ''ತಿಮಿರವು ಹೃದಯನಾವರಿಸೆ; ಕನ್ನವ ಹಾಕುವರು'' ಎನ್ನುವುದಕ್ಕೆ ಬಾಹ್ಯ ಪ್ರತೀಕವೋ ಎನ್ನುವಂತೆ ವೀರಪ್ಪನ್‌ನಂತಹ ಚೋರರು ಕಾಡನ್ನಾಳುತ್ತಿದ್ದಾರೆ.

ಈ ಬದುಕನ್ನು ಊಹಿಸಿಯೋ ಅಥವಾ ಇದಕ್ಕೆ ಉತ್ತರವೋ ಎನ್ನುವಂತೆ ಕುವೆಂಪುರವರು ಸರಳ ಬದುಕಿನ ತತ್ವ ಮತ್ತು ಸೌಂದರ್ಯವನ್ನು ನಮಗೆ ನೀಡುತ್ತಾರೆ.

ತುರುಗಳೆಲ್ಲ ಮೇಯೆ, ಗೊಲ್ಲ ಬಸಿರಿ ಮರದ ನೆಳಲಲಿ
ಮಲಗಿಸಿಹನು ಮಧುವನವನು ಮುದವನುಲಿವ ಕೊಳಲಲಿ!

ನಿಂತು ಮೇವ ಮರೆತುಬಿಟ್ಟು,
ಕಿವಿಯನೆರಡ ನೆಟ್ಟಗಿಟ್ಟು
ಗೊಲ್ಲನೆಡೆಗೆ ದಿಟ್ಟಿಯಿಟ್ಟು
ಬರೆದ ಚಿತ್ರದಂದದಿ
ಗವಿಗಳೆಲ್ಲ ಸವಿಯ ಸೊಲ್ಲನಾಲಿಸಿಹವು ಚಂದದಿ!

(ಕವಿತೆ - ಸುಗ್ಗಿ ಬರುತಿದೆ)

ಬದುಕು ಇಷ್ಟು ಸರಳವಾದ ಮೇಲೆಯೇ ಅದರ ಸೌಂದರ್ಯದ ದರ್ಶನವಾಗುವುದು, ಅಲ್ಲವೇ ?

'ಕೊಳಲು' ಒಂದು ಅಪೂರ್ವವಾದ ಕವಿತಾ ಸಂಕಲನ. ಮೇಲೆ ತಿಳಿಸಿದಂತೆ ಅದರಲ್ಲಿ ಪ್ರಕೃತಿಯ ಹಾಡುಗಳು ಥಾಳಾಗಿ ಇವೆ. ನಾಡು ನುಡಿಗಳ ಹೆಮ್ಮೆಯನ್ನು ಸಾರುವ 'ಜಯ ಭಾರತ ಜನನಿಯ ತನುಜಾತೆ, ಜಯಹೇ ಕರ್ನಾಟಕ ಮಾತೆ' ಎಂಬ ಜನಪ್ರಿಯ ನಾಡಗೀತೆ ಇದೇ ಕವನ ಸಂಕಲನದ್ದು. ಕುವೆಂಪುರವರ ಮೇಲಾದ ರಾಮಕೃಷ್ಣ ಪರಮಹಂಸರ ಪ್ರಭಾವಕ್ಕೆ ಅನುಗುಣವಾಗಿ ಗುರುವನ್ನು ಅರಿಯುವ, ಚೈತನ್ಯವನ್ನು ಕಾಣುವ ಅನೇಕ ಕವಿತೆಗಳು ಇಲ್ಲಿವೆ.

ದಾರಿ ತೋರೆನೆಗೆ, ಗುರುವೇ,
ದಾರಿ ತೋರೆನಗೆ.

ಕವಲೊಡೆದ ಹಾದಿಗಳು;
ಕವಿದಿಹುದು ಕತ್ತಲೆಯು;

ಕಿವಿಗೊಟ್ಟು ಕೇಳಿದರೆ
ಕರೆವ ದನಿಯಿಲ್ಲ;

ಕಣ್ಣಿಟ್ಟು ನೋಡಿದರೆ
ಹೊಳೆವ ಸೊಡರಿಲ್ಲ!

......

ಹೆಪ್ಪುಗಟ್ಟಿಹುದಿರುಳು!
ಮರಳಿನಲಿ ಕೆಸರಿನಲಿ
ಮುಂದೆ ತೆರಳಿದ ಜನರ
ಹೆಜ್ಜೆಗಳ ಕಾಣೆ;
ಕತ್ತಲಲಿ ಕೈಹಿಡಿದು
ಕಾಯುವರ ಕಾಣೆ!

(ಕವಿತೆ-ದಾರಿ ತೋರೆನಗೆ)

ಎಂಬಲ್ಲಿ ಅಲೌಕಿಕತೆಯ ಹಂಬಲ ಕವಿಯನ್ನು ಅಷ್ಟು ಚಿಕ್ಕವಯಸ್ಸಿನಲ್ಲಿಯೇ ಕಾಡಿರುವುದು ವೇದ್ಯವೆನಿಸುತ್ತದೆ.

''ನೂರು ದೋಷಗಳಿದ್ದರೂ ಜೀವವಿದ್ದರೆ ಕಾವ್ಯ ಕಾವ್ಯವೇ; ಒಂದು ತಪ್ಪಿಲ್ಲದಿದ್ದರೂ ಜೀವವಿಲ್ಲದ ಕಾವ್ಯ ಕಾವ್ಯವೇ ಅಲ್ಲ. ಪುಟ್ಟಪ್ಪನವರ ಉತ್ತಮ ಕವನಗಳಲ್ಲಿ ಈ ಜೀವವಿದೆ; ಆತ್ಮವಿದೆ; ಇರುವುದರಿಂದ ಅಮೃತತ್ವದ ಸಾರವಿದೆ'' ಎಂದು ಬಿ.ಎಂ. ಶ್ರೀಕಂಠಯ್ಯನವರು ಕುವೆಂಪುರವರ ಕಾವ್ಯದ ಬಗ್ಗೆ ಹೇಳುತ್ತಾರೆ.

* * * *

ಕೊಳಲು ಕವಿತಾ ಸಂಕಲನ ಬಂದು ಸುಮಾರು ಎಪ್ಪತ್ತೈದು ವರ್ಷಗಳಾಯಿತು. ಆದರೆ ಅದರ ಇಂಪಾದ ಇಂದೂ ನಮ್ಮ ಕಿವಿಯಲ್ಲಿ ಗುನುಗುಡುತ್ತದೆ. ಮನುಷ್ಯ ಮತ್ತು ಪ್ರಕೃತಿಯನ್ನು ಸ್ವಾಭಾವಿಕವಾಗಿ ನೋಡಿದ ಉದಾತ್ತ ಗೀತೆಗಳು ಇವು. ಅಮ್ಮನ ಜೋಗುಳದಂತೆ ವಾತ್ಸಲ್ಯದ ಹಾದಿಯಲ್ಲಿ ಮುನ್ನಡೆಸಿದವು. ಮಲೆನಾಡ ಸೋನೆಮಳೆ ಬಾನು ಬುವಿಯನ್ನು ಗಂಟು ಹಾಕಿದಂತೆ ಆತ್ಮಕ್ಕೆ ಪರಮಾತ್ಮನನ್ನು ಸೋಕಿಸಿದ ಪದ್ಯಗಳು ಇವು. ''ಜೀವ ರಥೋತ್ಸವವಿದನಣಕಿಸದಿರು'' ಎಂದು ಎಚ್ಚರಿಸಿದವು.

ಬಹುಶಃ ಕಾವ್ಯದ ಬೆನ್ನೇರಿ ನಡೆದ ನಮ್ಮ ಮುಂದಿನ ದಿನಗಳ ಪಯಣದಲ್ಲಿ ನಾವು ಈ ಸತ್ಯ ಮತ್ತು ಸರಳತೆಯನ್ನು ಉಪೇಕ್ಷಿಸಿ ಸೌಂದರ್ಯದ ದರ್ಶನಕ್ಕೆ ನಿಂತೆವೇನೋ ಎನ್ನುವ ಅನುಮಾನ ನನಗೆ. ಉಗುರಲ್ಲಿ ಆಗುವ ಕೆಲಸಕ್ಕೆ ಕೊಡಲಿಯನ್ನು ತೆಗೆದುಕೊಂಡರಂತೆ ಎನ್ನುವ ಗಾದೆಯಂತೆ ಸರಳವಾಗಿ ಮತ್ತು ನೇರವಾಗಿ ಕಾಣುವ ಸೌಂದರ್ಯವನ್ನು ಅರಿತುಕೊಳ್ಳಲು ಬರಿಗಣ್ಣಲ್ಲಿ ನೋಡುವುದ ಬಿಟ್ಟು ಅನೇಕ ಫಿಲ್ಟರ್‌ಗಳಿರುವ ಲೆನ್ಸ್‌ಗಳಿಗೆ ಮೊರೆಹೋದವೇನೋ, ಇದ್ದುದನ್ನು ಇದ್ದಂತೆಯೇ ತೆಗೆದುಕೊಳ್ಳುವ, ನೋಡುವ ಎದೆಗಾರಿಕೆ ಮತ್ತು ಮುಗ್ಧತೆಯನ್ನು ಕಳೆದುಕೊಂಡೆವೇನೋ.

ನಾವೆಲ್ಲಾ ಮಾಧ್ಯಮಿಕ ಶಾಲೆಯಲ್ಲಿ ಓದಿದ 'ಭಾರತಾಂಬೆಯೆ, ಜನಿಸಿ ನಿನ್ನೊಳು ಧನ್ಯನಾದೆನು, ದೇವಿಯೇ' ಕವಿತೆ ಕೊಳಲು ಸಂಗ್ರಹದಲ್ಲೇ ಇರುವುದು.

ಕುಂದು ಕೊರತೆಗಳಿಹವು ನಿನ್ನೊಳು ಎಂಬುದಳಲನು ಬಲ್ಲೆನು,
ಹಿಂದೆ ಕುಳಿತವಳೆಂಬ ನಿಂದೆಯ ಸಹಿಸಿ ನೊಂದಿಹೆ ಬಲ್ಲೆನು;
ಆದರೊಲಿಯೆನು ಅನ್ಯರ, ಚಿನ್ನವೊಲಿದಿಹ ಧನ್ಯರ;
ಕುಂದುಕೊರತೆಗಳಿರಲಿ, ಮಹಿಮಳು ನೀನೆ, ಅನ್ಯರನೊಲ್ಲೆನು.

ಹಿಂದೆಂದೋ ಓದಿದ್ದ ಈ ಸಾಲುಗಳನ್ನು ಮತ್ತೆ ಓದಿದಾಗ 'ಚಿನ್ನವೊಲಿದಿಹ ಚಿಕ್ಕಮ್ಮ' ದಯಪಾಲಿಸಿದ ಗ್ರೀನ್‌ಕಾರ್ಡಿನ ಹೊಳಪಿನಲ್ಲೂ ನನ್ನ ಕತ್ತಲೆಯ ಕಪ್ಪೇ ಕಂಡಂತಾಗಿ ಮನಸ್ಸು ವಿಹ್ವಲವಾಯಿತು.

ಬಹುಶಃ, 'ಹೃದಯಸ್ಪರ್ಶಿ ಕವಿತೆ' ಎನ್ನುವುದು ಇದಕ್ಕೇ ಇರಬೇಕು!

●

# ನಿಸರ್ಗದಲ್ಲಿ ಆಧ್ಯಾತ್ಮಿಕತೆಯನ್ನು ಕಂಡ ಕವಿ

## ನಳಿನಿ ಮೈಯ, ಇಲಿನಾಯ್

'ಮೃಣ್ಮಯದ ಹೃದಯದಲಿ ಚಿನ್ಮಯವ' ಕಂಡ ಕವಿಯೆಂದರೆ ಕುವೆಂಪು. ನವೋದಯ ಕವನಗಳಲ್ಲಿ ಎದ್ದು ಕಾಣುವ ಅಂಶವೆಂದರೆ ಅವರ ತನ್ಮಯತೆ ಮತ್ತು ತಾದಾತ್ಮ್ಯತೆ. ಇವರ ಅನುಭವದ ತೀವ್ರತೆ ಎಷ್ಟರ ಮಟ್ಟಿನದೆಂದರೆ, ಮಲೆನಾಡಿನ ಹಸುರನ್ನು ಕಂಡು "ಹಸುರ್ಗಟ್ಟಿತು ಎನ್ನಾತ್ಮಂ, ಹಸುರ್ ನೆತ್ತರ್ ಒಡಲಿನಲಿ" ಎಂಬಂತಹದು! ಸುತ್ತಲೂ ಹರಡಿ ನಿಂತ ಮಲೆ, ಕಾನು, ಬನಗಳಲ್ಲಿ ಲೌಕಿಕವನ್ನು ಮೀರಿದ ಅಲೌಕಿಕತೆಯ ರುಚಿಯನ್ನು ಉಂಡವರು ಇವರು. ಮರಗಳ ನೆರಳಲ್ಲಿ ನಿಂತಂತೆಯೇ ಎಲ್ಲೆಡೆಯೂ ಹಾಸಿದ ಭಗವಂತನ ನೆರಳನ್ನು ಕಂಡವರು! ಪ್ರಕೃತಿಯನ್ನು ಕುರಿತ ಇವರ ಬಹುತೇಕ ಕವನಗಳ ಶೈಲಿಯೂ ಕಬ್ಬಿಣದ ಕಡಲೆಯಂತಿರದೆ ಸರಳ ಸುಂದರವಾಗಿದ್ದು, ಓದುಗರಿಗೆ ಅನುಭವದ ಸುಖವನ್ನು ಸುಲಭ ಸಾಧ್ಯವಾಗಿಸುತ್ತವೆ. ಈ ಮಾತಿಗೆ ಅಪವಾದವೆಂಬಂತಹ ಕೆಲವು ಕವನಗಳಿವೆ ಎಂಬುದನ್ನೂ ಒಪ್ಪಿಕೊಳ್ಳೋಣ.

ಕುವೆಂಪು ಅವರ 'ಪಕ್ಷಿಕಾಶಿ' ಎಂಬ ಕವನ ಸಂಕಲನ ನಮಗೆ ಪಿ.ಯು.ಸಿ.ಯಲ್ಲಿ ಪಠ್ಯ ಪುಸ್ತಕವಾಗಿತ್ತು. ಅದರಲ್ಲಿರುವ 'ದೇವರು ರುಜು ಮಾಡಿದನು' ಎಂಬ ಕವನವನ್ನು ಮರೆಯುವಂತೆಯೇ ಇಲ್ಲ!

ಒಮ್ಮೆ ಕುವೆಂಪು ಅವರು ಮಲೆನಾಡಿನ ಸಿಬ್ಬಲು ಗುಡ್ಡೆಯ ಹೊಳೆಯಲ್ಲಿ ಮೀಯುತ್ತಿದ್ದಾಗ ಇದ್ದಕ್ಕಿದ್ದಂತೆ ಆಕಾಶದಲ್ಲಿ ಹಕ್ಕಿಗಳ ಸಾಲೊಂದು ಕಂಡಿತಂತೆ.

ದೃಶ್ಯದಿಗಂತದಿನೊಮ್ಮೆಯೆ ಹೊಮ್ಮಿ
ಗಿರಿ ವನ ಪಟದಾಕಾಶದಲಿ
ತೇಲುತ ಬರಲ್ಕೆ ಬಲಾಕ ಪಂಕ್ತಿ
ಲೇಖನ ರೇಖಾನ್ಯಾಸದಲಿ,
ಅವಾಙ್ಮಯ ಛಂದಃಪ್ರಾಸದಲಿ,

ಆ ಹಕ್ಕಿಗಳ ಸಾಲು ರೇಖೆ ರೇಖೆಯಾಗಿ ಏನೋ ಬರೆದಂತೆ, ಶಬ್ದಕ್ಕೆ ಮೀರಿದ ಛಂದಸ್ಸು, ಪ್ರಾಸವನ್ನು ಹೊಂದಿರುವಂತೆ ಕಂಡಿತಂತೆ ಅವರಿಗೆ! ಆಗ ಅವರ ಮನಸ್ಸಿನಲ್ಲಿ ಮೂಡಿದ ಮಾತುಗಳು ರಸಾನುಭೂತಿ, ಕಬ್ಬಿಗನ ಕಲ್ಪನೆ ಮತ್ತು ಭಾವ ಪರವಶತೆಯ ಒಂದು ರಸ ಪಾಕ!

ಸೃಷ್ಟಿಯ ರಚನೆಯ ಕುಶಲಕೆ ಚಂದಕೆ
ಜಗದಚ್ಚರಿಯಂದದ ಒಪ್ಪಂದಕೆ
ಚಿರಚೇತನ ತಾನಿಹೆನೆಂಬಂದದಿ
ಬೆಳ್ಳಕ್ಕಿಯ ಹಂತಿಯ ಆ ನೆವದಿ
ದೇವರು ರುಜು ಮಾಡಿದನು
ರಸವಶನಾಗುತ ಕವಿ ಅದ ನೋಡಿದನು!

ಆ ಹಕ್ಕಿಗಳ ಸಾಲು ಈ ಸೃಷ್ಟಿ ಎಂಬ ಅಮೂಲ್ಯವಾದ, ಅದ್ಭುತವಾದ, ಅಚ್ಚರಿಯನ್ನು ಕಾಪಾಡುವ ಚಿರಚೇತನವಾಗಿ ತಾನು ಇದ್ದೇನೆಂಬ ಒಪ್ಪಂದಕ್ಕೆ ದೇವರು ರುಜು ಮಾಡಿದಂತೆ ಕಡಿತಂತೆ. ಭಾವ ಪರವಶರಾಗಿ ಕವಿ ಅದನ್ನು ನೋಡಿದರಂತೆ !

ಈ ಕವನವನ್ನು ಮೊದಲ ದಿನದ ಕ್ಲಾಸಿನಲ್ಲೇ ನಮಗೆ ಬೋಧಿಸಿದವರು ತಿಪ್ಪೇರುದ್ರ ಸ್ವಾಮಿಯವರು. ಅವರ ಒಂದೊಂದು ಕ್ಲಾಸ್ ಕೂಡ ಒಂದೊಂದು ರೋಮಾಂಚಕಾರಿ ಅನುಭವವಾಗಿತ್ತು ಅಂದರೆ ಅದು ಖಂಡಿತ ಅತಿಶಯೋಕ್ತಿಯಲ್ಲ. ಈ ಕವನವನ್ನು ಓದಿ, ಅದರ ಅರ್ಥ ವಿವರಣೆಯನ್ನು ಕೇಳಿದಾಗ ಅಲ್ಲಿಯವರೆಗೂ ಒಣ ತತ್ವಗಳಲ್ಲಿ, ಹಳೆಯ ಕಂದಾಚಾರಗಳಲ್ಲಿ ಬಂಧಿತವಾಗಿ ನನ್ನ ಮನಸ್ಸಿನ ಮೂಲೆಯಲ್ಲೆಲ್ಲೋ ಇದ್ದ ದೇವರೆಂಬ ಕಲ್ಪನೆ ಇದ್ದಕ್ಕಿದ್ದಂತೆ ತನ್ನ ಶೃಂಖಲೆಗಳನ್ನೆಲ್ಲ ಕಿತ್ತೊಗೆದು ಸರ್ವಾಂತರ್ಯಾಮಿಯಾಗಿ ತನ್ನ ನಿಜ ರೂಪದಲ್ಲಿ ನಿಂತಂತೆ, ಆ ಭಗವಂತನ ಆನಂದಮಯ ಸ್ವರೂಪ ಪ್ರಕೃತಿ ಸೌಂದರ್ಯದಲ್ಲಿ ತಾನೇತಾನಾಗಿ ವಿಜೃಂಭಿಸಿದಂತೆ, ಆ ಸೌಂದರ್ಯವನ್ನು ಆರಾಧಿಸಿದ ಪ್ರತಿಯೊಬ್ಬರೂ ದೇವರ ಆರಾಧನೆ ಮಾಡಿದಂತೆ ಎನ್ನಿಸಿ ಮನಸ್ಸು ಪುಳಕಿತವಾಗಿತ್ತು!

## ವೈಕುಂಠವಿದೆ ನಿಸರ್ಗದಲಿ

ಕುವೆಂಪು ಅವರ ಅನೇಕ ಕವನಗಳಲ್ಲಿ ''ವೈಕುಂಠವಿದೆ ನಿಸರ್ಗದಲಿ'' ಎಂಬ ಮಾತು ಬೇರೆ ಬೇರೆ ರೀತಿಯಲ್ಲಿ ಧ್ವನಿತವಾಗುತ್ತದೆ. ಅವರ 'ಪ್ರಕೃತಿ ಉಪಾಸನೆ' ಎಂಬ ಕವನದ ಈ ಸಾಲುಗಳನ್ನು ನೋಡಿ:

ಯಾವ ಗುಡಿ
ಮಿಗಿಲು ಈ ಭುವನ ದೇವಾಲಯಕೆ ? ಮೇಣಾವ
ವಿಗ್ರಹಂ ಮೀರಿರುವುದೀ ಚೈತ್ರ ಪಂಚಮಿಯ
ಪುಣ್ಯ ಪ್ರಭಾತದಲಿ, ದೂರದ ದಿಗಂತದಿಂ
ಪ್ರತ್ಯಕ್ಷವಾಗಿರುವ ಭವ್ಯ ಸುಂದರ ದಿವ್ಯ
ಸೂರ್ಯ ದೇವನಿಗೆ ? ಮೇಣಾವುದಾರಾಧನೆಯು
ಉಪಮಾನವೀ ನಿರುಪಮ ಕಲಾ ಉಪಾಸನೆಗೆ ?

ಪ್ರಕೃತಿಯ ಸೌಂದರ್ಯದಲ್ಲಿ ಶಿವನನ್ನು ಕಾಣದ ಕವಿ ಕುರುಡ ಎನ್ನುತ್ತಾರೆ ಕುವೆಂಪು ಅವರು. ಒಬ್ಬ ವ್ಯಕ್ತಿಯ ಕಣ್ಣುಗಳಲ್ಲಿ ಅವನ ಆತ್ಮದ ಬೆಳಕು ಪ್ರಜ್ವಲಿಸಿದಂತೆ ಪ್ರಕೃತಿಯಲ್ಲಿ ಶಿವ ಪ್ರಜ್ವಲಿಸುತ್ತಿದ್ದಾನೆ. 'ಶಿವನಿಲ್ಲದೆ ಸೌಂದರ್ಯವೆ ? ಶವ ಮುಖದ ಕಣ್ಣೊ' ಒಂದು ಶವದ ಕಣ್ಣುಗಳಲ್ಲಿ ಯಾವ ಬೆಳಕೂ ಪ್ರಜ್ವಲಿಸುವುದಿಲ್ಲ. ಅದೇ ಕಣ್ಣು ಅದೇ ರೆಪ್ಪೆ ಅದೇ ಕಣ್ಣ ಗೊಂಬೆ.... ಆದರೆ ಇಲ್ಲವಾಗಿರುವುದು ಆತ್ಮದ ಬೆಳಕು. ಹಾಗೇ ಪ್ರಕೃತಿಯಲ್ಲಿ ಶಿವನಿಲ್ಲದೆ ಸೌಂದರ್ಯವನ್ನು ಕಾಣಲಾಗದು. 'ಶಿವ ಕಾಣದೆ ಕವಿ ಕುರುಡನೊ: ಶಿವ ಕಾವ್ಯದ ಕಣ್ಣೊ.' ಪ್ರಕೃತಿಯಲ್ಲಿ ಶಿವನನ್ನು ಕಂಡು ವರ್ಣಿಸಿದಾಗ ಮಾತ್ರ ಆ ಕವನ ಸಾರ್ಥಕ್ಯ ಪಡೆಯುತ್ತದೆ ಎಂಬ ಭಾವ ಅವರದು.

'ಬಾ ಫಾಲ್ಗುಣ ರವಿ ದರ್ಶನಕೆ' ಕವನದ ಸಾಲುಗಳು:

ವರ್ಣನದಿಂದ್ರಿಯ ನಂದನವನು ದಾಂಟುತೆ ದರ್ಶನ ಮುಕ್ತಿಯ ಸೇರಿ
ವ್ಯಕ್ತಿತೆ ಮೈ ಮರೆವುದು ಸೌಂದರ್ಯ ಸಮಾಧಿಯೊಳಾನಂದವ ಹೀರಿ:
ಸರ್ವೇಂದ್ರಿಯ ಸುಖನಿಧಿ ಅಲ್ಲಿ; ಸರ್ವಾತ್ಮನ ಸನ್ನಿಧಿ ಅಲ್ಲಿ;
ಸಕಲಾರಾಧನ ಸಾಧನ ಬೋಧನದನುಭವರಸ ತಾನಹುದಲ್ಲಿ!

ಪ್ರಕೃತಿ ಸೌಂದರ್ಯದಲ್ಲಿ ತನ್ಮಯನಾಗುವ ರಸಋಷಿಗೆ ಅದಕ್ಕಿಂತ ಹೆಚ್ಚಿನ ಯಾವ ಸಾಧನೆ, ಬೋಧನೆಯೂ ಬೇಕಾಗಿಲ್ಲ. ಈ ಬಗೆಯ ರಸಾನುಭವವು ಭಾವಕ್ಕೆ ಮಾತ್ರ ದಕ್ಕುವ, ಬುದ್ಧಿಯ ಅಳವಿಗೆ ಮೀರಿದ ಅನುಭವ! ಇದನ್ನು ಕುವೆಂಪು 'ಬುದ್ಧಿಯರಿಯದ ಸಿದ್ಧಿ ಭಾವ ಗೋಚರವಿಲ್ಲಿ, ವ್ಯಕ್ತಿತ್ವವೇ ಜ್ವಾಲೆಯಾಗಿ ಉರಿಯುವುದಿಲ್ಲಿ' ಎಂದು ವರ್ಣಿಸುತ್ತಾರೆ. ಯೋಗಿಯೊಬ್ಬ ಹಲವು ಜನ್ಮಗಳ ಸಂಸ್ಕಾರದಿಂದ, ಸಾಧನೆಯಿಂದ ಹೇಗೆ ಯೋಗಸಮಾಧಿಯನ್ನು ಸೇರುತ್ತಾನೋ ಹಾಗೆ ಕವಿ ಪ್ರಕೃತಿ ಉಪಾಸನೆಯಿಂದ ಭಾವ ಸಮಾಧಿಯನ್ನು ಸೇರುತ್ತಾನೆ.

ಸುಂದರ ಮಹೇಶ್ವರನ ರಸಮಯ ಶರೀರವಿದು
ವಿಶ್ವರೂಪದಿ ನಮಗೆ ತೋರುತಿದೆ. ಜೀವನಂ
ಕ್ಷಣಕ್ಷಣಕೆ ಮುಟ್ಟುತಿಹುದಾತನಂ ಘ್ರಾಣದಲಿ
ಸ್ಪರ್ಶದಲಿ ರುಚಿಯಲ್ಲಿ, ಶ್ರೋತ್ರ, ದೃಷ್ಟಿಗಳಲ್ಲಿ
ಎದೆ ತುಂಬಿ ಬಾಳುವುದೆ ಪ್ರಾಣ ಕರ್ಪೂರಮಂ
ಹೊತ್ತಿಸೆತ್ತಿದ ಮಂಗಳಾರತಿ....

(ಪ್ರಕೃತಿ ಉಪಾಸನೆ)

ನಮ್ಮ ಸಕಲೇಂದ್ರಿಯಗಳನ್ನು ಬಿಚ್ಚು ಮನಸ್ಸಿನಿಂದ ತೆರೆದಿಟ್ಟುಕೊಂಡು 'ಸುಂದರ ಮಹೇಶ್ವರನ ರಸಮಯ ಶರೀರ'ವಾದ ಈ ಜಗತ್ತನ್ನು ಅನುಭವಿಸಿದರೆ ಸಾಕು. ಅದೇ ನಮ್ಮ

ಪ್ರಾಣ ಕರ್ಪೂರವನ್ನು ಹೊತ್ತಿಸಿ ದೇವರಿಗೆ ಎತ್ತಿದ ಮಂಗಳಾರತಿ. ಅಬ್ಬ! ಎಂತಹ ಭವ್ಯ ಕಲ್ಪನೆ! ದಿನದಿನದ ಜೀವನದಲ್ಲಿ ನಮ್ಮ ಕಣ್ಣೆದುರಿಗೇ ಹಾಸಿರುವ ಪ್ರಕೃತಿಯ ಸೌಂದರ್ಯದಲ್ಲಿ ಶಿವನನ್ನು ಕಾಣದೆ, ಅನುಭವಿಸದೆ, ಉಪಾಸನೆ ಮಾಡದೆ ಇನ್ನೆಲ್ಲಿ ತಾನೆ ಅವನನ್ನು ಹುಡುಕಲಾದೀತು! ''ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್'' ಎಂಬ ಈಶೋಪನಿಷತ್ತಿನ ಮಾತು ಕುವೆಂಪು ಅವರ ಕವನಗಳಲ್ಲಿ ಮತ್ತೆ ಮತ್ತೆ ಮರುಧ್ವನಿಸುತ್ತದೆ.

ಪ್ರಕೃತಿಯಲ್ಲಿ ಶಿವನಿರುವುದು ಮಾತ್ರವಲ್ಲ, ಆ ಪ್ರಕೃತಿಯ ಕೂಸೇ ಆಗಿರುವ ತನ್ನಲ್ಲೂ ಶಿವನಿದ್ದಾನೆ. ಪ್ರಕೃತಿಯಲ್ಲಿ ಪ್ರತಿಫಲಿಸಿರುವ ಭಗವಂತನ ಆನಂದಮಯ ಸ್ವರೂಪ ತನ್ನದೇ ಒಂದು ವಿಸ್ತೃತ ರೂಪ. ಯಾಕೆಂದರೆ ತಾನೂ ಆ ಪರಮಾತ್ಮನ ಒಂದಂಶವೇ ಎಂಬರ್ಥ ಬರುವ ಈ ಸಾಲುಗಳನ್ನು ನೋಡಿ:

ನೀರಾಗಿಹ ಕನ್ನಡಿಯೊಲು
ನಲಿಯುತ್ತಿಹ ಕೊಳದಿ
ದಡದಲ್ಲಿಯ ಗಿಡ ಬಳ್ಳಿಯು
ನಡುಗುತ್ತಿವೆ ಜಲದಿ.

ಆ ನೀಲಿಯ ಮುಗಿಲೋಳಿಯ
ಪಡಿನೆಳಲೀ ಬಾನು;
ಕಾಣೆನು ನಾನಾದರು ಇದೆ
ಪ್ರತಿಬಿಂಬದ 'ನಾನು'!

(ಮಾಗಿಯ ಹಗಲು)

ಬಾನಿನಲ್ಲಿ ನನಗೆ ಕಾಣಿಸದೆ ಹೋದರೂ 'ನಾನು' ಪ್ರತಿಬಿಂಬಿತವಾಗಿದ್ದೇನೆ ಎಂದು ಹೇಳುವಾಗ ಪುರಂದರ ದಾಸರ 'ಕರಿಯು ಕನ್ನಡಿಯೊಳಗೊ: ಕನ್ನಡಿಯು ಕರಿಯೊಳಗೊ' ಹಾಡು ನೆನಪಾಗುತ್ತದೆ. ''ಅಹಂ ಬ್ರಹ್ಮಾಸ್ಮಿ'', ''ತತ್ವಮಸಿ'' ಮುಂತಾದ ಗಹನವಾದ ಸೂತ್ರಗಳನ್ನು ಲೀಲಾಜಾಲವಾಗಿ, ಸರಳವಾಗಿ ಮೈಗೂಡಿಸಿಕೊಂಡ ಕವನವಿದು.

## ಪ್ರಕೃತಿ ನೀಡಿದ ಸಂದೇಶ

ಕುವೆಂಪು ಅವರಂತೆ ಇತರ ಅನೇಕ ಕವಿಗಳು ಲೌಕಿಕದಲ್ಲಿ ಅಲೌಕಿಕವನ್ನು ಕಂಡವರು ಇದ್ದಾರೆ. ಆ ಬಗ್ಗೆ ಬೆರಗು, ವಿಸ್ಮಯವನ್ನು ತಾಳಿದ್ದಾರೆ. ಆದರೆ, ಕುವೆಂಪು ಅವರಲ್ಲಿ ಕಾಣುವ ಒಂದು ವೈಶಿಷ್ಟ್ಯವೆಂದರೆ, ಅವರಿಗೆ ಹಲವು ಬಾರಿ ಪ್ರಕೃತಿಯ ಯಾವುದಾದರೊಂದು ಮನೋಹರ ದೃಶ್ಯ ಆಧ್ಯಾತ್ಮಿಕ ಸಂದೇಶವನ್ನು ನೀಡುತ್ತಿರುವಂತೆ ಭಾಸವಾಗುತ್ತದೆ. ಇದಕ್ಕೆ ಮೂರು ಉದಾಹರಣೆಗಳನ್ನು ಈ ಕೆಳಗೆ ಕೊಡಲಾಗಿದೆ.

## ನೋಡಿದರೆಲ್ಲಿಯು ಚೈತನ್ಯ

ಅವರ 'ಶರತ್ಕಾಲದ ಸೂರ್ಯೋದಯದಲಿ' ಎಂಬ ಕವನದ ಸಾಲುಗಳನ್ನು ನೋಡಿ: ಒಂದು ಶರತ್ಕಾಲದ ಬೆಳಗಿನಲ್ಲಿ ಹುಲ್ಲಿನ ಮೇಲಿನ ಇಬ್ಬನಿಯ ಸೊಬಗು 'ಉರಿ-ಕಿಡಿ ಕಿಡಿ-ಉರಿ'ಯಾಗಿ ಮೆರೆಯುವುದನ್ನು ಕಂಡು ಭಾವಾವೇಶಗೊಂಡ ಕವಿ ಹೀಗೆ ಯೋಚಿಸುತ್ತಾರೆ :

ಕಲ್ಲಿನ ಯುಗಯುಗದಿರವೂ ಶೂನ್ಯ,
ಹುಲ್ಲಿನ ಅರೆ ನಿಮಿಷದ ಹನಿ ಧನ್ಯ:
ತಳತಳಿಪುದೆ ಸಾರ್ಥಕ ಪುಣ್ಯ :

ಎಂದಾಲೋಚಿಸುತಿರೆ, ಬಗೆ ಮರಳಿ
ಉರಿಯಿತು ಜ್ವಾಲಾರೂಪದಿ ಕೆರಳಿ:
ನೋಡಿದರೆಲ್ಲಿಯು ಚೈತನ್ಯ!
ಕಲ್ಲಲಿ, ಮಣ್ಣಲಿ, ಹುಲ್ಲಲಿ, ಹುಡಿಯಲಿ,
ನೀರಿನ ಹನಿಯಲಿ, ಬೆಂಕಿಯ ಕಿಡಿಯಲಿ,
ನನ್ನಲಿ, -ಎಲ್ಲಿಯು ಚೈತನ್ಯ!
......
ಚೇತನ ಮೂರ್ತಿಯು ಆ ಕಲ್ಲು:-
ತೆಗೆ! ಜಡವೆಂಬುದೆ ಸುಳ್ಳು!

ಇಡೀ ಪ್ರಕೃತಿಯೇ ಚೈತನ್ಯಮಯ. ಜಡವೆಂಬ ಕಲ್ಪನೆಯೇ ಸುಳ್ಳು ಎಂದು ಇದ್ದಕ್ಕಿದ್ದಂತೆ ಮನಗಂಡರು ಅವರು ಆ ಸುಂದರ ಬೆಳಗಿನಲ್ಲಿ. ಈಗ ವೈಜ್ಞಾನಿಕವಾಗಿಯೂ ಪ್ರತಿಯೊಂದು ವಸ್ತುವೂ ಅಣು ಅಥವಾ ಆಟಂಗಳಿಂದ ನಿರ್ಮಿಸಲ್ಪಟ್ಟಿದ್ದು ಒಂದೊಂದು ಆಟಂ (atom) ಕೂಡ ಘನೀಕೃತವಾದ ಚೈತನ್ಯ ಅಥವಾ ಎನರ್ಜಿ (energy) ಎಂಬುದು ವೈಜ್ಞಾನಿಕ ಸಿದ್ಧಾಂತ. ಅಲ್ಲದೆ ಪ್ರತಿಯೊಂದು ಆಟಂ ಸುತ್ತಲೂ ಎಲೆಕ್ಟ್ರಾನ್ (electron) ಮೋಡ ನಿರಂತರ ಚಲನೆಯಲ್ಲಿರುತ್ತದೆ ಎಂಬ ವಿಷಯವೂ ಕೂಡಾ ಕುವೆಂಪು ಅವರು ರಸದೃಷ್ಟಿಯಲ್ಲಿ ಮನಗಂಡ ಸತ್ಯವನ್ನೇ ಅನುಮೋದಿಸುತ್ತಿದೆ!

ಹೀಗೆ ಒಮ್ಮೆಲೆ ಏನೋ ಜ್ಞಾನೋದಯವಾದಂತೆ, ಯಾವುದೋ ಕಿಡಿ ತಾಗಿ ವ್ಯಕ್ತಿತ್ವವೇ ಹೊತ್ತಿ ಉರಿದಂತೆ, ಆ ಜ್ವಾಲೆಯಲ್ಲಿ ಒಂದು ಚಿರಂತನ ಸತ್ಯ ವಿದಿತವಾದಂತೆ ಕಾಣುವ ಈ ಶೈಲಿ ಕುವೆಂಪು ಅವರಿಗೇ ವಿಶಿಷ್ಟವಾದದ್ದು.

ಪ್ರತಿಭೆಯ ಹೋಮಾಗ್ನಿಯ ಮೇಲೆ ಕವಿ ಮನ ತಾನುರಿದುರಿದೇಳೆ
ಮರಗಿಡದಲಿ ಜಡದೊಡಲಲಿ ಇದೆಕೋ ಸ್ಪಂದಿಸುತಿದೆ ಭಾವಜ್ವಾಲೆ!
(ಬಾ ಫಾಲ್ಗುಣ ರವಿ ದರ್ಶನಕೆ)

ಚೈತನ್ಯಕೆ ಜಡವೆಂಬುದು
ಕವಿಭಾವಕೆ ಭಾಷೆ;
ಈ ಭುವನದ ಭವ್ಯಾಕೃತಿ
ಆತ್ಮನ ಒಂದಾಶೆ!

(ಹುಣ್ಣಿಮೆ ರಾತ್ರಿ)

ಮುಂತಾದ ಅನೇಕ ಸಾಲುಗಳು ಜಡ-ಚೇತನಗಳ ಪರಸ್ಪರ ಸಂಬಂಧ ಎಂಬ ಗಹನವಾದ ಆಧ್ಯಾತ್ಮಿಕ ತತ್ವವನ್ನು ನವಿರಾದ ಭಾಷೆಯಲ್ಲಿ ಸಾಮಾನ್ಯರಿಗೂ ತಿಳಿಯಪಡಿಸುವಂತೆ ವಿವರಿಸುತ್ತವೆ.

## ಇರುವುದೆ ಮುಕ್ತಿಯ ಆನಂದ

ಎಲ್ಲ ಋಷಿಗಳೂ, ಸಾಧು ಸಂತರೂ ಹೇಳುವುದೊಂದೇ ಮಾತನ್ನು: 'ದೇವರನ್ನು ಜೀವನದ ಅರ್ಥವನ್ನು ಹೊರಗೆಲ್ಲೋ ಹುಡುಕಿಕೊಂಡು ಹೋಗಬೇಕಾಗಿಲ್ಲ. ಅಲ್ಲೆಲ್ಲಿಯೂ ಉತ್ತರ ಸಿಗುವುದಿಲ್ಲ. ನೀನಿನ್ನೇನೂ ಮಾಡಬೇಕಾಗಿಲ್ಲ. ಸಾವಧಾನವಾಗಿ ಅಂತರ್ಮುಖಿಯಾಗಿ ನಿನ್ನಲ್ಲೇ ತನ್ಮಯನಾಗು, ಪ್ರಕೃತಿಯಲ್ಲಿ ಒಂದಾಗು. ಆಗ...... ಅಲ್ಲಿ.... ಆನಂದದ, ಅಲೌಕಿಕದ, ಮುಕ್ತಿಯ ದಿವ್ಯ ಕಿರಣದ ಸ್ಪರ್ಶವಾಗುತ್ತದೆ' - ಎಂಬುದು. 'ಮಾಡು'ವಿಕೆಗಿಂತಲೂ 'ಇರು'ವಿಕೆಯೇ ಮುಖ್ಯ - 'Being is more important than doing' ಎಂದು. ಈ ಒಂದು ಗಾಢವಾದ, ಆಳವಾದ ಸಂದೇಶವನ್ನು ಕುವೆಂಪು ಅವರು ಸರಳವಾಗಿ, ಸುಂದರವಾಗಿ ಕವನದಲ್ಲಿ ಮೂಡಿಸಿರುವ ಬಗೆ ನೋಡಿ:

ದನಕರುಗಳು ಬಯಲಲಿ ಮೇಯುತ 'ಇವೆ';
ಗಿರಿತರುಗಳು ಬದುಕನು ಸವಿಯುತ 'ಇವೆ';
ಅರಿವಾಸೆಯ ಮಾಯೆಗೆ ಬೀಳದೆ 'ಇವೆ';
ಇರುವಿಕೆಯಾನಂದದಿ ನಲಿಯುತ 'ಇವೆ';
ಇರುವಿಕೆಗಿಂತಲು ಹೆಚ್ಚಿನ ಗೋಜಿಗೆ ಹೋಗದಿವೆ!
'ಅರಿವಾ'ಸೆಯೆ ಮಾಯಾ ಬಂಧ;
'ಇರು'ವುದೆ ಮುಕ್ತಿಯ ಆನಂದ!

(ಇಂತಹ ಸುಂದರ ಪ್ರಾತಃಕಾಲದಿ)

ಎಲ್ಲೆಲ್ಲಿಯು ಯಾರಲ್ಲಿಯು
ಉದ್ವೇಗವೆ ಇಲ್ಲ;
ಸೂಸುತ್ತಿದೆ ಹರಿಯುತ್ತಿದೆ
ತುಂಬುತ್ತಿದೆ ತುಳುಕುತ್ತಿದೆ
ಬಾಳಿನ ಜೇನ್ಸೆಲ್ಲ!

ಎಲ್ಲವು 'ಇವೆ'! ಸುಮ್ಮನೆ 'ಇವೆ'!
ಅರಿಯುವ ಗೋಜಿಲ್ಲ!
ಮನುಜನು ನಾನೆನ್ನೆದೆಯಲಿ
ಅರಿವೆಂಬುವ ಬಾವು
ಕೀವಾಗಿರೆ ನೋವಾಗಿರೆ
ಬಾಳ್ಬೆಲ್ಲವೆ ಬೇವು!

(ಆಕಾಶದ ಹೆಬ್ಬಯಲಲಿ)

## ಶಿಲಾತಪಸ್ವಿ ಮತ್ತು ಬಿಗ್ ಬ್ಯಾಂಗ್ ಥಿಯರಿ

ಕುವೆಂಪು ಅವರ ಕವನ 'ಶಿಲಾ ತಪಸ್ವಿ' ವಿಜ್ಞಾನ ಮತ್ತು ಕಲೆಯ ಒಂದು ಅಪರೂಪದ ಸುಂದರ ಸಂಗಮ. ಒಬ್ಬ ದಾರ್ಶನಿಕ, ದ್ರಷ್ಟಾರ ಕವಿಗಲ್ಲದೆ ಮತ್ತ್ಯಾರಿಗೂ ಇಂತಹ ಕವನ ಬರೆಯಲು ಸಾಧ್ಯವಾಗದು. ಇದನ್ನು ಓದಿದಾಗ ಬೋಳು ಬೋಳಾಗಿ ವಸ್ತು ಸ್ಥಿತಿಯನ್ನು ದಾಖಲಿಸುವ ವಿಜ್ಞಾನ, ಒಮ್ಮೆಲೆ ಲಲಿತ ಕಲೆಯ ನವಿರಾದ ರೇಶಿಮೆ ಪತ್ತಲ ಉಟ್ಟು ಸರ್ವಾಲಂಕಾರ ಭೂಷಿತೆಯಾಗಿ ಕಂಗೊಳಿಸಿದಂತೆ ಭಾಸವಾಗುತ್ತದೆ! ಸೃಷ್ಟಿಯ ಪೂರ್ವದಲ್ಲಿ ಎಲ್ಲೆಡೆಯೂ ಶೂನ್ಯವಾಗಿದ್ದು ಒಮ್ಮೆಲೆ ಒಂದು ದೊಡ್ಡ ಆಸ್ಫೋಟವಾಗಿ (Big Bang) ಸೃಷ್ಟಿಯ ಉಗಮವಾಯಿತು ಎಂಬ ಸಿದ್ಧಾಂತವನ್ನು ನಾವೆಲ್ಲ ಕೇಳಿದ್ದೇವೆ. ಇದನ್ನು ಮಲೆನಾಡಿನಲ್ಲಿ ಒಂದು ಕಲ್ಲು, ಕವಿಗೆ ಕಥೆ ಹೇಳಿದಂತೆ ಮಾಡಿ, ಕವನದಲ್ಲಿ ಮೂಡಿಸಿರುವ ಕೌಶಲ್ಯವನ್ನು ನಿಜವಾಗಿಯೂ ಮೆಚ್ಚಬೇಕಾದ್ದು! ಕುವೆಂಪು ಅವರ ಸುಂದರ ನಾದ ಲಯಭರಿತ ಶೈಲಿಯಲ್ಲಿ ಬಿಗ್ ಬ್ಯಾಂಗ್ ಥಿಯರಿಯನ್ನು ನೋಡಿ :

(ಸೃಷ್ಟಿ ಪೂರ್ವದಲ್ಲಿ)
ಕಾಲವಲ್ಲಿರಲಿಲ್ಲ; ದೇಶವಲ್ಲಿರಲಿಲ್ಲ;
ಗ್ರಹ ಕೋಟಿ ಶಶಿ ಸೂರ್ಯ ತಾರಕೆಗಳಿರಲಿಲ್ಲ;
ಬೆಳಕು ಕತ್ತಲೆ ಎಂಬ ಭೇದವಿನಿತಿರಲಿಲ್ಲ.
ಮಮಕಾರ ಶೂನ್ಯದಲಿ ಮುಳುಗಿದ್ದುವೆಲ್ಲ!

....

ಕಾಲ ದೇಶದ ಕಡಲ ಕಡೆಹದಲಿ ಸಿಕ್ಕಿ:-
ಆದಿಮ ಲಯಾಗ್ನಿ ಹೊರಹೊಮ್ಮಿದುದು ಉಕ್ಕಿ
ಸುತ್ತಿಹುದು; ಚಿಮ್ಮಿಹುದು ದೆಸೆದೆಸೆಗೆ ಹಬ್ಬಿ
ಘೂರ್ಣಿಸುತೆ ವಿಶ್ವದ ಅನಂತತೆಯನೇ ತಬ್ಬಿ

ಒಬ್ಬ ಕವಿ ಭಾವಾತ್ಮಕವಾಗಿ ತನ್ನ ಪ್ರಜ್ಞಾಶಕ್ತಿಯ ಆಳವಾದ ಪದರದಲ್ಲಿ ತಾನೂ ಆ ಆದಿಮ ಲಯಾಗ್ನಿಯಲ್ಲಿ ಹೊರಹೊಮ್ಮಿದ ಒಂದು ಅಣುವಿನ ದೆಸೆಯನ್ನು ಅನುಭವಿಸಿದಂತಿವೆ ಈ ಮಾತುಗಳು!

ಆಮೇಲೆ ಹರಿದ ದಹದಹಿಸುವ ಲಾವಾರಸ ಪ್ರವಾಹವನ್ನು 'ಭೀಷ್ಮ ಲಯ ಶಿಖಿ ಪ್ರವಾಹ', 'ನಿದ್ದೆಯಿಂದೆದ್ದ ಪರಬ್ರಹ್ಮ ದೇಹ', 'ಮಹಾ ಉಜ್ವಲ ಪ್ರೇಮ ಘನವಹ್ನಿ' ಎಂದು ಕರೆಯುತ್ತಾರೆ ಕವಿ. ಆ ಅಗ್ನಿಜಲದಲ್ಲಿ ನಿಲದೆ ಸಂಚರಿಸಿದ ಕಲೆ ತನ್ನಲ್ಲಿ ಇನ್ನೂ ಉಳಿದಿದೆ ನೋಡು ಎಂದು ಆ ಶಿಲೆ ತನ್ನ ಮೈಯ ಗುರುತುಗಳನ್ನು ತೋರಿಸಿತಂತೆ. ಅದನ್ನು ಕಂಡ ಕವಿ ಬೆಚ್ಚಿದರಂತೆ! 'ಆ ಸನಾತನ ಶೈಲ ತಪಸಿಯೆದೆಯಾಳದಲಿ ಯುಗಯುಗಗಳಿನ್ನು ಮವಿತಿಹವಲ್ಲಿ; ನಾಳದಲಿ ಕಲ್ಪಗಳು ಆತ್ಮಕಥೆ ಹೇಳುತಿವೆ' ಎಂದು ಆ ಗುರುತುಗಳನ್ನು ವರ್ಣಿಸುತ್ತಾರೆ ಕವಿ.

ತನ್ನ ಜಡತನದ ಬಾಳಿಗೆ ಬೇಸತ್ತು ಚೈತನ್ಯಕ್ಕಾಗಿ ಹಾತೊರೆಯುತ್ತಿರುವ ಆ ಶಿಲೆ 'ಓ ಕಬ್ಬಿಗನೆ ನಿನ್ನೊಳಿಹ ಕಲೆಗೆ ಶಕ್ತಿಯಿದೆ, ಜಡವ ಚೇತನಗೊಳಿಪ ದಿವ್ಯತರ ಮುಕ್ತಿಯಿದೆ.... ಕವನದಿಂದ ಕಲ್ಗಳೂ ವಾಲ್ಮೀಕಿಯಾಗಿಹರು ಹಿಂದೆ' ಎನ್ನುತ್ತದೆ. ಆ ಕಲ್ಲಿಗೆ ತಾನು ನಿತ್ಯವೂ ಬಂದು ಕವನಗಳನ್ನು ಹಾಡುತ್ತೇನೆ ಎಂದು ಆಶ್ವಾಸನೆ ಇತ್ತು, ಕವಿ ದಾರಿಯ ಕಲ್ಲುಗಳನ್ನು ಅಳುಕಿ ಅಳುಕಿ ಮೆಟ್ಟುತ್ತಾ, ನಿಧಾನವಾಗಿ ಹಿಂದಿರುಗುತ್ತಾನೆ.

ನನಗೆ ಬಹಳ ಮೆಚ್ಚಿಗೆಯಾದ ಕವನ ಇದು. ಯಾಕೆ? ಎಂದು ಕೇಳಿದರೆ ಉತ್ತರ ಹೇಳುವುದು ಕಷ್ಟ! ಕೇವಲ ವಿಜ್ಞಾನದ ಘಟನಾವಳಿಗಳ ನಿರೂಪಣೆಯಾಗಿರದೆ ಇದು ಕಲ್ಪಾದಿಯಲ್ಲಿ ಅಮೂರ್ತವಾಗಿದ್ದ ಈಶ್ವರೀಶಕ್ತಿ ಮೂರ್ತ ರೂಪವನ್ನು ತಾಳಿ ಅಭಿವ್ಯಕ್ತಿ ಪಡೆದಾಗ ಉಂಟಾಗಿರಬಹುದಾದ ಒಂದು ಘಟ್ಟವನ್ನು ಹೃದಯಂಗಮವಾಗಿ ವರ್ಣಿಸಿರುವುದರಿಂದ - ಎಂದು ಉತ್ತರಿಸಿದರೆ ಸೂಕ್ತವಾಗಬಹುದು.

## ಕುವೆಂಪು ವಿಮರ್ಶಕ

ಕುವೆಂಪು ಅವರ ಕವನಗಳ ಬಗ್ಗೆ ಅವರ ಸಮಕಾಲೀನ ವಿಮರ್ಶಕರು ಹಲವು ಟೀಕೆಗಳನ್ನು ಮಾಡಿದ್ದರು. ಮುಖ್ಯವಾಗಿ ಕುವೆಂಪು ಅವರು ಯಾವುದೋ ಒಂದು ಆದರ್ಶ ಲೋಕದಲ್ಲಿ ಕವನಗಳನ್ನು ಬರೆಯುತ್ತಿದ್ದು, ದಿನದಿನದ ಬದುಕಿನ ಜಂಜಾಟದಲ್ಲಿ ಹೆಣಗುತ್ತಿರುವ ಶ್ರೀಸಾಮಾನ್ಯನಿಗೆ ಅವು ಕೈಗೆಟುಕದ ತುತ್ತಾಗಿವೆ ಎಂಬುದು, ಹೊಟ್ಟೆ ಪಾಡಿಗಾಗಿ ಶ್ರಮಿಸುತ್ತಿರುವ ಜನರಿಗೆ ಪಾರಮಾರ್ಥಿಕದ ಬಗ್ಗೆ ಉಪದೇಶ ಮಾಡಿ ಏನು ಪ್ರಯೋಜನ ಎಂಬುದು, ಅವರ ಶೈಲಿ ಕಬ್ಬಿಣದ ಕಡಲೆಯಂತಿದೆ ಎಂಬುದು ಇವುಗಳ ಸಂದೇಶವಾಗಿತ್ತು. ವಿಮರ್ಶಕರ ಕಟು ವಿಮರ್ಶೆಗಳಿಗೆ ಒಬ್ಬೊಬ್ಬ ಕವಿಯೂ ಒಂದೊಂದು ರೀತಿಯಲ್ಲಿ ಪ್ರತಿಕ್ರಿಯೆ ತೋರುತ್ತಾನೆ. ಅಡಿಗರು 'ಒಳಗಣ್ಣಿನಲ್ಲೋಲದಲಿ ಮೂಡುವ ನೀನು

ಹೊರಗಿನವನಂತೂ ಅಲ್ಲ, ನನ್ನೊಳಗಿನವ' ಎಂದು, ವಿಮರ್ಶೆ ಎಂಬುದು ಹೊರಗಿನಿಂದ ಬಂದಿದ್ದರೂ ಅದು ತನ್ನ ಅಂತರಂಗದ ಮಾತನ್ನೇ ಧ್ವನಿಸುತ್ತದೆ ಎಂಬರ್ಥದಲ್ಲಿ ಹೇಳುತ್ತಾರೆ. ಮುದ್ದಣನಂತೂ ಮನೋರಮೆಯ ಪಾತ್ರದಲ್ಲಿ ವಿಮರ್ಶೆಯನ್ನು ತನ್ನ ಕೃತಿಯ ಮೈಯಲ್ಲೇ ಅಳವಡಿಸುವ ಜಾಣ್ಮೆ ತೋರಿದ್ದಾನೆ. ಬೇಂದ್ರೆಯವರು ತಮ್ಮ 'ಗಾರುಡಿಗ' ಕವನದಲ್ಲಿ ವಿಮರ್ಶಕರ ಬಗ್ಗೆ ತಮಗಿರುವ ಅಸಮಾಧಾನವನ್ನು ವ್ಯಕ್ತಪಡಿಸಿದ್ದಾರೆ. ಕುವೆಂಪು ಅವರು ತಮ್ಮ 'ಪಕ್ಷಿಕಾಶಿ' ಕವನದಲ್ಲಿ ವಿಮರ್ಶಕರಿಗೆ ಹೀಗೆ ಹೇಳುತ್ತಾರೆ.

ಇಲ್ಲಿ ಹುಗಲಿಲ್ಲ ನಿನಗೆ, ಓ ಬಿಯದ:
ಇದು ಪಕ್ಷಿ ಕಾಶಿ!
....
ಕೊಲ್ವ ಬತ್ತಳಿಕೆ ಬಿಲ್ಲು ಬಾಣವನು
ಅಲ್ಲೆ ಇಟ್ಟು ಬಾ;
ಬಿಂಕದುಕುತಿಯನು ಕೊಂಕು ಯುಕುತಿಯನು
ಎಲ್ಲ ಬಿಟ್ಟು ಬಾ,
ಮೈಯ ತೊಳೆದು ಬಾ ಕೈಯ ಮುಗಿದು ಬಾ,
ಹಮ್ಮನುಳಿದು ಬಾ:
ಇಕ್ಷು ಮಧುರಮೆನೆ ಮೋಕ್ಷ ಪಕ್ಷಿಯಲಿ
ನಾಡಿನಾಡಿಯಲಿ ಹಾಡಿ ಹರಿದು ನಲಿ
ದಾಡಬಹುದು ಬಾ!

ತಮ್ಮ ಕವನ ಪ್ರಪಂಚ ಒಂದು ಪಕ್ಷಿಕಾಶಿ ಇದ್ದಂತೆ. ಇಲ್ಲಿಗೆ ಟೀಕೆ, ಕೊಂಕು ಮಾತು ಮುಂತಾದ ಬಿಲ್ಲು ಬಾಣವನ್ನು ಬಿಟ್ಟು ಬಿಚ್ಚು ಮನಸ್ಸಿನಿಂದ, ತೆರೆದ ಹೃದಯದಿಂದ ಮನದಣಿಯೆ ನಲಿದಾಡುವ ಆಶಯ ಇಟ್ಟುಕೊಂಡು ಬಾ – ಎನ್ನುತ್ತಾರೆ. 'ನಾನೇರುವೆತ್ತರಕೆ ನೀನೇರಬಲ್ಲೆಯಾ?' ಎಂದು ವಿಮರ್ಶಕರಿಗೆ ಸವಾಲು ಹಾಕುತ್ತಾರೆ ಇನ್ನೊಂದು ಕಡೆ. ಈ ಮಾತನ್ನು ನೋಡುವಾಗ ಅವರು ಅಧ್ಯಾತ್ಮಿಕತೆಗೆ ದೂರವಾದ ಕೋಪ, ಅಸಮಾಧಾನ ಮುಂತಾದ ಗುಣಗಳಿಂದ ಮುಕ್ತರಾರಲಿಲ್ಲವೇನೋ ಎಂದೆನಿಸುತ್ತದೆ. ಅಧ್ಯಾತ್ಮಿಕತೆಯ ಪರಮಾವಧಿಯನ್ನು ತಲುಪಿದ ವ್ಯಕ್ತಿ ಕೂಡ ದಿನನಿತ್ಯದ ಜೀವನದಲ್ಲಿ ಕ್ರೋಧವನ್ನು ಜಯಿಸಲಾಗದಂತಹ ಪ್ರಸಂಗ ನಮ್ಮ ಪರಂಪರೆಯಲ್ಲಿ ವಿಶ್ವಾಮಿತ್ರರ ಕಾಲದಿಂದಲೂ ಇತ್ತಲ್ಲವೆ ?

ತಮ್ಮ 'ವಿಮರ್ಶಕ' ('ನವಿಲು' ಸಂಗ್ರಹ) ಎಂಬ ಕವನದಲ್ಲಿ ಇವರು ವಿಮರ್ಶಕರನ್ನು ಗೇಲಿ ಮಾಡಿರುವ ಪರಿ ನೋಡಿ.

ಚಂದ್ರನನ್ನು ನೋಡಿ ವಿಮರ್ಶಕ ಹೀಗೆ ಹೇಳುತ್ತಾನೆ:

''ಕಣ್ಣಿಗೆ ಕಾಣುವ ಬೊಮ್ಮನ ಸಿಟ್ಟಿಯೊ
ಳೀ ತಣ್ಗದಿರನೆ ಸುಂದರನು;
....
ಆದರೆ ಬಿಂಬದ ಬಿತ್ತರ ಸಾಲದು!
ಏನಂದರು ಬೆಂಗದಿರನ ಹೋಲದು!
ಅಲ್ಲದೆ ನಡುವೆ ಕಳಂಕವಿದೆ!
ತಾವರೆ ಚೆಲುವಾಗಿರಲೇನಂತೆ ?
ದುಂಬಿಯದರ ಬಂಡುಣಲೇನಂತೆ?
ವಾತಾವರಣದಿ ಪಂಕವಿದೆ!''

ವಿಮರ್ಶಕರು ಸಾಹಿತ್ಯ ಲೋಕದಲ್ಲಿ ಒಂದು ಮುಖ್ಯವಾದ ಸ್ಥಾನವನ್ನು ತುಂಬುತ್ತಾರೆ. ಚಿನ್ನವನ್ನು ಒರೆಗೆ ಹಚ್ಚುವ ಕೆಲಸ ಅವರದ್ದು. ಆದರೆ, ವಿಮರ್ಶಕ ಸಾಹಿತ್ಯ ಎಂಬ ಚಿನ್ನವನ್ನು ಒರೆಗೆ ಹಚ್ಚಿ ಬರೆದ ವಿಮರ್ಶೆಯನ್ನು ಓದುತ್ತಿರುವಾಗಲೇ ಓದುಗರೂ ವಿಮರ್ಶಕನನ್ನು ಒರೆಗೆ ಹಚ್ಚಿ ನೋಡುತ್ತಿದ್ದಾರೆ ಎಂಬುದನ್ನು ಮರೆಯಬಾರದು. ವಿಮರ್ಶೆಯಲ್ಲಿ ಹುರುಳಿಲ್ಲವಾದರೆ ಅಂತಹ ವಿಮರ್ಶೆಯಾಗಲಿ, ವಿಮರ್ಶಕನಾಗಲಿ ಹೆಚ್ಚು ದಿನ ಓದುಗರ ಮನಸ್ಸಿನಲ್ಲಿ ನಿಲ್ಲುವುದಿಲ್ಲ! ಬರವಣಿಗೆ ಅಪ್ಪಟ ಚಿನ್ನವಾಗಿದ್ದರೆ ಯಾವ ವಿಮರ್ಶಕನೂ ಅದರ ಬೆಲೆಯನ್ನು ಇಳಿಸಲಾರ. ಇದನ್ನು ತಿಳಿದು 'ನಾಯಿ ಬೊಗಳಿದರೆ ದೇವಲೋಕ ಹಾಳೆ?' ಎಂಬ ಧೋರಣೆ ತಳೆಯುವುದು ಸಾಹಿತಿಯ ದೊಡ್ಡತನವನ್ನು ತೋರಿಸುತ್ತದೆ. ವಿಮರ್ಶೆ ತನಗೆ ಅನುಕೂಲವಾಗಿಲ್ಲ ಎಂದು ವಿಮರ್ಶಕನನ್ನೇ ಹಳಿಯುವುದು ಸಲ್ಲದು ಎಂದು ನನ್ನ ಭಾವನೆ.

ಕುವೆಂಪು ಅವರ ಕವನಗಳು ಸಾಮಾನ್ಯರ ಎಟುಕಿಗೆ ನಿಲುಕದವು. ಓದುಗರಿಗೆ ಸಹಜವಾಗಿ ದಕ್ಕದ ಇಂತಹ ಕವನಗಳನ್ನು ಬರೆಯುವುದಾದರೂ ಯಾಕೆ? ಎಂದು ಅವರ ಕವನಗಳ ಬಗ್ಗೆ ಬಂದ ಟೀಕೆಯನ್ನು ಈಗ ತಾನೆ ಪ್ರಸ್ತಾಪಿಸಲಾಗಿತ್ತು. ಅಡಿಗರ ಕವನಗಳ ಬಗ್ಗೆಯೂ ಇಂತಹ ಟೀಕೆಗಳು ಬಂದಿದ್ದವು. ಅದಕ್ಕೆ ಉತ್ತರವಾಗಿ ಬಿ.ವಿ.ಕೆದಿಲಾಯರು ಹೇಳಿದ ಮಾತುಗಳು ಕುವೆಂಪು ಅವರಿಗೂ ಅನ್ವಯಿಸುತ್ತವೆ. ಕೆದಿಲಾಯರ ಮಾತುಗಳ ಸಾರಾಂಶ ಹೀಗಿದೆ :

ಗೌರೀಶಂಕರದಂಥ ಉತ್ತುಂಗ ಶಿಖರವನ್ನು ಏರಬಲ್ಲವರು ಎಲ್ಲೋ ಕೈ ಬೆರಳಿನಲ್ಲಿ ಎಣಿಸಬಹುದಾದಷ್ಟು ಜನ ಮಾತ್ರ. ಆದರೂ, ಆ ಶಿಖರ ಉತ್ತುಂಗವಾಗಿ ನಿಂತು ನನ್ನೆತ್ತರಕೆ ನೀನೇರಬಲ್ಲೆಯಾ?- ಎಂದು ಸವಾಲು ಒಡ್ಡುತ್ತಲೇ ಇರುತ್ತದೆ. ಆ ಸವಾಲಿಗೆ ಉತ್ತರವಾಗಿ ನಮ್ಮಲ್ಲಿ ಹಲವರು ಕೈಲಾದಷ್ಟು ಹತ್ತಿಯೇ ಹತ್ತುತ್ತೇವೆ. ನಮ್ಮ ನಮ್ಮ ಪರಿಮಿತಿಯಲ್ಲಿ ಸಾರ್ಥಕ್ಯವನ್ನು ಪಡೆಯುತ್ತೇವೆ. ಎಲ್ಲರೂ ಹತ್ತಲಾರರು ಎಂಬ ಒಂದೇ ಕಾರಣದಿಂದ ಗೌರೀಶಂಕರ ಶಿಖರವನ್ನೇ ಹಳಿಯುವುದು ಎಷ್ಟು ಸಮಂಜಸ ?

## ಕವಿಗೆ ಕವಿಯ ತೋರಿಸಿತ್ತು...

ಕುವೆಂಪು ಅವರ 'ಭಾದ್ರಪದದ ಸುಪ್ರಭಾತ' ಕವನದಲ್ಲಿ ಈ ಸಾಲುಗಳಿವೆ :

ಸವಿಗೆ ಸವಿಯ ಸೇರಿಸಿತ್ತು
ಭದ್ರ ಮಾಸಂ;
ಕವಿಗೆ ಕವಿಯ ತೋರಿಸಿತ್ತು
ಸುಪ್ರಭಾತಂ

ಭಾದ್ರಪದದ ಆ ಒಂದು ಸುಂದರ ಬೆಳಗು ಕವಿಗೆ ತನ್ನಲ್ಲಿ ಅಡಗಿದ್ದ ಕವಿ ಹೃದಯವನ್ನು ತೋರಿಸಿದ್ದು ಕುವೆಂಪು ಅವರ ವಿಷಯಕ್ಕೆ ಸತ್ಯ. ಆದರೆ, ನಮ್ಮಂತಹ ಅನೇಕ ಕನ್ನಡಿಗರ ಬಗ್ಗೆ ಹೇಳುವುದಾದರೆ, ಅವರು ನನ್ನೊಳಗಿನ ಕವಿಯನ್ನು ನಮಗೆ ತೋರಿಸಿಕೊಟ್ಟ ಕವಿವರೇಣ್ಯ! ನಮ್ಮೆಲ್ಲರ ಹೃದಯದಲ್ಲೂ ಒಬ್ಬ ಕವಿಗೆ ಇರಬಹುದಾದ ರಸಿಕತೆ, ಭಾವಪರವಶತೆ, ರಸಾನುಭೂತಿ ಅಡಗಿದ್ದು ಯಾವುದೋ ಒಂದು ಮಾಂತ್ರಿಕ ಗಳಿಗೆಯಲ್ಲಿ ಒಬ್ಬ ಕವಿಯ ಸೊಗಸಾದ ಕವನದ ಸಾಲುಗಳು, ಒಂದು ಸುಂದರ ಗೀತೆಯ ರಾಗದ ಮೋಡಿ, ಪ್ರಕೃತಿಯ ಒಂದು ಸುಂದರ ದೃಶ್ಯ ಆ ಹುದುಗಿದ ಕವಿತ್ವವನ್ನು ಬಡಿದೆಬ್ಬಿಸುತ್ತವೆ. ಆ ಗಳಿಗೆಯಲ್ಲಿ ಸಿಂಡರೆಲ್ಲಾ ಒಮ್ಮೆಲೆ ಸುರಸುಂದರಿಯಾದಂತೆ ಇಡೀ ಪ್ರಪಂಚವೇ ತನ್ನ ಹಳೆಯ ವೇಷವನ್ನು ಕಳಚಿ ಹೊಸ ವೈಭವದಲ್ಲಿ ನಮ್ಮ ಕಣ್ಣೆದುರು ನಿಂತ ಹಾಗಾಗುತ್ತದೆ. ಆ ಮಾಂತ್ರಿಕ ಸ್ಪರ್ಶವನ್ನು ತಮ್ಮ ಕವನಗಳ ಮೂಲಕ ನಮಗೆ ನೀಡಿದವರು ಕುವೆಂಪು. ಅವರು ಕನ್ನಡಿಗರಾಗಿದ್ದು ಕನ್ನಡದಲ್ಲಿ ಕವನಗಳನ್ನು ಬರೆದರೆಂಬುದೇ ನಮ್ಮ ಭಾಗ್ಯ ವಿಶೇಷ! (ಕುವೆಂಪು ಅವರು ತಮ್ಮ ಮೊದಲ ಕವನಗಳನ್ನು ಇಂಗ್ಲಿಷ್‌ನಲ್ಲಿ ಬರೆದಿದ್ದು ಅವನ್ನು ಓದಿದ ಐರಿಷ್ ಕವಿ, ಜೆ.ಎಚ್. ಕಸಿನ್ಸ್ ಎಂಬವರು, 'ನಿನ್ನ ಮಾತೃ ಭಾಷೆಯಲ್ಲಿ ಬರೆದಾಗಲೇ ನಿನ್ನ ಕವನಗಳಿಗೆ ಕಸುವು ಬರುವುದು.' ಎಂದು ಹೇಳಿದರಂತೆ. ಆಮೇಲೆ ಅವರು ಕನ್ನಡದಲ್ಲಿ ಕವನಗಳನ್ನು ಬರೆಯಲು ಶುರು ಮಾಡಿದರಂತೆ!)

ಕಬ್ಬು ಅದಕ್ಕೆ ಜಗತ್‌ಪ್ರಾಣ,
ಕಬ್ಬವೆ ರಸವಾಗಲು!

(ಭಾದ್ರಪದದ ಬಯಲು ಸೀಮೆ)

ಎಂದು ತಮ್ಮ ಕವನಗಳನ್ನು ವರ್ಣಿಸಿದ್ದಾರೆ ಕುವೆಂಪು. ಇಂತಹ ಕಬ್ಬಿನ ರಸ ನಮ್ಮೆಡೆಗೆ ಧಾರೆ ಧಾರೆಯಾಗಿ ಹರಿದು ಬಂದಿರಲು ಅದನ್ನು ಕುಡಿದು ಆನಂದಿಸಿದ ನಾವೇ ಧನ್ಯರು !

●

# ಕುವೆಂಪು ಕವಿತೆಗಳಲ್ಲಿ ನಿಸರ್ಗ

ಕೆ. ತ್ರಿವೇಣಿ ಶ್ರೀನಿವಾಸರಾವ್, ಇಲಿನಾಯ್

ಕುವೆಂಪು ಪ್ರಕೃತಿಯ ಕವಿ, ನಿಸರ್ಗದ ಮುದ್ದಿನ ಮಗು! 'ಕಾಡಿನ ಕವಿ' ಎಂದೇ ತಮ್ಮನ್ನು ಗುರುತಿಸಿಕೊಳ್ಳುವ ಕುವೆಂಪು ಅವರ ಬರಹಗಳಲ್ಲಿ - ಕಥೆ, ಕವಿತೆ, ಕಾದಂಬರಿ, ಮಹಾಕಾವ್ಯ ಯಾವುದಾದರೂ ಆಗಿರಲಿ, ಅಲ್ಲಿ ನಿಸರ್ಗಕ್ಕೇ ಮೊದಲ ಮರ್ಯಾದೆ, ಪ್ರಕೃತಿ ಸೌಂದರ್ಯದ್ದೇ ಪ್ರಧಾನ ಪಾತ್ರ! ಅದಕ್ಕಾಗಿಯೇ ಅವರ ಕೃತಿಗಳಲ್ಲಿ ಪ್ರಕೃತಿಯೇ ಒಂದು ಮಹಾಪಾತ್ರವಾಗಿ ಮೆರೆದಿದೆ, ಗುಪ್ತಗಾಮಿನಿಯಂತೆ ಅಂತರ್ಗತವಾಗಿದ್ದುಕೊಂಡೇ ಉದ್ದಕ್ಕೂ ಹರಿದಿದೆ. ಕುವೆಂಪು ಕೃತಿಗಳಲ್ಲಿ ಬರುವ ಎಲ್ಲಾ ಪಾತ್ರಗಳು ಅರಣ್ಯ ಸಂಸ್ಕೃತಿಯ ಅನೇಕ ಮುಖಗಳನ್ನು ಪ್ರತಿನಿಧಿಸುತ್ತವೆ. 'ತಿರೆಯ ಹೋರಾಟದಲ್ಲಿ ಬಗೆ ಕದಡಿ ಕಂಗೆಡಲು ನೇಹಿಗನೆ, ಬಾ ಇಲ್ಲಿ, ಶಾಂತಿಯಿಹುದು' ಎಂದು ತಮ್ಮ ಕಾವ್ಯದ ಮೂಲಕ ಓದುಗನನ್ನು ಕವಿ ಪ್ರಕೃತಿ ಮಾತೆಯ ದಿವ್ಯ ಸನ್ನಿಧಿಗೆ ಆಹ್ವಾನಿಸುತ್ತಾರೆ. ನಿಸರ್ಗದೇವಿಯ ಮಡಿಲಲ್ಲದೆ ಕಂಗೆಟ್ಟು ಅಲೆಯುವ ಮಾನವ ಜೀವಿಗೆ ನೆಮ್ಮದಿ ನೀಡುವ ತಾಣ ಬೇರೊಂದಿಲ್ಲ ಎಂಬುದು ಅವರ ಗಾಢ ನಂಬಿಕೆ. ಹಾಗಾಗಿ ಕುವೆಂಪು ಅವರ ಬರವಣಿಗೆಯಲ್ಲಿ ನಿಸರ್ಗದ ತಂಪು ನೆರಳು ದಟ್ಟವಾಗಿ ಹರಡಿದೆ.

ಕುವೆಂಪು ನಿಸರ್ಗಪ್ರೇಮಕ್ಕೆ ಅವರು ಹುಟ್ಟಿ ಬೆಳೆದ ಹಸಿರಿನ ಅಂಗಳ ಮಲೆನಾಡಿನ ಪರಿಸರವೂ ಕಾರಣವಿರಬಹುದು. ಅಭಿವೃದ್ಧಿಯ ನೆಪದಲ್ಲಿ ದಿನದಿಂದ ದಿನಕ್ಕೆ ಅರಣ್ಯ ನಾಶವಾಗುತ್ತಿರುವ ಈ ದಿನಗಳಲ್ಲೂ ಹಸಿರಿನ ಚೆಲುವು ಸ್ವಲ್ಪವಾದರೂ ಉಳಿದುಕೊಂಡಿರುವ ಕೆಲವೇ ತಾಣಗಳಲ್ಲಿ ಮಲೆನಾಡೂ ಒಂದು. ಕುವೆಂಪು ಅವರಂತೆ ಅನೇಕ ಸೃಜನಶೀಲ ಕನ್ನಡ ಕವಿಗಳ ಹುಟ್ಟೂರೂ ಮಲೆನಾಡೇ ಆಗಿರುವುದು ಕೇವಲ ಕಾಕತಾಳೀಯ ಆಗಿರಲಾರದು! ಎಂತಹ ಅರಸಿಕನ ಮನದಲ್ಲೂ ಸರಸ ಭಾವನೆಗಳನ್ನು ಅರಳಿಸಬಲ್ಲ ಇಂತಹ ದೈವಿಕ ಪರಿಸರದಲ್ಲಿ ಕುವೆಂಪುರವರಂತಹ ಸಹಜ ಕವಿ ಹುಟ್ಟಿ ಬಂದ ಮೇಲೆ ಕಾವ್ಯದ ಜಲಲ ಜಲಲ ಜಲಪಾತಕ್ಕೆ ಇನ್ನಾವ ತಡೆ ?

ಕುವೆಂಪು ಅವರಿಗೆ ಪ್ರಕೃತಿ ಅಪರೂಪದ ಅತಿಥಿಯಲ್ಲ, ನಿತ್ಯದ ಗೆಳೆತನಕ್ಕೆ ಒದಗಿ ಬರುವ ಆತ್ಮಸಂಗಾತಿ. ಮಲೆನಾಡಿನ ಸೆರಗಿನಲ್ಲಿ ಅವಿತುಕೊಂಡಿರುವ ಶಿವಮೊಗ್ಗ, ಚಿಕ್ಕಮಗಳೂರು ಜಿಲ್ಲೆಗಳು ಕುವೆಂಪುಗೆ ತವರು ನೆಲವಾಗಿದ್ದರಿಂದ ಅಲ್ಲಿಯ ಜನಜೀವನದ ಬಗೆಗೆ ಕುವೆಂಪು ಕೃತಿಗಳಲ್ಲಿ ಬರುವ ವರ್ಣನೆಗಳು ಮನಸ್ಸಿಗೆ ಆಪ್ತವೆನಿಸುತ್ತವೆ; ಅರಣ್ಯ ವೈಭವದ ಅನಂತ ರೂಪಗಳು ಆಸಕ್ತಿ ಮೂಡಿಸುತ್ತವೆ. ಅವುಗಳನ್ನು ಓದುತ್ತಿದ್ದಂತೆ ನಮ್ಮ

ಮನಸ್ಸೂ ಕೂಡ ಕುವೆಂಪು ಅವರ ಜೊತೆಯಲ್ಲಿ ಸಹ್ಯಾದ್ರಿ, ತುಂಗ-ಭದ್ರೆಯರ ತವರು ನೆಲಕ್ಕೆ ಸಂಚಾರ ಹೊರಟು ಬಿಡುತ್ತದೆ. ಕೃತಕ ಆಡಂಬರವಿಲ್ಲದ ನೈಸರ್ಗಿಕ ಚೆಲುವಿನ ವಾತಾವರಣದ ಭಾಗವಾಗಿ ಕುವೆಂಪು ಅವರು ಬೆಳೆದು ಬಂದಿದ್ದರಿಂದಲೇ ಅವರಿಗೆ ತಾವು ಕಂಡ ಆ ಪ್ರಕೃತಿಯ ಸೊಬಗನ್ನು ತಮ್ಮ ಕಾವ್ಯದ ಮೂಲಕ ಇತರರಿಗೂ ಕಾಣಿಸಲು ಸಾಧ್ಯವಾಯಿತು. ನಿಸರ್ಗದ ಇಂತಹ ಗಾಢ ಹಿನ್ನಲೆಯಿರದ ಲೇಖಕ ಆ ಕುರಿತು ಬರೆಯ ಹೊರಟರೆ ಅವು ಸಹಜವಾಗಿರದೆ, ಕೇವಲ ಎರವಲು ತಂದ ಭಾವನೆಗಳನ್ನು ಪ್ರದರ್ಶನಕ್ಕೆ ಇಟ್ಟಂತೆ ಅನ್ನಿಸುವುದರಲ್ಲಿ ಆಶ್ಚರ್ಯವೇನಿಲ್ಲ.

ಕುವೆಂಪುಕಾವ್ಯ ದಂತಗೋಪುರದ ನಡುವೆ ಸೃಷ್ಟಿಯಾದುದಲ್ಲ. ಅದರ ಬೇರುಗಳಿರುವುದು ಈ ನೆಲದ ಗಟ್ಟಿ ಮಣ್ಣಿನಲ್ಲಿಯೇ. ನಿಸರ್ಗದ ಮನಮೋಹಕ ಆವರಣದಲ್ಲಿ ಜೀವ ಪಡೆದುಕೊಂಡ ಜೀವಂತ ಕಾವ್ಯವದು! ಅವರು ಅದನ್ನು ಎಲ್ಲೇ ಬರೆದಿರಲಿ, ಒಬ್ಬ ಭಾವಜೀವಿ ಓದುಗನಿಗೆ ಆ ಕವಿತೆಗಳನ್ನು ಓದುವಾಗ ಅವುಗಳನ್ನು ಕವಿ ಕವಿಶೈಲದ ಪ್ರಶಾಂತ ವಾತಾವರಣದಲ್ಲಿ ಕುಳಿತು ಸುತ್ತಲಿನ ಗಿಡ, ಮರ, ಗಿರಿ, ತೊರೆ, ಕಲ್ಲುಬಂಡೆಗಳೊಡನೆ ಪ್ರೇಮದಿಂದ ಸಲ್ಲಾಪಿಸುತ್ತ ಬರೆದಿರುವಂತೆಯೇ ಭಾಸವಾಗುತ್ತದೆ. 'ಕವಿಶೈಲದಲ್ಲಿ ಸಂಧ್ಯೆ' ಎಂಬ ಕವಿತೆಯಲ್ಲಿ ಬರುವ ಈ ಸಾಲುಗಳನ್ನು ನೋಡಿ, ನಿಮಗೆ ಹಾಗನಿಸುವುದಿಲ್ಲವೇ?

ಪಶ್ಚಿಮ ಗಿರಿಶಿರದಲಿ ಸಂಧ್ಯೆಯ ರವಿ;
ನಿರ್ಜನ ಕವಿಶೈಲದೊಳೊಬ್ಬನೆ ಕವಿ;
ಮಲೆನಾಡಿನ ಬುವಿ ಮೇಲರುಣಚ್ಛವಿ
ವಸಂತ ಸಂಧ್ಯಾ ಸುವರ್ಣಶ್ರಾಂತಿ!

ಸಾಮಾನ್ಯವಾದ ರಸಿಕ ಜೀವಿ ಮನಸೂರೆಗೊಳ್ಳುವ ಸೃಷ್ಟಿಯ ಚೆಲುವಿನೆದುರು ಮಾತು ಕಳೆದುಕೊಂಡು ಮೂಕನಾಗಿ ಬಿಡುತ್ತಾನೆ. ಅದನ್ನು ಅವನು ಮನದುಂಬಿ ಅನುಭವಿಸಬಲ್ಲನೇ ಹೊರತು ಆ ಸೌಂದರ್ಯಾನುಭವವನ್ನು ಬಣ್ಣಿಸಿ ಹೇಳಲಾರ. ಆದರೆ ಕವಿ ಹೀಗೆ ಮಾಡುವಂತಿಲ್ಲ. ಅವನ ಜವಾಬ್ದಾರಿ ಅಲ್ಲಿಗೇ ಮುಗಿಯದು. ತನ್ನ ಅನುಭವವನ್ನು ಸಮಾನಮನಸ್ಕ ಸಹೃದಯರೊಡನೆ ಹಂಚಿಕೊಂಡಲ್ಲದೆ ಕವಿ ಮನಸ್ಸಿಗೆ ತೃಪ್ತಿಯಿರದು. ತನಗಾಗಿರುವ ಆನಂದಾಮೃತ ಅನುಭವವನ್ನು ಹೇಳಲಾರನು, ಹೇಳದೆಯೂ ಇರಲಾರನು. ಇಲ್ಲಿ ಕವಿಯ ''ಉಭಯ ಸಂಕಟ'' ಹೇಗಿದೆಯೆಂದರೆ –

ಹೇಳಿದರೆ ಹಾಳಾಗುವುದೋ ಅನುಭವದ ಸವಿಯು
ಹೇಳದಿರೆ ತಾಳಲಾರನೋ ಕವಿಯು!

ಆದರೆ ಹೇಳಬೇಕಾಗಿದ್ದುದನ್ನು ಬರೀ ಶುಷ್ಕ ಮಾತುಗಳಲ್ಲಿ ಹೇಳಿದರೆ ಸಾಲದು, ತಾನು ಕಂಡದ್ದನ್ನು ಕಾಣದವರ ಕಣ್ಣಿಗೆ ಕಟ್ಟುವಂತೆ, ಮನ ಮುಟ್ಟುವಂತೆ ಹೇಳಬೇಕಾದದ್ದು ಕವಿಯ

ಮುಂದಿರುವ ಸವಾಲು. ಕುವೆಂಪು ತಮ್ಮ ಕವಿತೆಗಳಲ್ಲಿ ನಿಸರ್ಗವನ್ನು ಬಣ್ಣಿಸುವಾಗ ಈ ಸವಾಲನ್ನು ಸಮರ್ಥವಾಗಿ ನಿರ್ವಹಿಸಿದ್ದಾರೆ. ಅದಕ್ಕೆ ಒಂದು ಚಿಕ್ಕ ಉದಾಹರಣೆ ಬೇಕೆಂದರೆ - ಮಳೆ ಸುರಿಯುತ್ತಿರುವ ಅಮಾವಾಸ್ಯೆಯ ರಾತ್ರಿಯೊಂದು ನಮಗೆ ಮುಖಾಮುಖಿಯಾದಲ್ಲಿ ನಾವು ಅದನ್ನು ಇತರರಿಗೆ ಹೇಗೆ ವಿವರಿಸಬಲ್ಲೆವು? ಕತ್ತಲೆ ತುಂಬಿದ ಭಯಂಕರ ರಾತ್ರಿ ಎಂದೋ ಹಿಂದೆಂದೂ ಕಂಡು ಕೇಳರಿಯದ ಕರಾಳರಾತ್ರಿ ಎಂದೋ ಅಷ್ಟೆ, ಅಲ್ಲಿಗೆ ನಮ್ಮ ಶಬ್ದಭಂಡಾರ ಬರಿದೋ ಬರಿದು! ಆದರೆ ಇದೇ ಕಾರಿರುಳು ಕುವೆಂಪು ಅವರ 'ವರ್ಷ ಭೈರವ' ಕವಿತೆಯಲ್ಲಿ ಹೀಗೆ ಕೇಳುಗನ ಕಣ್ಣ ಮುಂದೆ ಮೈತಾಳಿ ನಿಲ್ಲಬಲ್ಲದು:

ಕದ್ದಿಂಗಳು ಕಗ್ಗತ್ತಲು ಕಾರ್ಗಾಲದ ರಾತ್ರಿ
ಸಿಡಿಲ್ಮಿಂಚಿಗೆ ನಡುಗುತ್ತಿದೆ ಪರ್ವತ, ವನ, ಧಾತ್ರಿ!

ಆಕಾಶವೇ ನೀರಾಗಿ ಹೋಯಿತೇನೋ ಎಂಬಂತೆ ಅದೂ ನೀರವ ರಾತ್ರಿಯಲ್ಲಿ ಸುರಿಯುತ್ತಿರುವ ಆ ಮುಂಗಾರು ಮಳೆಯ ಅಬ್ಬರ! 'ಮಳೆ ಎಂಬುದು ಬರಿ ಸುಳ್ಳಿದು, ಪ್ರಳಯದ ಆವೇಶ' ಅನ್ನಿಸುವಂತಿರುವ ಆ ಬಿರುಮಳೆಯ ಆರ್ಭಟಕ್ಕೆ ಅದುರುತ್ತಿರುವುದು ಬರೀ ಅಳ್ಳೆದೆಯ ಓದುಗನ ಗುಂಡಿಗೆ ಮಾತ್ರವಲ್ಲ, ಗಿರಿ, ವನ, ಸಾಗರಗಳನ್ನೇ ನಿರಾಯಾಸದಿಂದ ಹೊತ್ತುಕೊಂಡಿರುವ ಆ ಕ್ಷಮಯಾ ಧರಿತ್ರಿಯ ಎದೆಯೂ ಹೆದರಿ ನಡುಗುತ್ತಿದೆ. ರಾತ್ರಿ ಕಾಲದಲ್ಲಿ ಆಕಾಶದಲ್ಲಿರಬೇಕಾಗಿದ್ದ ಚಂದ್ರ, ತಾರೆಯರು ಅಂದು ಏಕಿರಲಿಲ್ಲ? ಈ ಪ್ರಶ್ನೆಗೆ ಕವಿಯ ಜಾಣ್ಮೆಯ ಉತ್ತರ ಹೀಗಿದೆ -

ಆಕಾಶವೆ ನೀರಾಯ್ತೆನೆ
ಸುರಿಯುತ್ತಿರೆ ಭೋರ್ಭೋರೆನೆ
ಮುಂಗಾರ್ಮಳೆ ಧಾರೆ;
ಲಯ ಭೀಷಣ ಮಳೆಭೈರವ
ಮೈದೋರಲು ಮರೆಯಾಗಿವೆ
ಭಯದಲಿ ಶಶಿತಾರೆ!

ಕುವೆಂಪು ಅವರಿಗೆ ತಮ್ಮ ಸುತ್ತಲಿನ ಪರಿಸರದ ಅತಿ ಚಿಕ್ಕಚಿಕ್ಕ ವಿವರಗಳ ಪರಿಚಯವೂ ಇತ್ತು. ಅಂಗಳದಲ್ಲಿ ಅರಳಿ ನಗುತಿರುವ ಪುಟ್ಟ ಹೂವಿನೊಡನೆ ಕೂಡ 'ನನ್ನಂತೆಯೇ ನೀನು ವ್ಯಕ್ತಿ' ಎಂದು ಸಂಭಾಷಣೆಗೆ ತೊಡಗುವಂತಹ ಸರಳತೆ ಅವರ ಕವನಗಳಲ್ಲಿ ಕಂಡುಬರುವ ವಿಶೇಷತೆ. ಅವರು ಪ್ರಕೃತಿಯ ಚೆಲುವನ್ನು ಆತ್ಮೀಯ ಭಾಷೆಯಲ್ಲಿ ಬಣ್ಣಿಸಿ ಹೇಳಬಲ್ಲ ಚತುರ ಕವಿ! ಕಲ್ಪನಾ ಚಾತುರ್ಯದ ಜೊತೆಗೆ ರಸಿಕ ಮನೋಭಾವವೂ ಜೊತೆಯಾದಾಗ ಹದವಾಗಿ ಮೂಡಿಬರುವ ಕಾವ್ಯದ ರಸಪಾಕಕ್ಕೆ ಸಾಕ್ಷಿಯಾಗಿದೆ ಈ 'ಗುಲಾಬಿ' ಎಂಬ ಚಿಕ್ಕ ಕವಿತೆ :

ಮನ್ಮಥ ಚುಂಬನ ದಂತಕ್ಷತದಿಂ
ಬೆಚ್ಚನೆ ಕೆನ್ನೆತ್ತರು ಸೋರಿ

ರತಿ-ಚೆಂದುಟಿಯಿಂದಿಳೆಗುರುಳುತೆ ತಾಂ
ಮತ್ತೆ ಗುಲಾಬಿಯವೊಲು ತೋರಿ!

ಚೆಲುವಿಗೆ, ಒಲವಿಗೆ ಇನ್ನೊಂದು ಹೆಸರೇ ಕೆಂಗುಲಾಬಿ! ಆದರೆ ಈ ಹೂವಿಗೆ ಕೆಂಪು ಬಣ್ಣ ಬಂದಿದ್ದು ಹೇಗೆ ಗೊತ್ತೇ? ಪ್ರಣಯರಾಜ ಮನ್ಮಥನು ರತಿಯನ್ನು ಗಾಢವಾಗಿ ಚುಂಬಿಸುವಾಗ ಅವಳ ಕೋಮಲ ತುಟಿಗಳಿಂದ ರಕ್ತದ ಹನಿಯೊಂದು ಭುವಿಗುರುಳಿ ಅದೇ ಮೋಹಕ ರಂಗಿನ ಕೆಂಪುಗುಲಾಬಿಯಾಯಿತಂತೆ! ಗುಲಾಬಿಯ ಸ್ನಿಗ್ಧ ಸೌಂದರ್ಯಕ್ಕೆ ಇದೇ ಕಾರಣವೇ? ಇದ್ದರೂ ಇರಬಹುದು ! ನಿಜವಾಗಿಯೂ ಇದು ಸೃಜನಶೀಲ ಕವಿಮಾನಸಕ್ಕೆ ಮಾತ್ರ ನಿಲುಕಬಹುದಾದ ರಮ್ಯ ಕಲ್ಪನೆ!

ತಮ್ಮ ಕಾವ್ಯವನ್ನು 'ಕಾಡಿನ ಕೊಳಲು' ಎಂದೇ ಕರೆದುಕೊಳ್ಳುವ ಕುವೆಂಪು ಅವರಿಗೆ ತಮ್ಮ ಸಾಹಿತ್ಯದ ಸ್ಫೂರ್ತಿ ಕಣಜ ಈ ಪ್ರಕೃತಿಯ ಸೌಂದರ್ಯವೇ ಎಂದು ಒಪ್ಪಿಕೊಳ್ಳುವಲ್ಲಿ ಅಪಾರ ಹೆಮ್ಮೆ. ಕುವೆಂಪು ಅವರಂತೆ ವಿಪಿನ ಸೌಂದರ್ಯವನ್ನು ಆಮೂಲಾಗ್ರವಾಗಿ ಗ್ರಹಿಸಿ, ಅಭಿವ್ಯಕ್ತಿಸಿದ ಮತ್ತೊಬ್ಬ ಕವಿ ಕನ್ನಡದಲ್ಲಿಲ್ಲ! ತಮ್ಮ ಕಾವ್ಯದ ಜೀವನಾಡಿ ಸೊಬಗಿನ ಸೆರೆಮನೆಯಾದ ಭೂದೇವಿಯೇ ಎಂಬುದನ್ನು 'ಕೊಳಲು' ಸಂಕಲನದ 'ಗೊಲ್ಲನ ಬಿನ್ನಹ' ದ ರೂಪದಲ್ಲಿ ಸೊಗಸಾದ ನುಡಿಗಳಲ್ಲಿ ಹೀಗೆ ನಿವೇದಿಸಿಕೊಳ್ಳುತ್ತಾರೆ:

ಸಿರಿಬನದೇವಿಯ ಬೊಕ್ಕಸದಿಂದ
ಕದ್ದವು ಕೆಲವಿವು ಹಾಡುಗಳು
ಸುಂದರ ಋತುಗಳ ಸಿರಿಗೈಯಿಂದ
ಸುಲಿದವು ಕೆಲವಿವು ಹಾಡುಗಳು!

ಸಿರಿಬನದೇವಿಯ ಸೌಂದರ್ಯವೇ ಕುವೆಂಪು ಕಾವ್ಯಕ್ಕೆ ಪ್ರೇರಣೆಯಾದ ಮೇಲೆ ಅಲ್ಲಿ ನಿಸರ್ಗ ವರ್ಣನೆಗೇನು ಕಡಿಮೆ? ಹಾಗಾಗಿಯೇ ಕುವೆಂಪು ಕಾವ್ಯದಲ್ಲಿ ಕಾಡು, ಕಣಿವೆ, ಬೆಟ್ಟ, ಗುಡ್ಡ, ಜಲಪಾತಗಳು ಜೀವ ತಾಳಿ ಕಣ್ಣೆದುರು ನಿಲ್ಲುತ್ತವೆ! ಹಕ್ಕಿಗಳ ಚಿಲಿಪಿಲಿ ಹಾಡಿಗೆ ಇಲ್ಲಿ ಹೂಬಳ್ಳಿಗಳು ನರ್ತನವಾಡುತ್ತವೆ. ಆಕಾಶದ ವಿಶಾಲ ಆಟದ ಬಯಲಿನಲ್ಲಿ ಚುಕ್ಕಿ, ಚಂದ್ರಮರು ಚಿನ್ನಾಟವಾಡುತ್ತಾರೆ. ಕಾಮನಬಿಲ್ಲನ್ನೇ ದಾರವಾಗಿಸಿ, ಮಂಜಿನ ಮಣಿಗಳನ್ನೇ ಮುತ್ತಾಗಿ ಪೋಣಿಸಿ ನೇಯಲಾದ ಸಿರಿಕಾವ್ಯ ಕುವೆಂಪು ಅವರದು! ಅದಕ್ಕೆಂದೇ ಅವು ಅಷ್ಟು ಸಮೃದ್ಧವಾಗಿ ಓದುಗನಿಗೆ ಸೌಂದರ್ಯಾನುಭೂತಿಯ ರಸಾನುಭವವನ್ನು ಉಣಬಡಿಸುತ್ತಿರುವುದು!

ಸುಗ್ಗಿಯ ಬನದಲಿ ಹಸುರಿನ ಮೇಲೆ
ಹೂವುಗಳಂದದಿ ಕೆಲವನು ಆಯ್ದೆ :
ಮಂಜಿನ ಮಣಿಗಳ ಮಾಗಿಯ ಲೀಲೆ
ಶೋಭಿಸಲದರಿಂದಿನಿತನು ಕೊಯ್ದೆ:

ವಿಪಿನ ವಿಹಂಗಮ ಕಂಠವ ಸೇರಿ
ನುಣ್ಸರಗಳ ಗೆದ್ದೆನು ಬಲು ಹೋರಿ
ಕಾಮನಬಿಲ್ಲನು ದಾರವ ಮಾಡಿ
ಮೊಳಗನು, ಮಿಂಚನು, ಹನಿಗಳ ಬೇಡಿ
ಹಾಡುಗಳಿನಿತನು ಕೋದಿಹೆನು!
ತುಂಗೆಯ ತೆರೆಗಳ ಚುಂಬನದಿಂದ
ಸಿರಿ ಮಲೆನಾಡಿನ ಸಿರಿ ಮಡಿಲಿಂದ
ಕವನಗಳಿನಿತನು ನೆಯ್ದಿಹೆನು

ಈ ಅನಂತ ವಿಶ್ವದಲ್ಲಿ ಕಾಣುವ ಕಣ್ಣೊಂದಿದ್ದರೆ ರೂಪವಿಲಾಸಕ್ಕೆ ಕೊರತೆಯೇ? ಆದರೆ ಆ ದಿವ್ಯಾನುಭವ ಪಡೆಯುವುದು ಎಲ್ಲರಿಗೂ ಸುಲಭ ಸಾಧ್ಯವೇನಲ್ಲ. ಚೆಲುವೆದುರಿನಲ್ಲೂ ಕುರುಡಾಗಿ, ನಿರ್ಭಾವದಿಂದ ಇರುವ ಜನರನ್ನು ಕಂಡು 'ಶಿವ, ಶಿವಾ, ಕಣ್ದೆರೆದು ಪ್ರಕೃತಿ ಸೌಂದರ್ಯಮಂ ಭಾವನೋಜ್ವಲವಾಗಿ ನೋಡದಿಹ ಬಾಳೊಂದು ಬಾಳಲ್ಲ' ಎಂದು ಕವಿ ಮನಸ್ಸು ಮರುಗುತ್ತದೆ. ಹೊಳೆಯುವ ಸೂರ್ಯ, ಬೆಳ್ಳಿಯಂತೆ ಬೆಳಗುವ ಚಂದ್ರ, ಬಾನಿನಂಗಳದಲ್ಲಿ ಮುತ್ತು ಚೆಲ್ಲಿದಂತೆ ಹರಡಿಕೊಂಡಿರುವ ಲಕ್ಷಾಂತರ ಗ್ರಹ, ತಾರೆಗಳು, ಸುರಿಯುವ ಮಳೆ, ಹರಿಯುವ ಹೊಳೆ, ಮಿಂಚು, ಗುಡುಗು, ಸಿಡಿಲು.... ವಿಶ್ವದೇವತೆಯ ಬೆಡಗು ಬಿನ್ನಾಣಗಳು ಕವಿಯ ಮನಸ್ಸಿನಲ್ಲಿ ಭಾವನೆಗಳ ಆಂದೋಲನವೆಬ್ಬಿಸಿ ಜೀವಂತ ಕವನಗಳು ಮೊಳಕೆಯೊಡೆಯಲು ಕಾರಣವಾಗಿವೆ. ಪ್ರಕೃತಿಯ ಋತುಮಾನಕ್ಕನುಗುಣವಾಗಿ ಬದಲಾಗುವ ಹಾವ-ಭಾವ, ಚಲನವಲನಗಳೆಲ್ಲಾ ಕುವೆಂಪು ಕಾವ್ಯದಲ್ಲಿ ಶಾಶ್ವತ ದಾಖಲೆಗಳಾಗಿ ನಮ್ಮ ಮುಂದಿವೆ.

ಮುಂಜಾನೆ, ಮುಸ್ಸಂಜೆಗಳಲ್ಲಿ ಈ ಭೂರಮಣಿ ಪಡೆದುಕೊಳ್ಳುವ ಚೆಲುವು ಅನುಪಮ! ಅದು ಕವಿಗಳೆದೆಯಲ್ಲಿ ಕವಿತೆ ಅರಳುವ ಹೊತ್ತು! ಇಂತಹ ಅಮೃತ ಘಳಿಗೆಯೊಂದರಲ್ಲೇ 'ಗಂಧರ್ವರ ಸೀಮೆಯಾಯಿತೋ ಕಾಡಿನ ನಾಡು' ಎಂದು ಅಂಬಿಕಾತನಯ ದತ್ತರು ಅಚ್ಚರಿಗಣ್ಣಾಗಿದ್ದು! ಇದೇ ಬಗೆಯ ವಿಸ್ಮಯದ ಭಾವ ಕುವೆಂಪುರವರ 'ಸಾಮಾನ್ಯ ಬೀದಿ' ಕವನದಲ್ಲೂ ಕಂಡುಬರುತ್ತದೆ. ಆದರೆ ಬೇಂದ್ರೆಯವರಿಗೆ ಕಾಡಿನ ನಾಡು ಗಂಧರ್ವರ ಬೀಡಿನಂತೆ ಕಂಡಿದ್ದು ಮುಂಜಾನೆಯ ಮಂಜಿನಲ್ಲಾದರೆ, ಕುವೆಂಪು ಅವರಿಗೆ ಬೆಳಕಿಲ್ಲದ ಬೂದಿಯಂತಹ ಸಾಮಾನ್ಯ ಬೀದಿಯೊಂದು ಸ್ವರ್ಗದ ಹಾದಿ ಎನಿಸಿದ್ದು ಮುಸ್ಸಂಜೆಯಲ್ಲಿ!

ಪಡುವಣ ದೆಸೆಗೇರಿದೆ ರಸ್ತೆ;
ಅದೊ ಬರಿ ದುರವಸ್ತೆ!
ಆದರೆ ಸಂಧ್ಯಾಕಾಲದಲಿ,
(ಬೆಕ್ಕಾದಂತೆ ಹುಲಿ!)

ಅತಿ ಸಾಮಾನ್ಯದ ಈ ಬೀದಿ,
ಕಾಣ್, ಸ್ವರ್ಗಕೆ ಹಾದಿ!

ಹಕ್ಕಿಗಳ ಇಂಚರ, ಅರಳಿ ನಗುತ್ತಿರುವ ಹೂಗಳ ಸೌರಭಗಳಿಂದ ಕೂಡಿದ ಉದಯಕಾಲದ ಚೆಲುವೆಗೆ ಸಾಟಿಯೇ ಇಲ್ಲ. ಇಡಿಯ ಲೋಕವೇ ಹೊಸ ರೂಪದಲ್ಲಿ ಕಂಗೊಳಿಸುವ ಉದಯಾಸ್ತಗಳಲ್ಲಿ ಕವಿ ಪರವಶನಾಗದೆ ಇರುವುದು ಹೇಗೆ ಸಾಧ್ಯ? ಕುವೆಂಪು ಅವರ ಅನೇಕ ಕವಿತೆಗಳಲ್ಲಿ ಬೆಳಕಿನ ಮೊಗ್ಗರಳಿ ಹೂವಾಗುವ ಸೂರ್ಯೋದಯದ ಚೆಲುವು ವಿಧವಿಧ ರೂಪಗಳಲ್ಲಿ, ವಿಭಿನ್ನ ವರ್ಣನೆಗಳೊಡನೆ ಮತ್ತೆ ಮತ್ತೆ ಕಾಣಸಿಗುತ್ತವೆ. ಉದಯರವಿಯ ಚೇತೋಹಾರಿ ರೂಪಗಳು ಮನಸ್ಸನ್ನು ಆಹ್ಲಾದಗೊಳಿಸುತ್ತವೆ!

ಓಡು ಹೊರಗೆ, ಓಡು ನೋಡು:
ಮೂಡುತಿಹನು ದಿನಮಣಿ!
ಹಚ್ಚನೆ ಹಸುರು ಬಯಲ ಮೇಲೆ
ಮಿರುಗುತಿಹವು ಹಿಮಮಣಿ!

ಎಂಬ ಉಲ್ಲಾಸ ಹೊಮ್ಮಿಸುವ ಸಾಲುಗಳು ಕವಿಯ ಲೇಖನಿಯಿಂದ ಜೀವ ತಾಳುತ್ತವೆ. 'ಭಾದ್ರಪದದ ಸುಪ್ರಭಾತ' ಕವಿತೆಯಲ್ಲಿ ಕೂಡ ಮುಂಜಾನೆಯ ಸಮಯದಲ್ಲಿ ಕವಿಗೆ ದೊರಕುವ ಅಸಾಮಾನ್ಯ ಅನುಭವವೊಂದರ ನಿರೂಪಣೆ ಇದೆ. ಅತಿ ಕಡಿಮೆ ಶಬ್ದಗಳಲ್ಲಿ ಈ ಕವಿತೆ ಕಟ್ಟಿಕೊಡುವ ಭಾವ ಸಂಪತ್ತು ಅಗಾಧ.

ದಿಗುತಟದಲಿ ತೆರೆಯುತಿತ್ತು
ಹಗಲಿನಕ್ಷಿ
ಮುಗಿಲಗರಿಯ ಕಾಯಿಸಿತ್ತು
ಗಗನಪಕ್ಷಿ

ಎಂದು ಪ್ರಾರಂಭವಾಗುವ ಈ ಕವಿತೆ ಆಗ ತಾನೇ ಸೂರ್ಯೋದಯವಾಗಿ ಲೋಕ ನಿದ್ರೆಯಿಂದ ಎಚ್ಚರವಾಗುತ್ತಿರುವುದನ್ನು ಸೂಚಿಸಲು 'ದಿಗುತಟದಲಿ ತೆರೆಯುತಿತ್ತು ಹಗಲಿನಕ್ಷಿ' ಎಂದು ವರ್ಣಿಸಿರುವುದು ಅದೆಷ್ಟು ಸಮಂಜಸವಾಗಿದೆ! ಇಂತಹ ಸುಂದರ ಪ್ರಾತಃಕಾಲದಲ್ಲಿ ಹೊಸ ಸೊಬಗಿನಲ್ಲಿ ಪಚ್ಚೆಯಂತೆ ಮೆರೆಯುತ್ತಿರುವ ಭುವಿಯ ಮಣ್ಣು ಕವಿಯ ಕಣ್ಣಿಗೆ ಕಾಣಿಸುವುದು ಹೀಗೆ:

ಜೇನುತುಪ್ಪದಲ್ಲಿ ತೊಯ್ದ
ಹಣ್ಣಿನಂತೆ
ಪೊಸ ಚೆಲ್ವಿನ ಬಲೆಯ ನೆಯ್ದ
ಹೆಣ್ಣಿನಂತೆ

ಮೊದಲೇ ಸಿಹಿಯಾಗಿರುವ ಹಣ್ಣನ್ನು ಮತ್ತೆ ಜೇನಿನಲ್ಲಿ ಅದ್ದಿ ತೋಯಿಸಿದರೆ ಅದರ ಸವಿ ಹೇಗಿರಬಹುದು? ಅಷ್ಟು ಮಧುರತಮ ಅನುಭವವನ್ನು ಉಂಟುಮಾಡುತ್ತಿದೆ ಆ ಪ್ರಭಾತ! ರವಿ ಕಾಣದ್ದನ್ನೂ ಕಾಣುವವನು ಕವಿ ಎನ್ನುವುದು ನಿಜವಿರಬಹುದು. ಆದರೆ ಬೆಳಕಿನ ಹೊಂಗಿರಣಗಳಿಂದ ಶುಭ ಸುಪ್ರಭಾತದ ಕವಿತೆಯನ್ನೇ ಬರೆಯುತ್ತಿರುವ ಆ ಭದ್ರಮಾಸದ ಬೆಳಗು ಕವಿಯ ಮನಸ್ಸಿನಲ್ಲಿ ವಿನಮ್ರಭಾವವೊಂದನ್ನು ಹುಟ್ಟುಹಾಕುತ್ತಿದೆ:

ಸವಿಗೆ ಸವಿಯ ಪೇರಿಸಿತ್ತು
ಭದ್ರಮಾಸಂ
ಕವಿಗೆ ಕವಿಯ ತೋರಿಸಿತ್ತು
ಸುಪ್ರಭಾತಂ!

ಇಲ್ಲಿ ಕವಿ ನಿಸರ್ಗದ ಸಹಚಾರಿ ಮಾತ್ರ, ನಿಸರ್ಗಕ್ಕಿಂತ ದೊಡ್ಡವನಲ್ಲ. ನಿಸರ್ಗವೇ ಗುರುವಾಗಿ ನಿಂತು ಕವಿಯನ್ನು ಮುನ್ನಡೆಸಲಿ ಎಂಬ ಸಹಜ ಆಶಯವೂ ಇಲ್ಲಿದೆ. ಸವಿಗೆ ಸವಿಯನ್ನು ಪೇರಿಸಿದ ಆ ಭಾದ್ರಪದದ ಸುಪ್ರಭಾತ, ಕವಿ ತನಗಿಂತ ಮಹಾನ್ ಕವಿಯನ್ನು ಕಂಡುಕೊಂಡ ಧನ್ಯತಾಭಾವದೊಂದಿಗೆ ಕೊನೆಯಾಗುವುದು ಅರ್ಥಪೂರ್ಣವೆನಿಸುತ್ತದೆ.

ಜಗತ್ತನ್ನು ಬೆಳಗುತ್ತಾ ಉರಿಯುತ್ತಿರುವ ಸೂರ್ಯ ಒಬ್ಬನೇ ಒಬ್ಬನಾದರೂ ಅವನ ಚೆಲುವು ಒಂದೊಂದು ಋತುವಿನಲ್ಲಿ ಒಂದೊಂದು ಬಗೆ. ಭಾದ್ರಪದದ ಬೆಳಗಿನ ಕಣ್ಸೆಳೆಯುವ ಸೊಬಗು ಒಂದು ಬಗೆಯಾದರೆ ಫಾಲ್ಗುಣದ ರವಿಯ ಬೆಡಗು ಇನ್ನೊಂದು ಬಗೆ. ಅದನ್ನು ಸವಿಯಲು ನಾವು 'ಶಿವಮಂದಿರಸಮ ವನಸುಂದರ ಸುಮಶೃಂಗಾರದ ಗಿರಿಶೃಂಗಕ್ಕೇ' ಹೋಗಿ ನೋಡಬೇಕು! ಅಲ್ಲಿಗೆ ಹೋಗಲಾಗದ ನಮ್ಮಂತವರು 'ಬಾ ಫಾಲ್ಗುಣ ರವಿ ದರ್ಶನಕೆ!' ಕವಿತೆ ಒಮ್ಮೆ ಓದಿದರೆ ಸಾಕು, 'ಸರ್ವೇಂದ್ರಿಯ ಸುಖನಿಧಿ ಅಲ್ಲಿ; ಸರ್ವಾತ್ಮನ ಸನ್ನಿಧಿ ಅಲ್ಲಿ' ಅನ್ನಿಸುವ ಫಾಲ್ಗುಣ ರವಿ ದರ್ಶನವನ್ನು ಕವಿ ನಮ್ಮ ಮನೋಪಟಲದ ಮೇಲೆಯೇ ಮಾಡಿಸಬಲ್ಲರು:

ಕುಂಕುಮಧೂಳಿಯ ದಿಕ್ತಟವೇದಿಯೊಳೋಕುಳಿಯಲಿ ಮಿಂದೇಳುವನು:
ಕೋಟಿವಿಹಂಗಮ ಮಂಗಲರವ ರಸನೈವೇದ್ಯಕೆ ಮುದ ತಾಳುವನು:
ಚಿನ್ನದ ಚೆಂಡೆನೆ ಮೂಡುವನು: ಹೊನ್ನನೆ ಹೊಯ್‌ನೀರ್ ನೀಡುವನು,
ಸೃಷ್ಟಿಯ ಹೃದಯಕೆ ಪ್ರಾಣಾಗ್ನಿಯ ಹೊಳೆಹರಿಯಿಸಿ ರವಿ ದಯಮಾಡುವನು!

'ಶರತ್ಕಾಲದ ಸೂರ್ಯೋದಯದಲಿ', ಕವಿತೆ ಶರದೃತುವಿನ ಬಾಲರವಿಯ ಅಂದ-ಚಂದವನ್ನು ನಮ್ಮ ಕಣ್ಣೆದುರು ಕಡೆದು ನಿಲ್ಲಿಸುತ್ತದೆ. ಈ ಸೂರ್ಯೋದಯ ಕಾಲದಲ್ಲಿ 'ಕಲ್ಲಲಿ, ಮಣ್ಣಲಿ, ಹುಲ್ಲಲಿ, ಹುಡಿಯಲಿ, ನೀರಿನ ಹನಿಯಲಿ, ಬೆಂಕಿಯ ಕಿಡಿಯಲಿ' ಎಲ್ಲೆಡೆ ತುಂಬಿ ತುಳುಕುವ ಚೈತನ್ಯ! ಹಸಿರು ಹುಲ್ಲಿನ ಮೇಲೆ ಸೂರ್ಯಕಾಂತಿಯಲ್ಲಿ ಮಿನುಗುತ್ತಿರುವ ಇಬ್ಬನಿಯ ಸೊಬಗು ಕುವೆಂಪುರವರ ವರ್ಣನೆಯಲ್ಲಿ ಹೀಗಿದೆ:

ಹಚ್ಚನೆ ಪಚ್ಚನೆ ವೇದಿಕೆಯಲ್ಲಿ
ಸಾಸಿರಗಟ್ಟಲೆ ಮುತ್ತನು ಚೆಲ್ಲಿ
ರನ್ನದ ಕಿರುಹಣತೆಗಳಲ್ಲಿ
ಶ್ಯಾಮಲ ತೈಲದಿ ಹೊನ್ನಿನ ಬತ್ತಿ-
ಕಾಮನಬಿಲ್ಲಿನ ಬೆಂಕಿಯ ಹೊತ್ತಿ
ಸೊಡರುರಿಯುತ್ತಿದೆ ಅಲ್ಲಲ್ಲಿ!''

ಇದು ಮತ್ತೊಂದು ಬೆಳಗು ಜಾವ! ಹಿಂದಿನ ಇರುಳಿಡೀ ಸುರಿದ ಮಳೆ ನಿಂತು ಹಸಿರು ಬಯಲುಗಳೆಲ್ಲಾ ಕಳಕಳಿಸುತ್ತಿರುವ ಅಸಾಮಾನ್ಯ ಮುಂಜಾವು. 'ದನಕರುಗಳು ಮೇಯುತ್ತಾ, ಗಿರಿತರುಗಳು ಬದುಕನು ಸವಿಯುತ್ತಾ' ಆನಂದದಿಂದ ನಲಿಯುತ್ತಿರುವ ಆ ಹೊತ್ತು ಕವಿಮನಸ್ಸಿನಲ್ಲಿ 'ವೈಕುಂಠವಿದೆ ನಿಸರ್ಗದಲಿ' ಎಂಬ ಭಾವನೆಯನ್ನು ಮೂಡಿಸುತ್ತಿದೆ. 'ಇರುವಿಕೆಗಿಂತಲು ಹೆಚ್ಚಿನ ಗೋಜಿಗೆ ಹೋಗದಿಹ, ಇರುವಿಕೆಯಾನಂದದಿ ನಲಿಯುತಿರುವ' ಸರಳಜೀವನದ ಮುಂದೆ ಬೇರೆ ಯಾವ ಪುರುಷಾರ್ಥವೂ ಮಿಗಿಲಲ್ಲ ಅನ್ನಿಸುವ ಸಂತೃಪ್ತಿ 'ಇಂತಹ ಸುಂದರ ಪ್ರಾತಃಕಾಲದಿ' ಎಂಬ ಕವಿತೆಯ ಸಾರ!

ಇಂತಹ ಸುಂದರ ಪ್ರಾತಃಕಾಲದಿ
ಜೀವಿಸುವುದಕಿಂತಲು ಬೇರೆಯ ಗುರಿ
ಜೀವಕೆ ಬೇಕಿಲ್ಲ :
ಚಿರಸೌಂದರ್ಯದ ಸಂಪದವಿದ್ದರೆ
ಧರ್ಮಕೆ ಚ್ಯುತಿಯಿಲ್ಲ, ಮತಿಯಿಲ್ಲ
ರಸಾನುಭೂತಿಯ ರಸಪಥವಲ್ಲದೆ
ಸತ್ಯಕೆ ಗತಿಯಿಲ್ಲ!

ಕುವೆಂಪು ಅವರ ಪ್ರಕಾರ ಪ್ರಕೃತಿಯ ಈ ವಿಶ್ವರೂಪ ದರ್ಶನಕ್ಕಾಗಿ ಎಲ್ಲೋ ಕಾಡು, ಮೇಡು ಅಲೆದು ಹೋಗಬೇಕಿಲ್ಲ. ನದೀತೀರ, ಸರೋವರ ತಟಗಳೇ ಆಗಬೇಕಿಲ್ಲ. ಮಹಡಿಯ ಮೇಲಿರುವ ಶಕ್ತಿ ಇದೆ. ಬೆಳಕನ್ನು ಬರಮಾಡಿಕೊಳ್ಳಲು ಇರುವ ಚಿಕ್ಕ ಕಿಟಕಿಯ ಮೂಲಕ ದೈವ ಸಾಕ್ಷಾತ್ಕಾರವಾಗಿಸಿಕೊಳ್ಳಲು ಬರೀ ಹೊರಗಣ್ಣಿನಿಂದ ಮಾತ್ರ ಸಾಧ್ಯವಿಲ್ಲ, ಅದಕ್ಕೆ ಕುವೆಂಪು ಅವರಿಗಿದ್ದಂತಹ ಅಂತರಂಗದ ಕಣ್ಣೇ ಬೇಕು! ಕೊಠಡಿಯಲ್ಲಿ ಕುಳಿತಿದ್ದ ಕವಿಯ ಕಣ್ಣು ಅಕಸ್ಮಾತ್ತಾಗಿ ತೆರೆದ ಕಿಟಕಿಯ ಮೇಲೆ ಬಿದ್ದು, ಕವಿ ಪಡೆದುಕೊಳ್ಳುವ ದಿವ್ಯ ರಸಾನುಭವವೇ 'ಕಿಟಕಿ-ಕಣ್ಣು' ಕವಿತೆಯಲ್ಲಿ ಅಕ್ಷರರೂಪ ಪಡೆದಿದೆ :

ಮನೆಯ ಮೈಗೆ ಕಿಟಕಿ ಕಣ್ಣು
ಕವಿ ಕೊಠಡಿಯ ಜೀವನು
ಮನೆಯ ಗುಡಿಗೆ ಕಿಟಕಿ ಪಡಿಮೆ
ಕಲೆಯ ಕಣ್ಣಿಗೇನು ಕಡಿಮೆ ?
ಪ್ರತ್ಯಕ್ಷನೋ ದೇವನು!

ಪುಟ್ಟ ಕಿಟಕಿಯ ಮೂಲಕ ಕವಿಯ ಕಣ್ಣಿಗೆ ಕಾಣುತ್ತಿರುವ ಆಕಾಶದ ತಿಳಿನೀಲಿ ಬಣ್ಣ ಅದೇ ಬಣ್ಣದ ಸಮುದ್ರದ ನೆನಪನ್ನು ತರುತ್ತಿದೆ. ಆ ದೃಶ್ಯ ನೋಡನೋಡುತ್ತ ಕವಿಯ ಮನಸ್ಸು ಕಲ್ಪನಾವಿಲಾಸದ ಬೆನ್ನೇರಿ ಹೋಗುತ್ತಿದೆ. ನಿಶ್ಚಲವಾಗಿರುವ ನೀಲಾಕಾಶದಲ್ಲಿ ಬಹುದೂರದಲ್ಲಿ ಒಂದು ಹಕ್ಕಿ ಹಾರಾಡುತ್ತಿದೆ. ನೋಡುತ್ತಿರುವವರ ಕಣ್ಣು ಸೋಲುವಂತೆ ಏರುತ್ತಾ ಇಳಿಯುತ್ತಾ 'ಬೆಳ್ಳಿಯ ಮುಗಿಲಿನ ಚೂರುಗಳಂತೆ' ಹಾರಾಡುತ್ತಾ ಚಿಕ್ಕೆಯಂತೆ ಮರೆಯಾಗಿ ಹೋಗುತ್ತಿರುವ ಹಕ್ಕಿಯನ್ನು ಕಂಡು ಕವಿಗೆ ಅನ್ನಿಸುವುದು ಹೀಗೆ - 'ಮುಕ್ತಿಯ ಪಡೆವ ಅಮಲಾತ್ಮಳಂತೆ ಶೂನ್ಯದಂಚಿನೊಳೆ ಹೊಂಚಾಡುತ್ತಿವೆಯಾ?' ಎಂದು.

ಕುವೆಂಪು ಪ್ರಕೃತಿಯ ಉಪಾಸಕ. ಆ ಅನಂತ ಸೌಂದರ್ಯ ಅವರನ್ನು ಹೆಜ್ಜೆ ಹೆಜ್ಜೆಗೂ ತಡೆದು ನಿಲ್ಲಿಸುತ್ತದೆ. ಆದರೆ ಅವರ ಕವಿತೆಗಳು ಪ್ರಕೃತಿಯ ಸೌಂದರ್ಯ ವರ್ಣನೆಯಿಂದ ಆರಂಭವಾಗಿ ಕೊನೆಗೊಳ್ಳುವುದು ಆ ಸೌಂದರ್ಯಾನುಭವದಿಂದ ಕವಿ ಪಡೆದುಕೊಳ್ಳುವ ಈ ಐಹಿಕ ಜಗತ್ತಿನದಲ್ಲದ ಅನುಪಮ, ಆಧ್ಯಾತ್ಮಿಕ ಸಾಕ್ಷಾತ್ಕಾರವೊಂದರಲ್ಲಿ. ಉದಾಹರಣೆಗೆ 'ಮಳೆಬಿಲ್ಲು' ಕವನದಲ್ಲಿ, ಬಾನಲ್ಲಿ ರಂಗವಲ್ಲಿ ಇಟ್ಟಂತೆ ತೋರುವ ಕಾಮನಬಿಲ್ಲನ್ನು ಕಂಡ ಕವಿಯ ಮನಸ್ಸು ಮಂತ್ರಮುಗ್ಧವಾಗಿ ಹೋಗಿದೆ:

ನೋಡಲ್ಲಿ ಮೂಡಿಹುದು ಮುಗಿಲಿನಲಿ ಮಳೆಬಿಲ್ಲು,
ಬಾನ್ದೇವಿಯಾಂತ ಮಣಿಹಾರದಂತೆ
ಮೂಕವಿಸ್ಮಿತನಾಗಿ ನಿಲ್ಲು, ಗೆಳೆಯನೆ ನಿಲ್ಲು
ಗುಡಿಯೆದುರು ಕೈಮುಗಿದ ಭಕ್ತನಂತೆ!

ಇಲ್ಲಿ 'ಗುಡಿಯೆದುರು ಕೈ ಮುಗಿದ ಭಕ್ತನಂತೆ' - ಎಂಬ ಸಾಲನ್ನು ಗಮನಿಸಿ. ಪ್ರಕೃತಿ ಮತ್ತು ಕುವೆಂಪುರವರ ನಡುವಿನ ಸಂಬಂಧ ದೇವ ಮತ್ತು ಭಕ್ತನ ನಡುವೆ ಇರುವಂತಹದು. ಪ್ರಕೃತಿಯ ಸೌಂದರ್ಯ ಅವರಲ್ಲಿ ಈ ಲೋಕವ್ಯಾಪಾರಗಳನ್ನು ಮೀರಿದಂತಹ ಅಲೌಕಿಕ ಸತ್ಯವೊಂದನ್ನು ಹೊಳೆಯಿಸಬಲ್ಲದು. ಮನ ಸೂರೆಗೈಯುತ್ತಿರುವ ಈ ಮಳೆಬಿಲ್ಲಿನ ಸೊಬಗು ಮನುಜ ಜೀವಿತದಂತೆ ಕ್ಷಣಿಕವೆನ್ನುವ ಅರಿವೂ ಕವಿಮನಕ್ಕೆ ಇಲ್ಲದಿಲ್ಲ.

ಮಳೆಬಿಲ್ಲಿನಂತೆಮ್ಮ ಬಾಳು ಚಣವಾದರೇನು ?
ಮಳೆಬಿಲ್ಲಿನಂತೆಯದು ಮಧುರತಮವಲ್ಲವೇನು ?
ಮಹಿಮೆಯ ಜೀವಿತವದೊಂದು ದಿನವಾದರೇನು ?
ಹೀನವಾಗಿಹ ಬಾಳು ಯುಗಯುಗಗಳಿದ್ದರೇನು ?

ಮಳೆಬಿಲ್ಲಿನ ಜೀವಿತಾವಧಿ ಕ್ಷಣಿಕವಾದರೂ ಅದರ ಬರುವಿಕೆ ವ್ಯರ್ಥವಾಗಿ ನಡೆದ ಕ್ರಿಯೆಯಲ್ಲ. ತನ್ನ ದೈವಿಕ ಚೆಲುವಿನಿಂದ ಲೋಕದ ಜನರ ಕಣ್ಮನ ಸೂರೆಗೊಳ್ಳುವ ಅದರ ಜನ್ಮ ಪಾವನ. ಹಾಗೆಯೇ ಹೀನರೀತಿಯಿಂದ ಬಹುಕಾಲ ಜೀವಿಸಿರುವುದಕ್ಕಿಂತಲೂ

ಸಾರ್ಥಕವಾದ ರೀತಿಯಲ್ಲಿ ಕಾಮನಬಿಲ್ಲಿನಂತೆಯೇ ಉನ್ನತ ರೀತಿಯಲ್ಲಿ ಬಾಳಿ ಬದುಕಬೇಕೆಂಬ ಅಪೂರ್ವ ಸಂದೇಶವನ್ನು ಮನುಜರ ಬಾಳಿಗೆ 'ಮಳೆಬಿಲ್ಲು' ನೀಡುತ್ತಿದೆ.

ನಿಸರ್ಗದ ಕುರಿತಾದ ಇದೇ ರೀತಿಯ ಭಕ್ತಿ ಭಾವವನ್ನು ಕುವೆಂಪುರವರ ಹಲವಾರು ಕವಿತೆಗಳಲ್ಲಿ ಗುರುತಿಸಬಹುದು. 'ಕಡಲ ತಡಿ' ಕವಿತೆಯಲ್ಲೂ ಇಂತಹದೇ ನಮ್ರ ಭಾವವಿದೆ. ಮಳೆಬಿಲ್ಲಿನೆದುರು ಕವಿ ಗುಡಿಯೆದುರು ಕೈ ಮುಗಿದು ನಿಂತ ಭಕ್ತನಾದರೆ ಕಡಲಿನ ಭವ್ಯತೆಯ ಮುಂದೆ ಗುರುವಿನ ಬಳಿಯಲ್ಲಿ ಕೈ ಕಟ್ಟಿ ನಿಂತಿರುವ ವಿಧೇಯ ಶಿಷ್ಯ!

ಗುರುವಿನೆಡೆಯ ಶಿಷ್ಯನಂತೆ
ಹರಿಯ ಬಳಿಯ ಭಕ್ತನಂತೆ
ಸೊಬಗನೊಲಿದ ನಾನು ನಿಂತೆ
ಕಡಲ ತಡಿಯ ಗುಡಿಯಲಿ

'ಆನಂದಮಯ ಈ ಜಗಹೃದಯ' ಕವಿತೆಯೂ ಕೂಡ ಇದೇ ಭಾವವನ್ನೇ ಹೊಮ್ಮಿಸುತ್ತದೆ. ನಮ್ಮ ನಿರ್ಭಾವುಕತೆಯ ಬರಿಗಣ್ಣಿಗೆ ದೈನಂದಿನ ಜೀವನದ ಸಾಮಾನ್ಯ ಘಟನೆಯಾಗಿ ತೋರುವ ಸೂರ್ಯೋದಯ, ಚಂದ್ರೋದಯಗಳನ್ನು ಕವಿ ಕುವೆಂಪುರವರ ಕಣ್ಣಿನಿಂದ ನೋಡಿದಾಗ 'ಈ ಸೂರ್ಯೋದಯ, ಚಂದ್ರೋದಯ ಸಾಮಾನ್ಯವೇನಲ್ಲ, ಅವು ದೇವರ ದಯೆ' ಅನ್ನಿಸಿ ಬಿಡುವಂತಹ ವಿನೀತ ಭಾವನೆ ಮನವನ್ನು ಆವರಿಸಿಕೊಳ್ಳುತ್ತದೆ.

ಬಿಸಿಲಿದು ಬರಿ ಬಿಸಿಲಲ್ಲವೊ
ಸೂರ್ಯನ ಕೃಪೆ ಕಾಣೊ
ಸೂರ್ಯನು ಬರೀ ರವಿಯಲ್ಲವೊ
ಆ ಭ್ರಾಂತಿಯ ಮಾಣೊ

ಎಂಬ ಸಾಲುಗಳಲ್ಲಿ ಆ ಮಹಾಶಕ್ತಿಯ ಮುಂದೆ ಯಾರೊಬ್ಬನೂ ಸ್ವತಂತ್ರನಲ್ಲ, ಪ್ರಕೃತಿಯೊಂದೇ ಸತ್ಯ, ಶಾಶ್ವತ ಎಂಬ ಅನಿಸಿಕೆ ಇದೆ. ಕುವೆಂಪುರವರ ಪ್ರಕಾರ ದೇವರ ಅಸ್ತಿತ್ವವಿರುವುದು ಈ ನಿತ್ಯ ವಿನೂತನವಾದ ನಿಸರ್ಗದ ಮೂಲಕವೇ. 'ಸೊಬಗಿನಲಿ ಶಿವನಿಹನು, ಶಿವನೆ ಸೊಬಗಾಗಿಹನು' ಅನ್ನುವ ಅವರ ದಿವ್ಯದೃಷ್ಟಿಗೆ ಶಿವ ಬೇರೆಯಲ್ಲ. ಶಿವನಿಲ್ಲದೆ ಸೌಂದರ್ಯವಿಲ್ಲ. ಶಿವನಿಲ್ಲದ ಸೌಂದರ್ಯಕ್ಕೆ ಬೆಲೆಯೂ ಇಲ್ಲ. 'ಶಿವನಿಲ್ಲದೆ ಸೌಂದರ್ಯವೆ? ಶವ ಮುಖದ ಕಣ್ಣು!' ಎಂಬ ಉದ್ಗಾರದಲ್ಲಿ ಅವರ ಈ ಮನೋಭಾವ ಸ್ಪಷ್ಟವಾಗುತ್ತದೆ.

ಸೌಂದರ್ಯವೆನ್ನ ಹರಿ! ಸೌಂದರ್ಯವೆನ್ನ ಹರ!
ಸೌಂದರ್ಯವೆನ್ನ ಅವ್ಯಕ್ತ ಬ್ರಹ್ಮ!
ಸೌಂದರ್ಯವೇ ಪುಣ್ಯ; ಸೌಂದರ್ಯವೇ ಸ್ವರ್ಗ;
ಸೌಂದರ್ಯವೇ ನನ್ನ ಚರಮಮೋಕ್ಷ!

'ಸತ್ಯಂ ಶಿವಂ ಸುಂದರಂ ಎಂದು ಹಾಡಿದರು ರಸಋಷಿಗಳೆಲ್ಲ, ಮರೆತದನು ನಾವುಗಳಿಂದು ನೊಂದಿಹೆವು ಜಡಬಾಳ್ಗೆ ಬೇಸತ್ತು. ಸತ್ಯದಲಿ ಶಿವವಿಹುದು, ಶಿವದಲ್ಲಿ ಸತ್ಯವಿದೆ, ಮೇಣೆರಡು ಸೌಂದರ್ಯದಲಿ ಲೀನವಾಗಿಹುದು' ಸತ್ಯ, ಶಿವ ಮತ್ತು ಸೌಂದರ್ಯಗಳ ಸಂಗಮವಾದಾಗಲೇ ಜೀವಿಗೆ ದೊರಕುವ ಆನಂದಾನುಭವ ಅಪೂರ್ವ. 'ಸೊಬಗೆ ನನ್ನಿಯೆಂದು ಸಾರಿ, ನನ್ನಿಯೆ ಸೊಬಗೆಂದು ತೋರಿ' ಎಂದು ಘಂಟಾಘೋಷವಾಗಿ ಸಾರುವ ಕುವೆಂಪು ಅವರಿಗೆ ಸೌಂದರ್ಯವೇ ಶಿವ, ಶಿವನೇ ಸತ್ಯ. ಸೃಷ್ಟಿಯನ್ನು ಎತ್ತಿ ಹಿಡಿದಿರುವ ಆ ಅನಂತ ಶಕ್ತಿಯ ಸೌಂದರ್ಯ ನೀಲಾಗಸದಲ್ಲಿ, ವಿಶಾಲ ಸಾಗರದಲ್ಲಿ, ಕೋಮಲ ಕುಸುಮಗಳಲ್ಲಿ, ತರುಲತೆಗಳಲ್ಲಿ ವ್ಯಕ್ತಗೊಂಡಿದೆ.

ನಾವು ನಮ್ಮ ಸುತ್ತಲಿನ ಪರಿಸರವನ್ನು ತೆರೆದ ಮನಸ್ಸಿನಿಂದ ಒಮ್ಮೆ ನಿಂತು ನೋಡಿದರೆ ಸಾಕು, ಯೋಚಿಸಬಲ್ಲ ಮನುಷ್ಯನಿಗೆ ಸಮಾಜದಲ್ಲಿಲ್ಲವಾಗಿರುವ ಸಹಬಾಳ್ವೆ, ಸಹಕಾರದಿಂದ ಕೂಡಿದ ಸಮರಸದ ಜೀವನ ಅಲ್ಲಿರುವುದು ಗಮನಕ್ಕೆ ಬರುತ್ತದೆ. ನಿಸರ್ಗದ ಎಲ್ಲ ಜೀವರಾಶಿಗಳೂ ಯಾವುದೋ ಉನ್ನತ ಧ್ಯೇಯವೊಂದನ್ನು ಪೂರ್ಣಗೊಳಿಸಲು ಒಮ್ಮತದಿಂದ ಶ್ರಮಿಸುತ್ತಿವೆಯೇನೋ ಎಂಬ ಭಾವನೆ ಮನವನ್ನು ಆವರಿಸುತ್ತದೆ. ಪ್ರಕೃತಿಯೇ ಮಾನವನಿಗೆ ಪರಮಗುರುವಿನಂತೆ ಮುಂದೆ ನಿಂತು ಅರ್ಥಪೂರ್ಣ ಸಂದೇಶ ನೀಡುತ್ತಿದೆ ಎಂಬ ಭಾವ ಕುವೆಂಪು ಅವರ ಬಹಳ ಕವಿತೆಗಳಲ್ಲಿ ಕಂಡುಬರುತ್ತದೆ. 'ನಿನ್ನ ಬಾಂದಳದಂತೆ ನನ್ನ ಮನವಿರಲಿ, ನಿನ್ನ ಸಾಗರದಂತೆ ನನ್ನ ಎದೆಯಿರಲಿ' ಎಂಬ ಕವಿತೆ ಮನುಷ್ಯ ಏರಬಹುದಾದ ಎತ್ತರಕ್ಕೆ ಪ್ರಕೃತಿಯೇ ಆದರ್ಶ ಎಂದು ಪ್ರತಿಪಾದಿಸುತ್ತದೆ.

ಕವಿಯೊಬ್ಬ ಅಮರನಾಗುವುದು ತನ್ನ ಕೃತಿಗಳ ಮೂಲಕ. ಕುವೆಂಪು ಭೌತಿಕವಾಗಿ ನಮ್ಮಿಂದ ಮರೆಯಾಗಿದ್ದರೂ ಅವರು ತಮ್ಮ ಸಾಹಿತ್ಯದ ಮೂಲಕ ಜೀವ ತುಂಬಿರುವ ನಿಸರ್ಗ ಪ್ರೇಮಕ್ಕೆ ಅಳಿವಿಲ್ಲ. ಸೃಷ್ಟಿಯ ಕೈಸಾಲೆಯಲ್ಲಿ ಎಲ್ಲರೂ ಸಮಾನರು ಎಂದು ನಂಬಿದ್ದ ಕುವೆಂಪು ತಮ್ಮ ಕೃತಿಯಲ್ಲೂ ಕೂಡ ಇದನ್ನು ಸಾಧಿಸಿ ತೋರಿಸಿದ್ದಾರೆ. ಹಿಮಾಲಯವನ್ನು ಹೊಗಳಿ ಬರೆಯುವಾಗ ಇದ್ದಷ್ಟೇ ಅಕ್ಕರೆಯ ಭಾವವನ್ನು ಹೀರೆಹೂವನ್ನು ಕುರಿತು ಬರೆಯುವಾಗಲೂ ತೋರಿದ್ದಾರೆ. ಅವರು ನಿಸರ್ಗವನ್ನು ಹೃದಯಕ್ಕೆ ಹತ್ತಿರವಾಗಿಸಿಕೊಂಡವರು; ಉತ್ಕಟವಾಗಿ ಪ್ರೀತಿಸಿ, ಆರಾಧಿಸಿದವರು. ಈ ಜಗತ್ತಿನ ಎಲ್ಲಾ ಚರಾಚರ ವಸ್ತುಗಳಲ್ಲೂ ಅನುಪಮ ಸೌಂದರ್ಯವಿದೆ ಎಂದು ನಂಬಿದ್ದ ಅಪ್ಪಟ ಜೀವನಪ್ರೇಮ ಅವರದು. 'ಭಗವಂತ ಇಲ್ಲಿರದೆ ಮತ್ತೆಲ್ಲಿ ವೈಕುಂಠದಲ್ಲಿಹನೆ?' – ಎಂದು ಪ್ರಕೃತಿಯ ದಿವ್ಯ ಸಾನ್ನಿಧ್ಯದಲ್ಲೇ ಪರಮಾತ್ಮನ ಸನ್ನಿಧಾನವಿದೆ ಎಂದು ಹೃದಯಪೂರ್ವಕವಾಗಿ ಭಾವಿಸಿದ್ದ, ಅಂತೆಯೇ ಬಾಳಿ ಬದುಕಿದ ನಿಸರ್ಗ ಪ್ರೇಮಿ ಅವರು. ಪರಿಸರಪ್ರೇಮ ಬರೀ ತೋರಿಕೆಯ ಹೋರಾಟವಾಗಿರುವ ಇಂದಿನ ದಿನಗಳಲ್ಲಿ ಕುವೆಂಪು ಅವರ ಪ್ರಕೃತಿಪ್ರೀತಿ ಅನುಕರಣೀಯವೆನ್ನಿಸುತ್ತದೆ!

ಮೈಸೂರಿನಲ್ಲಿ ಸಕಲ ನಗರನಾಗರೀಕತೆಯ ನಡುವೆ ನೆಲೆಸಿದ್ದರೂ ಕುವೆಂಪು ಅವರ ಮನಸ್ಸನ್ನು ಕೊರೆಯುತ್ತಿದ್ದುದು ಮಲೆನಾಡಿನ ವಿರಹ! ಎದೆಯಾಳದಲ್ಲಿ ಮತ್ತೆ ಮತ್ತೆ ಅನುರಣನಗೊಳ್ಳುತ್ತಿದ್ದುದು ಬಾಲ್ಯದಲ್ಲಿ ಗಿರಿಕಾನನದ ನಡುವೆ ಕಳೆದ ದಿನಗಳ ಸವಿನೆನಪುಗಳು! ನಿಸರ್ಗದ ನೈಜ ಚೆಲುವಿನಿಂದ ದೂರವಿದ್ದು ಗೂಡು ತಪ್ಪಿ ಬಂದ ಹಕ್ಕಿಯಂತಿದ್ದ ಅವರ ಹೃದಯದಲ್ಲಿ ಸದಾ ಮಿಡಿಯುತ್ತಿದ್ದುದು ತವರು ನೆಲದ ಸೆಳೆತವೇ! ಅವರ ಅಂತರಂಗದಲ್ಲಿ ನಿತ್ಯ ಅಲಾಪನೆಯಾಗುತ್ತಿದ್ದ ಅಭಿಲಾಷೆಯ ಪಲ್ಲವಿ ಇದು :

ಹೋಗುವೆನು ನಾ ಹೋಗುವೆನು ನಾ ನನ್ನ ಒಲುಮೆಯ ಗೂಡಿಗೆ;
ಮಲೆಯ ನಾಡಿಗೆ, ಮಳೆಯ ಬೀಡಿಗೆ, ಸಿರಿಯ ಚೆಲುವಿನ ರೂಢಿಗೆ
ಬೇಸರಾಗಿದೆ ಬಯಲು, ಹೋಗುವೆ ಮಲೆಯ ಕಣಿವೆಯ ಕಾಡಿಗೆ;
ಹಸುರು ಸೊಂಪಿನ ಬಿಸಿಲು ತಂಪಿನ ಗಾನದಿಂಪಿನ ಕೂಡಿಗೆ!

# ಪುಟ್ಟಪ್ಪನವರ ಸುನೀತಗಳು

ಎಚ್.ವಿ. ರಂಗಾಚಾರ್, ನ್ಯೂಜರ್ಸಿ

ಪುಟ್ಟಪ್ಪನವರು ಕನ್ನಡದಲ್ಲಿ ಅಗ್ರಸ್ಥಾನ ಪಡೆದಿರುವ ಮಹಾಕವಿಗಳೆಂದು ಎಲ್ಲ ಕನ್ನಡಿಗರಿಗೂ ತಿಳಿದ ವಿಷಯ. ಆದರೆ ಅಮೆರಿಕದಲ್ಲಿ ನೆಲಸಿರುವ ಅನೇಕ ಕನ್ನಡಿಗರಿಗೆ ಸುನೀತವೆಂದರೇನೆಂದು ತಿಳಿಯದಿರಬಹುದು. ಸುನೀತವೆಂದರೆ ಒಂದು ಬಗೆಯ ಕವಿತೆ. ಒಂದು ವಿಶಿಷ್ಟವಾದ ಛಂದ ಮತ್ತು ಪಾದಗಳ ರಚನೆಯ ವೃತ್ತದ ಹೆಸರು. ಆದರೆ ಇದು ಭಾರತೀಯ ಪರಂಪರೆಯ ವೃತ್ತವಲ್ಲ. ಇದು ಇಂಗ್ಲಿಷ್ ಭಾಷೆಯಿಂದ ಕನ್ನಡಕಾವ್ಯ ಪ್ರಪಂಚಕ್ಕೆ ಪ್ರವೇಶಿಸಿ ಕನ್ನಡ ಕವಿಗಳ ಆದರವನ್ನೂ, ಭಾವಪೋಷಣೆಯನ್ನೂ ಗಳಿಸಿ ಕೃಷಿಗೊಂಡಿದೆ. ಹೀಗೆ ಬೇರೆ ಯಾವ ಭಾರತೀಯ ಭಾಷೆಯಲ್ಲೂ ಆಗಿರುವುದು ನನಗೆ ತಿಳಿಯದು. ಇದೊಂದು ಅಪರೂಪದ ಸಮಾಚಾರ. ಕನ್ನಡಕ್ಕೆ ಹೆಮ್ಮೆ ತರುವಂಥದು.

ಇಂಗ್ಲಿಷಿನ ಸಾನೆಟ್ಟಿನಿಂದ ಬಂದಿರುವ ಈ ವೃತ್ತಕ್ಕೆ ಕನ್ನಡ ಕವಿಗಳು ಸುನೀತ ಎಂಬ ಕನ್ನಡದ ಹೆಸರು ಕೊಟ್ಟಿದ್ದಾರೆ. ಅದು ಅಷ್ಟಾಗಿ ಒಪ್ಪುವುದಿಲ್ಲ. ಸುನೀತಕ್ಕೂ ಸಾನೆಟ್ಟಿಗೂ ಸ್ವಲ್ಪಮಟ್ಟಿಗೆ ಉಚ್ಚಾರಣೆಯ ಸಾಮ್ಯತೆಯಿದೆಯಷ್ಟೆ ಅರ್ಥಸಾಮ್ಯತೆಯಿಲ್ಲ. ಸಾನೆಟ್ ಲ್ಯಾಟಿನ್ ಭಾಷೆಯ ಪದ. ಅದರ ಅರ್ಥ ಸಣ್ಣ ಹಾಡು ಎಂದು. ಅದರ ಹಿನ್ನೆಲೆಯನ್ನು ಪರಿಶೀಲಿಸಿ ನೋಡಿದರೆ ಅದು ಉತ್ತರ ಇಟಲಿಯ ಪ್ರಾವೆನ್ಸ್ ಎಂಬ ಪ್ರದೇಶದಲ್ಲಿ ಜನ್ಮತಾಳಿದ ಪುಟ್ಟ ಜಾನಪದ ಪ್ರೇಮಗೀತೆ. ಇಟಲಿಯ ಲೆಂಟಿನೋ, ಅರೆಸ್ಸೋ, ಗ್ವಿನಿಸೆಲ್ಲಿ ಮೊದಲಾದವರಿಂದ ಬಳಕೆಯಾದ ಈ ಪದ್ಯರೂಪವನ್ನು ಉತ್ಕಟ ಸಂವೇದನೆಗಳ ಅಭಿವ್ಯಕ್ತಿಗೆ ತನ್ನ 'ವಿಟನೋವಾ' ಕೃತಿಯಲ್ಲಿ ಮೊದಲು ಬಳಸಿದವನು ಮಹಾಕವಿ ಡಾಂಟೆ. ಅವನ ನಂತರ ಹದಿನಾಲ್ಕನೆಯ ಶತಮಾನದಲ್ಲಿ ಇದನ್ನು ಇನ್ನಷ್ಟು ಪ್ರಸಿದ್ಧಗೊಳಿಸಿದವನು ಪೀಟ್ರಾರ್ಕ್ ಎಂಬ ಇನ್ನೊಬ್ಬ ಇಟ್ಯಾಲಿಯನ್ ಕವಿ. ಹದಿನಾರನೆಯ ಶತಮಾನದಲ್ಲಿ ಅದು ಇಂಗ್ಲಿಷಿಗೆ ಬಂತು. ಸಿಡ್ನಿ, ಸ್ಪೆನ್ಸರ್, ಡೇನಿಯನ್ ಮೊದಲಾದ ಕವಿಗಳು ಸಾನೆಟ್ ಚಕ್ರಗಳನ್ನೇ ರಚಿಸಿದರು. ಇಂಗ್ಲಿಷಿನ ಮಹಾಕವಿ ಮತ್ತು ಪ್ರಸಿದ್ಧ ನಾಟಕಕಾರ ವಿಲಿಯಂ ಷೇಕ್ಸ್‌ಪಿಯರ್ ಸಾನೆಟ್ಟುಗಳನ್ನು ರಚಿಸುವುದರಲ್ಲಿ ನಿಸ್ಸೀಮನಾಗಿದ್ದವನು. ಅವನು ೧೫೪ ಸಾನೆಟ್ಟುಗಳನ್ನು ಇಂಗ್ಲಿಷಿನಲ್ಲಿ ರಚಿಸಿದ್ದಾನೆ.

ಸಾನೆಟ್ ಪದ್ಯ ಮೊಟ್ಟಮೊದಲು ಕನ್ನಡ ಕವಿಗಳ ಕೈಸೇರಿದಾಗ ಅದು ಅವರಿಗೆ ಅತೀವ ಆಕರ್ಷಕವಾಗಿದ್ದಿರಬೇಕು. ಅದರ ಸಾಧ್ಯಾಸಾಧ್ಯತೆಗಳು ಅತಿ ಮೋಹಕವಾಗಿದ್ದಿರಬೇಕು. ಆ

ಸಂಧಿಕಾಲದ ಕನ್ನಡ ಕವಿಗಳೆಲ್ಲರೂ ಅದನ್ನು ತಮ್ಮ ಕವನಕಾರ್ಯಕ್ಕೆ ಆಸಕ್ತಿಯಿಂದ ಅಳವಡಿಸಿಕೆಂಡರು. ಅಂಥವರಲ್ಲಿ ಪುಟ್ಟಪ್ಪನವರು ಪ್ರಮುಖರು.

ಸಾನೆಟ್ ಮೊದಲು ಕನ್ನಡದಲ್ಲಿ ರೂಪಗೊಂಡಾಗ ಅದಕ್ಕೆ ಅಷ್ಟ-ಷಟ್ಪದಿಯೆಂದು ಹೆಸರಾಯಿತು. ಏಕೆಂದರೆ ಅದರಲ್ಲಿ ಇಂಗ್ಲಿಷಿನಲ್ಲಿರುವಂತೆಯೇ ತದ್ವತ್ತಾಗಿ, ಎಂಟು ಮತ್ತು ಆರು, ಎಟ್ಟು ಹದಿನಾಲ್ಕು ಸಾಲುಗಳಿರುವಂತೆ ರಚಿಸುತ್ತಿದ್ದರು. ಅಂತ್ಯ ಪ್ರಾಸ ಅಳವಡಿಕೆ ಆಗಲೆ ಆ ಕಾಲದ ಕವಿತೆಗಳ ರಚನೆಯಲ್ಲಿ ಬೇರೂರಿಕೊಂಡಿತ್ತು. ಅದು ಇಂಗ್ಲಿಷ್ ಪದ್ಧತಿಯ ಪ್ರಭಾವ. ದ್ರಾವಿಡ ಪದ್ಧತಿಯಲ್ಲಿ ದ್ವಿತೀಯಾಕ್ಷರ ಪ್ರಾಸವಿರುತ್ತದೆ. ಅದು ಬಹಳ ಬೇಗ ಅಂತ್ಯಪ್ರಾಸಕ್ಕೆ ತಿರುಗಿದ್ದು ನೋಡಿದರೆ, ನಮ್ಮ ಕವಿತೆ ಇಂತಹ ನವೀನತೆಗಳಿಗೆ ಸಿದ್ಧವಾಗಿ ಕಾಯುತ್ತಾ ಕುಳಿತಿತ್ತೇನೋ ಎನ್ನಿಸುತ್ತದೆ.

ಸಾನೆಟ್ಟಿನ ಅನುಕರಣೆಯು ಅಷ್ಟ-ಷಟ್ಪದಿಯ ರೂಪದಲ್ಲೇ ಚಿರಕಾಲ ಸ್ಥಗಿತವಾಗಿ ನಿಲ್ಲಲಿಲ್ಲ. ಕವಿಗಳು ಈ ಹೊಸ ವೃತ್ತದ ರಚನೆಯಲ್ಲಿ ಅನೇಕ ಪ್ರಯೋಗಗಳನ್ನು ಮಾಡಲು ತೊಡಗಿದರು. ಈ ಪ್ರಯೋಗಗಳ ಫಲವಾಗಿ ಉಂಟಾದ ವೈವಿಧ್ಯಗಳನ್ನೆಲ್ಲಾ ಒಳಗೆಂಡ ಸುನೀತ ಎಂಬ ಒಂದು ವೃತ್ತ ಪ್ರಭೇದವೇ ಹುಟ್ಟಿಕೊಂಡಿದೆ. ಅದರಲ್ಲಿ ಅಷ್ಟ-ಷಟ್ಪದಿಯೂ ಸಮ್ಮಿಳಿತವಾಗಿದೆಯೆಂದು ನನ್ನ ಅಭಿಪ್ರಾಯ. ಪ್ರೊಫೆಸರ್ ಶಿವರುದ್ರಪ್ಪನವರಂಥ ಶುದ್ಧ ಲಾಕ್ಷಣಿಕರು ಕೆಲವರು ಇದನ್ನು ಒಪ್ಪುವುದಿಲ್ಲ. ಅವರು ಸುನೀತವೆಂದರೆ ಅಷ್ಟ-ಷಟ್ಪದಿಗೆ ಮಾತ್ರ ಅನ್ವಯಿಸುತ್ತದೆಯೆಂದು ಹೇಳುತ್ತಾರೆ.

ಸುನೀತದ ಇತರ ಪ್ರಾಯೋಗಿಕ ರೂಪಗಳೆಂದರೆ, ಎಂಟು ಮತ್ತು ನಾಲ್ಕು, ಅಂದರೆ ಹನ್ನೆರಡು ಪಾದಗಳ ಒಂದು ರೂಪ ಮತ್ತು ಎಂಟು ಮತ್ತು ಎರಡು, ಅಂದರೆ ಹತ್ತು ಪಾದಗಳ ಇನ್ನೊಂದು ರೂಪ. ಇವುಗಳಲ್ಲಿ ಮೊದಲನೆಯದನ್ನು ಪುಟ್ಟಪ್ಪನವರು (ಅವರ 'ಹೊನ್ನ ಹೊತ್ತಾರೆ' ಕವನ ಸಂಗ್ರಹದಲ್ಲಿ) ಮತ್ತು ಎರಡನೆಯದನ್ನು ಪು.ತಿ.ನ ಅವರು ('ಮಲೆದೇಗುಲ' ಕಾವ್ಯದಲ್ಲಿ) ಬಳಕೆಗೆ ತಂದಿದ್ದಾರೆ. ಪುಟ್ಟಪ್ಪನವರು ಪಾದಗಳ ವಿಂಗಡಣೆಯಲ್ಲಿಯೂ ಹೆಚ್ಚು ಪ್ರಯೋಗಶೀಲರಾಗಿರುವುದು ಕಂಡುಬರುತ್ತದೆ. ಹದಿನಾಲ್ಕು ಪಾದಗಳ ಮಾರ್ಗ ಪದ್ಧತಿಯ ರಚನೆಯನ್ನೇ ತೆಗೆದುಕೊಳ್ಳೋಣ. ಇದನ್ನು ಎಂಟು, ಮೂರು, ಮೂರು ಅಥವಾ ಎಂಟು, ನಾಲ್ಕು, ಎರಡು ಅಥವಾ ನಾಲ್ಕು, ನಾಲ್ಕು, ನಾಲ್ಕು ಎರಡು ಇತ್ಯಾದಿ ಬಹಳ ಸಾಧ್ಯತೆಗಳನ್ನು 'ಹೊನ್ನಾ ಹೊತ್ತಾರೆ'ಯಲ್ಲಿ ನೋಡುತ್ತೇವೆ. ಹನ್ನೆರಡು ಪಾದಗಳ ರಚನೆಯನ್ನೂ ಇದೇ ರೀತಿಯಲ್ಲಿ ಭಿನ್ನ ಭಿನ್ನವಾಗಿ ವಿಂಗಡಿಸಿರುವುದೂ 'ಹೊನ್ನ ಹೊತ್ತಾರೆ'ಯಲ್ಲಿ ಕಂಡುಬರುತ್ತದೆ.

ಸುನೀತದಲ್ಲಿ ಕವಿಗಳು ಐದು ಮಾತ್ರೆಗಳ ಗಣಗಳ ಪ್ರಯೋಗವನ್ನು ಹೆಚ್ಚಾಗಿ ಮಾಡುವುದು ಕಂಡುಬರುತ್ತದೆ. ಆದರೆ ಛಂದದ ಕಟ್ಟಳೆ ಅತಿ ನಿಷ್ಠವಾಗಿ ಇರುವುದಿಲ್ಲ. ವಾಚನ ಸಂವಹನಕ್ಕೆ ತೊಡರಾಗದಂತಿದ್ದರೆ ಛಂದೋಭಂಗವಾದರೂ ಪರವಾಗಿಲ್ಲ

ಅನ್ನುವುದು ಆಧುನಿಕ ಮನೋಭಾವ. ಐದು ಮಾತ್ರೆಗಳ ಛಂದದಲ್ಲಿಯ ಸಂವಹನ ಗಂಭೀರವಾದ ತಾತ್ತ್ವಿಕ ಭಾವನೆಗಳಿಗೆ ತುಂಬಾ ಹೊಂದುತ್ತದೆ. ಪುಟ್ಟಪ್ಪನವರು ತಮ್ಮ ಸುನೀತಗಳಲ್ಲಿ ಐದು ಮಾತ್ರೆಗಳ ಪ್ರಯೋಗವನ್ನು ಬಹಳ ಸೊಗಸಾಗಿ ಪಾಲಿಸಿದ್ದಾರೆ.

ಪಾದಾಂತ್ಯದಲ್ಲಿ ಪ್ರಾಸವಿಡುವ ವಿಚಾರವನ್ನು ನಾನು ಆಗಲೇ ಹೇಳಿದ್ದೇನೆ. ಆದರೆ ಇದರಲ್ಲೂ ಪುಟ್ಟಪ್ಪನವರು ಅತ್ಯಂತ ವೈವಿಧ್ಯಪೂರ್ಣ ಪ್ರಯೋಗಗಳನ್ನು ನಮಗೆ ತೋರಿಸಿದ್ದಾರೆ. ಉದಾಹರಣೆಗೆ, ಪೂರ್ವಾರ್ಧದಲ್ಲಿ ಪ್ರಾಸವಿರುವ ಪಾದಗಳು (೧,೪) (೨,೩); (೫,೮) (೬,೭) ಹೀಗಿದ್ದರೆ, ಉತ್ತರಾರ್ಧದಲ್ಲಿ (೯,೧೦) (೧೧,೧೨) (೧೩,೧೪) ಆಗಿರುತ್ತವೆ. ಈ ಕ್ರಮ ಎಲ್ಲಾ ಕವನಗಳಲ್ಲೂ ಒಂದೇ ಸಮನೇ ಇರುವುದಿಲ್ಲ. ಎಲ್ಲೆಲ್ಲೂ ಪರಿವರ್ತನೆಯಿಂದ ತುಂಬಿ ಬಹಳ ವೈವಿಧ್ಯಪೂರ್ಣವಾಗಿರುತ್ತದೆ. ಇಂತಹ ಪ್ರಾಸಕ್ರಮಗಳನ್ನೆಲ್ಲಾ ಸಂಪೂರ್ಣವಾಗಿ ವಿವರಿಸಲು ಇಲ್ಲಿ ಸಾಧ್ಯವಲ್ಲ. ಸಾಧುವೂ ಅಲ್ಲ.

ಸುನೀತಗಳ ಚರಣಗಳು ಛಂದೋಬದ್ಧವಾಗಿ ಹಾಡುವುದಕ್ಕೆ ಅನುಕೂಲವಾಗಿರುತ್ತವೆ. ಆದರೆ ರಾಗ, ತಾಳಬದ್ಧವಾಗಿ ಶಾಸ್ತ್ರೀಯವಾಗಿ ಹಾಡುವುದಕ್ಕಲ್ಲ. ಒಂದು ತರಹ ಮುಕ್ತ ಧಾಟಿಯಲ್ಲಿ ಹಾಡಬೇಕು. ಇಲ್ಲೂ ಇಂಗ್ಲಿಷಿನ ಪ್ರಭಾವವಿದೆ. ವೈಚಾರಿಕ ಮತ್ತು ಚಿಂತನಾತ್ಮಕ ವಸ್ತು ನಿರೂಪಣೆಗೆ ಚೆನ್ನಾಗಿ ಹೊಂದಿಕೊಳ್ಳುತ್ತವೆ. ಜೊತೆಗೆ ಸ್ವಾರಸ್ಯವಾದ ಪ್ರಾಸಕ್ರಮಗಳ ಆಕರ್ಷಣೆ. ಎಲ್ಲಾ ಒಟ್ಟಾಗಿ ಸೇರಿ ಸುನೀತವು ಪದ್ಯಪ್ರೇಮಿಗಳನ್ನು ಸಂತೋಷಕ್ಕೆ ಮತ್ತು ಸಾಧ್ಯವಾದರೆ ರಸೋತ್ಕರ್ಷಕ್ಕೂ ಒಯ್ಯುತ್ತದೆ.

ಪುಟ್ಟಪ್ಪನವರು ಸುನೀತಗಳನ್ನು ಬಳಸಿಕೊಳ್ಳುವುದರಲ್ಲಿ ಬಹಳ ಕುಶಲಿಗಳು. ಮೈಸೂರು ವಿಶ್ವವಿದ್ಯಾಲಯದ ಪ್ರಾರಂಭದ ವರ್ಷಗಳಲ್ಲಿ ಅಲ್ಲಿ ಕಲಿಯಲು ಅತ್ಯುತ್ಸಾಹದಿಂದ ಮುನ್ನುಗ್ಗಿದ ಅಂದಿನ ಕನ್ನಡದ ನವಯುವಜನಕ್ಕೆ ವಿದೇಶದಿಂದ ಬಂದ ಪ್ರಾಧ್ಯಾಪಕರ ಪ್ರಭಾವದಿಂದ ಇಂಗ್ಲೀಷ್, ಲ್ಯಾಟಿನ್ ಮತ್ತು ಗ್ರೀಕ್ ಸಾಹಿತ್ಯಗಳ ಪರಿಚಯವಾಗಲು ಅವಕಾಶವಾಯಿತು. ಆ ವಿದ್ಯಾರ್ಥಿಗಳಲ್ಲಿ ಒಬ್ಬರಾಗಿದ್ದ ಪುಟ್ಟಪ್ಪನವರು ಇಂಗ್ಲಿಷ್ ಕವಿತೆಗಳ ನವೀನ ಮತ್ತು ಸರಳ ಸೌಂದರ್ಯಕ್ಕೆ ಮನಸೋತರು. ಆ ಕಾಲದ ಮಹಿಮೆಯೇ ಹಾಗಿತ್ತು. ಪುಟ್ಟಪ್ಪನವರು ಮಾತ್ರವಲ್ಲ, ಅವರಂತೆಯೇ ಪ್ರಾಯಶಃ ಅಂದಿನ ವಿದ್ಯಾರ್ಥಿಗಳೆಲ್ಲರೂ ಅದೇ ರೀತಿಯಲ್ಲಿ ಇಂಗ್ಲಿಷ್ ಭಾಷೆಯ ಪ್ರಭಾವದ ಮೋಹದಲ್ಲಿ ಸಿಕ್ಕಿಬಿದ್ದಿದ್ದರು. ಆಗ ಎಲ್ಲವನ್ನೂ ಇಂಗ್ಲಿಷಿನವರಂತೆಯೆ ಮಾಡಬೇಕೆಂಬ ಆಸೇ ಎಲ್ಲರಿಗೂ ಹರಡಿತ್ತು. ಈ ಹುಚ್ಚಿನಲ್ಲಿ ಕೆಲವು ಒಳ್ಳೆಯ ಪರಿಣಾಮಗಳೂ ಆದವು. ಪುಟ್ಟಪ್ಪನವರು ಮತ್ತು ಇನ್ನೂ ಕೆಲವು ತರುಣ ಕವಿಗಳು ಸಾನೆಟ್ ಕವನ ಪ್ರಕಾರವನ್ನು ಕನ್ನಡಕ್ಕೆ ಅಳವಡಿಸಿಕೊಂಡು ಅದರ ಕೃಷಿಯಲ್ಲಿ ತೊಡಗಿ ಯಶಸ್ವಿಗಳಾದರು. ಇದು ಭಾರತದ ಇತರ ಪ್ರಾದೇಶಿಕ ಭಾಷೆಗಳೆಲ್ಲ ಆದಂತೆ ಕಾಣುವುದಿಲ್ಲ. ಇದು ಕನ್ನಡಕ್ಕೆ ಒದಗಿ ಬಂದ ಒಂದು ಸುಯೋಗವೆಂದು ನನ್ನ ಅಭಿಪ್ರಾಯ.

ಈ ಲೇಖನದಲ್ಲಿ ಮುಖ್ಯವಾಗಿ ಪುಟ್ಟಪ್ಪನವರ 'ಕೃತ್ತಿಕೆ' ಕವನ ಸಂಗ್ರಹದಲ್ಲಿರುವ ಸುನೀತಗಳ ಬಗೆಗೆ ಬರೆಯುತ್ತೇನೆ. ಈ ಸಂಗ್ರಹದಲ್ಲಿ ಯುವಕ ಪುಟ್ಟಪ್ಪನವರು ಬರೆದ ೬೩ ಸುನೀತಗಳಿವೆ. ಎಲ್ಲವೂ ಅಷ್ಟ-ಷಟ್ಪದಿಗಳು. ಇವು ೧೯೨೮ರಿಂದ ೧೯೪೬ರ ವರ್ಷದವರೆಗಿನ ಅವಧಿಯಲ್ಲಿ ಬರೆದವು. ಅಂದರೆ ಅವರು ಕಾಲೇಜಿನಲ್ಲಿದ್ದಾಗ, ಮದುವೆಯಾಗಿ ಹೊಸದಾಗಿ ಸಂಸಾರ ಹೂಡಿ, ಮಹಾರಾಜಾ ಕಾಲೇಜಿನಲ್ಲಿ ಕನ್ನಡ ಇಲಾಖೆಯಲ್ಲಿ ಲೆಕ್ಚರರ್ ಕೆಲಸ ಮಾಡುತ್ತಾ ಮೈಸೂರಿನಲ್ಲಿ ವಾಸಿಸುತ್ತಿದ್ದಾಗ ಬರೆದ ಕವನಗಳು. ಮಹಾಕವಿ ಪುಟ್ಟಪ್ಪನವರ ಎಳೆಯ ವಯಸ್ಸಿನ ಮನಸ್ಸು ಹೇಗಿತ್ತು, ಅವರ ಆಗಿನ ಭಾಷೆ, ಶೈಲಿ, ಮತ್ತು ವಸ್ತು-ವಿಚಾರಗಳ ಬಗ್ಗೆ ಸ್ವಾರಸ್ಯಕರವಾದ ಮಾಹಿತಿಗಳನ್ನು ಈ ಸುನೀತಗಳು ನಮಗೆ ಒದಗಿಸುತ್ತವೆ. ಐತಿಹಾಸಿಕ ದೃಷ್ಟಿಯಿಂದ ಅವು ಬಹಳ ಮೌಲಿಕವಾಗಿವೆ. ಪುಟ್ಟಪ್ಪನವರ ಜೀವನದ ಯೌವನದ ಈ ಕಾಲವು ಅವರ ಕವಿತಾಸೃಷ್ಟಿಯ ದೃಷ್ಟಿಯಿಂದ ಅತಿ ಮಹತ್ವಪೂರ್ಣವಾದುದು. ಕವಿತಾಂಗನೆಯ ಒಲವು ಎಳೆಯ ಪ್ರಾಯದಲ್ಲಿ ಪ್ರಕೃತಿಸಹಜವಾಗಿ ಪ್ರಾಪ್ತವಾಗುತ್ತದೆಯಲ್ಲವೆ? ಹರೆಯದ ರಸಗಳ ಹಸಾದ. ಆಗ ಬರೆದ ಕವಿತೆಗಳು ಹೆಚ್ಚು ರಸೋತ್ಕರ್ಷತೆಯಿಂದ ಕೂಡಿರುತ್ತವೆ.

ಅಲ್ಲದೆ, ಆ ದಶಕಗಳು ಕನ್ನಡ ಕಾವ್ಯದ ಬೆಳವಣಿಗೆಯಲ್ಲಿ ಈಗ ನಾವು 'ನವೋದಯ'ವೆಂದು ಕರೆಯುವ ಅತಿ ಪ್ರಮುಖವಾದ ಕಾಲವಾಗಿತ್ತು. ಮೈಸೂರಿನ ಅರಸರ ಆಶ್ರಯದಲ್ಲಿ ಆಗತಾನೆ ಹೊಸದಾಗಿ ಪ್ರಾರಂಭವಾಗಿದ್ದ ಮೈಸೂರು ವಿಶ್ವವಿದ್ಯಾಲಯ ಮತ್ತು ಮಹಾರಾಜ ಕಾಲೇಜುಗಳು ಕನ್ನಡ ನಾಡಿನ ನವ ತರುಣರನ್ನು ಒಂದು ಅಯಸ್ಕಾಂತದಂತೆ ಆಕರ್ಷಿಸುತ್ತಿದ್ದವು. ಅಲ್ಲಿ ಭಾರತದ ಸಂಸ್ಕಾರ ಮತ್ತು ವಿದ್ಯೆಗಳಲ್ಲಿ ನುರಿತ ವಿದ್ವಾಂಸರು ಇಂಗ್ಲೆಂಡಿನಿಂದ ಬಂದ ಪ್ರೊಫೆಸರುಗಳೊಡನೆ ಬೆರೆತು, ಪಾಶ್ಚಿಮಾತ್ಯ ದೃಷ್ಟಿಯಿಂದ ಭಾರತೀಯ ಕಲೆಗಳನ್ನೂ ಶಾಸ್ತ್ರಗಳನ್ನೂ ಹೊಸ ರೀತಿಯಲ್ಲಿ ಪರಿಶೀಲಿಸಿ ಅರಿತುಕೊಳ್ಳುವುದು, ಕಾವ್ಯಸೃಷ್ಟಿಯಲ್ಲಿ ಹೊಸ ಹೊಸ ಪ್ರಕಾರಗಳನ್ನು ಆವಿಷ್ಕರಿಸಿ ಬಳಕೆಗೆ ತರುವುದು ಮುಂತಾದ ಉತ್ಸಾಹಗಳಿಂದ ತುಂಬಿದ ಕಾರ್ಯಗಳು ನಡೆಯುತ್ತಿದ್ದವು. ನಮ್ಮ ದೇಶದಲ್ಲಿ ಕೆಲವು ಶತಮಾನ ತಡವಾಗಿ ಉದಿಸಿದ 'ಭಾರತೀಯ ರೆನೆಸಾನ್ಸ್'ನ ಭರವು ಕರ್ಣಾಟಕದಲ್ಲಿ ಆಗ ತಾನೆ ಪ್ರವಹಿಸಲು ಪ್ರಾರಂಭಿಸಿತ್ತು. ಅಂದಿನ ಆಂಗ್ಲರ ಆಡಳಿತದಲ್ಲಿ ನಮ್ಮ ದೇಶಕ್ಕೆ ಆದ ಒಂದು ದೊಡ್ಡ ಉಪಕಾರವೇನೆಂದರೆ ಯಾವ ಬಗೆಯ ಜಾತಿಭೇದಗಳನ್ನೂ ಲೆಕ್ಕಿಸದೆ ಸಾರ್ವಜನಿಕ ವಿದ್ಯಾಭ್ಯಾಸವನ್ನು ಸರ್ಕಾರದ ಖರ್ಚಿನಲ್ಲಿ ಎಲ್ಲರಿಗೂ ಸುಲಭದಿಂದ ದೊರಕುವಂತೆ ವ್ಯವಸ್ಥೆ ಮಾಡಿದ್ದು. ಇದರಿಂದ ನಾಡಿಗೆ ನಾಡೇ ಎಚ್ಚೆತ್ತು ಶತಮಾನಗಳಿಂದ ಜನತೆಯ ಮೇಲೆ ಕವಿದಿದ್ದ ಅಜ್ಞಾನದ ಕೌದಿಯನ್ನು ಕಿತ್ತೊಗೆಯಲು ಸಾಧ್ಯವಾಯಿತು. ಸಮಾಜದ ಎಲ್ಲ ಸ್ತರಗಳಲ್ಲೂ, ಸ್ತ್ರೀ-ಪುರುಷ ಭೇದವಿಲ್ಲದೆ ಕವಿಗಳು, ಬರಹಗಾರರು, ಮತ್ತು ಅವರು ಸೃಷ್ಟಿಸಿದ ಕೃತಿಗಳನ್ನು ಓದುವ

ಓದುಗರೂ ಸಿದ್ಧರಾದರು. ಕನ್ನಡ ಭಾಷೆ ಮತ್ತು ಕನ್ನಡದ ಜನತೆ ಒಂದು ಶಿಷ್ಟ ರೀತಿಗೆ ಪರಿವರ್ತನಗೊಂಡಿತು.

ಪುಟ್ಟಪ್ಪನವರು ಕುಪ್ಪಳ್ಳಿಯೆಂಬ ಮಲೆನಾಡಿನ ಒಂದು ಸಣ್ಣ ಹಳ್ಳಿಯಲ್ಲಿ ಶ್ರೀಮಂತ ರೈತ ಕುಟುಂಬದಲ್ಲಿ ಹುಟ್ಟಿ ಬೆಳೆದವರು. ಅವರಿಗೆ ಕವಿತೆ ಹುಟ್ಟುಗುಣವಾಗಿ ಬಂದಿದ್ದು, ಹುಟ್ಟಿನಿಂದಲೇ ಕಾವ್ಯಸಂಸ್ಕಾರವಿದ್ದ ಇವರಿಗೆ ಹೊಸದಾಗಿ ಪ್ರಾರಂಭಿಸಿದ್ದ ಸಾರ್ವಜನಿಕ ವಿದ್ಯಾಭ್ಯಾಸವು ಒಂದು ವರವಾಗಿ ಪರಿಣಮಿಸಿತು. ಅವರು ಮೈಸೂರಿನ ಮಹಾರಾಜಾ ಕಾಲೇಜಿನ ಆಕರ್ಷಣೆಗೆ ಸಿಕ್ಕಿ ಮೈಸೂರಿನ ಪ್ರಜೆಯಾದರು. ತಮ್ಮ ಜೀವಮಾನವನ್ನೆಲ್ಲಾ ಮೈಸೂರಿನಲ್ಲೇ ಕಳೆದರು. ಮೊದಲು ವಿದ್ಯಾರ್ಥಿ, ಆಮೇಲೆ ಕನ್ನಡ ಇಲಾಖೆಯಲ್ಲಿ ಲೆಕ್ಚರರ್, ಆಮೇಲೆ ಪ್ರೊಫೆಸರ್, ಇಲಾಖೆಯ ಮುಖ್ಯಾಧಿಕಾರಿ, ಆಮೇಲೆ ಮೈಸೂರು ವಿಶ್ವವಿದ್ಯಾಲಯದ ವೈಸ್ ಛಾನ್ಸೆಲರ್ - ಹೀಗೆ ಪ್ರವರ್ಧಮಾನಕ್ಕೆ ಬಂದು, ನಿವೃತ್ತರಾಗಿ, ಅಲ್ಲಿಯೇ ಮೃತರಾದರು. ಭಾರತಕ್ಕೆ ಸ್ವಾತಂತ್ರ್ಯ ಬಂದಾಗ ಮೈಸೂರು ವಿಶ್ವವಿದ್ಯಾಲಯಕ್ಕೆ 'ಮಾನಸ ಗಂಗೋತ್ರಿ' ಎಂದು ಹೊಸ ಹೆಸರಿಟ್ಟವರು ಅವರೇ. ಈ ಒಂದು ಮಾಹಿತಿಯೇ ಅವರ ಭಾಷೆ, ಶೈಲಿ ಮತ್ತು ಮನೋಭಾವಗಳನ್ನು ಚೆನ್ನಾಗಿ ಸೂಚಿಸುತ್ತದೆ.

ಪುಟ್ಟಪ್ಪನವರ ಮೈಸೂರಿನ ವಾಸ ಅವರ ಜೀವನದ ಮೇಲೆ ಅತ್ಯಂತ ಪ್ರಭಾವ ಬೀರಿದೆ. ಅವರ ಪ್ರಭಾವ ಮೈಸೂರಿನ ಮೇಲೂ ಅಷ್ಟೇ ಬಲವಾಗಿ ಬಿದ್ದಿದೆ. ಅವರ ಹೆಸರಿನಲ್ಲಿ ಮೈಸೂರಿನಲ್ಲಿ ಒಂದು ದೊಡ್ಡ ಬಡಾವಣೆಯೇ ('ಕುವೆಂಪುನಗರ') ಇದೆ. ಅದರಲ್ಲಿ 'ವಿಶ್ವಮಾನವ', 'ಉದಯರವಿ', 'ಸಂಧ್ಯಾರವಿ', ಮುಂತಾದ ಅವರೇ ಹೆಸರಿಸಿದ ರಸ್ತೆಗಳಿವೆ. ಅಲ್ಲದೆ, ಕರ್ನಾಟಕದಲ್ಲಿ ಪ್ರಾಯಶಃ ಪ್ರತಿಯೊಂದು ಮುಖ್ಯ ನಗರದಲ್ಲೂ ಒಂದು ಕುವೆಂಪು ರಸ್ತೆಯೋ ಸರ್ಕಲ್ಲೋ ಇದ್ದೇ ಇರುತ್ತದೆ. ಒಬ್ಬ ಕವಿಗೆ ಇಷ್ಟು ಘನತೆಯ ಸನ್ಮಾನ ಮಾಡಿರುವುದು ಕನ್ನಡ ಜನತೆಯ ಕಾವ್ಯ ಪ್ರೇಮವನ್ನು ಬಿಂಬಿಸುತ್ತದೆಯೆಂದು ಖಂಡಿತವಾಗಿ ಹೇಳಬಹುದು.

ಪುಟ್ಟಪ್ಪನವರ 'ಕೃತ್ತಿಕೆ'ಯಲ್ಲಿರುವ ಸುನೀತಗಳ ವಸ್ತು ಬಹಳ ವೈವಿಧ್ಯಮಯವಾಗಿದೆ. ಅದರಲ್ಲಿ ಪ್ರಕೃತಿವರ್ಣನೆ ಮತ್ತು ಅದರ ಸೌಂದರ್ಯಾಸ್ವಾದನೆ ಪ್ರಥಮ ಸ್ಥಾನವನ್ನು ಪಡೆಯುತ್ತದೆ. ಅದರ ಬಗ್ಗೆ ಅವರಿಗೆ ಪವಿತ್ರತೆಯ ಮತ್ತು ಆರಾಧನೆಯ ಭಾವವಿರುವುದೂ ಸುಲಭವಾಗಿ ವ್ಯಕ್ತವಾಗುತ್ತದೆ. ಶಿವಮೊಗ್ಗೆಯ ಆಸುಪಾಸಿನ ಗಿರಿಕಾನನತೊರೆಹೊಳೆಗಳ ಅತಿ ರಮಣೀಯವಾದ ಪರಿಸರದಲ್ಲಿ ಬೆಳೆದ ಭಾವುಕ ಹೃದಯ ಅವರದು. ಅಲ್ಲಿ ಕಾಣುವುದು ಎಂಭತ್ತು ವರ್ಷಗಳ ಹಿಂದಿನ ಮಲೆನಾಡು. ಇಂದಿನದಲ್ಲ. ಆಗ ಅದು ಮನುಷ್ಯನ ಲೋಭಪ್ರೇರಿತ ಕೈಗಳಿಂದ ಕಲುಷಿತವಾಗದ ತನ್ನ ನೈಜ ಸೌಂದರ್ಯವನ್ನು ಇನ್ನೂ ತಳೆದಿತ್ತು.

'ಕೃತ್ತಿಕೆ'ಯಲ್ಲಿ ಸುಮಾರು ೨೩ ಅಷ್ಟ-ಷಟ್ಪದಿಗಳು, ಅಂದರೆ ಕಾಲುಭಾಗ, ಪ್ರಕೃತಿಯ ವಿಷಯಕ್ಕೆ ಮೀಸಲಾಗಿವೆ. ಇವೆಲ್ಲಾ ಬಹಳ ಸುಂದರವಾದ ಸುನೀತಗಳು. ಯುವಕವಿ

ಪುಟ್ಟಪ್ಪನವರು, ಬಯಲು ಸೀಮೆಯೆನಿಸಿಕೊಳ್ಳುವ ಮೈಸೂರಿನಲ್ಲಿ ಬಂದು ನೆಲಸಿದಾಗ ಅವರಿಗೆ ಅದು ಅಷ್ಟು ಇಷ್ಟವಾಗಲಿಲ್ಲವೆಂದು ತೋರುತ್ತದೆ. ಮೈಸೂರು ನಗರ ಮತ್ತು ಸುತ್ತಲ ಸೀಮೆ ಸೌಂದರ್ಯದಲ್ಲಿ ಅಂತಹ ಕಳಪೆಯ ಪ್ರದೇಶವೇನೂ ಅಲ್ಲ. ಅಲ್ಲಿ ಊರ ಅಂಚಿನಲ್ಲೇ ಚಾಮುಂಡಿ ಬೆಟ್ಟ, ಹತ್ತಿರದಲ್ಲೇ ರಂಗನತಿಟ್ಟಿನ ಕಾವೇರಿ ದಡ, ಕನ್ನಂಬಾಡಿ ಜಲಾಶಯ ಇಂಥ ಬಹಳ ಪ್ರೇಕ್ಷಣೀಯ ಸ್ಥಳಗಳಿವೆ. 'ರಾಜಧಾನಿ' ಎಂಬ ಸುನೀತದಲ್ಲಿ ಅವರೇ ಮೈಸೂರಿನ ಚೆಲುವನ್ನು ತುಂಬಾ ಸೊಗಸಾಗಿ ವರ್ಣಿಸಿದ್ದಾರೆ. ಆದರೆ ಇವರಿಗೆ ಅದೆಲ್ಲಾ ಸಾಲದಾದವು. 'ಬಯಲು ಸೀಮೆಯ ದೃಶ್ಯಕಾರ್ಪಣ್ಯ' ('ನನ್ನ ಶೈಲಿ'; ಕೃತ್ತಿಕೆ, ೨೮) ಅವರಿಗೆ ಸಹಿಸದಾಗುತ್ತಿತ್ತು. ಆಗಾಗ, ಬಿಡುವಾದಾಗ ತವರೂರಿನ ಕಡೆ ಹೋಗಿ ಸುತ್ತಾಡಿಕೊಂಡು ಬಂದು ಅಲ್ಲಿಯ ಸೌಂದರ್ಯವನ್ನು ಮತ್ತೆ ಮತ್ತೆ ಸವಿದು ಚಪ್ಪರಿಸಿ, ತಮ್ಮ ಭಾವಗಳನ್ನು ಸುನೀತದ ಅಮೋಘ ವೃತ್ತದಲ್ಲಿ ಕಡೆದಿಟ್ಟಿದ್ದಾರೆ. ನಮಗೂ ಆ ಸವಿ ಸಿಗುವಂತೆ, ಅವರ ಕವನಸಾಮರ್ಥ್ಯದಿಂದ ರುಚಿಗೊಂಡು ಹೃದಯ ಮುಟ್ಟುವಂತೆ ವರ್ಣಿಸಿದ್ದಾರೆ. 'ಅಶೋಕವನದಲ್ಲಿ', 'ತೀರ್ಥಹಳ್ಳಿಯ ರಾಮತೀರ್ಥದಲ್ಲಿ', 'ಅಶೋಕದ ಹೂಗೊಂಚಲು', 'ಕವಿಶೈಲ' (೬ ಪದ್ಯಗಳು), 'ಸಿಬ್ಬಲುಗಡ್ಡೆ', ಮುಂತಾದವು ಪ್ರಕೃತಿಪ್ರೇಮಿಗಳು ಓದಲೇಬೇಕಾದವು.

ಈ ಪದ್ಯಗಳಲ್ಲಿ ಕವಿ ಕಾಣುವುದೇನು, ತನ್ನ ಹುಟ್ಟಿನ ನಾಡೆಂಬ ಪಕ್ಷಪಾತವನ್ನು ಬದಿಗಿರಿಸಿ ನೋಡಿದರೆ? ಇಲ್ಲಿ ವರ್ಣಿಸಿರುವ ನಾಡಿನ ಸೌಂದರ್ಯ ದಿಟವಾಗಿಯೂ ಅಪ್ರತಿಮವಾದುದು. ಇಂತಹ ಪ್ರಕೃತಿಸೌಂದರ್ಯ ಸ್ವದೇಶವಾಗಿರಲಿ, ಪರದೇಶವಾಗಿರಲಿ, ಎಲ್ಲಿದ್ದರೂ ಅರಸಿಕೊಂಡು ಹೋಗಿ ನೋಡುವಂತಹುದು. ಇಲ್ಲಿ ಮನುಷ್ಯನ ಕೈವಾಡದಿಂದ ತಪ್ಪಿಸಿಕೊಂಡ ಜಗತ್ತಿನ ಒಂದು ಚೂರು ನಮಗೆ ಸಿಗುತ್ತದೆ. ಈ 'ಸೃಷ್ಟಿಯ' ಸ್ರೋತ ಯಾರ ಮನಸ್ಸಿನ ಇಂಗಿತದಿಂದ ಹೊರಬಂದು ನಮ್ಮ ಮುಂದೆ ಹರಿಯುತ್ತಿದೆಯೆಂದು ನಮ್ಮೊಳಗೆ ಚಿಂತನವನ್ನು ಎಬ್ಬಿಸುತ್ತದೆ. ಅಂತಹ ಸೃಷ್ಟಿಶಕ್ತಿಯ ಕಡೆ ಮನಸ್ಸು ಧಾವಿಸುತ್ತದೆ. ಆ ಸೌಂದರ್ಯ ಕಾಣಿಸುವುದು ಬರಿಯ ಕಣ್ಣಿಗೆ ಮಾತ್ರವಲ್ಲ, ಹೊಳೆ ಹರಿಯುತ್ತಿದ್ದರೂ, ಹಕ್ಕಿಗಳು ಚಿಲಿಪಿಲಿಗುಟ್ಟುತ್ತಿದ್ದರೂ, ಕಿವಿಗೆ ಮಾತ್ರ ಒಂದು ಬಗೆಯ ಆಳವಾದ ಮೌನವೇ ಕೇಳಿಸುತ್ತದೆ. ಮನಸ್ಸಿಗೆ ಶಾಂತಿ ಬರುತ್ತದೆ. 'ಕೃತ್ತಿಕೆ'ಯ ಸುನೀತಗಳು ಈ ಪ್ರಕೃತಿ ಸೌಂದರ್ಯದ ಮೋಹಕ ಮಾಯೆಯನ್ನು ಬಹಳ ಸಮರ್ಥವಾಗಿ ನಿರೂಪಿಸುತ್ತವೆ. ಈ ನಿರೂಪಣೆಯಲ್ಲಿ, ಉಪಮಾ-ರೂಪಕಾದಿ ಅಲಂಕಾರಗಳು ನಮ್ಮ ಪುರಾಣ ಅಥವಾ ಇತಿಹಾಸದ ಕಥೆಗಳಿಗೆ ಸಂಬಂಧ ಕಲ್ಪಿಸುತ್ತವೆ. ಆದರೆ ಅದರಲ್ಲಿ ನಮ್ಮ ಆರ್ಷ ಕವಿಗಳಾದ ಕಾಳಿದಾಸ, ಭಾಸ, ಪಂಪ, ರನ್ನರ ಪ್ರಭಾವಕ್ಕಿಂತ ಹೆಚ್ಚಾಗಿ ಆಂಗ್ಲ ಕವಿಗಳಾದ ವರ್ಡ್ಸ್‌ವರ್ತ್, ಕೋಲ್ರಿಜ್‌ಗಳ ಪ್ರಭಾವ ಕಾಣಿಸುತ್ತದೆ. ಮೈಸೂರಿನ ಮಹಾರಾಜಾ ಕಾಲೇಜಿನ ಇಂಗ್ಲಿಷ್ ಪ್ರೊಫೆಸರುಗಳ ಪ್ರಭಾವದ ಮುದ್ರೆಯಿದು. ಕನ್ನಡ ಸಾಹಿತ್ಯದಲ್ಲಿ ಎಂದೆಂದಿಗೂ ಶಾಶ್ವತವಾಗಿರುವಂತೆ ಈ ಸುನೀತಗಳು ಅದನ್ನು ಮೆರೆಸುತ್ತವೆ.

'ಕೃತ್ತಿಕೆ'ಯ ಸುನೀತಗಳ ಇತರ ವಸ್ತುಗಳು ಕಾವ್ಯಕಲೆ, ಕೀರ್ತಿ, ಧರ್ಮ, ದೇಶಭಕ್ತಿ ಮುಂತಾದ ವಿವಿಧ ವಿಷಯಗಳನ್ನೊಳಗೊಂಡಿದೆ. ಈ ಸಂದರ್ಭದಲ್ಲಿ ಅವರು ವಿಜ್ಞಾನ ಕ್ಷೇತ್ರದ ಪರಿಚಯ ಮಾಡಿಕೊಳ್ಳುವ ಪ್ರಯತ್ನದಲ್ಲಿ ಖಗೋಳ ಶಾಸ್ತ್ರದ ಅದ್ಭುತಗಳನ್ನು ಅರಿತಾಗ ಬರೆದ ಒಂದು ಅಪರೂಪದ ಅಂದವಾದ ಸುನೀತ, 'ಖಗೋಲ ಶಾಸ್ತ್ರದ ಪ್ರಥಮ ಪರಿಚಯ' ಎಂಬುದನ್ನೂ ಸೇರಿಸಿಕೊಳ್ಳಲೇಬೇಕು. ಏಕೆಂದರೆ, ಪುಟ್ಟಪ್ಪನವರ ಕೃತಿಗಳಲ್ಲಿ ವಿಜ್ಞಾನಸಂಬಂಧಿತ ಪದ್ಯಗಳು ವಿರಳ. ಬಾಹ್ಯ ವಿಶ್ವದ ಅಗಾಧ, ವಿಶಾಲ, ಭೀಮ ಸೌಂದರ್ಯವನ್ನು ವರ್ಣಿಸುತ್ತಾ "....ಮಾನುಷತೆಗಾಗಿದೆ ಬ್ರಹ್ಮತಾ ಸ್ಪರ್ಶ; ನನ್ನ ಮೈ, ನನ್ನೂರು, ನಾಡು, ಸಂಸ್ಕೃತಿ, ಬಲುಮೆ, ಎಂಬ ಮುದ್ದಿನ ಮೋಹಗಳಿಗೆಲ್ಲ ನೀ ಮದ್ದು; ...." ಎಂಬ ಆಗ ಅವರಿಗಾದ ಅನುಭವದ ಸೊಗಸಾದ ಮಾತುಗಳು ಈ ಸುನೀತದಲ್ಲಿವೆ.

ತಮ್ಮ ಕವಿತೆ ಮತ್ತು ಕಲೆಗಳ ವಿಷಯದಲ್ಲಿ ಪುಟ್ಟಪ್ಪನವರಿಗೆ ಇದ್ದ ಧ್ಯೇಯ ಧೋರಣೆಗಳನ್ನು ಕೃತ್ತಿಕೆಯ ೮ ಸುನೀತಗಳು ತೋರುತ್ತವೆ. ಇವುಗಳಲ್ಲಿ 'ಕವನಗಳೆ ಮಂತ್ರಗಳು' ಬಾಲಿಶವಾಗಿ ಕಂಡರೂ, ಅದರಲ್ಲಿ ಕಾಣುವ ಕವನವೇ ಜೀವನದ ಸರ್ವಸ್ವ ಎಂಬ ಭಾವ ಹುಟ್ಟುಕವಿಯ ಮನಸ್ಸನ್ನು ಬಿಚ್ಚಿ ತೋರಿಸುತ್ತದೆ. 'ಕಲೆ ಮತ್ತು ನೀನು' ಎಂಬ ಪದ್ಯದಲ್ಲಿ 'ನನ್ನಿ ಸೊಬಗಿಂಗೆ ನೆಲೆ. ಕಲೆಯಾಚೆ ನಿತ್ಯ ಸೌಂದರ್ಯವಾಗಿಹೆ ನೀನು- ನಿನ್ನ ಪಡೆದರೆ ನನ್ನ ಚಿರಸಖಿ ಕಲೆಯ ಕನ್ನೆ...' ಎಂಬ ಮುಖ್ಯವಾದ ಮಾತುಗಳಿಂದ ಅವರ ಮನಸ್ಸಿನಲ್ಲಿರುವ ಕಲೆ, ಸೌಂದರ್ಯ, ಮತ್ತು ಸತ್ಯ, ಇವುಗಳ ಸಂಬಂಧದ ಅರಿವಾಗುತ್ತದೆ.

ಪುಟ್ಟಪ್ಪನವರ ರಸಕಲ್ಪನೆಯ ಬಗ್ಗೆ 'ರಸಸಿದ್ಧಿ' ಮತ್ತು 'ರಸವೊಂದೆ ಕವಿಗೆ ನೀತಿ' ಎಂಬ ಸುನೀತಗಳನ್ನು ನೋಡಬಹುದು. ಈ ಪದ್ಯಗಳು ಅಷ್ಟು ಸ್ಪಷ್ಟವಾಗಿಲ್ಲವೆಂದು ಮಾತ್ರ ಎಚ್ಚರಿಕೆ ಕೊಡಬಲ್ಲೆ. ಅನವಶ್ಯಕ ರೂಪಕಗಳ ಪ್ರಯೋಗದಿಂದ ಅರ್ಥ ಸ್ಫುಟವಾಗಿಲ್ಲ. ರಸದ ಬಗ್ಗೆ ಅತ್ಯಾಭಿಮಾನಿಕ ಕಲ್ಪನೆಯಿಂದ ಗೊಂದಲವಿರುವುದು ತಿಳಿಯುತ್ತದೆ. ರಸಋಷಿ, ರಸತಪಸ್ವಿ ಮುಂತಾದ ಮಾತುಗಳು 'ಕೃತ್ತಿಕೆ'ಯಲ್ಲಿ ಸರ್ವೇ ಸಾಮಾನ್ಯವಾಗಿ ಕಾಣಿಸಿಕೊಳ್ಳುತ್ತವೆ. ಈ ವಿಷಯದಲ್ಲಿ ತಿಳಿವು ಭಾವುಕತೆಗೆ ಬಲಿಯಾಗಿದೆಯೆಂದು ಹೇಳಬಹುದು. ಉದಾಹರಣೆಗೆ, 'ರಸ ಸಿದ್ಧಿ' ಸುನೀತದಲ್ಲಿ, ಕವಿ ರಸ ಸಿದ್ಧಿ ಪಡೆಯಲು ಏನು ಮಾಡಬೇಕೆಂದು ಅವರ ವಿಧಾನದ ಗುಟ್ಟು 'ರಸೋ ವೈ ಸಃ' ಎಂಬ ಸುನೀತದಲ್ಲೂ ಇದೇ ಉಪದೇಶ ಮರುಕಳಿಸಿದೆ. ಅಲ್ಲಿ ಆ ಗುಟ್ಟನ್ನು ಒಬ್ಬ ಸನ್ಯಾಸಿಗೆ ಹೇಳಿಕೊಡುತ್ತಾರೆ. ಇಲ್ಲಿ ರಸಪದಕ್ಕೂ ಮೋಕ್ಷಕ್ಕೂ ವ್ಯತಿಕರಣವಿದೆಯೆಂದು ನನ್ನ ಅಭಿಪ್ರಾಯ.

ಕೀರ್ತಿ ರಾಣಿಯು ಬಹಳ ಬೇಗ ಪುಟ್ಟಪ್ಪನವರನ್ನು ವರಿಸಿದಳು. ಆದರೆ ಅವರಿಗೆ ಅವಳ ವರನಾಗಿರುವುದು ಅಷ್ಟು ಹಿಡಿಸಲಿಲ್ಲವೆಂದು 'ಕೃತ್ತಿಕೆ'ಯಲ್ಲಿರುವ 'ಕೀರ್ತಿಶನಿ' ಎಂಬ ಸುನೀತ ನಮಗೆ ತಿಳಿಸಲು ಪ್ರಯತ್ನಪಡುತ್ತದೆ. ಆದರೆ ನಮಗೆ ಅದನ್ನು ನಂಬುವುದು ಕಷ್ಟವಾಗುತ್ತದೆ. ಏಕೆಂದರೆ, 'ಕವಿಯ ತೃಪ್ತಿ' ಎಂಬ ಸುನೀತದಲ್ಲಿ "ಲಂಡನ್, ಹೊನೊಲುಲು

ಹವಾಯ್‌ಗಳಲಿ'' ತಮ್ಮ ಕೀರ್ತಿ ಬೆಳಗದಿದ್ದರೇನಂತೆ, ''....ವೆಂಕಯ್ಯ, (ಶ್ರೀ)ಕಂಠಯ್ಯ, ಕಸ್ತೂರಿ.... ಮೆಚ್ಚಿದರೆ ಸಾಕೆನಗೆ ತೃಪ್ತಿ'', ''....ಮೈಸೂರಿನಲಿ ಕುಳಿತು, ತಂತಿಲಿಯಂಚೆ ನೆರವಾಗಿ ಈ ವಾಣಿ ಅಲ್ಲಿಯೂ ಕೇಳಿದುದೆಂದರಿಯೆ ಸೊಗಸುವನಿಲ್ಲಿ...'' ಎಂಬ ಮಾತುಗಳಿಂದ ಕೀರ್ತಿದೇವಿಯ ಸ್ನೇಹ ಸವಿಯಾಗಿಯೆ ಇತ್ತು ಎನ್ನುವುದು ಸ್ಪಷ್ಟವಾಗುತ್ತದೆ. ಅದೇ ವಾಸ್ತವವಾದ ಭಾವ. ಕೀರ್ತಿ ಯಾರಿಗೆ ತಾನೇ ಬೇಡ? ಆದರೆ ಅದು ಶನಿಯೆಂದು ಯಾಕೆ ಸೋಗು ಹಾಕುತ್ತಾರೆ? ಅದನ್ನೂ ಗೆದ್ದು ಮುಂದಕ್ಕೆ ಹೋಗಿರುವೆನೆಂಬ ಅತ್ಯಾತ್ಮಾಭಿಮಾನ ಪ್ರಾಮಾಣಿಕವಾಗಿ ಕಾಣುವುದಿಲ್ಲ. 'ಯಶೋಲಕ್ಷ್ಮಿ' ಪದ್ಯದಲ್ಲಿ ''ವ್ಯೋಮ ಗೊಪುರಶಿಖರದಿಂದಿಳಿದು ಬಾ ಹೇ, ಅಮೃತೆ, ಮಣಿದೆನ್ನ ಮುಡಿಗುಡಿಗೆ'' ಎಂದು ಕೀರ್ತಿದೇವಿಯನ್ನು ಬರಮಾಡಿಕೊಳ್ಳುತ್ತಾರೆ. ಅದು ಕವಿಗಳ ನೈಜ ಸ್ವಭಾವವೆಂದು ಹೇಳಬೇಕಾಗಿಲ್ಲ.

'ಕೃತ್ತಿಕೆ'ಯಲ್ಲಿರುವ ಕೆಲವು ಸುನೀತಗಳು ಧರ್ಮದ ವಿಷಯದಲ್ಲಿ ಅವರ ಅಭಿಪ್ರಾಯಗಳೇನಿದ್ದಿರಬಹುದೆಂದು ಸೂಚಿಸುತ್ತದೆ. 'ಧರ್ಮ' ಎಂಬ ಹೆಸರಿನ ಒಂದು ಸುನೀತವೇ ಇದೆ. ಇದರಲ್ಲಿ ಧರ್ಮವೆಂದರೆ 'ವಿಧಾತ'ನು ಕಟ್ಟಳೆ ಮಾಡಿರುವಂತೆ ಇರುವ ಬಾಹ್ಯ ಪ್ರಪಂಚದ (ಅಂದರೆ ವೈಜ್ಞಾನಿಕ ರೀತಿಯಲ್ಲಿ ಅಧ್ಯಯಿಸಿ ಕಂಡುಕೊಳ್ಳಬಹುದಾದ?) ನಿಯಮಗಳು, ಮತ್ತು ಮಾನವರ ನಡತೆಗಳನ್ನು ನಿಯಂತ್ರಿಸುವ (ಧರ್ಮಶಾಸ್ತ್ರಗಳಲ್ಲಿ ಹೇಳಿರುವ?) ನಿಯಮಗಳು. ಈ ಪದ್ಯದಲ್ಲಿ ಕವಿ ಇವನ್ನು ದೇವತೆಯ ರೂಪದಲ್ಲಿ ಕಲ್ಪಿಸಿಕೊಂಡು ಸಂಬೋಧಿಸುತ್ತಾನೆ. ಈ ಮನೋಭಾವ ಹಿಂದೂ ಸನಾತನ ಧರ್ಮಕ್ಕೆ ಅನುಸಾರವಾಗಿದೆ. ಆದರೆ ಅವರು ಸನಾತನ ಧರ್ಮದ ವರ್ಣವ್ಯವಸ್ಥೆಯನ್ನು ದ್ವೇಷಿಸುತ್ತಿದ್ದರೆಂದು ಎಲ್ಲರಿಗೂ ಚೆನ್ನಾಗಿ ತಿಳಿದ ವಿಷಯ. ಅವರು ರಾಮಕೃಷ್ಣ ಮಠದ ಅನುಯಾಯಿಗಳಾಗಿದ್ದರೆಂದೂ, ವಿವೇಕಾನಂದರ ಭಕ್ತರೆಂದೂ ತಿಳಿದು ಬರುತ್ತದೆ. ಆದರೂ (ಎಳೆತನದಲ್ಲಿ?) ಚಾರ್ವಾಕವಾದವನ್ನು ಮೆಚ್ಚಿದ ಹಾಗೆ ಕಾಣುತ್ತದೆ. 'ಹೊನ್ನ ಹೊತ್ತಾರೆ'ಯಲ್ಲಿರುವ 'ಕಿಶೋರ ನಾಸ್ತಿಕನ ಚಾರ್ವಾಕವಾದವನ್ನು ಮೆಚ್ಚಿದ ಹಾಗೆ ಕಾಣುದೆ. 'ಹೊನ್ನ ಹೊತ್ತಾರೆ'ಯಲ್ಲಿರುವ 'ಕಿಶೋರ ನಾಸ್ತಿಕನ ಚಾರ್ವಾಕಗೀತೆ' (ಇದು ಸುನೀತವಲ್ಲ) ಎಂಬ ಪದ್ಯವನ್ನು ನೋಡಿ. ಯೇಸು ಕ್ರಿಸ್ತನಿಂದ ಬಂದ ಬಹಳ ಸ್ವಾರಸ್ಯದ ಒಂದು ಮಾತು 'ರಸವೊಂದೆ ಕವಿಗೆ ನೀತಿ' ಎಂಬ ಸುನೀತದಲ್ಲಿ ಸಿಗುತ್ತದೆ: ''ಕುದಿಯುವುದಕಿಂತ ಮದುವೆಯಾಗುವುದೆ ಲೇಸು!'' ಎಂದು. ಲೇಸು ಮತ್ತು ಹಿಂದಿನ ಸಾಲಿನಲ್ಲಿ ಯೇಸು ಎರಡೂ ಪ್ರಾಸಗೊಂಡು ಇದು ನನಗೆ ಮರೆಯಲಾಗದ ಮಾತಾಗಿದೆ. ಆದರೆ ಅವರ ಮೇಲೆ ಕ್ರಿಸ್ತ ಧರ್ಮದ ಪ್ರಭಾವ ಇಷ್ಟಕ್ಕೇ ಸೀಮಿತವಾಗಿದ್ದಿರಲಾರದು. ಅಷ್ಟೇ ಅಲ್ಲ. ಜೈನ, ಬೌದ್ಧ ಧರ್ಮಗಳ ಪ್ರಭಾವವೂ, ಅವರ ಮೇಲೆ ಸಾಕಷ್ಟು ಇರುವುದು ಕಾಣುತ್ತದೆ. ಸಂಕ್ಷೇಪದಲ್ಲಿ ಹೇಳುವುದಾದರೆ, ನಾನಾ ಧರ್ಮಗಳ ಸಾಂಗವಾದ ಪರಿಚಯವಿದ್ದರೂ ಪುಟ್ಟಪ್ಪನವರು ಮೂಲತಃ ದೈವಭಕ್ತರು, ಗುರುಭಕ್ತರು, ಮತ್ತು ಆಚಾರನಿಷ್ಠ ಅದ್ವೈತಿಗಳೆಂದು ಅವರ

ಸುನೀತಗಳಿಂದ ಊಹಿಸಬಹುದು. ಅವರ ತಮ್ಮ ಕಡೆಯ ದಿನಗಳಲ್ಲಿ ಬಹಳ ಹೊತ್ತು ಧ್ಯಾನದಲ್ಲಿ ಕುಳಿತು ತಪಸ್ಸು ಮಾಡುತ್ತಿದ್ದರೆಂದು ಕೇಳಿದ್ದೇನೆ. ''ವಿಶ್ವಮಾನವ'' ಎಂಬ ಪಂಥವೊಂದನ್ನು ಬೇರೆ ಹೊರಡಿಸಿದರೆಂದು ತಿಳಿದು ಬರುತ್ತದೆ. ಭಾವುಕರು. ವೈಚಾರಿಕ ಪ್ರವೃತ್ತಿ ಅವರದಲ್ಲವೆಂದೆನಿಸುತ್ತದೆ.

ಗ್ರೀಕ್ ಕವಿಯಾದ ಹೋಮರ್‌ನ 'ಇಲಿಯಡ್'ಅನ್ನು ವಿಮರ್ಶಿಸಿ, ಅದನ್ನು ರಾಮಾಯಣಕ್ಕೆ ಹೋಲಿಸಿ, ಅದು ರಾಮಾಯಣದ ಎತ್ತರಕ್ಕೆ ಎಂದೂ ಏರದೆಂದು ಹೇಳುವ ಒಂದು ಸುನೀತ, 'ಹೋಮರ್' ಎಂಬ ಹೇಸರಿನದು ಕೃತ್ತಿಕೆಯಲ್ಲಿದೆ. ಈ ಬಗೆಯ ವಸ್ತುವಿರುವ ಸುನೀತಗಳಿಂದ ಈ ಕವಿಯ ಬಗ್ಗೆ ಕೆಲವು ಹೊಸ ಮಾಹಿತಿಗಳು ತಿಳಿಯುತ್ತವೆ. 'ಲೆನಿನ್' ಪದ್ಯದಲ್ಲಿ ಮತ್ತು 'ಬೆಕ್ಕು-ಇಲಿ' ಪದ್ಯದಲ್ಲಿ ಅವರಿಗೆ-ಲೆನಿನ್‌ನ ಬಗ್ಗೆ ಮತ್ತು ಕಮ್ಯೂನಿಸ್ಟ್ ಕ್ರಾಂತಿಯ ಮೇಲೆ ಸಹಾನುಭೂತಿಯ ಭಾವಗಳಿದ್ದವೆಂದು ತಿಳಿಯುತ್ತದೆ. 'ಕ್ರಾಂತಿಕಾಳಿ' ಪದ್ಯದಲ್ಲಿ ಕ್ರಾಂತಿಯೆ ಸೈ ಎಂದು ನಂಬಿಕೆಯಿಂದು ಹೇಳುತ್ತಿದ್ದಾರೋ ಅಥವಾ ವ್ಯಂಗ್ಯ ಮಾಡುತ್ತಿದ್ದಾರೋ ಹೇಳಲು ಕಷ್ಟವಾಗುತ್ತದೆ. 'ಕೃತ್ತಿಕೆ'ಯ ಕಡೆಯ ಎಂಟು ಹತ್ತು ಸುನೀತಗಳು ದೇಶಭಕ್ತಿ ಮಹಾತ್ಮ ಗಾಂಧಿ, ಗುರುಭಕ್ತಿ ಟಾಲ್‌ಸ್ಟಾಯನ್ನು ಹೊಗಳುವುದು, ಮುಂತಾದ ವಿವಿಧ ವಸ್ತುಗಳನ್ನೊಳಗೊಂಡಿವೆ.

ಪುಟ್ಟಪ್ಪನವರ ಸುನೀತಗಳಲ್ಲಿ ವ್ಯಕ್ತವಾಗುವ ಶೈಲಿ ಬಹಳ ಆಡಂಬರಭರಿತ ಶೈಲಿ. ಈ ಆಡಂಬರ, ಮಾತು, ಭಾವ, ಅಲಂಕಾರಗಳು, ಮೂರರಲ್ಲೂ ಎದ್ದು ಕಾಣಿಸುತ್ತದೆ. ಮೂರರಲ್ಲೂ ಅತಿ ಪ್ರಯೋಗವಿದೆ. ಮಾತಿನ ವಿಷಯದಲ್ಲಿ ಪುಟ್ಟಪ್ಪನವರು ಖಂಡಿತ 'ಮಿತಾಕ್ಷರಿ'ಯಲ್ಲ. ಬಹಳ ಧಾರಾಳಿ. ಈ ಸುನೀತಗಳು ಅವರ ಯುವಕಾಲದಲ್ಲಿ ಬರೆದವೇನೋ ಹೌದು. ಯುವಕ ಕವಿಯ ಕವನೋತ್ಸಾಹ ಎಲ್ಲೆ ಮೀರಿ ಹರಿದಿದೆಯೇ? 'ನವೋದಯ' ಕಾಲದ ಮುಂಚೂಣಿಯ ಸಮಯದಲ್ಲಿ ಬರೆದವು ಹೌದು. ಆಗ ಈ ಬಗೆಯ ಶೈಲಿ ಕ್ಷಮ್ಯವಾಗಿತ್ತೆ? ಸುನೀತಗಳು ಗಂಭೀರವಾದ ಭಾವಗಳನ್ನು ಬಿತ್ತರಿಸುವುದಕ್ಕೆ ಎತ್ತಿದ್ದು ಎಂದು ನಾನು ಹಿಂದೆಯೇ ಹೇಳಿದ್ದೇನೆ. ಅಲ್ಲದೆ ನಾಟಕರಂಗದಲ್ಲಿ ಉಪಯೋಗಿಸುವ ಹಾಡಿನ ಹಿನ್ನೆಲೆಯಿರುವುದರಿಂದ ಆಡಂಬರ ಪ್ರಾಯಶಃ ಸುನೀತಗಳಿಗೆ ಹುಟ್ಟುಗುಣವಾಗಿ ಬರುತ್ತದೇನೋ. ಆದರೆ ಆಡಂಬರದಿಂದ ಕವಿತೆಯ ಮೌಲ್ಯ ಹೆಚ್ಚುವುದಿಲ್ಲವೆಂದು ನನ್ನ ಭಾವನೆ. ಮಮ್ಮಟನ 'ಕಾವ್ಯಾಲಂಕಾರ'ದಲ್ಲಿ ಮೊದಲ ಅಧ್ಯಾಯದಲ್ಲೇ ಇದು ಒಳ್ಳೆಯ ಕೃತಿಯ ಲಕ್ಷಣವಲ್ಲವೆಂದು ತಿಳಿಸುತ್ತಾನೆ. ಆದರೆ ಮಮ್ಮಟ ಬಹಳ ಹಳೆಯವನು. ಅವನ ಮೌಲ್ಯಗಳು ಈಗ ತಗವೇನೋ? ಅಥವಾ ಇದೇನಾದರೂ ಆಂಗ್ಲ ಕವಿಗಳ ಪ್ರಭಾವದಿಂದ ಬಂತೋ? ನಾನು ಈ ಶೈಲಿ ಈ ರೀತಿಯಿರುವುದೇಕೆ ಎಂದು ಬಹಳ ಯೋಚನೆ ಮಾಡಿ ಬಗೆಹರಿಯದೇ ಕೈಬಿಟ್ಟಿದ್ದೇನೆ.

ಇಲ್ಲಿ ಒಂದೇ ಒಂದು ಉದಾಹರಣೆಯನ್ನು ಕೊಟ್ಟು ಮುಂದುವರಿಯುತ್ತೇನೆ. ಇಂತಹ ಉದಾಹರಣೆಗಳು 'ಕೃತ್ತಿಕೆ'ಯಲ್ಲಿ ಎಲ್ಲೆಲ್ಲೂ ಕಾಣಿಸಿಕೊಳ್ಳುತ್ತವೆ. 'ಏಳು ಸೀಳು (೧)'ರಲ್ಲಿ ಬರುವ ಈ ಸಾಲುಗಳನ್ನು ನೋಡಿ.

ಸುಖ ಸಲಿಲ ರೂಪದಲಿ ಹರಿವ ಹೊಳೆ ಮಧ್ಯೆ
ಧುಮ್ಮಿಕ್ಕಿ ನೀರಾಡಿದರೆ, ಮರ್ತ್ಯದೀ ಸೃಷ್ಟಿ
ನಾಕ ನಂದನವಾಗಿ, ದೇವತೆಗಳಾಗುವಿರಿ.
ವಿಸ್ಮೃತಿಯ ವೈತರಣಿ ತೀರ್ಥರಸದಲಿ ಕೊಚ್ಚಿ
ಹೋಹವೈ ಕೊರಗು ಕೊಂಕುಗಳೆಲ್ಲ. ಸಗ್ಗಸಿರಿ
ನಾಣ್ಚಿದಪುದೇಳುಸೀಳಿಗೆ ಕರುಬಿ. ತಿರೆ ಮೆಚ್ಚಿ
ಕಬ್ಬವುಟ್ಟಿಯ ಹಿಂಡುತಿಹುದಾಲಿಸಾ, ಜೇನು
ತುಂಬಿದಂಬುಧಿ ಬದುಕು. ದೋಣಿ ನಾಲಗೆ ನಾನು!

ಇದರ ತಾತ್ಪರ್ಯ ಏಳು ಸೀಳಿನ ಸೊಬಗಿಂದ ನಮ್ಮ ಇಡೀ ಬದುಕೇ ಸುಖದ ಜೇನಿನ ಸಮುದ್ರವಾಗಿದೆ. ಅದರಲ್ಲಿ ನಾನು ನನ್ನ ನಾಲಗೆಯ ದೋಣಿಯಲ್ಲಿ (ಯಖ್!) ಕುಳಿತು ತೇಲುತ್ತಾ ಸವಿಯುತ್ತಿದ್ದೇನೆ ಎಂದು.

ಭಾವದಲ್ಲಿ ಪುಟ್ಟಪ್ಪನವರು ಈ 'ಮರ್ತ್ಯಲೋಕದಲ್ಲಿ' ಒಂದೆರಡು ಘಳಿಗೆಯಾದರೂ ತಂಗುವುದಿಲ್ಲ. ಉತ್ಕರ್ಷದ ಒಂದು ಸಣ್ಣ ಹನಿ ತಟ್ಟಿದೊಡನೆಯೇ ನಾಕಲೋಕಕ್ಕೆ ಜಿಗಿದುಬಿಡುತ್ತಾರೆ. ಅಥವಾ ದುಃಖದ ಒಂದು ಬಿಂದು ತಾಕಿದರೆ ಪಾತಾಳಲೋಕಕ್ಕೆ ಧುಮಿಕಿಬಿಡುತ್ತಾರೆ. ಅತಿಶಯೋಕ್ತಿ ಮತ್ತು ಅತ್ಯುತ್ಪ್ರೇಕ್ಷೆಗಳ ತೂಗುಯ್ಯಾಲೆ ಬಲವಾಗಿದೆ. ಒಮ್ಮೊಮ್ಮೆ ಭಾವಗಳ ಹರಿವು ಅಸಂಬದ್ಧ ಸಂಬಂಧಗಳನ್ನು ಕಟ್ಟುತ್ತವೆ. ಉದಾಹರಣೆಗೆ 'ಕಂಸಶಿಲೆ' ('ಕೃತ್ತಿಕೆ', ಪುಟ ೫೮) ಸುನೀತವನ್ನು ನೋಡಿ. ಇಲ್ಲಿ ನಾವು ಸಾಧಾರಣವಾಗಿ ಆಗಾಗ ಒಳ್ಳೆಯ ಆದರ್ಶಗಳನ್ನು ಪಾಲಿಸೋಣವೆಂದು ಮನಸ್ಸು ಮಾಡಿಕೊಳ್ಳುತ್ತೇವಲ್ಲ, 'ನ್ಯೂ ಇಯರ್ ರೆಸಲ್ಯೂಷನ್'ಗಳಂಥವು. ಅವನ್ನು ಸಾಮಾನ್ಯವಾಗಿ ಪಾಲಿಸುವುದಿಲ್ಲ ಅಥವಾ ಪಾಲಿಸುವುದಕ್ಕಾಗುವುದಿಲ್ಲ. ಈ ಸಣ್ಣ ವಿಷಯವನ್ನು ಕಂಸ ಏಳು ಕೂಸುಗಳನ್ನು ಶಿಲೆಗೆ ಬಡಿದು ಕೊಂದ ಸಂಗತಿಗೆ ಹೋಲಿಸುತ್ತಾರೆ. ಇದು ಸರ್ವಥಾ ಉಚಿತವಲ್ಲವೆಂದು ನನಗನಿಸುತ್ತದೆ. ಹಾಗೆಯೇ ಮೇಲಿನ ಉದಾಹರಣೆಯ ಕಡೆಯಲ್ಲಿ ಕಾಣುವ ವಿಚಿತ್ರ ಪದಪುಂಜವನ್ನು ಗಮನಿಸಿ. ಇದು ಅಸಹ್ಯವೆನಿಸುವುದಿಲ್ಲವೆ?

ಅಲಂಕಾರಗಳ ಪ್ರಯೋಗದಲ್ಲೂ ಇದೇ ಅತಿ ಲಕ್ಷಣ ಕಂಡುಬರುತ್ತದೆ. ಪುಟ್ಟಪ್ಪನವರ ಸುನೀತಗಳು ಸರ್ವಾಭರಣಗಳನ್ನೂ ವಿಪುಲವಾಗಿ ಹೊತ್ತುಕೊಂಡು ಬಂದಿರುವ ಹಸೆಮಣೆಯ ಮದುವಣಗಿತ್ತಿಯಂತೆ ಕಾಣುತ್ತವೆ. ಈ ಹೆಣ್ಣು ಅಂತಿಂಥ ಸಾಹುಕಾರರ ಮಗಳಲ್ಲ. ಚಿನ್ನದ ಗಣಿಯನ್ನೇ ಪಡೆದಿರುವಂಥ ಮಾಲೀಕರ ಹೆಣ್ಣು. ಅತಿ ಅಲಂಕಾರವು ನೈಜ

ಸೌಂದರ್ಯಕ್ಕೆ ಬಾಧಕ ತರುತ್ತದೆ. ಅಂತಹ ಅತ್ಯಲಂಕಾರ ಸ್ವಸೌಂದರ್ಯವಿಲ್ಲವೇನೋ ಎಂಬ ಭಾವನೆ ಹುಟ್ಟಿಸುತ್ತದೆ.

ಇನ್ನು ಸುನೀತಗಳಲ್ಲಿ ಕಂಡುಬರುವ ಪುಟ್ಟಪ್ಪನವರ ಭಾಷೆಯ ಬಗ್ಗೆ. ಕನ್ನಡ ಸಾಹಿತ್ಯದಲ್ಲಿ ಕನ್ನಡ, ಸಂಸ್ಕೃತ ಭಾಷೆಗಳ ಮಿಶ್ರಣ ಎಷ್ಟಿರಬೇಕೆಂದು ಬಗೆಹರಿಯದ ಬಹು ಹಳೆಯ ಸಮಸ್ಯೆಯೊಂದಿದೆ. 'ನವೋದಯ'ದ ಕವಿಗಳು ಈ ಸಮಸ್ಯೆಯ ಎರಡು ಪಕ್ಷಗಳಲ್ಲೂ ಸಮವಾಗಿ ಚೆದುರಿ ಹೋಗಿದ್ದಾರೆಂದು ಹೇಳಬಹುದು. ಪುಟ್ಟಪ್ಪನವರು ಮಾರ್ಗ ಸಂಸ್ಕೃತವನ್ನೂ, ಹಳೆಗನ್ನಡವನ್ನೂ ಒಂದು ವಿಚಿತ್ರ ರೀತಿಯಲ್ಲಿ ಬೆರೆಸಿ ಬಡಿಸುತ್ತಾರೆ. ಈ ಪ್ರಯೋಗ ಅವರ ಶೈಲಿಯನ್ನು ಅಸದೃಶ ರೀತಿಯಲ್ಲಿ ಅಂಕಿಸುತ್ತದೆ. ಈ ಬಗೆಯ ಭಾಷೆಯನ್ನು ಬಿ.ಎಂ.ಶ್ರೀ ಅವರು ಉಪಯೋಗಿಸಿದ್ದಾರೆ, ನಿಜ. ನವೋದಯದ ಇನ್ನು ಕೆಲವು ಬರೆಹಗಾರರು ಈ ಭಾಷಾಮಿಶ್ರಣವನ್ನುಪಯೋಗಿಸಿ ಒಂದೆರಡು ಸಣ್ಣ ಕೃತಿಗಳನ್ನೋ, ಕವಿತೆಗಳನ್ನೋ ಬರೆದಿರಬಹುದು. ಆದರೆ ಪುಟ್ಟಪ್ಪನವರು ಈ ಮಿಶ್ರಣವನ್ನು ಕರಗತ ಮಾಡಿಕೊಂಡು ತಮ್ಮ ಭಾಷೆಯೇ ಎನುವಂತೆ ಸ್ವಾಭಾವಿಕವಾಗಿ ಉಪಯೋಗಿಸುತ್ತಾರೆ. ಇದನ್ನು ಅರ್ಥ ಮಾಡಿಕೊಳ್ಳಬೇಕಾದರೆ ಉಭಯ ಭಾಷೆಗಳಲ್ಲೂ ಪಾಂಡಿತ್ಯವಿರಬೇಕಾಗುತ್ತದೆ. ಕಷ್ಟವೇನೆಂದರೆ, ಸಾಮಾನ್ಯ ಕನ್ನಡ ಜನರಿಗೆ ಈ ಎರಡು ಭಾಷೆಗಳೂ ಅಪರಿಚಿತವಾಗಿ ಬಿಟ್ಟಿವೆ. ಅವರಿಗೆ ಸಂಸ್ಕೃತ ಸ್ವಲ್ಪವಾದರೂ ತಿಳಿಯುತ್ತದೆ. ಆದರೆ ಹಳೆಗನ್ನಡ ಖಂಡಿತವಾಗಿ ಸಮೆಯದ ಕಡಲೆ ಕಾಳು!

ಹಾಗಾದರೆ ಈ ಭಾಷೆಯನ್ನುಪಯೋಗಿಸಿರುವುದಕ್ಕೆ ಕಾರಣವೇನು? ಮೊದಲನೆಯದಾಗಿ, ಸುನೀತಗಳಲ್ಲಿ ಸಾಮಾನ್ಯವಾಗಿ ಘನತೆಯ ಭಾವಗಳ ಅಭಿವ್ಯಕ್ತಿಯಿರುತ್ತದೆ. ಅದಕ್ಕೆ ತಕ್ಕ ಘನವಾದ ಭಾಷೆ ಬಳಸುವ ಕಾರಣಕ್ಕಾಗಿ ಈ ಮಿಶ್ರಿತ ಭಾಷೆಯನ್ನು ಪುಟ್ಟಪ್ಪನವರು ಆಯ್ದುಕೊಂಡಿರಬಹುದು. ಇದು ಒಂದು ಬಗೆಯಲ್ಲಿ ನ್ಯಾಯವೇ. 'ನವೋದಯ' ಕಾಲದಲ್ಲಿ, ಸುನೀತದಂತಹ ಹೊಸ ವೃತ್ತ ಮಾಧ್ಯಮದಲ್ಲಿ ಹೊಸ ಪ್ರಯೋಗಗಳನ್ನು ಮಾಡಲು ತೊಡಗಿದ್ದ ತರುಣ ಕವಿಗೆ ಇದು ಸರಿಯೆಂದು ತೋರಿರಬಹುದು. ಅಲ್ಲದೇ, ಈ ಪದ್ಯಗಳನ್ನು ಆಗಿನ ಪಂಡಿತವರ್ಗಕ್ಕೆಂದೇ ಬರೆದದ್ದು. "ಬಳಿಯಿರುವ ವೆಂಕಯ್ಯ, ಕಂಠಯ್ಯ, ಕಸ್ತೂರಿ, ಶ್ರೀನಿವಾಸರು"ಗಳನ್ನು ಮೆಚ್ಚಿಸಲು ಬರೆದದ್ದು. ೩೦ರಿಂದ ೫೦ರ ವರೆಗಿನ ದಶಕಗಳಲ್ಲಿ ಕನ್ನಡದಲ್ಲಿ ಗಂಭೀರವಾದ ಪದ್ಯಗಳನ್ನು ಓದುವ ಓದುಗರಲ್ಲಿ ಪಂಡಿತರಲ್ಲದ ಬೇರೆ ಯಾರೂ ಇರಲಿಲ್ಲ. ಆಗ ಅಂಥವರು ಒಂದು ನೂರು ಜನರಿದ್ದರೆ ಹೆಚ್ಚೆನಿಸೀತು. ಹೆಚ್ಚು ಕಡಿಮೆ ಈಗಲೂ ಇದೇ ಪರಿಸ್ಥಿತಿಯಿದೆ, ಅಲ್ಲವೆ? ಅದು ವಿಷಾದದ ಸಂಗತಿ.

ಪುಟ್ಟಪ್ಪನವರ ಸಂಸ್ಕೃತ ಸಾಮರ್ಥ್ಯ ಮೆಚ್ಚುವಂಥದು. ಮಲೆನಾಡಿನ ಸಣ್ಣ ಹಳ್ಳಿಯಲ್ಲಿ ರೈತಕುಲದಲ್ಲಿ ಹುಟ್ಟಿ ಬೆಳೆದ ಇವರಿಗೆ ಈ ಸ್ತರದ ಸಂಸ್ಕೃತ ಭಾಷೆಯ ಬಲವಿರುವುದು

ಸಂಸ್ಕೃತವು ಭಾರತದಲ್ಲಿ ಮೃತಭಾಷೆಯೆನ್ನುವುದನ್ನು ಹುಸಿ ಮಾಡುತ್ತದೆ. ಯಾವ ಪಂಡಿತ ಮಹಾಶಯರು ಇವರಿಗೆ ಚಿಕ್ಕಂದಿನಲ್ಲಿ ವಿದ್ಯಾದಾನ ಮಾಡಿದರೋ ಅವರಿಗೆ ಋಣಭಾವವನ್ನರ್ಪಿಸಬೇಕು. ಪುಟ್ಟಪ್ಪನವರ ಹಳೆಗನ್ನಡವೂ ಪ್ರಗಲ್ಭ ರೀತಿಯದೇ. ಅದು ನನಗೆ ಬಹಳ ಕಷ್ಟ ಕೊಟ್ಟಿತು. ನನ್ನ ಬಳಿ ಹಳೆಗನ್ನಡದ ಒಂದು ನಿಘಂಟೂ ಇಲ್ಲ, ಸದ್ಯ! ಇದು ಹದಿನಾರಾಣೆ ಹಳೆಗನ್ನಡವಲ್ಲ. ಬಹು ಪಾಲು ಪದಗಳು ಸ್ವಲ್ಪ ಹೊತ್ತು ಊಹಿಸಿದರೆ ಸಾಕು, ಅವುಗಳ ಹೊಸಗನ್ನಡ ರೂಪಗಳು, ಒಂದು ಒಗಟಿನ ಒಳ ಅರ್ಥ ಫಕ್ಕನೆ ಹೊಳೆಯುವಂತೆ, ಸ್ಫುಟವಾಗುತ್ತವೆ. ಆದರೆ ಕೆಲವು ಮಾತ್ರ ಕಡೆಯವರೆಗೆ ಹೊಳೆಯಲಿಲ್ಲ. 'ದಲ್' ಅಂದರೇನು ತಿಳಿಯದಾಯಿತು. ಲಕ್ಷ್ಮಿ ಮತ್ತು ಹೆಲೆನ್ ಇಬ್ಬರೂ ದಲ್‌ಗಳು. ಇದು ಒಳ್ಳೆಯ ಮಾತಲ್ಲ ಎಂದು ಮಾತ್ರ ಊಹಿಸಲಾಯಿತು. ಇನ್ನೊಂದು, 'ಪಾಣ್ಬೆಯರ ಗಾಡಿ' ('ಕೃತ್ತಿಕೆ', ಕನ್ನಂಬಾಡಿ, (೧) ೧೧ನೆ ಸಾಲು). ಹಾಗಂದರೇನು ?

ಇಲ್ಲಿ ಪ್ರಯೋಗಿಸಿರುವ ಕನ್ನಡವು ಹಳೆಗನ್ನಡವೋ ನಡುಗನ್ನಡವೋ ನಿರ್ಧರಿಸುವಷ್ಟು ನನಗೆ ತಿಳಿವಳಿಕೆಯಿಲ್ಲ. ಕೆಲವು ಕಡೆ ದೋಷಗಳೂ ಕಾಣಿಸಿಕೊಂಡಿವೆ. ಉದಾಹರಣೆಗೆ, 'ಚಿತ್ರಭಾನು ('ಕೃತ್ತಿಕೆ', ಪುಟ ೬೨)', ಹಾಗೂ 'ಶ್ರೀ ವಿವೇಕಾನಂದ ಸಂಭೂತಿ ('ಕೃತ್ತಿಕೆ', ಪುಟ ೯೨)' ಸುನೀತಗಳಲ್ಲಿ ನೋಡಿ. ಮೊದಲನೆಯದರಲ್ಲಿ, 'ಸುತ್ತಿದನು ಪೃಥ್ವಿಯಂ ಸಮರಶೇಷಂ' ವಾಕ್ಯದಲ್ಲಿ ಕಡೆಯ ಪದ 'ಶೇಷನ್' ಎಂದಿರಬೇಕಿತ್ತು. ಎರಡನೆಯದರಲ್ಲಿ ಹಾಗೆಯೇ ೫ನೇ ಸಾಲಿನಲ್ಲಿ 'ತಾಂ' ಅನ್ನುವುದು 'ತಾನ್', ಆರನೇ ಸಾಲಿನಲ್ಲಿ 'ಶರೀರಂ' 'ಶರೀರನ್', ಮತ್ತು ಏಳನೇ ಸಾಲಿನಲ್ಲಿ 'ನರಂ' 'ನರನ್' ಎಂದಿರಬೇಕಿತ್ತು. ಈ ಪದಗಳು ಆದಿಶೇಷ ಮತ್ತು ವಿವೇಕಾನಂದರನ್ನು ಕುರಿತ ವಿಶೇಷಣ ಪದಗಳು. ಪುಲ್ಲಿಂಗವಿರಬೇಕು, ನಪುಂಸಕವಲ್ಲ. ಈ ಭಾಷೆ ಕವಿಯ ಆಡುಮಾತಲ್ಲವಾದ್ದರಿಂದ ಇಂತಹ ದೋಷಗಳು ಅವರ ಅರಿವಿಲ್ಲದೆಯೇ ಬಂದು ಬಿಡುತ್ತವೆ. ಆಗಿನ ಪಂಡಿತರು ಇವನ್ನು ಗಮನಿಸಿದರೂ ಕ್ಷಮ್ಯವೆಂದು ತಳ್ಳಿಬಿಟ್ಟಿದ್ದಾರೆಂದು ನನ್ನ ಭಾವನೆ.

ಪುಟ್ಟಪ್ಪನವರ ಸುನೀತಗಳಲ್ಲಿ ಕೆಲವು ಪದಗಳ ಪುನರಾವರ್ತನೆ ಬಹಳ ಕಾಣಿಸಿಕೊಳ್ಳುತ್ತದೆ. ತಪಸ್, ತಪೋವಹ್ನಿ, ಋಷಿ, ರಸರ್ಷಿ, ಕಾವ್ಯರ್ಷಿ, ನಂದನವನ, ಸಗ್ಗ ಸಿರಿ, ವಿಶ್ವ ಹಾಸುಹೊಕ್ಕಾಗಿ (ಒಂದು ಕಡೆ ಪಾಸುಪೊಕ್ಕಾಗಿ), ಮುಂತಾದವು ಪದೇ ಪದೇ ಬಂದು ಚಿರಪರಿಚಿತವಾಗುತ್ತವೆ. ಕೆಲವು ಮಾತುಗಳು ಮರೆಯದಂಥವು; 'ದಂತುರ ದಿಗಂತ', 'ದಂತಪ್ರಘರ್ಷಣರವಂ ಪೊಣ್ಮೆ' 'ಒಯ್ಯಯ್ಯ', 'ರಸಸಲಿಲ' ಮುಂತಾದವು.

ಒಟ್ಟಿನಲ್ಲಿ ಪುಟ್ಟಪ್ಪನವರ ಎಳೆತನದ ಈ ಸುನೀತಗಳನ್ನು ಓದುವುದು ಒಂದು ಔತ್ಸುಕ್ಯದಿಂದ ತುಂಬಿದ ವಿಸ್ಮಯಕರವಾದ ಅನುಭವವೆನಿಸಿತು. ಪ್ರಾಯಶಃ ಅವರಷ್ಟು ಸುನೀತಗಳ ಕೃಷಿಯನ್ನು ಮಾಡಿರುವ ನವೋದಯ ಕವಿಗಳು ಬೇರೆ ಯಾರೂ ಇಲ್ಲವೆಂದು ನನ್ನ ಭಾವನೆ. ನನಗೆ ಬಹಳ ಪ್ರಿಯವಾದ ಪದ್ಯಬಂಧವಿದು. ಇದರಲ್ಲಿ ಗಾಂಭೀರ್ಯ ಮತ್ತು

ನವೀನತೆ ಎರಡೂ ಚೆನ್ನಾಗಿ ಬೆರೆತುಕೊಳ್ಳುತ್ತವೆ. ಅದನ್ನು ಪುಟ್ಟಪ್ಪನವರು ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಈ ಪ್ರಯತ್ನಗಳಿಂದ ಬಹುಶಃ ಇತರ ಭಾರತೀಯ ಭಾಷೆಗಳಲ್ಲಿರದ ಒಂದು ವಿಶಿಷ್ಟ ಉಡುಗೊರೆಯನ್ನು ಪುಟ್ಟಪ್ಪನವರು ಕನ್ನಡ ಪದ್ಯಪ್ರೇಮಿಗಳಿಗೆ ದಯಪಾಲಿಸಿದ್ದಾರೆ.

ಇಲ್ಲಿ ಚರ್ಚಿಸಿರುವ ಸುನೀತಗಳು ಅವರು ಪ್ರಾಯದಲ್ಲಿರುವಾಗ ಬರೆದವು. ಮುಂದಕ್ಕೆ ಹಲವು ಮಹಾಕೃತಿಗಳನ್ನು ರಚಿಸಿ ಕನ್ನಡ ಕವಿತ್ರಯವೆಂದು ಪ್ರಸಿದ್ಧವಾಗಿರುವ ಗಣದಲ್ಲಿ ಪ್ರಥಮ ಸ್ಥಾನವನ್ನೂ ಮತ್ತು ಜ್ಞಾನಪೀಠ ಪ್ರಶಸ್ತಿಯನ್ನೂ ಅವರು ಗಳಿಸಿದರು. ಆ ಸ್ಥಾನಗಳನ್ನು ಪಡೆಯಲು ಬೇಕಾದ ಪ್ರತಿಭೆ ಈ ಪದ್ಯಗಳಲ್ಲಿ ಕಾಣಿಸಿಕೊಳ್ಳುತ್ತದೆಯೇ ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ, ಇಲ್ಲಿಯ ಸುನೀತಗಳಲ್ಲಿ ಕೆಲವು ಅಸಾಧಾರಣ ಅಂದದಿಂದ ಕೂಡಿವೆಯೆಂದು ಯಾವ ಸಂದೇಹವೂ ಇಲ್ಲದೆಯೆ ಹೇಳಬಹುದು. ಆದರೆ, ಅವರಿಗೆ ಮುಂದೆ ದೊರೆತ ಯಶಸ್ಸು ಸನ್ಮಾನಗಳಿಗೆ ಅವರ ಅನ್ಯ ಕೃತಿಗಳ ಬಲವೇ ಕಾರಣವಾಗಿರಬೇಕು ಅಥವಾ ಬೇರೆ ಕೆಲವು ಕಾರಣಗಳೂ ಸೇರಿರಬಹುದೆಂಬ ಭಾವನೆಯಿಂದ ತಪ್ಪಿಸಿಕೊಳ್ಳಲಾಗುವುದಿಲ್ಲ.

●

# ಪ್ರೇಮಗೀತೆಗಳಲ್ಲಿ ಆಧ್ಯಾತ್ಮದ ಧಾರೆ

## ಮಾಯಾ ಹರಪನಹಳ್ಳಿ, ಮೇರಿಲ್ಯಾಂಡ್

ಗಂಡು-ಹೆಣ್ಣು ಸೃಷ್ಟಿಯ ಎರಡು ಕಣ್ಣು. ಅದರಂತೆ ಗಂಡ-ಹೆಂಡತಿ ಸಂಸಾರದ ಎರಡು ಕಣ್ಣು. ಗಂಡ-ಹೆಂಡತಿಯರಲ್ಲಿ ಸರಸ ಸಲ್ಲಾಪಗಳಿದ್ದರೆ ಜೀವನ ಸುಗಮವಾಗಿ ಸಾಗುವುದು. ಮಲೆನಾಡಿನಲ್ಲಿ ಹುಟ್ಟಿದ ಕುವೆಂಪು ಅಲ್ಲಿಯ ಮಣ್ಣಿನಲ್ಲಿ ಬೆರೆತ ಸಂಪ್ರದಾಯದೊಂದಿಗೆ ಬೆಳೆದವರು. ಮಾನವನ ಸಂಬಂಧಗಳ ಮೌಲ್ಯವನ್ನು ಅರಿತವರು. ಪತಿ ಪತ್ನಿಯರ ಸಂಬಂಧ ಜನ್ಮ-ಜನ್ಮದ ಅನುಬಂಧ, ದೇವನು ನೀಡಿದ ಅನುಪಮ ಕಾಣಿಕೆ ಎಂದು ನಂಬಿದವರು. ಮದುವೆ ಎಂಬುದು ವಿಧಿಯ ನಿರ್ಧಾರ ಎಂಬ ನಂಬಿಕೆ ಯುಗ-ಯುಗದಿಂದ ನಮ್ಮಲ್ಲಿ ಬೇರೂರಿದೆ. ಮದುವೆ ಬರಿ ಗಂಡು ಹೆಣ್ಣಿನ ಸಂಬಂಧವನ್ನಷ್ಟೇ ಅಲ್ಲ, ನಮ್ಮ ಆಚಾರ ವಿಚಾರಗಳನ್ನೂ ಬಿಂಬಿಸುತ್ತದೆ.

ಬಾಳ ಸಂಗಾತಿ ಹೇಗೆ ಇರಬೇಕು ಎಂಬ ಕಲ್ಪನೆಯು ತುಂಬ ಮಹತ್ವವಾದದ್ದು. ಹೆಂಡತಿ ಬದುಕಿನುದ್ದಕ್ಕೂ ತನ್ನ ಭಾವನೆಗಳೊಂದಿಗೆ ಸ್ಪಂದಿಸಿ ನಡೆಯುವಳಂಥವಳಿರಬೇಕು ಎಂಬುದು ಸಾಧಾರಣವಾಗಿ ಎಲ್ಲ ಗಂಡಂದಿರ ಬಯಕೆ. ಹೆಣ್ಣು ಕೋಮಲೆಯಾಗಿರಬೇಕು; ಗುಣವಂತೆಯಾಗಿರಬೇಕು; ಕೇವಲ ಸುಂದರ ಶಿಲ್ಪವಾಗದೆ, ನಡೆಯಲ್ಲಿ, ನುಡಿಯಲ್ಲಿ, ರಸಿಕತೆಯಲ್ಲಿ, ಸಂಸ್ಕೃತಿಯಲ್ಲಿ, ಕಲೆಯಲ್ಲಿ, ಕಾವ್ಯದಲ್ಲಿ ಕಂಪನ್ನು ಬೀರಬೇಕು; ಅಂಥವಳೊಂದಿಗಿದ್ದರೆ ಮಾತ್ರ ಜೀವನದಲ್ಲಿ ಏನನ್ನೂ ಸಾಧಿಸಬಹುದು, ಎಂಬ ಭಾವವನ್ನು ಕುವೆಂಪು ಅವರ 'ಹೆಣ್ಣು' ಎಂಬ ಕವನದಲ್ಲಿ ನಾವು ನೋಡುತ್ತೇವೆ.

ನಿನ್ನನುಳಿದಿರೆ ತಿರೆಯ ಬದುಕು ಮರುಧರೆ, ಸೊನ್ನೆ;
ಬಾಳ್ಗಡಕೆ ಜೀವನಂ ಹೂ ಹಣ್ಣು ಕಂಪಿಂಪು
ನೀನಲ್ತೆ, ಓ ನನ್ನ ನೀಲಿ ಸೀರೆಯ ಕನ್ನೆ?
ಸಂಸ್ಕೃತಿಯ ರಸಿಕತೆಯ ಕಲೆಯ ಕಾವ್ಯದ ಪೆಂಪು
ನೀನಿರಲ್ ಸಾಧನೆಗೆ ನೀಂ ಫಲಂ ಸಿದ್ಧಿ
ನೀನಿಲ್ಲದಿಹ ತಪಕಿಹುದೆ ಶುದ್ಧಿ, ಮೇಣ್ ಬುದ್ಧಿ

ಮನೆಯ ಬಾಗಿಲನ್ನು ತೆರೆದು, ಹೊಸ ಬೆಳಕಿನೊಂದಿಗೆ, ಹೊಸ ಆಸೆಗಳೊಂದಿಗೆ ಹೊಸತನವನ್ನು ತುಂಬುತ್ತಾ ಹೊಸ ಬಾಳಿಗೆ ಬಾ - ಎಂದು, ಪ್ರಿಯನು ಪತ್ನಿಯನ್ನು ಸ್ವಾಗತಿಸುತ್ತಾನೆ. ರೂಪ ಮುಖ್ಯವಲ್ಲ; ವೇಷ ಮುಖ್ಯವಲ್ಲ; ದಿನವು ಮುಖ್ಯವಲ್ಲ, ಬೇಸರ ತುಂಬಿದ ಈ ಬಾಳಿಗೆ ನೇಸರನ ಬೆಳಕಾಗಿ, ಚಂದ್ರನಂತೆ ತಂಪಾಗಿ, ಬಯಕೆಯ ಕಡಲಾಗಿ,

ಪ್ರೇಮದ ಗಿರಿಯಾಗಿ, ಆಸೆಯ ಬನವಾಗಿ, ಹೊಸರಾಗವ ಹಾಡುತ್ತ ರಸ ಜೀವವನ್ನು ತುಂಬು ಎಂದು ಕೇಳುತ್ತಾನೆ. 'ತೆರೆದಿದೆ ಮನೆ, ಓ, ಬಾ ಅತಿಥಿ' ಕವನವು 'ಪ್ರೇಮ ಕಾಶ್ಮೀರ' ಕವನ ಸಂಕಲನದಲ್ಲಿದೆ. ನಮ್ಮ ಸಂಸ್ಕೃತಿಯಲ್ಲಿನ 'ಅತಿಥಿ ದೇವೋಭವ'ವು ಎಲ್ಲರ ಮನದಲ್ಲಿ ಬೇರೂರಿಬಿಟ್ಟಿದೆ. ಅದು ಹಿರಿಯರಿಂದ, ಗುರುಗಳಿಂದ ಪಡೆದಂತಹ ಸಂಸ್ಕಾರ; ಮನೆಗೆ ಬಂದ ಅತಿಥಿಗೆ ಸತ್ಕಾರ ಮಾಡುವದು ನಡೆದು ಬಂದ ದಾರಿ. ಮಡದಿಯು ತನ್ನ ತವರಿಂದ ಗಂಡನ ಮನೆಗೆ ಅವನನ್ನು ನಂಬಿಕೊಂಡು ಬಂದಿರುವಾಗ ಅವಳ ಪ್ರಿಯನು, ಮಡದಿಗೆ ಮನೆ, ಮನವನ್ನು ತೆರೆದಿಟ್ಟಿರುತ್ತಾನೆ.

ತೆರೆದಿದೆ ಮನೆ, ಓ, ಬಾ ಅತಿಥಿ!
ಹೊಸ ಬೆಳಕಿನ ಹೊಸಗಾಳಿಯ ಹೊಸಬಾಳನು ತಾ ಅತಿಥಿ!
ಹೊಸತಾನದ ಹೊಸಗಾನದ ರಸಜೀವನ ತಾ, ಅತಿಥಿ!

ಹೊಸ ಆಸೆಗಳೊಂದಿಗೆ ಹಸೆಮಣೆಯನ್ನೇರಿ ಹೊಸ ಬಾಳಿಗೆ ಸಂಗತಿಯಾಗಿ ಕಾಯಾ ವಾಚಾ ಮನಸಾ ಒಬ್ಬರನೊಬ್ಬರು ಅರ್ಥ ಮಾಡಿಕೊಂಡು ನಡೆಯುವುದೇ ಸಂಸಾರದ ಗುಟ್ಟು. ಮದುವೆಯಾಗಿ ಹೊಸ ಜೀವನಕ್ಕೆ ಕಾಲಿಟ್ಟಿರುವ ತನ್ನ ಚಕೋರಿಯನ್ನು ಕರೆಯುವ ರೀತಿಯನ್ನು ಕುವೆಂಪು ತಮ್ಮ 'ಚಂದ್ರ ಮಂಚಕೆ ಬಾ ಚಕೋರಿ'ಯಲ್ಲಿ ವರ್ಣಿಸಿದ್ದಾರೆ. ತನ್ನ ಪ್ರೇಮಿ, ಪಾದದ ಗೆಜ್ಜೆಯ ಧ್ವನಿಯ ಮಾಡುತ್ತ ಬಾ ಎಂದು ಕರೆಯುವ ಪರಿ ನೋಡಿ :

ತೆರೆಯ ಚಿಮ್ಮಿಸಿ, ನೊರೆಯ ಹೊಮ್ಮಿಸಿ,
ಕ್ಷೀರಸಾಗರದಲ್ಲಿ ತೇಲುವ
ಬಾಗುಚಂದ್ರನ ತೂಗುಮಂಚಕೆ
ಬಾ, ಚಕೋರಿ! ಬಾ, ಚಕೊರಿ!
................
ಚಂದ್ರಮಂಚಕೆ ಬಾ, ಚಕೋರಿ!

ವನದಲ್ಲಿ ಹಸಿರು ಹರಡಿದಂತೆ. ನೀಲಿ ಬಾನಿನಲ್ಲಿ ತಾರೆ ಹೊಳೆದಂತೆ, ಮುಂಜಾನೆಯ ಸೂರ್ಯನ ಕಿರಣದಂತೆ, ತಾವರೆ ಹೂವಿನ ಮೇಲೆ ಮಂಜಿನ ಮಣಿಯಂತೆ ಇನಿಯಳ ನಗು! ಆ ಮೋಹಕ ಮುಗುಳು ನಗೆಯೊಂದಿಗೆ ಮಡದಿ ಮನೆಯಲ್ಲಿ ಓಡಾಡುತ್ತಿದ್ದರೆ ಮನೆಯು ನಂದನವಾಗುವುದರಲ್ಲಿ ಸಂದೇಹವಿಲ್ಲ. ಕುವೆಂಪು ಅವರ 'ಎನ್ನಿನಿಯಳು' ('ಷೋಡಶಿ' ಕವನ ಸಂಗ್ರಹ) ಎಂಬ ಕವನದಲ್ಲಿ ಇದನ್ನು ವರ್ಣಿಸಿದ್ದಾರೆ:

ಬನವೆಲ್ಲ ಕೊನರೊಡೆದು ತಳಿರಿಂದ ನಳನಳಿಸೆ
ಅರಳುತಿಹ ಬಿರಿಮುಗುಳ ನೋಡಿರುವೆಯೇನು?
ಬಾನೆಲ್ಲ ತಿಳಿಯಾಗಿ ಮುಗಿಲ ಸುಳಿವಿಲ್ಲದಿರೆ
ಮೂಡುತಿಹ ತಾರೆಯನು ಕಂಡಿರುವೆಯೇನು?
ಮೂಡುತಿರೆ ನೇಸರನ ಬೆಳಕಿನಲಿ ಮಿಂಚುತಿಹ

ತಾವರೆಯ ಹಿಮ ಮಣಿಯ ದಿಟ್ಟಿಸಿಹೆಯೇನು?
ಇನಿತೆಲ್ಲವನು ನೀನು ಕಂಡಿರುವೆಯಾದೊಡೆಯು
ನೋಡಬೇಕೆನ್ನಿನಿಯಳೆಳನಗೆಯ ನೀನು!

ನಗೆಯು ವಿವಿಧ ಕಾಲದಲ್ಲಿ ಬೇರೆ ಬೇರೆ ಭಾವಗಳನ್ನು ಸೂಸುತ್ತದೆ. ಮಡದಿಯ ನಗುವನ್ನು ನೋಡಿದಾಗ ನೂರೆಂಟು ಕಲ್ಪನೆಗಳು ಮನಸ್ಸಿನಲ್ಲಿ ಮೂಡಬಹುದು. ಆಗ, ಆ ಕಲ್ಪನೆ ಒಂದು ಅದ್ಭುತ ಕವನಧಾರೆಯಾಗಿ ಹರಿದುಬರುತ್ತದೆ. ಪ್ರೇಮಕಾವ್ಯದಲ್ಲಿ ಅಧ್ಯಾತ್ಮವನ್ನೂ ಕಾಣಬಹುದು. ಆ ನಗುವಿನಲ್ಲಿ ಇರುವ ಅಕ್ಕರೆ, ಹಾಲಿನಲ್ಲಿ ಸಕ್ಕರೆ ಬೆರೆತಂತೆ; ಅಮೃತವಕ್ಷ ಸುಖದಲ್ಲಿ ಆನಂದವೀಣೆ ಮೀಟಿದಂತೆ. ಕುವೆಂಪು ಅವರ 'ನೀನು ನಕ್ಕರೆ' ('ಚಂದ್ರಮಂಚಕೆ ಬಾ, ಚಕೋರಿ' ಸಂಗ್ರಹ) ಎಂಬ ಕವನವು ಪ್ರೇಮವನ್ನು ಲೌಕಿಕತೆಯಿಂದ ಅಲೌಕಿಕತೆಗೆ ಏರಿಸುತ್ತದೆ.

ನಾಲ್ಕು ನೋಟದಾ
ಏಕ ಕೂಟದಾ
ಸ್ರೋತ ಕಂಗಳೆ
ಸೇತು ಬಂಧನ:
ಭಾವಭೂಮಿಗೇರುವೆ;
ದೇವತ್ವಕೆ ಹಾರುವೆ.
ನನ್ನ ನಿನ್ನ ಸೇರುವೆ
ನಾನು ನೀನು ಮೀರುವೆ:
ನಶ್ವರದಾ ಕ್ಷಣದಲ್ಲಿ
ಶಾಶ್ವತವನೆ ಹೀರುವೆ!

ಪತಿಯ ಪ್ರತಿಯೊಂದು ಕಾರ್ಯದಲ್ಲೂ ಪತ್ನಿಯು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಸೇವೆ ಸಲ್ಲಿಸುತ್ತಿರುವಳು. ಯಶಸ್ವಿ ಪುರುಷನ ಹಿಂದೆ ಸ್ತ್ರೀಯೊಬ್ಬಳು ಇರುವಳಂತೆ. ಅವಳು ಕಣ್ಣು ಕೋರೆಸುವ ಮಿಂಚಲ್ಲ, ಧ್ರುವತಾರೆ; ಧೀರೆ, ಸಂಯಮಶೀಲೆ, ತ್ಯಾಗ ಭೋಗಗಳಲ್ಲಿ ಸಹಭಾಗಿಯಾಗಿ ಗುಣದಲ್ಲಿ ರೂಪದಲ್ಲಿ ದೇವತೆಯಾಗುವಳು:

ದೇವಿ, ಪ್ರತಿಭೆಗೆ ನೀನೆ ಭಾವವಿದ್ಯುಚ್ಛಕ್ತಿ;
ಕಲೆಗೆ ವಿದ್ಯಾಶಕ್ತಿ; ಪ್ರಾಣಕೆ ಪ್ರೇಮಶಕ್ತಿ!

('ಜೇನಾಗುವಾ' ಸಂಗ್ರಹ)

ಸತಿಯು ನೈತಿಕವಾಗಿ, ಮಾನಸಿಕವಾಗಿ ಧೈರ್ಯವನ್ನು ನೀಡುವವಳು; ನಿಸ್ವಾರ್ಥೆಯಾಗಿ ತನ್ನ ಸಂಸಾರಕ್ಕೆ ದುಡಿಯುವವಳು; ತ್ಯಾಗ-ಭೋಗಗಳಲ್ಲಿ ಭಾಗಿಯಾಗುವವಳು; ಪತಿಗೆ ಶಕ್ತಿಯಾಗುವವಳು. ಸ್ತ್ರೀ – ಮುನಿದರೆ ಮಾರಿ, ಒಲಿದರೆ ನಾರಿ. ಮುನಿದ ನಾರಿಯು ಸ್ವರ್ಗವನ್ನು ನರಕ ಮಾಡಬಲ್ಲಳು; ಒಲಿದ ನಾರಿಯು ನರಕವನ್ನು ಸ್ವರ್ಗ

ಮಾಡಬಲ್ಲಳು. ತನಗೆ ಎಷ್ಟೇ ತೊಂದರೆ ಬಂದರೂ ಗಂಡನ ಸೌಖ್ಯವನ್ನು ನೋಡಿಕೊಳ್ಳುವಳು.

ನರಕದಲಿ ನಾಕವನೆ
ನೀ ಸೃಜಿಸಬಲ್ಲೆ;
ನಾಕವನು ನಿಂತಲ್ಲೆ
ನರಕವಾಗಿಸ ಬಲ್ಲೆ
ಓ ನನ್ನ ನಲ್ಲೆ!
ನಿನ್ನ ಮಂತ್ರಕೆ ಎಲ್ಲೆ ಇರುವುದೆಲ್ಲೆ ?
ಹೇಳೆನ್ನ ನಲ್ಲೆ!

ಹೆಂಡತಿ ಸಿಟ್ಟು ಮಾಡಿಕೊಳ್ಳಲು ಕಾರಣಗಳು ಬೇಕಿಲ್ಲ. ಅದು ಚಿಕ್ಕದ್ದಾಗಿರಬಹುದು ದೊಡ್ಡದಾಗಿರಬಹುದು. ಮುನಿದ ಮಡದಿಯನ್ನು ಸಂತೈಸುವದು ತುಂಬ ಕಷ್ಟದ ಕೆಲಸ. ಈ ಸಮಯದಲ್ಲಿ ಗಂಡನು ಪ್ರೇಮಭಿಕ್ಷೆ ಬೇಡುವದು ಸಹಜ! ಕುವೆಂಪುರವರ 'ಪ್ರಣಯ ದಯಾಭಿಕ್ಷೆ' ಕವನದಲ್ಲಿ, ಹಸಿದವನಿಗೆ ತುತ್ತು ಅನ್ನ ಹೇಗೆ ಅಮೃತವೋ ಹಾಗೆ ನನ್ನ ಹೃದಯ ಹಸಿದಿದೆ, ದಯೆ ತೋರು, ಕ್ಷಮಿಸು ಪ್ರಿಯೆ. ಒಲವಿನ ಅಮೃತ ಕಲಶದ ತೀರ್ಥವನ್ನು ನನಗೆ ಉಣಿಸು; ನಿನ್ನ ಸಂಗ ಬೇಕು -ಎಂದು ಬೇಡುವನು :

ಕ್ಷಮಿಸು ಪ್ರಿಯೆ! ತೋರು ದಯೆ!
ಹೃದಯ ಹಸಿದಿದೆ
ಅನ್ನವೂಡಿ ಸಲಹು, ಪ್ರಿಯೇ,
ಬಾಳು ಕುಸಿದಿದೆ
..........
ಚಂದ್ರ ಕಿರಣ ಸದೃಶ ಚರಣ
ಮಧು ಮೋಹನ ಸುಧಾತಲದಿ
ಚುಂಬಿಸೆನ್ನ ಮುದ್ದಿಸು,
ಭೋಗಸುಪ್ತಿಗದ್ದಿಸು!

ಮುನಿದ ಪತ್ನಿಯ ಮುನಿಸನ್ನು ಸುಲಭದಲ್ಲಿ ನಿವಾರಿಸಲು ಸಾಧ್ಯವೇ? ಪತಿಗೆ ಏನು ಮಾಡಬೇಕೆಂದು ತೋರುತ್ತಿಲ್ಲ. ಪ್ರಿಯೆಯಲ್ಲಿ ತನ್ನ ಹೃದಯದ ನೋವನ್ನು ತೋಡಿಕೊಳ್ಳುವನು. ತನ್ನಿಂದ ಅಗಲುವದನ್ನು ಬಿಟ್ಟು ಏನಾದರೂ ಮಾಡು ತಾನು ಬೇಡವೆನ್ನುವುದಿಲ್ಲ. ತನ್ನ ತಪ್ಪು ಏನಿದ್ದರೂ ಮನ್ನಿಸಿ, ಕರುಣೆಸಿ ಕಾಪಾಡಬೇಕೆಂದು ಕೇಳಿಕೊಳ್ಳುತ್ತಾನೆ.

ಇನ್ನೇನಾದರೂ ನೀ ಮಾಡು,
ಅಗಲುವುದೊಂದುಳಿದು;

ಮನ್ನಿಸಿ ಕರುಣಿಸಿ ಕಾಪಾಡು,
ಕವಿಹೃದಯವ ತಿಳಿದು.
........
ಚಿತೆಯಾಗಿದೆ ಬಾಳ್; ಮನೆಯೆ ಸ್ಮಶಾನ!
ಹದಿನೈದೇ ದಿನಗಳ್ ಶತಮಾನ!
ಅಡಿಹುಡಿಯಾಗಿದೆ ಗೌರವ, ಮಾನ!
ದುಮ್ಮಾನದಿ ಸತಿ, ನಾನತಿದೀನ!

(ಚಂದ್ರಮಂಚಕೆ ಬಾ ಚಕೋರಿ)

ಸರಸ ವಿರಸ ಬಾಳಿನ ಎರಡು ಮುಖಗಳು. ಎರಡನ್ನೂ ಸಮನಾಗಿ ಸ್ವೀಕರಿಸಬೇಕು. ಗಂಡ-ಹೆಂಡತಿ ಕೋಪಿಸಿಕೊಳ್ಳುವದು ಸಹಜ. ಆದರೆ ಅದು ದೀರ್ಘಕ್ಕೆ ಹೋಗಬಾರದು. ಬೇವು-ಬೆಲ್ಲದಂತೆ ಸ್ವೀಕರಿಸಬೇಕು. ಸರಸವೆ ಜನನ, ವಿರಸವೇ ಮರಣ ಸಮರಸವೇ ಜೀವನ. ನವರಸ ಭಾವನೆಗಳು ಮಾನವನಲ್ಲಿ ಹುಟ್ಟಿನಿಂದ ಬಂದಿರುವವು. ಸಂದರ್ಭಾನುಸಾರವಾಗಿ ಅವುಗಳು ಪ್ರಕಟವಾಗುವವು. ಹಿರಿಯರ ಗಾದೆ-ಮಾತಿನಂತೆ 'ಗಂಡ-ಹೆಂಡಿರ ಜಗಳ, ಉಂಡು ಮಲಗುವತನಕ.' ಎನ್ನುವಹಾಗೆ ಇದ್ದರೇ ಬದುಕು ಸುಖದ ತೀರವನ್ನು ಸೇರುವುದು. 'ಮುನಿದ ಕಾಂತೆಗೆ' ಕವನವನ್ನು ನೋಡಿ.

ಮನೆಯ ಬೆಳಗುತಿರುವ ಓ
ನನ್ನ ಹೃದಯ ದೀಪ,
ಎನಿತು ಎಣ್ಣೆ ಸುರಿದರೂ
ಎನಿತು ಬತ್ತಿ ಉರಿದರೂ
ತಣಿಯದಿಹುದೆ ತಾಪ,
ಪೂರ್ವಜನ್ಮ ಶಾಪ
ರೂಪದಿ ಪ್ರಕೋಪ
........
ತೃಪ್ತಿಯೆ ನಿನಗಿಲ್ಲವೆ ?
ಸಾವೆ ಕೊನೆಯ ಗೆಲ್ಲವೆ ?
ಹೇಳು, ಓ,
ಬಾಳ ಬೇವುಬೆಲ್ಲವೆ!

(ಚಂದ್ರಮಂಚಕೆ ಬಾ ಚಕೋರಿ)

ದಂಪತಿಗಳು ಒಬ್ಬರಮೇಲೊಬ್ಬರು ಸಿಟ್ಟು ಮಾಡಿಕೊಂಡಾಗ ಒಬ್ಬರನೊಬ್ಬರು ಸಂತೈಸುವದು ಅವರ ಕರ್ತವ್ಯ. ದಾಂಪತ್ಯ ಜೀವನದಲ್ಲಿ ಪತಿ-ಪತ್ನಿ ಇಬ್ಬರ ಪಾತ್ರ ಬಹು ಮುಖ್ಯವಾದದ್ದು.

ಏನದ್ಭುತ! ಏನಚ್ಚರಿ!
ಸಾಮಾನ್ಯವೆ ಸಂಗತಿ ?
ಬ್ರಹ್ಮಾಂಡದ ಪತ್ರಿಕೆಗೂ
ಅದ್ಭುತ ಈ ಸಂಗತಿ!
ಸ್ವರ್ಣಾಕ್ಷರ ಸಂಗತಿ!
ಬಿತ್ತಿದವರು ಶಿವಪಾರ್ವತಿ;
ಬೆಳೆಸುತಿಹರು ಅಜ ಸರಸತಿ;
ಈ ಒಲವಿನ ಇನಿಜೇನನು
ಸುರಿಯುತಿಹರ್ ಅನಂಗ ರತಿ!-
ನಾನು ನಿಮ್ಮ ಶ್ರೀಮತಿ!
ನೀವು ನನ್ನ ಶ್ರೀಪತಿ!

ಗಂಡು-ಹೆಣ್ಣುಗಳನ್ನು ಸತಿ-ಪತಿಗಳನ್ನಾಗಿ ಮಾಡಿದುದು ಆ ದೇವನು ಎಂಬ ಬಲವಾದ ನಂಬಿಕೆಯುಳ್ಳವರು ಕುವೆಂಪು. ಹಾಗಾಗಿ, ಅವರ ಅನೇಕ ಪ್ರೇಮ ಕವನಗಳು ಆಧ್ಯಾತ್ಮಿಕ ರೀತಿಯಲ್ಲಿ ಕೊನೆಗೊಂಡಿರುವುವು. ದಂಪತಿಗಳೆಂದರೆ ಎರಡು ಹೆಸರು, ಒಂದೆ ಉಸಿರು. ಬಾಳಿನಲ್ಲಿ ಸಿಹಿಯನ್ನು ತುಂಬುತ್ತ ಸಾಗುವರು. ಕುವೆಂಪು 'ದಂಪತಿ' ಕವನದಲ್ಲಿ ಪತಿ-ಪತ್ನಿಯರ ಸಂಬಂಧವನ್ನು ವಿವರಿಸಿದ್ದಾರೆ. ಸತಿ-ಪತಿಗಳು ಎಷ್ಟು ಅನ್ಯೋನ್ಯವಾಗಿರುತ್ತಾರೆಂದರೆ, ಅಗಲುವಿಕೆಯು ಅವರನ್ನು ಶೂನ್ಯತೆಗೆ ಇಳಿಸುವುದು:

ನಿನ್ನ ವಿನಾ ನಾನು ಶೂನ್ಯ;
ತೊರೆಯೆ ನೀನು ನಾ ಜಘನ್ಯ.
ನಿನ್ನ ತಪ್ಪಿ ನಾನು ರಿಕ್ತ;
ನೀ ಬಂಧಿಸೆ ನಾ ಮುಕ್ತ;
ಆಲಂಗಿಸೆ ಯೋಗಯುಕ್ತ!
ಎರಡು ಹೆಸರಿಗೊಂದೆ ಉಸಿರು:
ನಾನು ಪತಿ, ನೀನು ಸತಿ,
ಒಂದೆ ದಂಪತಿ;

ಸತಿ-ಪತಿಯರ ಜೀವನ ಅನ್ಯೋನ್ಯತೆಯಿಂದ ಕೂಡಿದರೆ ಮಾತ್ರ ಬಾಳಿನಲ್ಲಿ ಉತ್ಸಾಹ ತುಂಬಿಬರುವುದು. ಮನೆಯಲ್ಲಿ ಮಡದಿಯು ನಗುನಗುತ್ತ ಇದ್ದರೆ ಮನೆಯು ಸ್ವರ್ಗದಂತೆ ಇರುವುದು. ಆನಂದದ ಅರಮನೆಯಾಗುವುದು. ಮಡದಿಯನ್ನು ನೋಡುವುದು ಬರಿಯ ಬಾಹ್ಯ ಸೌಂದರ್ಯದಿಂದಲ್ಲ; ಆಂತರಿಕ ಸೌಂದರ್ಯದಿಂದ. ಅಂತರಂಗದ ಸುಂದರತೆ ಕಣ್ಣಿಗೆ ಕಾಣದು. ಅದನ್ನು ಅನುಭವಿಸಿದರೆ ಮಾತ್ರ ತಿಳಿಯುವುದು. ಹೃದಯ ಸಿರಿವಂತಿಕೆ, ವಿಶಾಲ ಮನಸ್ಸು, ಮಧುರ ಮಾತು ಈ ಎಲ್ಲ ಗುಣಗಳು ಗೃಹಿಣಿಯಲ್ಲಿ ಇದ್ದರೆ ಆಗ ಮನೆಯು

ನಂದನ ವನವಾಗುವುದು. ಪತಿ-ಪತ್ನಿಯರ ಅನುರಾಗದ ಅನುಬಂಧ ಸುಂದರ ದಾಂಪತ್ಯದ ಕಟ್ಟಡವನ್ನು ಕಟ್ಟಲು ಸಹಾಯವಾಗುವುದು. ಇದರ ವಿವರ ಕುವೆಂಪು ರಚಿತ 'ಹೇಮ ಬಂಧನ' ಕವನದಲ್ಲಿ ಕಾಣಬಹುದು:

ನೀನೆ ಅಪ್ಸರಿ!
ನಾನೆ ನಂದನ!
ಸ್ವರ್ಗದೈಸಿರಿ
ಹೇಮ ಬಂಧನ!
ನೋಟವಪ್ಸರಿ!
ಕೂಟ ನಂದನ!
ಮುಕ್ತಿಯೈಸಿರಿ
ಬಾಹುಬಂಧನ!

ಸಂಸಾರ ಆನಂದಸಾಗರದಲ್ಲಿ ತೇಲುತ್ತಿರಲು, ಭಾವತರಂಗಗಳು ಚಿಮ್ಮುತಿರಲು, ಪತಿ-ಪತ್ನಿಯರ ಸಂಗಮ ಸುಖವು ಪ್ರೇಮಶಿಖರವನ್ನು ಮುಟ್ಟುವುದು. ಅವರ ರಸ ಜೀವನವು ಅಮೃತ ಸಮಾನವಾಗಿರುವುದು. 'ಹೇಮಾ ರೂಪಸಿಗೆ' ಕವನದಲ್ಲಿ ಕವಿಯು ತಾನು ಅಮರ ಮತ್ತು ಅಜರನಾಗುವುದು ಹೇಗೆ ಎಂದು ತಿಳಿಸುವನು.

ನನ್ನ ಕೈಯೊಳಿರಲು ನಿನ್ನ
ಪ್ರೇಮ ಶಿಖರ ಪದುಮ ಸದೃಶ
ಹೇಮವಕ್ಷದಮೃತ ಕಲಶ,
ನಾನು ಅಜರ! ನಾನು ಅಮರ!
ನಾನು ದಿವ್ಯ! ನಾನು ಧನ್ಯ!
ನಾನು ಪೂರ್ಣ! ನಾನು ಶೂನ್ಯ!
ಪ್ರೇಮ ಮಧುಪ್ರೇಯಸೀ
ಹೇ ಹೇಮಾ ರೂಪಸಿ!

ಮನಸ್ಸು ಒಂದಾಗಿ, ಹೃದಯದಲ್ಲಿ ಆಸೆಯ ಹೂಗಳು ಅರಳಿ ನಗುತ್ತಿರಲು, ಪ್ರೀತಿಯ ಸತಿಯು ಮನದಲ್ಲಿ ತುಂಬಿ ನಗುತ್ತಿರಲು, 'ಅಣು ಅಣುವಲಿ ಕಣಕಣದಲಿ ಚಲುವೆ ಪ್ರೇಮ ಧಾರೆ' ಹರಿಯುತ್ತಿದ್ದರೆ ರಸಮಯ ಕಾವ್ಯಗಳ ಸೃಷ್ಟಿಯಾಗುವುದು. ಸಮಾಧಾನದ ಜೀವನ ಹೆಣ್ಣಿನ ಕೈಯಲ್ಲಿರುತ್ತದೆ. ಅವಳು ಹರಿಸುವ ಪ್ರೀತಿಯ ಸುಧೆಯು ಪತಿಯ ಕೀರ್ತಿ, ಕಲೆ, ಸಿರಿಗೆ ಸ್ಫೂರ್ತಿ! ಮಡದಿಯು ಮೈತುಂಬಾ ಉಟ್ಟಿರುವ ಸೀರೆಯ ಸೊಬಗು, ಮುದ್ದು ಮುಖದಲ್ಲಿ ಮಿನುಗುವ ಮೂಗುತಿ, ನೀಳವಾದ ಜಡೆ. ಅವಳ ಸೌಂದರ್ಯವನ್ನು ನೋಡಿ ಕಂಗಳು ತಣಿಯಲಿಲ್ಲ, ಮನ ದಣಿಯಲಿಲ್ಲ. ಕಣ್ಣುಗಳಿಗೆ ಸುಂದರಿಯಾಗಿ, ಮನಕ್ಕೆ ಮಂಗಳೆಯಾಗಿ, ಬಾಳ ಸಂಗಾತಿಯಾಗಿ ಬರುವ ಹೆಂಡತಿಯ ಮೇಲೆ ತುಂಬ ಪ್ರೀತಿ, ಅಭಿಮಾನ ಉಕ್ಕುವುದು.

'ಎದೆ ನಲಿಯೆ ಮೆರೆದಳಾ ಹದಿನಾರು ಚೈತ್ರದಾ ನನ್ನವಳು ನೀರೆ.' ರವಿ ಉದಯ, ಚಂದ್ರೋದಯವೆಲ್ಲವೂ ಹೇಮಲತೆಯಾಗಿ ಅವಳು ಕವಿಯ ಮುಂದೆ ಮೆರೆಯುತ್ತಾಳೆ. ಮಡದಿಯ ಪ್ರೀತಿಯು ಜೀವಕ್ಕೆ ಉಸಿರು, ಜೀವನಕ್ಕೆ ಹಸಿರು. ಅವಳು ತನ್ನ ಬಾಳನ್ನು ಬೆಳಗಲು ಹೇಗೆ ಕಾರಣಳಾದಳೆಂಬುದನ್ನು ಕವಿ ನೆನೆದುಕೊಳ್ಳುವನು. ಅವಳು ಬರುವದರಿಂದ ತನ್ನ ಬಾಳಿನಲ್ಲಿ ಏನೇನು ಬದಲಾವಣೆಗಳಾಗುವುವು ಎಂಬುದು 'ಬರುತಾಳೆ ನಾಳೆ' ಕವನದಲ್ಲಿ ವ್ಯಕ್ತವಾಗುವುದು:

ಹೋದುಸಿರು ಹಿಮ್ಮರಳಿ ಬರುವಂತೆ ಬರುತಾಳೆ
ಒಣಗಲಿಹ ಪಯಿರಿಗೆ ಮಳೆಯಂತೆ ಬರುತಾಳೆ
ಬೆಂದೆದೆಯ ಶಾಂತಿಯ ಜೊನ್ನವನು ತರುತಾಳೆ
ಒಡಲ ಕಡಲಿಗೆ ತಿಂಗಳುದಿಪಂತೆ ಬರುತಾಳೆ!
ತೋಟದ ಹೂಗಳಿಗೆ ಬರುವಂತೆ ಕಾಂತಿ
ಮನೆಯ ಶೂನ್ಯಕೆ ತುಂಬಿ ಬರುವಂತೆ ಶಾಂತಿ
ಕವಿಯ ಬಾಳಿರುಳಿಗೆ ಹೊಂಬೆಳಕು ಬರುವಂತೆ
ಶಿವನ ಮೊಗ್ಗೆಯು ಮಲರುವಂತೆ ಬರುವಳು ಕಾಂತೆ!

ಅನುರಾಗ ತುಂಬಿದ ಮಡದಿ ತವರಿಗೆ ಹೊರಡುವಳೆಂದರೆ ಗಂಡನಿಗೆ ಎಲ್ಲಿಲ್ಲದ ಕೋಪ. ಅನುಗಾಲವೂ ಜೊತೆಯಾಗಿರುವ ಜೀವನ ಬೇಸರದಿಂದ ತುಂಬುವುದು, ನೀರಸ ಎನಿಸುವುದು. ಸೂರ್ಯನ ಬಿಸಿಲಿನ ತಾಪಕ್ಕಿಂತಲೂ ಭಾರ್ಯೆಯ ವಿರಹತಾಪ ಮಿಗಿಲಾಗುವುದು. ಪತ್ನಿಯಿಲ್ಲದೆ ಕ್ಷಣವೂ ಯುಗವಾಗಿ ಸಾಗುತ್ತದೆ. ಯಾರೊಂದಿಗೂ ಮಾತನಾಡಲು ಅವನಿಗೆ ಮನಸ್ಸುಬಾರದು. ಗೃಹಿಣಿಯಿಲ್ಲದ ಜೀವನ ನೀರಸ. ಅವಳೊಂದಿಗೆ ಕಳೆದ ದಿನಗಳನ್ನು ನೆನೆಯುತ್ತಾ ಕಾಲಕಳೆಯುವನು. ಜೀವನ ಸಂಗಾತಿ ಇಲ್ಲದಿರುವಾಗ, ಈ ಪತಿಯು ಮನೆಯ ಗೋಡೆಯೊಡನೆ ತನ್ನ ವಿರಹ ತಾಪವನ್ನು ತೋಡಿಕೊಳ್ಳುತ್ತಾನೆ: 'ಗೃಹವೇ ಬರುವಳೆಂದು ಗೃಹಿಣಿ' ಕವನದಲ್ಲಿ

ಗೃಹವೆ, ಬರುವಳೆಂದು ಗೃಹಿಣಿ
ಹೇಳು, ನನ್ನ ಸಹಧರ್ಮಿಣಿ ?
........
ಏನು ಬರಿಯ ಗೃಹವೆ ನೀನು?
ಗೃಹದೇವತೆ! ಬಲ್ಲೆ ನಾನು
ಮೃಣ್ಮಯದಲಿ ನೀ ಸೌಧ,
ಚಿನ್ಮಯದಲಿ ಗುರುಪಾದ!

ಇಲ್ಲಿ 'ಮೃಣ್ಮಯದಲಿ ನೀ ಸೌಧ, ಚಿನ್ಮಯದಲಿ ಗುರುಪಾದ' ಎಂಬ ಸಾಲುಗಳು ಗಮನಾರ್ಹವಾದುದು! ವಿರಹ ಕವಿಯನ್ನು ಅಧ್ಯಾತ್ಮಕ್ಕೆ ಕೊಂಡೊಯ್ಯುತ್ತದೆ.

ಕುವೆಂಪುರವರ 'ಅನುತ್ತರಾ' ಕವನದಲ್ಲಿ ತಮ್ಮ ಮಡದಿ, ಹೇಮಾವತಿಯನ್ನು ಪ್ರೀತಿಸುವ, ಗೌರವಿಸುವ ರೀತಿ ಆದರ್ಶಪ್ರಾಯವಾದುದು :

ನನ್ನ ಸೌಭಾಗ್ಯವತಿ!
ನನ್ನ ಪ್ರಾಣೇಶ್ವರಿ!
ನನ್ನ ಯಜಮಾನಿ!
ನನ್ನ ಗುರುಕೃಪೆ! ನನ್ನ ಮಹಾಮಾತೆಯ ಶ್ರೀಪಾದಪದ್ಮೆ

ಅನುರಾಗದ ಸುಧೆ ಹರಿಸಿ, ಭಾವನೆಗಳೊಂದಿಗೆ ಸ್ಪಂದಿಸಿದ ಮಡದಿ ಬಾಳಿಗೆ ನಿತ್ಯ ನೂತನ ಹೆಜ್ಜೆಯಿಡುತ್ತ ನಡೆಯುತ್ತಿರಲು, ಪತಿಗೆ ತನ್ನ ಪ್ರೇಯಸಿಯಿಂದಲೆ ಜೀವನ ಎಂದು ಎನಿಸದೆ ಇರುವುದಿಲ್ಲ. ಉಸಿರಿಗೆ ತಂಪಾಗಿ, ಬಾಳಿಗೆ ಸಂಜೀವಿನಿಯಾಗಿ, ಹೃದಯಕ್ಕೆ ಸವಿ ಕಂಪಾಗಿ, ಜೀವನಕ್ಕೆ ಜೀವ ತುಂಬುವ ಮಡದಿಯು ಅಪ್ಪಿದರೆ ಅದುವೆ ಅಮೃತ. ಮಡದಿಯು ಜೀವಕ್ಕೆ, ಜೀವನಕ್ಕೆ ಹೇಗೆ ಆಧಾರವಾಗಿರುವಳು ಎಂಬುದು 'ಜೀವನಾ ಸಂಜೀವನಾ ವಚನ ಕವನದಲ್ಲಿ ವ್ಯಕ್ತವಾಗುವುದು:

ಓ ನನ್ನ ಮುದ್ದಿನ ಮರುವನವೆ, ನಿನ್ನೊಲುಮೆ ದಿಟವಾದರೆ
ಈ ಅನಂತ ವಿಸ್ತೃತ
ಮರುಭೂಮಿಯ ಪ್ರವಾಸವೂ ನನಗೊಂದು ವಿಹಾರಯಾತ್ರೆ!

ಮಡದಿಯ ಮೇಲೆ ಇರುವಂತಹ ಹಕ್ಕು ಪರಸ್ತ್ರೀಯರ ಮೇಲೆ ತೋರಿಸಲು ಬರುವದಿಲ್ಲ. ಸಂಸಾರಕ್ಕೆ ಕಣ್ಣಾಗಿ, ಮನೆಗೆ ಹೆಣ್ಣಾಗಿ, ಮಮತೆಯ ಮಾತೆಯಾಗಿ, ಪ್ರೇಮದ ಸತಿಯಾಗಿ, ಜೀವದ ರತಿಯಾಗಿ ಜೀವಗೆಳತಿಯಾಗಿ ಬರುವಳು ಶ್ರೀಮತಿ. 'ಶ್ರೀಮತಿ-ಯಾದೆ' ಕವನದಲ್ಲಿ

ಹಕ್ಕಿರದುಸಿರಿಗೆ ಹಕ್ಕಾದೆ;
ದಿಕ್ಕಿರದುಸುರಿಗೆ ದಿಕ್ಕಾದೆ.
ಮನೆಬಿಟ್ಟವನಿಗೆ ಮನೆಯಾದೆ;
ಕಣ್‌ಗೆಟ್ಟವನಿಗೆ ಕಣ್ಣಾದೆ;
ಒಲುಮೆಯ ಹೆಣ್ಣಾದೆ!
ಸಾವಿನ ಸರಸಕೆಬಲಿವೋದರಸಗೆ
ಅಮೃತದ ಹಣ್ಣಾದೆ!
........
ಶ್ರೀಮತಿ.... ಯಾದೆ!

ಪತಿ-ಪತ್ನಿಯರ ಪ್ರೇಮ ನಿರ್ಜೀವಗಳಿಗೆ ಜೀವ ತುಂಬಬಲ್ಲದು. ಅದು ಅಂತಹ ಶಕ್ತಿಯುಳ್ಳದ್ದು! ಆ ಪ್ರೀತಿಯೇ ಎಲ್ಲ ಕಾರ್ಯಗಳ ಪ್ರೇರಕ! ವೈಣಿಕನಾದವನು ಹಾಡಿಗಾಗಿ,

ಶ್ರುತಿಗಾಗಿ, ವೀಣೆಯನ್ನು ನುಡಿಸಿ, ಅದರಿಂದ ಹೊಮ್ಮುವ ಸ್ವರದಿಂದ ಹೃದಯ, ಮನಸ್ಸುಗಳನ್ನು ಗಾನಲೋಕಕ್ಕೆ ಕೊಂಡೊಯ್ಯಬಲ್ಲನು. ಜೀವವಿಲ್ಲದ ವಸ್ತುವಿಗೆ ಜೀವತುಂಬಿ ಹಾಡುವಾಗ ಯುಗ ಯುಗದ ತಪಸ್ಸಿನಿಂದ ಪಡೆದ ಶ್ರುತಿಯನ್ನು ಸುಮಧುರವಾಗಿ ನುಡಿಯುವ ವೀಣೆಯ ಬಗ್ಗೆ ವೈಣಿಕನಿಗೆ ಅದೆಷ್ಟು ಶ್ರದ್ಧೆ, ಭಕ್ತಿ ಇದೆ ಎಂಬುದನ್ನು ಎತ್ತಿ ತೋರಿಸುತ್ತದೆ. ವೀಣೆಯೊಂದಿಗೆ ವೈಣಿಕನ ಸಂಬಂಧವು ಎಷ್ಟು ಪವಿತ್ರವಾದದ್ದು ಎಂಬುದನ್ನು ಕುವೆಂಪು 'ನೀನೆನ್ನ ವೈಣಿಕಂ' ('ಪ್ರೇಮ ಕಾಶ್ಮೀರ') ಎಂಬ ಕವನದಲ್ಲಿ ಎತ್ತಿ ತೋರಿಸಿದ್ದಾರೆ. ಈ ಸಂಬಂಧವನ್ನು ಪತಿ-ಪತ್ನಿಯರ ಸಂಬಂಧಕ್ಕೆ ಹೋಲಿಸಿದ್ದಾರೆ :

ನೀ ನನ್ನ ವೈಣಿಕಂ; ನಾ ನಿನ್ನ ವೀಣೆ.
ನನ್ನ ಗಾನಕೆ ಅನ್ಯ ಪ್ರೇರಣೆಯ ಕಾಣೆ.

ಇದೇ ತರಹ ಕುವೆಂಪು ಅವರು ತಮ್ಮ ಕವನಗಳಲ್ಲಿ ವೀಣೆಗೆ ಒಂದು ಪ್ರಮುಖ ಸ್ಥಾನವನ್ನು ಕೊಟ್ಟಿರುವರು. ಗಂಡ ಹೆಂಡತಿಯರ ಸಂಬಂಧವನ್ನು ವೀಣೆ ಮತ್ತು ವೈಣಿಕನ ಸಂಬಂಧಕ್ಕೆ ಬಹಳ ಸೂಕ್ಷ್ಮವಾಗಿ ಹೋಲಿಸಿದ್ದಾರೆ. ಯಾವುದಾದರೊಂದು ತಂತಿ ಹರಿದು ಹೋದಲ್ಲಿ, ಹೇಗೆ ವೀಣೆ ಅಪಸ್ವರ ನುಡಿಸುವದೊ, ಅದೇ ರೀತಿ ದಂಪತಿಗಳ ಸಂಬಂಧವೂ ಕೆಟ್ಟಾಗ ಅವರಿಬ್ಬರೊಳಗಿನ ಒಲವಿಗೆ ಕರ್ಕಶ ಧ್ವನಿ ಕೊಡುತ್ತದೆ.

ನಾನೆ ವೀಣೆ, ನೀನೆ ತಂತಿ,
ಅವನೆ ವೈಣಿಕ;
ಮಿಡಿದನೆನಲು ರಸದ ಹೊನಲು
ಬಿಂದು ಬಿಂದು ಸೇರಿ ಸಿಂಧು
ನಾದ ರೂಪಕ.

ಗಂಡು ವೀಣೆಯಾದಲ್ಲಿ, ಹೆಣ್ಣು ತಂತಿ. ಅವೆರಡರಿಂದ ರಸಸಿರಿಯನ್ನು ಹರಿಸುವವನೇ 'ಅವನು', ಅರ್ಥಾತ್ ದೇವನು. ಕುವೆಂಪು ಅವರು ತಮ್ಮ ಕವನಗಳಲ್ಲಿ ಗಂಡು-ಹೆಣ್ಣಿನ ಪ್ರೇಮಕ್ಕೆ ಒಂದು ಅಲೌಕಿಕ ಸಂಬಂಧ ಕಲ್ಪಿಸಿದ್ದಾರೆ. ಆ ಅನುರಾಗವು ಆಧ್ಯಾತ್ಮಿಕ ರೀತಿಯಲ್ಲಿ ಸಾಗುತ್ತದೆ. ಒಂದು ಹುಲ್ಲುಕಡ್ಡಿ ಅಲುಗಾಡಲೂ ದೇವನ ಕೃಪೆ ಬೇಕು. ಮಾನವನ ಜೀವದ ನಾಡಿಯನ್ನು ಭಗವಂತನು ತನ್ನ ವೀಣೆಯ ತಂತಿಯಂತೆ ನುಡಿಸುತ್ತಿರುವನು. ಎಲ್ಲಿಯವರೆಗೆ ಅವನ ಮನಸ್ಸು ಸುಪ್ರೀತವಾಗಿರುತ್ತದೆಯೋ ಅಲ್ಲಿಯವರೆಗೆ ಅವನು ಮೀಟುತ್ತಿರುವ ವೀಣೆಯಿಂದ ರಸದ ಹೊನಲಿನ ಬಿಂದುಗಳು ಸೇರಿ ನಾದರೂಪದಿಂದ ಹರಿಯುತ್ತದೆ. ಆ ರಸವು ಜೀವನದಲ್ಲಿ ಪಸರಿಸಿ ಅಮೃತಪಾನವಾಗುತ್ತದೆ. ದೇವನಿಗೆ ವೀಣೆ ನುಡಿಸಲು ಬೇಸರವಾದಾಗ, ತಂತಿ ಹರಿದಾಗ, ಪ್ರಳಯವಾಗುವದು; ಉಸಿರಿನ ಸಂಚಲನೆಯು ನಿಲ್ಲುವುದು.

ತಂತಿಯಿಂಚರದಿ ವಿಪಂಚಿ
ರಸ ಪ್ರಳಯಿಸೆ
ನನ್ನ ನಿನ್ನ ಜೀವಮಾನ
ತಾನ ತಾನ ತನನ ತಾನ
ಪ್ರಾಣ ಪುಳಕಿಸೆ.

ದೇವನು ಕರುಣಿಸಿದ ಈ ಜೀವನವನ್ನು ನಾವು ಆನಂದವಾಗಿ, ಅನ್ಯೋನ್ಯವಾಗಿ, ಪ್ರೀತಿಯಿಂದ, ನಂಬಿಕೆಯಿಂದ ಸಾಗಿಸಿದರೆ ಜೀವನದಲ್ಲಿ ಘರ್ಷಣೆಗಳು ಉಂಟಾಗುವುದಿಲ್ಲ. ಸತಿ-ಪತಿಗಳ ಅಮರ ಪ್ರೇಮವು ಅಂತರಂಗದ ತರಂಗಗಳಾಗಿ ಬಾಳಿನುದ್ದಕ್ಕೂ ಹೊಳೆಯಾಗಿ ಹರಿಯುವದು. ಮಧುರವಾಗಿ ಮಾತನಾಡುವುದು, ವಿಚಾರ-ವಿನಿಮಯ ಮಾಡಿಕೊಳ್ಳುವುದು, ವಿಶ್ವಾಸ ತೋರುವದು, ಜೀವನದ ಆರಾಧನೆಗೆ ಸಾಧನೆಗಳಾಗುತ್ತವೆ. ಬಾಳಿನಲ್ಲಿ ಹೆಣೆದಿರುವ ಗಾಢವಾದ ಅನುರಾಗವು ದೇವ-ದೇವತೆಯರ ಅಮರ ಪ್ರೇಮವನ್ನು ಹೋಲುತ್ತದೆ. ಕುವೆಂಪು ಅವರ 'ಜೇನಾಗುವಾ' ಎಂಬ ಕವಿತೆಯಲ್ಲಿ ಗಂಡ ಹೆಂಡತಿಯರ ಪ್ರೇಮ ಮತ್ತು ಸ್ನೇಹದಿಂದ ಕಟ್ಟಿದ ಸೌಧವು ಉತ್ತುಂಗಕ್ಕೆ ಏರಿದಾಗ, ಮನೆಯೆ ಕೈಲಾಸವಾಗಿ ಪತಿ-ಪತ್ನಿಯರು 'ಶಿವ-ಶಿವೆ'ಯರಾಗಿ ರಸ ದೇವಗಂಗೆಯಲ್ಲಿ ಮೀನಾಗಿ, ಪ್ರೇಮ ವೃಕ್ಷದಲ್ಲಿ ಹೂವಾಗಿ, ಹಣ್ಣಾಗಿ ಭಗವಂತನಿಗೆ ಮುಡಿಪಾಗುವರು. ತಾವೇ 'ಶಿವ-ಶಿವೆ'ಯರಾದರೂ ತಮ್ಮನ್ನು ಕಾಪಾಡುವ ಶಿವನು ಮೇಲೆ ಇರುವನು ಎಂಬುದನ್ನು ಮರೆತಿರುವದಿಲ್ಲ:

ಶಿವನೆನ್ನ ಸುಖಿಕೆ ಸುಖಿ;
ಶಿವೆ ನಿನ್ನ ಸುಖಿಕೆ ಸುಖಿ;
ಶಿವಶಿವೆಯರಾ ಸುಖವ
ಸವಿವಖಿಲ ಲೋಕ ಸುಖಿ!
ಬಾ ಬಾರ, ಬಾರ ಸಖಿ,
ನಾ ನಿನಗೆ ನೀನೆನಗೆ ಜೇನಾಗುವಾ!
ರಸ ದೇವಗಂಗೆಯಲಿ ಮೀನಾಗುವಾ!

ತಮ್ಮ ಬದುಕಿನುದ್ದಕ್ಕೂ ನೋವು-ನಲಿವಿನ ಭಾಗಿಗಳಾಗಿ, ಒಬ್ಬರಿಗೊಬ್ಬರು ಆಸರೆಯಾಗಿ, ಪ್ರೇಮವು ಅಧ್ಯಾತ್ಮದೆಡೆಗೆ ಸಾಗಿ, ತಮ್ಮಲ್ಲೇ 'ಶಿವ-ಶಿವೆ'ಯರನ್ನು ಕಂಡುಕೊಳ್ಳುತ್ತಾರೆ: ('ಹರಗಿರಿಜಾ', - 'ಚಂದ್ರಮಂಚಕೆ ಬಾ, ಚಕೋರಿ')

ಪರ್ವತ ವಧೂ ಹೃದಯೇಶ್ವರ
ವರನಾದಾ ಅನಂತರ
ಸುರಶುಭಕ ಶಿವಶಿವೆಯರ
ಒಸಗೆಯಾಯ್ತೊ ಜಗಚ್ಚರ!
......

ಸರ್ವ ಜೀವ ಜಡಗಳಲ್ಲಿ ನೀನೆ ಗಂಡು; ನಾನೆ ಹೆಣ್ಣು.
ಸಕಲ ಸೃಷ್ಟಿಮೂಲದಲ್ಲಿ
ಪುರುಷ ಪ್ರಕೃತಿ ಎರಡು ಕಣ್ಣು
ಶಿವ, ಶಕ್ತಿ; ಶಕ್ತಿ ಶಿವ
ಮಿಲನದಾಟವದುವೆ ಭವ!
......
ಶಿವನೆಂದನು ಆಲಿಂಗಿಸಿ
ಸತಿಯ ಚುಂಬಿಸಿ:-
'ನಾನೆ ಕುವೆಂಪು! ನೀನೆ ಹೇಮಿ!'

ತನು ಮನಗಳಲ್ಲಿ ಮಡದಿಯು ತುಂಬಿರುವಾಗ. ಪ್ರತಿಯೊಂದು ಕಾರ್ಯದಲ್ಲಿ ಸಹಭಾಗಿಯಾಗಿ ಸಹಕರಿಸುತ್ತಿರುವಾಗ, ಯಾವುದೇ ಪ್ರಶಸ್ತಿ ಬರಲಿ, ಬಿರುದು ಬರಲಿ ಎಲ್ಲವೂ ಅವಳಿಂದಲೇ. ಪ್ರಶಸ್ತಿ ಬಿರುದುಗಳು ಮಾನವನ ಪ್ರಯತ್ನದಿಂದ ಬರುವವು. ಹೆಂಡತಿ ಜನ್ಮ ಜನ್ಮದ ಸಂಗಾತಿ; ನೋವು ನಲಿವಿನಲ್ಲಿ ಪಾಲುಗೊಳ್ಳುವವಳು. ಈ ಭಾವನೆ 'ಸ್ವರ್ಗದ್ವಾರದಿ ಯಕ್ಷ ಪ್ರಶ್ನೆ' ಕವನದಲ್ಲಿ ಸ್ವಾರಸ್ಯವಾಗಿ ಮೂಡಿಬಂದಿದೆ. ಆ ವಿವರ ಹೀಗಿದೆ:

ಕನಸಿನಲ್ಲಿ ಸ್ವರ್ಗಸ್ಥರಾದ ಕುವೆಂಪು, ಸ್ವರ್ಗಕ್ಕೆ ಹೋಗುತ್ತ ದಾರಿಯಲ್ಲಿ ಹಲವಾರು ಅರ್ಥವಾಗದ ಫಲಕಗಳನ್ನು ನೋಡಿದರಂತೆ. ಕೊನೆಯಲ್ಲಿ, 'ನರಕಕ್ಕೆ ದಾರಿ' ಎಂದು ಕನ್ನಡದಲ್ಲಿ ಬರೆದ ಫಲಕವನ್ನು ನೋಡಿ, ಅವರಲ್ಲಡಗಿದ್ದ ಕನ್ನಡದ ಅಭಿಮಾನ ಉಕ್ಕಿ, ನರಕದ ಕಡೆಗೇ ನಡೆದರಂತೆ. ಆದರೆ, ನರಕದ ದ್ವಾರಪಾಲಕನು ಅವರನ್ನು ಅಲ್ಲಿಗೆ ಹೋಗಗೊಡದೆ, ಸ್ವರ್ಗಕ್ಕೇ ಅಟ್ಟಿದನಂತೆ. ಆದರೆ, ಸ್ವರ್ಗದ ದ್ವಾರಪಾಲಕನು ಹೆಸರು ಹೇಳದೆ ಅವರನ್ನು ಒಳಕ್ಕೆ ಬಿಡಲಿಲ್ಲ. ತಾನು 'ಪುಟ್ಟಪ್ಪ'ನೆಂದು ಹೇಳಿದಾಗ ಅವನು 'ಟ.... ಟ್ಟ... ಟ್ಟ...' ಎಂದು ತಮಾಷೆ ಮಾಡಿ, ಅವರ ಅಭಿಮಾನಕ್ಕೆ ಧಕ್ಕೆ ತಂದನು. ಆಗ, ತಾನು 'ಕುವೆಂಪು.... ಕನ್ನಡದ ಕಂಪು....' ಎಂದೆಲ್ಲ ಹೇಳಿದರೂ ಫಲಿಸಲಿಲ್ಲ. ಕೊನೆಗೆ, 'ವೈಸ್‌ಛಾನ್ಸಲರ್. ಪದ್ಮಭೂಷಣ. ರಾಷ್ಟ್ರಕವಿ....' ಮುಂತಾದ ತಮಗೆ ದೊರಕಿದ ಪ್ರಶಸ್ತಿಗಳನ್ನೆಲ್ಲ ಹೇಳಿಕೊಂಡರೂ ಅವನು ಒಳಕ್ಕೆ ಬಿಡಲೊಲ್ಲ.

ನಿನ್ನೊಳಗಿನಾ ಬೆಳಗು,-
ನಿನ್ನ ಹಮ್ಮಿನದಲ್ಲ;
ನಿನ್ನ ಬಿಮ್ಮಿನದಲ್ಲ;
ಲೋಕಕೀರ್ತಿಯದಲ್ಲ,
ಮರ್ತ್ಯಗೌರವದ್ದಲ್ಲ;
ಮತಗಿತದ ಧರ್ಮಗಿರ್ಮದ ಆತ್ಮವಂಚಕದ್ದಲ್ಲ,
ನಿನ್ನ ಹೃದಯದ ಹೃದಯದಾತ್ಮದೊಲವಿನ ಹೆಸರನುಸಿರು

ಎಂದು ಆ ದ್ವಾರಪಾಲಕನು ಹೇಳಿದಾಗ ಇದ್ದಕ್ಕಿದ್ದಂತೆ ಮೈಯಲ್ಲಿ ಮಿಂಚು ಹರಿದಂತಾದರೂ, ಅದೇನೋ ತಡವರಿಕೆ ಬಂದಿತ್ತು. ಆದರೆ,

ಬಾಗಿಲದೊ ಮಿನುಗುತಿದೆ!
ಅದರ ಆನಂದದಾ ಕಾಂತಿ!
ಮುಗಿಯಲಿಲ್ಲಿಗೆ - ಸಾಕು ಬಿಡು,
ಹುಸಿ ಹೆಸರುಗಳ ಆ ಭ್ರಾಂತಿ:
ನಾಚಿಕೆಯನಾಚೆಗಿಡು;
ನಿಜದ ನಿಜನಾಮವನು ಹೆದೆಗೆಯೊಡ್ಡು;
ಎದೆ ತೆರೆಯುವುದು ನಿನಗೆ ಶಾಂತಿ!
ಎಂಬ ಪ್ರಜ್ಞೆ ಬಂದು, ಅಳುಕಿನ ಮಧ್ಯದಲ್ಲೇ,
ಶ್ರೀ ಗುರುಕೃಪೆಯೆ ಮೈವೆತ್ತು ಬಂದಿರುವ
ಶ್ರೀ ಮಹಾಮಾತೆಯಡಿದಾವರೆಯೆ ಆಗಿರುವ
ಸತಿಯ ಒಲವಿನ ಸೆರೆಯ....

ಎಂಬ ಎಣಿಕೆ ಬಂದಾಗ, ನಾಚಿಕೆಯನ್ನೆಲ್ಲ ಬಿಟ್ಟು, 'ನಾ....ನು, ನಾ....ನು, ನಾ....ನು, ಹೇ....ಮೀ....ಗಂ....ಡ' ಎಂದುಸುರಿದಾಗಲೇ ಅವರಿಗೆ ಸ್ವರ್ಗದ ಬಾಗಿಲು ತೆರೆಯಿತಂತೆ. ಈ ಕವನವು, ಕುವೆಂಪು ತಮ್ಮ ಹೆಂಡತಿ, ಹೇಮಾವತಿಯವರ ಮೇಲಿಟ್ಟ ಗೌರವವನ್ನು ವ್ಯಕ್ತಪಡಿಸುತ್ತದೆ; ಹಾಗೂ ಅವರು ಹೆಂಗಸರನ್ನು ನೋಡುವ ದೃಷ್ಟಿಯ ಮೇಲೂ ಬೆಳಕು ಚೆಲ್ಲುತ್ತದೆ.

ಆದರೆ, ಕುವೆಂಪು ಗಂಡು-ಹೆಣ್ಣುಗಳ ನಡುವಿನ ಸಂಬಂಧವನ್ನು ನೋಡುವ ದೃಷ್ಟಿ, ಬೇರೆ ಕವಿಗಳ ದೃಷ್ಟಿಗಿಂತ ಭಿನ್ನ! ನರಸಿಂಹಸ್ವಾಮಿಯವರು

ಮದುವೆಯಾಗಿ ತಿಂಗಳಿಲ್ಲ
ನೋಡಿರಣ್ಣ ಹೇಗಿದೆ
ನಾನು ಕೂಗಿದಾಗಲೆಲ್ಲ
ಬರುವಳೆನ್ನ ಶಾರದೆ

ಎಂದು ಹೇಳುತ್ತಲೇ, 'ಒಂದು ಗಂಡಿಗೊಂದು ಹೆಣ್ಣು ಹೇಗೊ ಏನೊ ಹೊಂದಿಕೊಂಡು....' ಎಂಬ ಮಾತಿನ ಜೊತೆಗೇ, 'ಪ್ರೇಮವೆನಲು ಹಾಸ್ಯವೇ?' ಎಂಬ ಗಂಭೀರ ಪ್ರಶ್ನೆ ಹಾಕುತ್ತಾರೆ. ಬೇಂದ್ರೆಯವರೂ ಗಂಡು-ಹೆಣ್ಣನ್ನು ನೋಡುವ ಪರಿ ಬೇರೆ.

ನಾನು ಬಡವಿ ಆತ ಬಡವ
ಒಲವೆ ನಮ್ಮ ಬದುಕು
ಬಳಸಿಕೊಂಡೆವದನೆ ನಾವು
ಅದಕು ಇದಕು, ಎದಕು

ಎಂದು ಗಂಡ-ಹೆಂಡಿರ ಸಂಬಂಧವನ್ನು ಅರ್ಥಗರ್ಭಿತವಾಗಿ ವಿವರಿಸುತ್ತಾರೆ. ತಾನು ಅವಳಿಗೆ ಕೊಟ್ಟದೇನು?, ತನಗೆ ಅವಳು ಕೊಟ್ಟುದ್ದೇನು? ಎಂಬುದು ತಮ್ಮಿಬ್ಬರಿಗೆ ಮಾತ್ರ ಗೊತ್ತು ಅದು ಸವಿ-ಸಿಹಿ ಮುತ್ತು - ಎಂದು ರೊಮ್ಯಾಂಟಿಕ್ ಆಗಿ ಹೇಳುತ್ತಾರೆ. ಆದರೆ, ಕುವೆಂಪುರವರದು ಬೇರೆಯೇ ದೃಷ್ಟಿ! ಅವರು, ಗಂಡ-ಹೆಂಡಿರ ಸಂಬಂಧವೆಲ್ಲ 'ಶಿವ'ನ ಮಹಿಮೆಯೆಂದು ನಂಬಿದಂತಿದೆ. ಅಲ್ಲಿ ರೊಮ್ಯಾನ್ಸಿಗೆ ಹೆಚ್ಚಿನ ಪ್ರಾಮುಖ್ಯತೆ ದೊರೆತಂತಿಲ್ಲ. ಅಧ್ಯಾತ್ಮಿಕತೆಯನ್ನು ಅಳವಡಿಸಿಕೊಂಡೇ ಅವರು ಬಹಳಷ್ಟು ಪ್ರೇಮ ಕವನಗಳನ್ನು ಬರೆದಿದ್ದಾರೆ: 'ಪ್ರೇಮ ಕಾಶ್ಮೀರ', 'ಚಂದ್ರಮಂಚಕೆ ಬಾ, ಚಕೋರಿ', 'ಜೇನಾಗುವಾ', 'ಅನುತ್ತರಾ', 'ಷೋಡಶಿ' - ಇವು ಅವುಗಳಲ್ಲಿ ಕೆಲವು. ಕುವೆಂಪು ಬದುಕನ್ನೆಂದೂ ಕಡೆಗಣಿಸಿದವರಲ್ಲ. ಅವರ ಕೃತಿಗಳೆಲ್ಲವೂ ಒಂದಲ್ಲೊಂದು ರೀತಿಯ ಬದುಕಿನ ವ್ಯಾಖ್ಯಾನಗಳು. ಅವರ ಪ್ರೇಮ ಗೀತೆಗಳು ಅಧ್ಯಾತ್ಮದ ನೆಲೆಯಿಂದಲೇ ಹೊರಡುತ್ತದೆ. ಮೇಲೆ ತಿಳಿಸಿದಂತೆ, ಕುವೆಂಪು ಅವರ ಪ್ರೇಮ, ಸ್ನೇಹ, ಕುಟುಂಬ ಜೀವನವನ್ನು ಕುರಿತು ಬರೆದ ಕವನಗಳು ಅನೇಕ. ಅವರ ಶತಮಾನೋತ್ಸವವನ್ನು ಆಚರಿಸುತ್ತಿರುವಾಗ, ಆ ರಾಷ್ಟ್ರಕವಿಗೆ ನನ್ನ ಹೃತ್ಪೂರ್ವಕ ನಮನಗಳು.

●

# ಬೊಮ್ಮನಹಳ್ಳಿಯ ಕಿಂದರಿಜೋಗಿ

## ಎಚ್.ವೈ. ರಾಜಗೋಪಾಲ್, ಪೆನ್ಸಿಲ್ವೇನಿಯ

ಕನ್ನಡದ ಒಂದು ಅನನ್ಯ ಕೃತಿ ಎನ್ನಬಹುದಾದ ಕುವೆಂಪುರವರ ಬೊಮ್ಮನಹಳ್ಳಿಯ ಕಿಂದರಿಜೋಗಿಯನ್ನು ನಾನು ಮೊದಲು ಕೇಳಿದ್ದು ಸುಮಾರು ಎಂಟು ವರ್ಷದ ಬಾಲಕನಿದ್ದಾಗ. ಬೇಸಗೆಯ ರಜೆಯಲ್ಲಿ ಬೆಂಗಳೂರಿಗೆ ಹೋಗಿದ್ದಾಗ ನನ್ನ ಸೋದರಮಾವ ಒಬ್ಬರು ಅದರ ಹಲವಾರು ಸಾಲುಗಳನ್ನು ಹೇಳಿ ತೋರಿಸಿದ್ದರು. ಅವರು ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಓದಿದವರು, ಬಹುಶಃ ಕುವೆಂಪು ಸಮಕಾಲೀನರು. ಅಂದು ಅವರು ಹಾಡಿದ ಆ ಸಾಲುಗಳನ್ನು ಕೇಳಿ ಚಕಿತಗೊಂಡಿದ್ದೆ.

ಮಾವ ಅಂದು ಅವರ ಅರಳೇಪೇಟೆಯ ದೊಡ್ಡ ಮನೆಯ ಮಹಡಿಯ ಮೇಲಿನ ವಿಸ್ತಾರವಾದ ಹಜಾರದಲ್ಲಿ ಇದ್ದಕ್ಕಿದ್ದಂತೆ ಯಾರ ಪ್ರೇರಣೆಯೂ ಇಲ್ಲದೆ ಚಾಪೆಯ ಮೇಲೆ ನನ್ನೆದುರಿಗೆ ಕುಳಿತು "....ಅವ್ವಿಲಿ, ಅಪ್ಪಿಲಿ, ಮಾವಿಲಿ, ಭಾವಿಲಿ, ಅಕ್ಕಿಲಿ, ತಂಗಿಲಿ...." ಎಂದು ಹಾವಭಾವಗಳಿಂದ ಹಾಡಿದ್ದು ಇನ್ನೂ ಮನಸ್ಸಿನಲ್ಲಿ ನಿಂತಿದೆ. ಆ ಸೋದರಮಾವನ ಬಳಿ ಅದುವರೆಗೆ ನನಗೆ ಅಷ್ಟು ಬಳಕೆ ಇರಲಿಲ್ಲ, ಆದರೆ ಕಿಂದರಿಜೋಗಿಯಿಂದಾಗಿ ಅವರಲ್ಲಿ ಸಲಿಗೆ ಸ್ವಲ್ಪ ಹೆಚ್ಚಾಯಿತು.

ಮುಂದೆ ಒಂದೆರಡು ವರ್ಷಗಳಲ್ಲಿ ನನ್ನ ಮಧ್ಯಮ ಶಾಲೆಯ ಪಠ್ಯ ಪುಸ್ತಕದಲ್ಲಿ ಆ ಪದ್ಯವನ್ನು ಪೂರ್ತಿ ಓದಿದೆ. ಅದನ್ನು ಯಾವ ಮೇಷ್ಟರು ಪಾಠ ಹೇಳಿದರೋ ಜ್ಞಾಪಕವಿಲ್ಲ. ಓದುಗರ ಮನಸ್ಸನ್ನು ಥಟ್ಟನೆ ಮುಟ್ಟುವ ಆ ಪದ್ಯಕ್ಕೆ ಬಹುಶಃ ಯಾವ ಮೇಷ್ಟರ ಮಧ್ಯಸ್ಥಿಕೆಯೂ ಬೇಕಿಲ್ಲವೇನೋ! ನಮ್ಮ ಪ್ರಾಥಮಿಕ ಶಾಲೆಯ ಪುಸ್ತಕದಲ್ಲಿ ಓದಿದ ಗೋವಿನ ಹಾಡಿನ "ಧರಣಿಮಂಡಲ ಮಧ್ಯದೊಳಗೆ...." ಸಾಲುಗಳು ಹೇಗೆ ಮರೆಯಲಾಗದಂತೆ ನಮ್ಮ ಮನಸ್ಸಿನಾಳದಲ್ಲಿ ನಿಂತಿವೆಯೋ, ಹಾಗೆಯೇ ಈ ಪದ್ಯದ "ತುಂಗಾತೀರದ ಬಲಗಡೆಯಲ್ಲಿ...." ಸಾಲುಗಳೂ ಸಹ. ಒಂದು ಕರುಣಾಜನಕವಾದ ಕತೆ; ಇನ್ನೊಂದು ನಗುವಿನ ಹೊನಲು ಹರಿಸುವ ಕತೆ - ಕಡೆಯಲ್ಲಿ ಅದರಲ್ಲೂ ಕುಂಟನೊಬ್ಬ ಮಾತ್ರ ಉಳಿದವರೊಂದಿಗೆ ಗವಿಯೊಳಕ್ಕೆ ಹೋಗಲಾಗದಿದ್ದುದು ಅವನ ಬಗ್ಗೆ ತುಂಬ ಕರುಣೆ ಹುಟ್ಟಿಸುತ್ತಾದರೂ. ಎರಡರಲ್ಲೂ ಸತ್ಯಕ್ಕೆ ಪ್ರಾಧಾನ್ಯ. ಮೊದಲನೆಯದರಲ್ಲಿ ಪ್ರತ್ಯಕ್ಷವಾಗಿ, ಎರಡನೆಯದರಲ್ಲಿ ಸೂಚ್ಯವಾಗಿ. ಗೋವಿನ ಹಾಡು ಸಂಪೂರ್ಣವಾಗಿ ನಮ್ಮ ಸಂಸ್ಕೃತಿಯಿಂದ ಬಂದ ಹಾಡು. ಕಿಂದರಿಜೋಗಿ ಪಾಶ್ಚಾತ್ಯ ಸಂಸ್ಕೃತಿಯಿಂದ ಬಂದದ್ದು. ಆಂಗ್ಲ ಕವಿ ರಾಬರ್ಟ್ ಬ್ರೌನಿಂಗ್ ಬರೆದ Pied Piper of Hamelin ಎಂಬ ಪದ್ಯದ

ರೂಪಾಂತರ. ಆದರೆ ನಮ್ಮದೇ ಎನಿಸುವಂತೆ ಬರೆದದ್ದು. ಎರಡೂ ಮರೆಯಲಾಗದ ಕೃತಿಗಳು!

ಕುವೆಂಪು ಕಿಂದರಿಜೋಗಿಯನ್ನು ರಚಿಸಿದ್ದು ೧೯೨೬ರಲ್ಲಿ. ಮಲೇರಿಯ, ಕಜ್ಜಿ ಇವುಗಳಿಂದ ತುಂಬಾ ನರಳಿ ಮೈಸೂರಿನ ರಾಮಕೃಷ್ಣಾಶ್ರಮದ ಸ್ವಾಮೀಜಿಯವರ ಪ್ರೀತಿಯ ಶುಶ್ರೂಷೆಯಲ್ಲಿ ಚೇತರಿಸಿಕೊಂಡು, ಅಲ್ಲಿಂದ ತಮ್ಮ ಊರಿಗೆ ಹೋಗುವಾಗ, ದಾರಿಯಲ್ಲಿ ಶಿವಮೊಗ್ಗೆಯಲ್ಲಿ ನಿಂತಾಗ ಬರೆದದ್ದೆಂದು ಕುವೆಂಪು ತಮ್ಮ ಆತ್ಮಕತೆಯಲ್ಲಿ ('ನೆನಪಿನ ದೋಣಿಯಲ್ಲಿ' ಪು. ೫೪೪) ತಿಳಿಸುತ್ತಾರೆ.

''ನನಗಿನ್ನೂ ವಿಶದವಾದ ನೆನಪಿದೆ. ಬೆಳಿಗ್ಗೆ ಸ್ನಾನ ಕಾಫಿ ತಿಂಡಿ ಪೂರೈಸಿ ಉಪ್ಪರಿಗೆಗೆ ಹೋಗಿ, ಒಂದು ಮೇಜಿನ ಮುಂದಿದ್ದ ಕುರ್ಚಿಯ ಮೇಲೆ ಕುಳಿತು, ಬಿಡಿ ಹಾಳೆಗಳಲ್ಲಿ ಬರೆಯತೊಡಗಿದೆ. ಒಂದೊಂದೆ ಹಾಳೆ ತುಂಬಿದಂತೆಲ್ಲ ಅದನ್ನು ಕೆಳಗೆ ಹಾಕುತ್ತಿದ್ದೆ. ಮಾನಪ್ಪ ಈಗ ನನ್ನ ಬಳಿ ಇರುವ ನೋಟುಬುಕ್ಕಿನ ಹಸ್ತಪ್ರತಿಗೆ ಅದನ್ನು ಕಾಪಿ ಮಾಡುತ್ತಿದ್ದ. ಮಧ್ಯಾಹ್ನದ ಊಟದ ಹೊತ್ತಿಗೆ ಬರೆಯುವುದು ಪೂರೈಸಿತ್ತು! ಅಂದರೆ ಅದರ ರಚನೆಗೆ ಸುಮಾರು ನಾಲ್ಕು-ಐದು ಗಂಟೆ ಹಿಡಿದಿತ್ತು.''

ಮಾನಪ್ಪನವರು (ಮುಂದೆ ಕುವೆಂಪು ಇವರ ತಂಗಿಯನ್ನೇ ಮದುವೆಯಾದದ್ದು) ಕಾಪಿ ಮಾಡಿಟ್ಟ ಪ್ರತಿಯಲ್ಲಿ copied by DRM, 19th Nov. 1926 ಎಂದು ಬರೆದು ತಮ್ಮ ಸಹಿ ಹಾಕಿದ್ದಾರೆಂದೂ ಕುವೆಂಪು ತಿಳಿಸುತ್ತಾರೆ. ಕೇವಲ ನಾಲ್ಕು-ಐದು ಗಂಟೆಗಳಲ್ಲಿ ೪೨೬ ಸಾಲಿನ ಪದ್ಯ ತಯಾರಾದುದು ಆಶ್ಚರ್ಯವೇ ಸರಿ! ''ಪದಮಿಟ್ಟಳಿಪದೊಂದಗ್ಗಳಿಕೆ'' ಈಗಲೂ ಸಾಧ್ಯವೇನೋ! ಅದನ್ನು ಬರೆದಾಗ ತಮ್ಮ ಬಳಿ ಬ್ರೌನಿಂಗನ ಪದ್ಯ ಕೂಡ ಇರಲಿಲ್ಲ. ಹಿಂದೆ ಹೈಸ್ಕೂಲಿನಲ್ಲಿ ಓದಿದ್ದ ಜ್ಞಾಪಕದ ಮೇಲೆ ಬರೆದೆ ಎಂದೂ ಅನ್ನುತ್ತಾರೆ. ನಾಲ್ಕು-ಐದು ಗಂಟೆ ಅಲ್ಲ, ಎರಡು ದಿನದಲ್ಲಿ ಅದನ್ನು ಮುಗಿಸಿದೆ ಎಂದಿದ್ದರೂ ಆಶ್ಚರ್ಯಪಡತಕ್ಕ ವಿಷಯವೆ ಆಗಿರುತ್ತಿತ್ತು. ಮುಂದೆ ಅವರು ಹೀಗೆಯೇ ಮೂರು ನಾಟಕಗಳನ್ನು ('ಜಲಗಾರ', 'ಯಮನ ಸೋಲು' ಮತ್ತು 'ಮಹಾರಾತ್ರಿ') ಮೂರು-ನಾಲ್ಕು ದಿನಗಳಲ್ಲಿ ಬರೆದ ಸಂಗತಿ ತಿಳಿಸಿ (ಪು. ೫೮೯) ಬೆರಗುಗೊಳಿಸುತ್ತಾರೆ.

ಕಿಂದರಿಜೋಗಿ ಪ್ರಕಟವಾದದ್ದು ೧೯೨೮ರಲ್ಲಿ, ಮೈಸೂರು ಮಹಾರಾಜ ಕಾಲೇಜಿನ ಕರ್ಣಾಟಕ ಸಂಘದವರು ಗುರು ಬಿ.ಎಂ.ಶ್ರೀ. ಅವರಿಗೆ ಅರ್ಪಿಸಿದ 'ಕಿರಿಯ ಕಾಣಿಕೆ' ಗ್ರಂಥದಲ್ಲಿ. ಅದೊಂದು ಅಪೂರ್ವ ಗ್ರಂಥ. ಅದರಲ್ಲಿ ಒಟ್ಟು ೩೧ ಪದ್ಯಗಳಿವೆ. ಅವುಗಳಲ್ಲಿ ಕಿಂದರಿಜೋಗಿಯಲ್ಲದೆ ಕುವೆಂಪುರವರ (ಆಗ ಅವರಿನ್ನೂ ಕುವೆಂಪು ಆಗಿರಲಿಲ್ಲ, ಕೆ.ವಿ. ಪುಟ್ಟಪ್ಪ ಆಗಿದ್ದರು) ಇನ್ನೂ ಆರು ಪದ್ಯಗಳಿವೆ. ಇಷ್ಟೇ ಅಲ್ಲದೆ, ಮುಂದೆ ಕನ್ನಡ ಸಾಹಿತ್ಯದಲ್ಲಿ ವಿಶೇಷ ಖ್ಯಾತಿ ಗಳಿಸಿದ ಶ್ರೀಗಳಾದ ಎಲ್. ಗುಂಡಪ್ಪ, ಪಿ.ಟಿ. ನರಸಿಂಹಾಚಾರ್, ತೀ.ನಂ. ಶ್ರೀಕಂಠಯ್ಯ, ಡಿ.ಎಲ್. ನರಸಿಂಹಾಚಾರ್ ಮುಂತಾದವರ ಪದ್ಯಗಳೂ ಇವೆ. ಸಂಘದ

ಉಪಾಧ್ಯಕ್ಷರಾಗಿದ್ದ ಗುರು ಶ್ರೀ ಟಿ.ಎಸ್. ವೆಂಕಣ್ಣಯ್ಯನವರಿಂದ ನವೋದಯದ ಪದ್ಯರೂಪದ ಪರವಾಗಿ ಒಂದು ಸಣ್ಣ ಮುನ್ನುಡಿಯೂ ಇದೆ.

'ಕಿರಿಯ ಕಾಣಿಕೆ'ಯ ಪ್ರಕಟನೆ ಕುವೆಂಪುರವರಿಗೆ ತುಂಬ ಸಂತೋಷ ತಂದಿರಬೇಕು. ಅದರ ಬಗ್ಗೆ ತಮ್ಮ 'ನೆನಪಿನ ದೋಣಿಯಲ್ಲಿ' ಪುಸ್ತಕದಲ್ಲಿ (ಪು. ೬೨೭) ಹೀಗೆ ಬರೆದಿದ್ದಾರೆ.

'ಆ ವರ್ಷದ (೧೯೨೮) ಮತ್ತೊಂದು ಸಂಭ್ರಮದ ವಿಷಯವಾಗಿತ್ತು 'ಕಿರಿಯ ಕಾಣಿಕೆ'ಯ ಪ್ರಕಟಣೆ. ಅದರಲ್ಲಿ ಪ್ರಕಟವಾದ ಕವನಗಳ ಸಂಖ್ಯೆಯಲ್ಲಿ ನನ್ನವೇ ಅಧಿಕ, ಸುಮಾರು ಏಳು. ಅವುಗಳಲ್ಲಿ ಸುಮಾರು ೨೧ ಪುಟಗಳನ್ನು ಆಕ್ರಮಿಸಿತ್ತು 'ಬೊಮ್ಮನಹಳ್ಳಿಯ ಕಿಂದರಿಜೋಗಿ' ಒಂದೇ! ಯಮನ ಸೋಲಿನಂತೆಯೇ ಬೊಮ್ಮನಹಳ್ಳಿಯ ಕಿಂದರಿಜೋಗಿಯೂ ಏಕ್‌ದಂ ಕರ್ನಾಟಕವನ್ನೆಲ್ಲ ಬೆರಗುಗೊಳಿಸಿತ್ತು. ಅದರಲ್ಲೂ ಮಕ್ಕಳ ಲೋಕವನ್ನು. ಎಷ್ಟರಮಟ್ಟಿಗೆಂದರೆ, ಪಂಜೆ ಮಂಗೇಶರಾಯರು ಪ್ರೊ. ವೆಂಕಣ್ಣಯ್ಯನವರಿಗೆ ಕಾಗದ ಬರೆದು, ನನ್ನ ಅನುಮತಿ ಪಡೆದು, ತಮ್ಮ ಬಾಲಸಾಹಿತ್ಯ ಮಾಲೆಯಲ್ಲಿ ಅದನ್ನು ಸಾವಿರಗಟ್ಟಲೆ ಅಚ್ಚುಮಾಡಿಸಿದ್ದರು!''

ಈ ಕವನ ಪ್ರಕಟವಾದಾಗ ಕುವೆಂಪುಗೆ ೨೫ ವರ್ಷ; ಕನ್ನಡ ಎಂ.ಎ. ಎರಡನೆಯ ವರ್ಷದಲ್ಲಿದ್ದರೆಂದು ತೋರುತ್ತದೆ. ಕಾಲೇಜಿನ ಸಾಹಿತ್ಯ ಚಟುವಟಿಕೆಗಳಲ್ಲೆಲ್ಲ ತುಂಬ ಉತ್ಸಾಹದಿಂದ ಭಾಗವಹಿಸುತ್ತಿದ್ದರೆಂದು ಅವರ ಆತ್ಮಚರಿತೆಯಿಂದ ತಿಳಿಯುತ್ತದೆ. ಕಾಲೇಜು ವೇದಿಕೆಗಳಲ್ಲಿ ಅವರು ತಮ್ಮ ಕವನಗಳನ್ನು ಒಳ್ಳೆಯ ಸ್ಫೂರ್ತಿಯಿಂದ ಓದಿ ತುಂಬ ಜನಪ್ರಿಯರಾಗಿದ್ದರು. ಕಿಂದರಿಜೋಗಿಯನ್ನು ವಾಚಿಸಿದ ಒಂದು ಸಂದರ್ಭವನ್ನು ಕುರಿತು ಅವರು ಬರೆದಿರುವುದನ್ನು ನೋಡಿ: ('ನೆನಪಿನ ದೋಣಿಯಲ್ಲಿ', ಪು. ೬೨೬)

''ಆ ವರ್ಷವೆ (೧೯೨೮) ಡಿಸೆಂಬರ್ ತಿಂಗಳು ೧೫ನೆಯ ತಾರೀಖಿನಲ್ಲಿ ನಡೆದ ವಿದ್ಯಾರ್ಥಿ ಕವಿಸಮ್ಮೇಳನದ ವಿಚಾರ ಸಾಹಿತ್ಯ ಪ್ರೇಮಿಗಳಿಗೆ ಈಗಾಗಲೇ ಸುಪರಿಚಿತವಾಗಿರುವ ಸುಪ್ರಸಿದ್ಧ ಸಂಗತಿಯಾಗಿರುವುದರಿಂದ ಆ ವಿಚಾರ ನಾನೇನೂ ಇಲ್ಲಿ ಬರೆಯುವುದು ಅನಾವಶ್ಯಕ. ಆ ನನ್ನ ಅಧ್ಯಕ್ಷ ಭಾಷಣ 'ಸಾಹಿತ್ಯ ಪ್ರಚಾರ' ಎಂಬ ಹೊತ್ತಗೆಯಲ್ಲಿ ಅಚ್ಚಾಗಿದೆ. ಆದರೆ ಒಂದು ಸ್ಮರಣೀಯವಾದ ವಿಷಯವನ್ನು ಅದರ ಸ್ವಾರಸ್ಯಕ್ಕಾಗಿ ಇಲ್ಲಿ ಪ್ರಸ್ತಾಪಿಸುತ್ತೇನೆ. ಸಮ್ಮೇಳನದ ಮರುದಿವಸ ಪ್ರೊ. ಕೃಷ್ಣಶಾಸ್ತ್ರಿಗಳು ಸೆಂಟ್ರಲ್ ಕಾಲೇಜಿನ ವಿಶಾಲವಾದ ಗಣಿತಭವನದಲ್ಲಿ ನನ್ನ ಕವನ ವಾಚನ ಏರ್ಪಡಿಸಿದ್ದರು. ಭವನ ಕಿಕ್ಕಿರಿದಿತ್ತು. ಬೆಂಗಳೂರಿನ ಗಣ್ಯ ವ್ಯಕ್ತಿಗಳೆಲ್ಲ ಬಂದಿದ್ದರು. ಡಿ.ವಿ. ಗುಂಡಪ್ಪನವರು, ಎಸ್.ಜಿ. ಶಾಸ್ತ್ರಿಗಳು, ಮಾಸ್ತಿ ವೆಂಕಟೇಶ ಐಯ್ಯಂಗಾರ್ಯರು ಇತ್ಯಾದಿ. ಎಸ್.ಜಿ. ಶಾಸ್ತ್ರಿಗಳು ಸದಸ್ಯರ ಮೊದಲನೆಯ ಪಂಕ್ತಿಯಲ್ಲಿಯೆ ಆಸೀನರಾಗಿದ್ದು ವೇದಿಕೆಯಿಂದ ನೇರ ನನ್ನ ಕಣ್ಣಿಗೆ ಬೀಳುತ್ತಿದ್ದರು. ಆಗಾಗಲೇ ತಕ್ಕಮಟ್ಟಿಗೆ ಪ್ರಸಿದ್ಧವಾಗಿದ್ದ ನನ್ನ ಅನೇಕ ಕವನಗಳನ್ನು ಒಂದಾದಮೇಲೆ ಒಂದರಂತೆ, ಸದಸ್ಯವರ್ಗದ ತರುಣ ಮಿತ್ರರು ಕಳುಹಿಸುತ್ತಿದ್ದ ಚೀಟಿಯ

ಮಾಲೆಗಳನ್ನು ಅವಲೋಕಿಸಿ, ಹಾಡುತ್ತಿದ್ದೆ, ಓದುತ್ತಿದ್ದೆ, ನಾಟಕೀಯವಾಗಿ ವಾಚನ ಮಾಡುತ್ತಿದ್ದೆ. ಚಪ್ಪಾಳೆಯ ಸುರಿಮಳೆ ಭವನವನ್ನು ಅನುರಣಿಸಿ ತೊಯ್ಯಿಸಿತ್ತು! ಕಡೆಗೊಮ್ಮೆ ಸಭೆಯ ಒಕ್ಕೊರಲೊ ಎಂಬಂತೆ 'ಕಿಂದರಿಜೋಗಿ!' 'ಕಿಂದರಿಜೋಗಿ!' ಎಂಬ ಉಗ್ಗಡ ಕೇಳಿಸಿತು. ಸರಿ, ಬೊಮ್ಮನಹಳ್ಳಿಯ ಕಿಂದರಿಜೋಗಿಯನ್ನು ತುಸು ರಾಗವಾಗಿ ಅಭಿನಯಪೂರ್ವಕವಾಗಿ ಲಾವಣಿಯಂತೆ ಅನ್ನತೊಡಗಿದೆ! ತಟಸ್ಥವಾಗಿದ್ದ ಸದಸ್ಯಸ್ತೋಮ ಸಚಲವಾಯಿತು. ಸಭಾಸಮುದ್ರ ನಗೆಯ ಮೆಲುಗಾಳಿಗೆ ತೆರೆ ತೆರೆಯಾಯಿತು. ಬರುಬರುತ್ತಾ ಹಾಸ್ಯದ ಕಡೆಗೋಲಿಗೆ ಸಿಕ್ಕಿದಂತೆ ಅಲ್ಲೋಲಕಲ್ಲೋಲವಾಯಿತು. ನಗೆ ಅಟ್ಟಹಾಸದ ಮಟ್ಟಕ್ಕೇರಿತು. ಹಾಸ್ಯರಸ ಸಮುದ್ರವೆ ಅಟ್ಟಹಾಸದ ಬಿರುಗಾಳಿಗೆ ಸಿಕ್ಕಿದಂತೆ ಕಡೆಗೊಂಡು ಘೋರ್ಗರೆಯಿತು. ಕರತಾಡನದ ಸಿಡಿಲೂ ಗುಡುಗೂ ಕಿವಿ ಚಿಟ್ಟಿಡುವಂತೆ ಭವನವನ್ನಪ್ಪಳಿಸಿತು. 'ಭಟ್ಟಾಶಾಸ್ತ್ರಿಯ ಜನಿವಾರ' 'ಶೇಷಕ್ಕನ ನುಣ್ಣನೆ ಫಣಿವೇಣಿ' ಬರುವ ಹೊತ್ತಿಗೆ ನಕ್ಕೂನಕ್ಕೂ ಸುಸ್ತಾಗುವಂತಾಗಿತ್ತು ಇಡಿಯ ಸಭೆ. ನೋಡುತ್ತೇನೆ: ಎದುರು ಸಾಲಿನಲ್ಲಿ ಕೂತಿದ್ದ ಹಿರಿಯ ಗಂಭೀರ ವ್ಯಕ್ತಿಗಳೂ ಹೊಟ್ಟೆ ಹುಣ್ಣಾಗುವಂತೆ ಬಿದ್ದುಬಿದ್ದು ಕೇಕೆನಗು ನಗುತ್ತಿದ್ದಾರೆ. ಜರಿಪೇಟ ಧರಿಸಿ ಕೋಟು ಪ್ಯಾಂಟುಗಳಿಂದ ಸೂಟುಧಾರಿಯಾಗಿ ಕುಳಿತಿದ್ದ ಎಸ್.ಜಿ. ಶಾಸ್ತ್ರಿಗಳು ಗಾಂಭೀರ್ಯವನ್ನೆಲ್ಲ ಗಾಳಿಗೆ ತೂರಿ ಬಿದ್ದುಬಿದ್ದು ನಗುತ್ತಿದ್ದಾರೆ, ಹುಡುಗರಂತೆ. ತಡೆದುಕೊಳ್ಳಲು ಕೈಯನ್ನು ಬಾಯಿಗೆ ಅಡ್ಡವಿಟ್ಟು ಪ್ರಯತ್ನಿಸುತ್ತಿದ್ದಾರೆ. ಆಗದು! ಕಣ್ಣಿನಲ್ಲಿ ನೀರು ಬೇರೆ ಸುರಿಯುತ್ತಿದೆ! ನನ್ನನ್ನೆ ನೇರವಾಗಿ ನೋಡಿ ಹೊಟ್ಟೆ ಕುಲಿಕಿ ಮೈಬಾಗಿ ಕುರ್ಚಿಯಿಂದ ಬೀಳುವರೋ ಎಂಬಂತೆ ನಗುತ್ತಿದ್ದಾರೆ, ನಗುತ್ತಿದ್ದಾರೆ! ಆ ದೃಶ್ಯ ಈಗಲೂ ನನಗೆ ಕಣ್ಣಿಗೆ ಕಟ್ಟಿದಂತಿದೆ.''

ಅದೆಂಥ ಮಹಾಸಂಭ್ರಮದ ದಿನವಾಗಿದ್ದಿರಬೇಕು! ತಮಗೆ ಕಣ್ಣಿಗೆ ಕಟ್ಟಿರುವಂಥ ಈ ದೃಶ್ಯವನ್ನು ಕುವೆಂಪು ಇಲ್ಲಿ ನಮಗೂ ಕಣ್ಣಿಗೆ ಕಟ್ಟಿಸಿದ್ದಾರೆ. ಆ ದಿನದ ಹರ್ಷೋದ್ಗಾರಗಳನ್ನು ಕೇಳಿ, ನವೋತ್ಸಾಹವನ್ನು ನೆನೆದು ಇಂದೂ ನಮಗೆ 'ಮೈ ನವಿರೇಳುವುದು'. ಕಿಂದರಿಜೋಗಿಯ ಮೋಡಿಗೆ ಸಿಕ್ಕುವವರು ಇಲಿಗಳು ಮಕ್ಕಳು ಅಷ್ಟೆ ಅಲ್ಲ; ಚಿಕ್ಕವರು, ದೊಡ್ಡವರು, ಸಾಮಾನ್ಯರು, ಗಣ್ಯರು, ಜರಿಪೇಟದವರು, ಸೂಟುಧಾರಿಗಳು, ಎಲ್ಲರೂ! ಇದು ಕೇವಲ ಬಾಲಸಾಹಿತ್ಯ ಅಲ್ಲ; ಎಂಥವರನ್ನೂ ಅವರ ವಯಸ್ಸು, ಸ್ಥಾನಮಾನ, ಶ್ರೀಮದ್ಗಾಂಭೀರ್ಯಗಳನ್ನು ಕಿತ್ತೊಗೆದು ಬಾಲರಂತೆ ನಿರ್ಮಲ ಹೃದಯದಿಂದ ನಕ್ಕು ನಲಿವಂತೆ ಮಾಡುವ, ಅವರಿಗೆ ತಮ್ಮ ಬಾಲ್ಯವನ್ನು ಮರಳಿಸುವ ಸಾಹಿತ್ಯ. ಅದರಿಂದಲೆ ಆ ಕೃತಿ instant classic ಆದುದರಲ್ಲಿ ಆಶ್ಚರ್ಯವಿಲ್ಲ. ಇಲ್ಲಿ ಕುವೆಂಪು ಪೂರ್ತಿ ತಮ್ಮಿಂದ ತಾವೆ ಹೊರಬಂದಿದ್ದಾರೆ. ಕಿಂದರಿಜೋಗಿಯ ಕತೆ ಹೇಳುವಲ್ಲಿ ತಾವೂ ತನ್ಮಯರಾಗಿದ್ದಾರೆ. ಇದೊಂದು ಅತ್ಯಂತ ಸಹಜವಾದ, unself-conscious ಕೃತಿ ಎನ್ನಬಹುದು.

ಆ ದಿನಗಳಿಗೇ ಸಂಬಂಧಿಸಿದಂತೆ ಕುವೆಂಪು ಇನ್ನೊಂದು ಸಮಾರಂಭದ ಬಗ್ಗೆಯೂ ಬರೆಯುತ್ತಾರೆ:

"ಆ ವಾರ್ಷಿಕೋತ್ಸವದ ದಿನ ಕಾಲೇಜಿನ ಸಭಾಂಗಣ ತುಂಬಿ ತುಳುಕುತ್ತಿತ್ತು.... 'ಯಮನ ಸೋಲು' ನಾಟಕ ಅದ್ಭುತವಾಗಿ ಪ್ರದರ್ಶಿತವಾಯಿತು. ಕನ್ನಡದ ಸೌಭಾಗ್ಯದ ಬಾಗಿಲು ತೆರೆಯಿತೆಂಬಂತೆ ನಾಟಕ ಬರೆದವನನ್ನು ಹೊಗಳಿದರು, ಅಭಿನಂದಿಸಿದರು. ಕೊನೆಯಲ್ಲಿ ಕವಿಗೆ ಹಾರ ಹಾಕಲೆಂದು ಅಲ್ಲೆಲ್ಲಿಯೋ ಸಂಕೋಚದಿಂದ ಹುದುಗಿದ್ದ ನನ್ನನ್ನು ಮಿತ್ರರು ರಂಗವೇದಿಕೆಗೆ ಎಳತಂದರು. ಸರಿ, ಕೊರಳೊಡ್ಡಿ ಹಾಕಿಸಿಕೊಂಡೆ. ಮುದುಗಿಕೆಗೆ ಅದು ಸಾಲದೆಂಬಂತೆ ಸಭೆಯ ಮುಂದಣ ಸಾಲಿನಲ್ಲಿ ಕುಳಿತಿದ್ದ ಮಾಸ್ತಿ ವೆಂಕಟೇಶ ಐಯ್ಯಂಗಾರರು ಕೈಚಪ್ಪಾಳೆ ಹೊಡೆಯುತ್ತಾ ನನ್ನನ್ನು ನಿರ್ದೇಶಿಸಿ 'ಇವರೇಯೋ ಕಿಂದರಿಜೋಗಿ?' ಎಂದು ಸಭೆಗೆಲ್ಲ ಕೇಳುವಂತೆ ಗಟ್ಟಿಯಾಗಿ ಕೇಳಿಬಿಟ್ಟರು! ಕೈಚಪ್ಪಾಳೆಯ ಘೋರಾಟದೊಡನೆ ಗೊಳ್ಳೆಂದೆದ್ದ ನಗೆಯ ಸದ್ದು ನನ್ನ ಕಿವಿಗಪ್ಪಳಿಸಿತು...." ('ನೆನಪಿನ ದೋಣಿಯಲ್ಲಿ', ಪು. ೬೨೭)

ಅದೊಂದು ಪರ್ವಕಾಲ. ಭಾರತ ತನ್ನನ್ನು ತಾನು ಕಂಡುಕೊಳ್ಳುತ್ತಿದ್ದಂತೆಯೇ, ನಮ್ಮ ಕನ್ನಡ ಮತ್ತು ಇತರ ದೇಶ ಭಾಷೆಗಳು, ನಮ್ಮ ಸಂಸ್ಕೃತಿ ತಮ್ಮನ್ನು ತಾವು ಕಂಡುಕೊಳ್ಳುತ್ತಿದ್ದವು. ಇತ್ತ ಕುವೆಂಪು ಮತ್ತು ಪುತಿನ ಅತ್ತ ಬೇಂದ್ರೆಯವರ ಕವಿತಾಪ್ರತಿಭೆ ಅರಳುತ್ತಿದ್ದ ಕಾಲ. ಆ ದಿನಗಳ ನಿರ್ಮಲ ವಾತಾವರಣವನ್ನು ನೆನೆದು ಕುವೆಂಪು ಹೀಗೆಂದಿದ್ದಾರೆ:

".... ಕನ್ನಡ ನವೋದಯದ ಅರುಣೋದಯದ ಕಾಲವದು: ಯಃಕಶ್ಚಿತನಾದರೂ ಕನ್ನಡಕ್ಕೆ ತುಸುವೆ ಕಾಣಿಕೆ ನೀಡಿದ್ದರೂ ಅದನ್ನು ಮಹಾ ಎಂದೇ ಭಾವಿಸಿ ಉಘೆಯುಸುತ್ತಿದ್ದ ನಿರಸೂಯೆಯ ಕಾಲ! ನಗರದ ಸಾರ್ವಜನಿಕ ಮಹನೀಯರು ವಿದ್ಯಾರ್ಥಿಗಳು ಮತ್ತು ಅಧ್ಯಾಪಕರಷ್ಟೇ ಆತ್ಮೀಯತೆಯಿಂದ ಮತ್ತು ಅಭಿಮಾನದಿಂದ ಕಾಲೇಜಿನ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದ ಕಾಲ...." ('ನೆನಪಿನ ದೋಣಿಯಲ್ಲಿ' ಪು. ೬೨೭)

ಕಿಂದರಿಜೋಗಿ ನಮ್ಮ ಕನ್ನಡದ ಒಂದು ವಿಶಿಷ್ಟ ಕೃತಿ ಅನ್ನಬಹುದು. ನನಗೆ ತಿಳಿದ ಮಟ್ಟಿಗೆ ನಮ್ಮ ಇನ್ನಾವ ದೇಶಭಾಷೆಗಳಲ್ಲೂ ಈ ಕತೆಯ ಬಗ್ಗೆ ಇಂಥ ಕಾವ್ಯವಿದ್ದಂತೆ ಕಾಣುವುದಿಲ್ಲ. ಈ ಬಗ್ಗೆ ಹಲವಾರು ಮಂದಿಯನ್ನು ವಿಚಾರಿಸಿದ್ದೇನೆ. ಯಾರಿಗೂ ಇತರ ಭಾಷೆಗಳಲ್ಲಿ ಅಂಥ ಕಾವ್ಯ ಇದ್ದಂತೆ ತಿಳಿದಿಲ್ಲ.

ಈ ಕಾವ್ಯ ಇಷ್ಟು ಮನೋರಂಜಕವಾಗಿದ್ದರೂ, ಜನಪ್ರಿಯವಾಗಿದ್ದರೂ ನನ್ನ ಚಿಕ್ಕಂದಿನಲ್ಲಿ ನಮ್ಮ ಶಾಲೆಗಳಲ್ಲಾಗಲೀ, ರಂಗಮಂದಿರಗಳಲ್ಲಾಗಲೀ ಇದರ ವಾಚನ ಪ್ರದರ್ಶನಗಳು ಆಗುತ್ತಿರಲಿಲ್ಲ. ನಾನು ಅದನ್ನು ಮತ್ತೆ ಕೇಳಿದ್ದು ಸುಮಾರು ೧೫-೨೦ ವರ್ಷಗಳ ಹಿಂದೆ ಬಿ.ವಿ. ಕಾರಂತರು ಅಮೆರಿಕ್ಕೆ ಬಂದಿದ್ದಾಗಲೆ. ಅವರು ಅದನ್ನು ಅತ್ಯಂತ ರಂಜಕವಾಗಿ ಹಾಡಿ ನಮ್ಮೆಲ್ಲರ ಮನಸ್ಸು ತಣಿಸಿದ್ದರು. ರಂಗದಮೇಲೆ ಅದರ ಪ್ರದರ್ಶನ ಈಚೆಗೆ ಹಲವಾರು ಬಾರಿ ಆಗಿದೆಯೆಂದು ಡಾ. ಪ್ರಭುಶಂಕರರು ತಿಳಿಸಿದರು.

## ಕಿಂದರಿಜೋಗಿ ಮತ್ತು Pied Piper of Hamelin

'ಕಿಂದರಿಜೋಗಿ'ಗೆ ಸ್ಫೂರ್ತಿ ಬಂದದ್ದು ರಾಬರ್ಟ್ ಬ್ರೌನಿಂಗ್ (೧೮೧೨-೧೮೮೯) ಬರೆದ The Pied Piper of Hamelin : A Child's Story ಎಂಬ ಇಂಗ್ಲಿಷ್ ಕವನದಿಂದ. ಈ ಕವನ ಪ್ರಕಟವಾದದ್ದು ೧೮೪೯ರಲ್ಲಿ. ಅಲ್ಲಿಂದ ಸುಮಾರು ೮೦ ವರ್ಷಗಳ ಮೇಲೆ ಅದು 'ಕಿಂದರಿಜೋಗಿ'ಯಾಗಿ ಕನ್ನಡದಲ್ಲಿ ಅವತರಿಸಿತು. ಬ್ರೌನಿಂಗನಿಗೆ ಮೂಲ ಜರ್ಮನ್ ಜಾನಪದ ಕತೆ. ಅದಕ್ಕೆ ಸ್ವಲ್ಪ ಚಾರಿತ್ರಿಕ ದಾಖಲೆಯೂ ಉಂಟು. ಅದರ ಬಗ್ಗೆ ಮುಂದೆ ಹೆಚ್ಚಿಗೆ ಹೇಳಲಿದ್ದೇನೆ.

'ಕಿಂದರಿಜೋಗಿ' ಬ್ರೌನಿಂಗನ ಪದ್ಯದ ಭಾಷಾಂತರವಲ್ಲ. ಅದೊಂದು ಸಂಪೂರ್ಣ ಮರುಸೃಷ್ಟಿ. ಅದರ ಸನ್ನಿವೇಶಗಳು ಬ್ರೌನಿಂಗನಲ್ಲಿರುವಂತೆಯೇ ಇದ್ದರೂ ವಿವರಗಳು, ರೂಪಕಗಳು, ಮಾತಿನ ಧಾಟಿ, ನುಡಿಕಟ್ಟು - ಎಲ್ಲವೂ ಅಚ್ಚ ಭಾರತೀಯ ಸಂಪ್ರದಾಯಕ್ಕೆ ಸೇರಿದ್ದು. ಕತೆಗೆ ಒಂದು ಪುರಾಣದ ಸಂಬಂಧ ಕೊಟ್ಟು ಅದು ನಮ್ಮದೇ ಎನಿಸುವಂತೆ ಮಾಡಿದ್ದಾರೆ ಕುವೆಂಪು. ಅದರ ಬಗ್ಗೆ ಕುವೆಂಪುರವರೇ ಹೇಳುವುದನ್ನು ನೋಡಿ:

''ಅನೇಕರು ಅದನ್ನು ಬ್ರೌನಿಂಗ್ ಕವಿಯ 'ಪೈಡ್ ಪೈಪರ್ ಆಫ್ ಹ್ಯಾಮಲಿನ್' ಕವಿತೆಯ ಭಾಷಾಂತರವೆಂದು ಭಾವಿಸಿದ್ದಾರೆ. ಅದು ಮೊದಲು 'ಕಿರಿಯ ಕಾಣಿಕೆ'ಯಲ್ಲಿ ಮಹಾರಾಜಾ ಕಾಲೇಜಿನ ಕರ್ಣಾಟಕ ಸಂಘದಿಂದ ೧೯೨೮ರಲ್ಲಿ ಪ್ರಕಟವಾದಾಗ ಅದು ಬ್ರೌನಿಂಗ್ ಕವಿಯ ಕವಿತೆಯ ಆಧಾರದ ಮೇಲೆ ರಚಿತವಾದದ್ದು ಎಂಬ ಉಲ್ಲೇಖವಿದೆ. ಅದು ಯಾವ ದೃಷ್ಟಿಯಿಂದ ಪರಿಶೀಲಿಸಿದರೂ ಭಾಷಾಂತರವಾಗುವುದಿಲ್ಲ; ಕಡೆಗೆ ಸಮೀಪದ ಅನುವಾದ ಕೂಡ ಆಗುವುದಿಲ್ಲ. ಅದನ್ನು ಬರೆಯುವಾಗ ಶಿವಮೊಗ್ಗದಲ್ಲಿ ನನ್ನ ಬಳಿ ಬ್ರೌನಿಂಗ್ ಕೃತಿ ಇರಲಿಲ್ಲ. ಅಷ್ಟೆ ಅಲ್ಲ, ಇಂಗ್ಲಿಷಿನಲ್ಲಿ ಅದನ್ನು ವೆಸ್ಲಿಯನ್ ಮಿಷನ್ ಹೈಸ್ಕೂಲಿನಲ್ಲಿ ನಾನು ಐದನೆಯ ಫಾರಂನಲ್ಲಿ ಓದುತ್ತಿದ್ದಾಗ ಪಠ್ಯಪುಸ್ತಕದಲ್ಲಿ ಓದಿದ್ದೇನೆ ಹೊರತು ಆಮೇಲೆ ಅದನ್ನು ಓದಿರಲೂ ಇಲ್ಲ. ಆದ್ದರಿಂದ ಅದು ಭಾಷಾಂತರವೂ ಅಲ್ಲ, ಅನುವಾದವೂ ಅಲ್ಲ. ಆ ಕಥೆಯ ನೆನಪಿನ ಆಧಾರದ ಮೇಲೆ ರಚಿತವಾದದ್ದು ಎಂದು ಹೇಳಬಹುದು.'' ('ನೆನಪಿನ ದೋಣಿಯಲ್ಲಿ,' ಪು. ೩೪೪)

ನೆನಪಿನಿಂದ ಬರೆದದ್ದೆನ್ನುತ್ತಾರೆ ಕುವೆಂಪು. ಅವರ ನೆನಪು ಅದ್ಭುತವಾಗಿದ್ದಿರಬೇಕು. ಏಕೆಂದರೆ, ಎರಡು ಪದ್ಯಗಳಲ್ಲೂ ಸನ್ನಿವೇಶಗಳು, ವಿವರಣೆಗಳು ಒಂದೇ ಕ್ರಮದಲ್ಲಿ ಬರುತ್ತವೆ. ಬ್ರೌನಿಂಗ್ ಪದ್ಯ ಪೂರ್ತಿ ಅವರ ಮನಸ್ಸಿನಲ್ಲಿ ನಿಂತಿದ್ದಿರಬೇಕು. ಇದಕ್ಕೆ ಆಧಾರವಾಗಿ ಕುವೆಂಪು ವೆಸ್ಲಿಯನ್ ಹೈಸ್ಕೂಲಿನಲ್ಲಿ ಬ್ರೌನಿಂಗ್ ಪದ್ಯವನ್ನು ತಮಗೆ ಪಾಠ ಹೇಳಿದ ಶ್ರೀ ಸುಂದರ ಎಂಬ ಉಪಾಧ್ಯಾಯರನ್ನು ಕುರಿತು ಹೇಳಿರುವುದನ್ನು ನೋಡಬಹುದು:

"ಶ್ರೀ ಸುಂದರ ಅವರು ಕ್ರೈಸ್ತರು. ಆಗತಾನೆ ಇಂಗ್ಲಿಷ್ ಎಂ.ಎ. ಪಾಸುಮಾಡಿ ಬಂದಿದ್ದರೆಂದು ತೋರುತ್ತದೆ. ಆದ್ದರಿಂದಲೆ ಪಾಠ ಹೇಳುವುದರಲ್ಲಿ ಒಂದು ಚೈತನ್ಯ ಪೂರ್ಣವಾದ ಸಂತೋಷವಿದ್ದು ಆಲಿಸುತ್ತಿದ್ದ ವಿದ್ಯಾರ್ಥಿಗಳನ್ನು ಸೆಳೆಯುತ್ತಿತ್ತು. ಒಂದು ದಿನ ಅವರು ಬ್ರೌನಿಂಗ್ ಕವಿಯ 'ಪೈಡ್ ಪೈಪರ್ ಆಫ್ ಹ್ಯಾಮಲಿನ್' ಅನ್ನು ತರಗತಿಯಲ್ಲಿ ನಾಟಕೀಯವಾಗಿ ಓದಿ, ಇಂಗ್ಲೀಷಿನಲ್ಲಿಯೆ ಅಲ್ಲಲ್ಲಿ ತುಸು ಅರ್ಥ ವಿವರಣೆಯನ್ನೂ ಕೊಡುತ್ತ (ಇಂಗ್ಲಿಷ್ ಅಧ್ಯಾಪಕರು ಪಾಠಮಾಡುವಾಗ ಕನ್ನಡದ ಪ್ರಯೋಗ ನಿಷಿದ್ಧವಾಗಿತ್ತು. ಹಾಗೇನಾದರು ಕನ್ನಡದಲ್ಲಿ ಮಾತಾಡಿದರೆ ಬೋಧನೆಯ ಪವಿತ್ರತೆಗೇ ಭಂಗವೆಂದು ಭಾವಿಸಲಾಗುತ್ತಿತ್ತು. ಕನ್ನಡದಲ್ಲಿ ಮಾತಾಡುವುದು ಅವಮಾನಕರವೆಂದು ಸರ್ವರೂ ಒಪ್ಪಿಕೊಂಡ ನಿರ್ಣಾಯಕ ವಿಷಯವಾಗಿತ್ತು.) ತಾವೂ ಬಿದ್ದುಬಿದ್ದು ನಗುತ್ತಾ ವಿದ್ಯಾರ್ಥಿಗಳನ್ನು ನಗೆಯ ಹೊನಲಿನಲ್ಲಿ ತೇಲಿಸಿ ಬಿಟ್ಟರು. ಆ ಕವಿತೆಯ ಸ್ವಾರಸ್ಯ, ಅದರ ಹಾಸ್ಯರಸ ಅವರು ಓದಿದ ಧಾಟಿಯಿಂದಲ್ಲದೆ ಅಭಿವ್ಯಕ್ತವಾಗುತ್ತಿರಲಿಲ್ಲ.... 'ಪೈಡ್ ಪೈಪರ್ ಆಫ್ ಹ್ಯಾಮಲಿನ್' ತನ್ನ ನೃತ್ಯಮಯ ಶೈಲಿಯಿಂದಲೂ ಬಾಲಕ ಚೇತನಗಳಿಗೆ ಕಚಗುಳಿಯಿಟ್ಟು ನಗಿಸುವಂತಹ ಹಾಸ್ಯದಿಂದಲೂ ನನ್ನ ಮೆಚ್ಚಿಗೆಯನ್ನು ಸೂರೆಗೊಂಡಿತು. ಅದು ಎಷ್ಟರಮಟ್ಟಿಗೆ ನನ್ನ ಅಂತಃಕರಣದ ಭಾವಕೋಶವನ್ನು ಪ್ರವೇಶಿಸಿತ್ತು ಎಂದರೆ, ಮುಂದೆ ೧೯೨೬ರಲ್ಲಿ ಅಂದರೆ ಆರೇಳು ವರ್ಷಗಳ ತರುವಾಯ, ಶಿವಮೊಗ್ಗೆಯಲ್ಲಿ ನಾನು ಕಾಯಿಲೆಯಿಂದ ಗುಣಮುಖನಾಗುತ್ತಿದ್ದಾಗ ಆ ಕಥೆಯನ್ನು ಆಧರಿಸಿ 'ಬೊಮ್ಮನಹಳ್ಳಿಯ ಕಿಂದರಿಜೋಗಿ'ಯನ್ನು ರಚಿಸಿದಾಗ ಇಂಗ್ಲಿಷ್ ಭಾಷೆಯ ಮೂಲಕವಿ 'ಬಳಿ ಇರಲೆ ಇಲ್ಲ....' (ಕುವೆಂಪು ಸಮಗ್ರಕಾವ್ಯ - ಸಂಪುಟ ೨., ಪು. ೧೦೬೮)

ಕುವೆಂಪು ಈ ಕತೆಯನ್ನು ನಮ್ಮದಾಗಿಸಿರುವ ರೀತಿ ನೋಡಿ : ತುಂಗಾ ತೀರ, ಜನರ ಹೆಸರುಗಳು - ತಿಮ್ಮ, ಸಿದ್ದೋಜೈಗಳು, ಶೇಷಕ್ಕ, ಜಟ್ಟಕ್ಕ, ಸುಬ್ಬಾಭಟ್ಟರು - ಭೃಂಗಾಮಲಕ ತೈಲ, ಊರಿನ ಗೌಡ, ಇವನ್ನು ಬಳಸಿರುವುದಷ್ಟೇ ಅಲ್ಲ, ಬಹುಶಃ ಅವಕ್ಕಿಂತ ಮುಖ್ಯವಾಗಿ, ಅವರು ಆ ಕತೆಗೆ ಪುರಾಣದ ಸಂಬಂಧ ಜೋಡಿಸಿರುವುದು. ಗೌಡ ಜೋಗಿಯ ಪೂರ್ವೋತ್ತರಗಳನ್ನು ತಿಳಿಯಬೇಕೆಂದೂ, ಅವನಿಗೆ ಈ ಇಲಿಗಳನ್ನು ನಿಜವಾಗಿಯೂ ಓಡಿಸುವ ಶಕ್ತಿ ಇದೆಯೆಂದನ್ನು ಖಚಿತ ಪಡಿಸಿಕೊಳ್ಳಬೇಕೆಂದೂ, ಅವನನ್ನು ಪ್ರಶ್ನಿಸಿದಾಗ, ಜೋಗಿ ಎನ್ನುತ್ತಾನೆ :

'ಹಿಮಗಿರಿಯಲ್ಲಿಹ ಜೋಗಿಯು ನಾನು
ಪರಮೇಶ್ವರನಿಗೆ ಗೆಳೆಯನು ನಾನು;
ನಿಮ್ಮೀ ಗೋಳನು ಕೇಳಿದ ಶಿವನು
ನನ್ನನ್ನಿಲ್ಲಿಗೆ ಕಳುಹಿದನು.'

ಮೂಷಿಕಗಳನ್ನು ನಾಶಮಾಡುವ ಇವನನ್ನು ಮೂಷಿಕವಾಹನನೇ ಆದ ವಿನಾಯಕ ಹೇಗೆ ತಾಳಿಕೊಂಡ ಎಂಬ ಬಗ್ಗೆ ಕುವೆಂಪು ಏನೂ ಹೇಳಿಲ್ಲ. ಬಹುಶಃ ಜೋಗಿ ಪರಮೇಶ್ವರನಿಗೆ

ಗೆಳೆಯನಾದ್ದರಿಂದ ವಿನಾಯಕ ಏನೂ ಮಾಡಲಿಲ್ಲವೇನೋ! ಮುಂದೆ ಜೋಗಿ ತನ್ನ ಅಗ್ಗಳಿಕೆಯನ್ನು ಮತ್ತೂ ಹೇಳಿಕೊಳ್ಳುತ್ತ ಹೇಗೆ ಕೃತಯುಗದಲ್ಲಿ ಕೈಲಾಸದಲ್ಲಿ ಇಲಿಗಳ ಕಾಟ ಮಿತಿಮೀರಿದಾಗ ಈಶನಿಗೂ ಅವನ್ನು ಕೊಲ್ಲಲಾಗದೆ ನಂದಿಯನ್ನು ಕಳಿಸಿ ತನ್ನನ್ನು ಬರಮಾಡಿಕೊಂಡ, ತಾನು ಹೇಗೆ ಅವನ್ನೆಲ್ಲ ನಾಶಪಡಿಸಿದೆ ಎಂದು ಹೇಳಿಕೊಳ್ಳುತ್ತಾನೆ. ಇನ್ನೂ ಮುಂದುವರಿದು, ದ್ವಾಪರ ಯುಗದಲ್ಲಿ ಜಯವಿಜಯರಿಗೂ ಈ ಮೂಷಿಕ ಸೈನ್ಯಕ್ಕೂ ಮಹಾಕಾಳಗವಾದಾಗ, ಜಯವಿಜಯರು ಸೋತು ವಿಷ್ಣುವಿನ ಬಳಿಗೋಡಿದರು. ಆಗ ವಿಷ್ಣುವೇ ಬಂದು ಕಾದಿದರೂ ಅವನಿಗೂ ಅವನ್ನು ಗೆಲ್ಲಲಾಗಲಿಲ್ಲ. ಕಡೆಗೆ ತಾನು ಬಂದು ಅವನ್ನು ನಾಶಪಡಿಸಿದೆ ಎಂದು ಕೊಚ್ಚಿಕೊಳ್ಳುತ್ತಾನೆ. ಇಲಿಗಳ ಕೈಯಲ್ಲಿ ವಿಷ್ಣುವಿಗಾದ ಪರಾಭವವನ್ನು ಬಹಳ ಸ್ವಾರಸ್ಯವಾಗಿ ವರ್ಣಿಸಿದ್ದಾರೆ ಕುವೆಂಪು :

‘ಪೀತಾಂಬರವನು ಹರಿದವು ಕೆಲವು;
ಚಕ್ರದ ಹಲ್ಲನು ಮುರಿದವು ಕೆಲವು!
ಕೌಸ್ತುಭರತ್ನವನಪಹರಿಸಿದುವು!
ಶಂಖವ ಭೂಂ ಭೂಂ ಊದಿದುವು!
ಗದೆಯೆನ್ನೆಳೆದು ಬಿಸಾಡಿದುವು!
ರಾಕ್ಷಸಕೋಟಿಯ ಕೊಂದಾ ಚಕ್ರವು
ಬರಿದಾಯಿತು ಇಲಿಗಳ ಮುಂದೆ....’

ಇನ್ನೊಂದು ಉದಾಹರಣೆ : ಜೋಗಿ ಇಲಿಗಳನ್ನು ನೀರಿಗೆ ನಡೆಸಿದಾಗ ಒಂದನ್ನು ಬಿಟ್ಟು ಉಳಿದವೆಲ್ಲ ನೀರಲ್ಲಿ ಮುಳುಗಿ ಸತ್ತವು. ಆ ಒಂದು ಮಾತ್ರ, ಗಡವ ಇಲಿ, ಧೈರ್ಯದಿಂದ ನೀರಲ್ಲಿ ಈಜಿ ಆಚೆ ದಡ ಸೇರಿ ಜೋಗಿ ಕಿಂದರಿ ಬಾರಿಸಿದಾಗ ತಮಗೆ ಹೇಗೆನಿಸಿತು ಎಂಬುದನ್ನು ಹೇಳಿತು. ಆ ಇಲಿಯನ್ನು ಬ್ರೌನಿಂಗ್ “ಜೂಲಿಯಸ್ ಸೀಜರ್” ಎಂದು ಕರೆದರೆ, ಕುವೆಂಪು “ರಾವಣ ಇಲಿ” ಎನ್ನುತ್ತಾರೆ, ನಮ್ಮ ಮನಸ್ಸಿಗೆ ತಟ್ಟುವಂತೆ.

ಬ್ರೌನಿಂಗನಲ್ಲಿ ಬರುವ ಮಾಯಾಪುರುಷ, ಒಬ್ಬ piper. ಅವನೊಂದು ಗಾಳಿಯವಾದ್ಯ ಊದಿ ಇಲಿಗಳನ್ನೂ, ಮುಂದೆ ಮಕ್ಕಳನ್ನೂ ವಶಪಡಿಸಿಕೊಳ್ಳುತ್ತಾನೆ. ಇಲ್ಲಿ ನಮ್ಮ ಜೋಗಿ ಬಳಸುವುದು ಬರಿಯ ಒಂದು-ತಂತಿಯ ಕಿಂದರಿ. ನಮ್ಮಲ್ಲಿ ಕೃಷ್ಣ ತನ್ನ ಕೊಳಲಿನಿಂದ ಜನರನ್ನು ಮಾತ್ರವಲ್ಲದೆ, ಗೋವುಗಳನ್ನು, ನದಿಬೆಟ್ಟಗಳನ್ನೂ ತನ್ನೆಡೆಗೆ ಸೆಳೆಯುತ್ತಿದ್ದ ಎಂಬ ಕಲ್ಪನೆಯೇನೂ ಹೊಸದಲ್ಲ. ಆದರೆ ಕುವೆಂಪು ಅದನ್ನು ಬಳಸಿಲ್ಲ, ಕಿಂದರಿ ಬಳಸಿದ್ದಾರೆ. ನಮ್ಮ ಕಡೆ ಬೈರಾಗಿಗಳು, ಜೋಗಿಗಳು, ಬಳಸುವುದು ಅದನ್ನೇ ಆದ್ದರಿಂದ. ಒಂದೇ ತಂತಿಯನ್ನು ಮಿಡಿಯುತ್ತ ಆ ವಾದ್ಯದಲ್ಲಿ ಏನು ನಾದ ಲಹರಿ ತರಬಹುದು ? ಆದರೆ, ಅದೆಲ್ಲ ಕೇವಲ ಹುಲುಮಾನವರ ಪ್ರಶ್ನೆಗಳು! “ಪರಮೇಶ್ವರನಿಗೆ ಗೆಳೆಯ” ನಾದ ಆ ಜೋಗಿ ಕಿಂದರಿ ಬಾರಿಸಿದರೆ,

'ಜಗವನೆ ಮೋಹಿಸಿತಾ ನಾದ!'

ಮುಂದೆ,

''ಟಿಂಗ್! ಟಿಂಗ್! ಟಿಂಗ್! ಟಿಂಗ್!' ನಾದವ ಕೇಳಿ
ಚಂಗ್! ಚಂಗ್! ನೆಗೆದರು ಬಾಲಕರು!'

ಬ್ರೌನಿಂಗನ ಇನ್ನೊಂದು ಹೆಸರಾದ ಕವನ Abt Voglerನಲ್ಲಿ ಕಲಾವಿದರಲ್ಲೆಲ್ಲ ದೇವರಿಗೆ ಅತ್ಯಂತ ಪ್ರಿಯನಾದವನು ಸಂಗೀತಗಾರನೇ ಎಂಬ ಮಾತು ಬರುತ್ತದೆ, 'ಪರಮೇಶ್ವರನಿಗೆ ಗೆಳೆಯನು ನಾನು' ಎಂಬುದನ್ನು ಸಮರ್ಥಿಸುವಂತೆ. ಸಂಗೀತಕ್ಕಿರುವ ಅದ್ಭುತ ಸಂಮೋಹನ ಶಕ್ತಿಯ ಬಗ್ಗೆ ಪ್ರಪಂಚದ ಎಲ್ಲ ಸಂಸ್ಕೃತಿಗಳಲ್ಲೂ ಕತೆಗಳಿವೆ. ಇಲ್ಲಿಯೂ ಅದು ಪೂರ್ಣ ಅಭಿವ್ಯಕ್ತಿ ಪಡೆದಿದೆ. ಜೋಗಿಗೆ ಹಣ ತೆರುವುದನ್ನು ತಪ್ಪಿಸಿಕೊಳ್ಳುವ ನೆವದಲ್ಲಿ ಊರ ಗೌಡ ಹೇಳುವ ಮಾತಿನಲ್ಲಿ ಅವನಿಗರಿವಿಲ್ಲದೆಯೇ ಅದನ್ನು ಒಪ್ಪಿಕೊಳ್ಳುತ್ತಾನೆ :

'ಸುಮ್ಮನೆ ಕಿಂದರಿ ಬಾರಿಸಿದೆ,
ಇಲಿಗಳ ಹೊತ್ತೆಯ ನೀನೇನು?
ಅವುಗಳು ತಮ್ಮಷ್ಟಕೆ ತಾವೇ
ಬಿದ್ದುವು ಹೊಳೆಯಲಿ ಮುಳುಗಿದುವು!'

ಬ್ರೌನಿಂಗ್ ಪದ್ಯಕ್ಕಿಂತ ಕುವೆಂಪು ಪದ್ಯದಲ್ಲಿ ಹಾಸ್ಯ ತುಂಬ ಚೆನ್ನಾಗಿ ಬಂದಿದೆ ಎನ್ನಿಸುತ್ತದೆ. ಇಲಿಗಳ ಕಾಟವನ್ನು ವರ್ಣಿಸುವ ಭಾಗ ಮೂಲದಲ್ಲಿ ಇರುವುದಕ್ಕಿಂತ ದೊಡ್ಡದಾಗಿದೆ, ಇನ್ನೂ ರಸವತ್ತಾಗಿದೆ. ಭಟ್ಟಾಚಾಶಾಸ್ತ್ರಿಯ ಜನಿವಾರ, ಶೇಷಕ್ಕನ ನುಣ್ಣನೆ ಫಣಿವೇಣಿ ಇವನ್ನೆಲ್ಲ ಯಾರು ಮರೆಯಲು ಸಾಧ್ಯ? ಅಲ್ಲದೆ,

'ಸಣ್ಣಿಲಿ, ದೊಡ್ಡಿಲಿ, ಮೂಗಿಲಿ, ಸುಂಡಿಲಿ,
ಅಣ್ಣಿಲಿ, ತಮ್ಮಿಲಿ, ಅವ್ವಿಲಿ, ಅಪ್ಪಿಲಿ,
ಮಾವಿಲಿ, ಭಾವಿಲಿ, ಅಕ್ಕಿಲಿ, ತಂಗಿಲಿ,
ಗಂಡಿಲಿ, ಹೆಣ್ಣಿಲಿ, ಮುದುಕಿಲಿ, ಹುಡುಗಿಲಿ'

ಎನ್ನುವುದರಲ್ಲಿ ಕೇಳುವ ಲಯನಾದ ಸೌಂದರ್ಯ, ಕಾಣುವ ದೃಶ್ಯ ಸಂಪತ್ತು (ಇಲಿಗಳ ಸಾಂಸಾರಿಕ ಚಿತ್ರ, ಇತ್ಯಾದಿ), ಮೂಲದಲ್ಲಿರುವುದಕ್ಕಿಂತ ಚೆನ್ನಾಗಿದೆ ಎನ್ನಿಸುತ್ತದೆ.

ಈ ಕತೆಯಲ್ಲಿ ಬರುವ ಭಾವಾತ್ಮಕವಾದ ಭಾಗವೆಂದರೆ, ಕುಂಟ ಹುಡುಗ ತನ್ನ ಗೆಳೆಯರೊಂದಿಗೆ ಗವಿಯ ಒಳಕ್ಕೆ ಹೋಗದೆ ಹೊರಗೇ ಉಳಿಯಬೇಕಾಗಿ ಬಂದು, ತನಗಾದ ಅತೀವ ಸಂಕಟವನ್ನು ತೋಡಿಕೊಳ್ಳುವುದು. ಬ್ರೌನಿಂಗ್ ಕವನದಲ್ಲಿ ಆ ಹುಡುಗ ವರ್ಷಗಳು ಕಳೆದ ಮೇಲೂ ಹೀಗೆ ಪರಿತಪಿಸುತ್ತಾನೆ :

""It's dull in our town since my playmates left !
...he led us,... to a joyous land....
Where waters gushed and fruit-trees grew,
And flowers put forth a fairer hue,
And everything was strange and new;
The sparrows were brighter than peacocks here,
And their dogs outran our fallow deer,
And honey-bees had lost their stings,
And horses were born with eagles' wings;
And just as I became assured
My lame foot would be speedily cured,
The music stopped and I stood still.
and found myself outside the hill,
Left alone against my will,
To go now limping as before,
And never hear of that country more!"

ಆ ದಿವ್ಯ ನೂತನ ಲೋಕದ ಅದ್ಭುತ ದೃಶ್ಯಗಳನ್ನು ನೋಡುವುದರ ಜೊತೆಗೆ, ಕುಂಟ ಹುಡುಗನಿಗೆ ಆ ಹೊಸ ಲೋಕದಲ್ಲಿ ತನ್ನ ಕಾಲು ಸರಿಹೋಗುತ್ತದೆ ಎಂಬ ಭರವಸೆ! ಆ ಭರವಸೆ ಇನ್ನೇನು ಕೈಗೂಡಬೇಕು, ಅಷ್ಟರಲ್ಲಿ ಸಂಗೀತ ನಿಂತಿತು, ಗವಿಯ ಬಾಗಿಲು ಮುಚ್ಚಿತು. ಇವನೊಬ್ಬ ಮಾತ್ರ ಹೊರಗೆ ಉಳಿದುಕೊಂಡ. ತನ್ನ ಕುಂಟು ಕಾಲನ್ನೆಳೆದುಕೊಂಡು ಗೆಳೆಯರಿಲ್ಲದ ಆ ಊರಿಗೆ ಮರಳಿದ. ವರ್ಷಗಳು ಕಳೆದರೂ ಆ ದುಃಖ ಅವನನ್ನು ಬಿಟ್ಟಿಲ್ಲ. The best is yet to be ಎಂದ ಬ್ರೌನಿಂಗನ ಚಿರಂತನ ಆಶಾವಾದಿತ್ವಕ್ಕೆ ಈ ಹುಡುಗನೊಬ್ಬ ಅಪವಾದವಾಗಿ ಉಳಿಯುತ್ತಾನೆ.

ಕುವೆಂಪು ಪದ್ಯದಲ್ಲಿ ಈ ಭರವಸೆಯ ಮಾತು ಬಿಟ್ಟುಹೋಗಿದೆಯಾದರೂ, ಒಟ್ಟಿನಲ್ಲಿ ಅವನ ಮಾತಿನ ಭಾವನೆ ತುಂಬ ಹೃದಯಸ್ಪರ್ಶಿಯಾಗಿದೆ:

'ಅಯ್ಯೋ ಎನಗಿಲ್ಲವರಾನಂದ!
ಜೋಗಿಯು ಕಿಂದರಿ ಬಾರಿಸೆ ಕಂಡೆವು
ಬಣ್ಣದ ಮನೆಗಳ ಪಟ್ಟಣವ,
ಹಣ್ಣುಗಳುದುದರಿದ ತೋಟಗಳ;
ನಾನಾ ಆಟದ ಸಾಮಾನುಗಳ,
ತರತರ ರಾಗದ ಗೊಂಬೆಗಳ;
ಮಾತಿಗೆ ಮೀರಿದ ಆನಂದಗಳ
ಕೈಗೇ ಸಿಕ್ಕುವ ಹಕ್ಕಿಗಳ;
ಜಿಂಕೆಗಳೆಮ್ಮೊಡನಾಡಿದುವಲ್ಲಿ

ಮೊಲಗಳು ಕುಳಿತವು ಮೈಮೇಲಲ್ಲಿ!
ಅಯ್ಯೋ ಹೋಯಿತೆ ಆ ನಾಕ
ಆಯ್ಯೊ ಬಂದಿತೆ ಈ ಲೋಕ!'

ಮಾತಿಗೆ ಮೀರಿದ ಆನಂದಗಳನ್ನು ಕಂಡಿದ್ದು ಕ್ಷಣಕಾಲವೆ! ಆ ನಾಕ ಹೋಯಿತು, ಈ ಲೋಕ ಬಂದಿತು....ವರ್ಷಗಳ ಬಳಿಕ ಈ ಸಾಲುಗಳನ್ನೋದುವಾಗ ಆ ಕುಂಟು ಹುಡುಗನ ಬಗೆಗೆ ಅಂದು ಅನಿಸಿದ ಅನುಕಂಪವೇ ಇಂದೂ ಅನ್ನಿಸುತ್ತದೆ. ''ಅಯ್ಯೋ ಹೋಯಿತೆ ಆ ನಾಕ'' ಎಂಬುದನ್ನು ನಾವು ಅನೇಕ ವೇಳೆ ಹಳೆಯದನ್ನು ಕುರಿತು ಭಾವೋತ್ಕಂಠತೆಯಿಂದ ಹೇಳುವ ಮಾತಾಗಿ (ಎಂದರೆ ಆಗಿ) ಉಪಯೋಗಿಸುತ್ತೇವೆ. ಆದರೆ ಅದು ಇಲ್ಲಿ ಕೈಗೆ ಇನ್ನೇನು ಸಿಕ್ಕಿದ್ದ ಹೊಸ ಲೋಕ ಸಿಗಲಿಲ್ಲವಲ್ಲ ಎಂಬರ್ಥದಲ್ಲಿದೆ.

ಬ್ರೌನಿಂಗ್ ಕತೆಯ ಕಡೆಯಲ್ಲಿ ಈ ಸಾಲುಗಳು ಬರುತ್ತವೆ:

so, willy, let me and you be wipers
Of scores out with all men-especially pipers!
And, whether they pipe us free from rats or from mice,
If we've promised them aught, let us keep our promise!

ಕುವೆಂಪುವಿನಲ್ಲಿ ಈ ಭಾಗ ಹೀಗೆ ಕಾಣುತ್ತದೆ :

ಭಾಷೆಯ ಕೊಟ್ಟರೆ, ಮೂರ್ತೀ, ನಾವು
ಮೋಸವ ಮಾಡದೆ ಸಲ್ಲಿಸಬೇಕು.
ಆದುದರಿಂದ, ಮೂರ್ತೀ, ಕೇಳು
ಸತ್ಯವನೆಂದಿಗು ತ್ಯಜಿಸದೆ ಬಾಳು!

ಬ್ರೌನಿಂಗ್ ಪದ್ಯದ ವಿಲೀ, ಕುವೆಂಪು ಪದ್ಯದ ಮೂರ್ತೀ ಯಾರು? ನಿಜವಾದ ವ್ಯಕ್ತಿಗಳೇ ಅಥವ ಕಾಲ್ಪನಿಕ ವ್ಯಕ್ತಿಗಳೇ? ವಿಲೀ ಬ್ರೌನಿಂಗನ ಒಂದು ಕಾಲದ ಸ್ನೇಹಿತ ವಿಲಿಯಂ ಮ್ಯಾಕ್ರೇಡಿ ಎಂಬುವನ ಮಗ. ಈ ಮ್ಯಾಕ್ರೇಡಿ ಒಂದು ನಾಟಕದ ಗುಂಪಿನ ವ್ಯವಸ್ಥಾಪಕ. ಆ ಗುಂಪಿನವರು ಬ್ರೌನಿಂಗನ ಕೆಲವು ನಾಟಕಗಳನ್ನಾಡಿದ್ದರು. ಏನೋ ಕಾರಣದಿಂದ ಮ್ಯಾಕ್ರೇಡಿಗೂ ಬ್ರೌನಿಂಗನಿಗೂ ಮನಸ್ತಾಪ ಬಂತು, ಬಹುಶಃ ಮ್ಯಾಕ್ರೆಡಿ ತಾನು ಕೊಟ್ಟ ಮಾತನ್ನು ಉಳಿಸಿಕೊಂಡಿರಲಿಲ್ಲ ಎಂದು ಕಾಣುತ್ತದೆ. ವಿಲೀ ಅನಾರೋಗ್ಯದಿಂದ ಚೇತರಿಸಿಕೊಳ್ಳುತ್ತಿದ್ದಾಗ, ಬ್ರೌನಿಂಗ್ ಅವನಿಗಾಗಿ ಈ ಪದ್ಯ ಬರೆದು ಅಂಕಿತ ಮಾಡಿದ್ದನಂತೆ. ಆದರೆ, ಅದರಲ್ಲಿನ ಕಡೆಯ ಸಂದೇಶ ಹುಡುಗನಿಗಿಂತ ಅವನ ತಂದೆಯನ್ನು ಉದ್ದೇಶಿಸಿತ್ತು!

ಇನ್ನು ಮೂರ್ತಿ? ಕುವೆಂಪು ಆ ದಿನಗಳಲ್ಲಿ ಮೈಸೂರಿನ ಕೃಷ್ಣಮೂರ್ತಿಪುರದಲ್ಲಿದ್ದ ರಾಮಕೃಷ್ಣಾಶ್ರಮದಲ್ಲಿರುತ್ತಿದ್ದರು. ಆಗ ನಾ. ಕಸ್ತೂರಿಯವರಿಗೂ ಆಶ್ರಮಕ್ಕೂ ತುಂಬ ನಿಕಟ

ಸಂಬಂಧ. (ಮುಂದೆ, ಕಸ್ತೂರಿಯವರು ಪುಟ್ಟಪರ್ತಿ ಸಾಯಿಬಾಬಾ ಅವರ ಶಿಷ್ಯರಾದದ್ದು ಎಲ್ಲರಿಗೂ ತಿಳಿದ ವಿಷಯ.) ಆ ದಿನಗಳಲ್ಲಿ ಕಸ್ತೂರಿಯವರ ಹಿರಿಯ ಮಗ, ಆಗಿನ್ನೂ ಚಿಕ್ಕ ಹುಡುಗ, ಆಶ್ರಮದ ಪಕ್ಕದಲ್ಲಿಯೇ ಇದ್ದ ಅವರ ಮನೆಯಿಂದ ಆಶ್ರಮಕ್ಕೆ ಬಂದು ಆಡಿಕೊಂಡಿರುತ್ತಿದ್ದನಂತೆ. ಕುವೆಂಪುಗೆ ಆ ಹುಡುಗನಲ್ಲಿ ತುಂಬ ಪ್ರೀತಿ. ".... ಆಶ್ರಮಕ್ಕೆ ಬಂದು ತೊದಲು ಮಾತಿನಿಂದಲೂ ಮಕ್ಕಳಾಟದಿಂದಲೂ ಆಶ್ರಮದ ಆಧ್ಯಾತ್ಮಿಕ ಭಾರದ ಗುರುತ್ವಕ್ಕೆ ತುಸು ಲೌಕಿಕ ವಿನೋದದ ಮತ್ತು ಲಘುತ್ವದ ಹರ್ಷವನ್ನುಂಟುಮಾಡುತ್ತಿದ್ದನು." ('ನೆನಪಿನ ದೋಣಿಯಲ್ಲಿ,' ಪು. ೫೪೫.) ಕಾಯಿಲೆಯಿಂದ ಚೇತರಿಸಿಕೊಳ್ಳುತ್ತಿದ್ದ ಕಾಲದಲ್ಲಿ ತಾವು ಅನೇಕ ಮಕ್ಕಳ ಪದ್ಯಗಳನ್ನು ಬರೆದರೆಂದೂ, ಅವುಗಳಲ್ಲಿ ಅನೇಕ ಕಡೆ ಅವನ ಹೆಸರು ಬರುವುದೆಂದೂ (ಉದಾ: ಅಮ್ಮನ ಮೂರ್ತಿ, ಮೂರ್ತಿಯ ಚಂದ್ರ, ಮೂರ್ತಿಯ ವಿಜ್ಞಾನ, ಇತ್ಯಾದಿ) ಕುವೆಂಪು ಹೇಳುತ್ತಾರೆ.

ಬ್ರೌನಿಂಗ್ ಪದ್ಯಕ್ಕೂ, ಕುವೆಂಪು ಪದ್ಯಕ್ಕೂ ಇರುವ ಒಂದು ಮುಖ್ಯ ವ್ಯತ್ಯಾಸ ಇದು: ಬ್ರೌನಿಂಗನ ಪದ್ಯದಲ್ಲಿ ಒಂದು ಚಾರಿತ್ರಿಕ ಘಟನೆಗೆ ಸಂಬಂಧವಿದೆ. ಆದರೆ, ಕುವೆಂಪು ಪದ್ಯ ಒಂದು ಸಂಪೂರ್ಣ ಮಿಥಕ. ಈ ಕಥೆ ನಮ್ಮದಲ್ಲವಾದ್ದರಿಂದ, ಅದಕ್ಕೆ ಈ ಚಾರಿತ್ರಿಕ ಸಂಬಂಧ ಕೊಟ್ಟಿದ್ದಿದ್ದರೆ ತಪ್ಪಾಗುತ್ತಿತ್ತು. ಹಾಗೆ ಕೊಡದಿರುವುದರಿಂದ ಅದು ಚರಿತ್ರೆಯ ಬಗ್ಗೆ ಔದಾಸೀನ್ಯ ತೋರುವ ನಮ್ಮ ಭಾರತೀಯ ಸಂಪ್ರದಾಯಕ್ಕೆ ಇನ್ನೂ ಚೆನ್ನಾಗಿ ಒಗ್ಗಿಕೊಂಡಿದೆ ಎಂದೂ ಹೇಳಬಹುದು.

ಬ್ರೌನಿಂಗ್ ಸೂಚಿಸುವ ಚಾರಿತ್ರಿಕ ಘಟನೆ ಯಾವುದು ? ಬ್ರೌನಿಂಗನ ಪದ್ಯದ ಕೊನೆಯಲ್ಲಿ ಹೀಗೆ ಬರುತ್ತದೆ :

They made a decree that lawyers never
 should think their records dated duly
If, after the day of the month and year,
These words did not as well appear,
""And so long after what happened here
 On the twenty-second of July,
thirteen hundred and seventy-six."

ಅಂದರೆ, ಈ ಪೈಡ್ ಪೈಪರನ್ ಪ್ರಸಂಗ ನಡೆದಮೇಲೆ, ಆ ಊರಿನ ಪೌರಸಭೆ ಹೀಗೊಂದು ಶಾಸನ ಮಾಡಿತಂತೆ: ಇನ್ನುಮೇಲೆ ವಕೀಲರು ತಯಾರಿಸುವ ಯಾವ ವ್ಯವಹಾರಪತ್ರಗಳಲ್ಲೂ, ದಿನ, ತಿಂಗಳು, ವರ್ಷದ ಜೊತೆಗೆ, ಒಂದು ಸಾವಿರದ ಮುನ್ನೂರ ಎಪ್ಪತ್ತ-ಆರನೆಯ ವರ್ಷ ಜುಲೈ ಇಪ್ಪತ್ತ-ಎರಡನೆಯ ದಿನದಂದು ನಡೆದ ಈ ಪ್ರಸಂಗ ಕಳೆದು ಇಷ್ಟು ದಿನಗಳಾದ ಮೇಲೆ ಎಂಬುದನ್ನೂ ಸೂಚಿಸದಿದ್ದರೆ, ಆ ವ್ಯವಹಾರಪತ್ರಗಳ ತಾರೀಖನ್ನು ಸಮರ್ಪಕವಾಗಿ ನಮೂದಿಸಿಲ್ಲವೆಂದು ತಿಳಿಯತಕ್ಕದ್ದು - ಎಂದು.

ಹಾಗಾದರೆ, ಹ್ಯಾಮೆಲಿನ್ ಊರಿನಲ್ಲಿ ನಿಜವಾಗಿಯೂ ಇಂಥ ಘಟನೆಯೇನಾದರೂ ಆಯಿತೆ? ಆ ಊರಿನಲ್ಲಿ ಇದಕ್ಕೆ ಏನಾದರೂ ದಾಖಲೆ ಇದೆಯೆ ? ಜುಲೈ ೨೨, ೧೩೭೬ ರಂದು ಬಣ್ಣಬಣ್ಣದ ಬಟ್ಟೆ ತೊಟ್ಟ ಜಾದೂ ವಾದ್ಯಗಾರನೊಬ್ಬ ತನ್ನ ವಾದ್ಯ ಊದಿ ಇಲಿಗಳನ್ನು ಅಲ್ಲಿನ ಮಕ್ಕಳನ್ನು ತನ್ನೊಂದಿಗೆ ಕರೆದುಕೊಂಡು ಹೊರಟುಹೋದನೆ? ಅದನ್ನು ತಿಳಿಯಲು ನಾವೀಗ ಹ್ಯಾಮೆಲಿನ್ ಊರಿಗೇ ಹೋಗಬೇಕು.

## ಜರ್ಮನಿಯ ಹ್ಯಾಮೆಲ್ನ್ ಅಥವಾ ಹ್ಯಾಮೆಲಿನ್ ಊರು

ಪದ್ಯದ ಮೊದಲಲ್ಲಿ ಬ್ರೌನಿಂಗ್ ಹೀಗೆ ಹೇಳುತ್ತಾನೆ :

HAMELIN Town's in Brunswick,
        by famous Hanover city;
The river Weser, deep and wide,
Washes its walls on the southern side;

ಭೂಪಟ ತೆಗೆದು ನೋಡಿದರೆ, ಉತ್ತರ ಜರ್ಮನಿಯ ಹ್ಯಾನೊವರ್ ನಗರಕ್ಕೆ ಸುಮಾರು ೫೦ ಕಿ.ಮೀ. ದಕ್ಷಿಣಕ್ಕೆ, ವೇಜ಼ರ್ ನದಿಯ ಪಕ್ಕದಲ್ಲಿ ಹಾಮೆಲ್ನ್ Hameln ಎಂಬ ಊರಿದೆ (ಅಕ್ಷಾಂಶಃ ೫೨.೦೬ ಉ, ರೇಖಾಂಶ; ೯.೨೩ ಪೂ). (ಈ ಹಾಮೆಲ್ನ್ ಎಂಬ ಹೆಸರೇ ಇಂಗ್ಲಿಷಿನಲ್ಲಿ Hamelin ಆಗಿದೆ.) ಆ ಊರಿನ ಬಗ್ಗೆ ತಿಳಿಯಬೇಕಾದರೆ, ಈ ಜೋಗಿಯ ಕತೆಗೆ ಏನಾದರೂ ಆಧಾರವಿದೆಯೆ ತಿಳಿಯಬೇಕಾದರೆ, ನೀವು ಮತ್ತೊಮ್ಮೆ ಮೂಷಿಕವೊಂದರ ಸಹಾಯ ಪಡೆಯಬೇಕು! ಅಂದರೆ, ಇಂಟರ್‌ನೆಟ್ಟಿನಲ್ಲಿ www.hameln.com ಅನ್ನು ಕ್ಲಿಕ್ಕಿಸಿದರೆ, ನಿಮಗೆ ಆ ಊರಿನ ಚರಿತ್ರೆಯೆಲ್ಲ ಸಿಕ್ಕುತ್ತದೆ. (ನೋಡಿ, ಈಗ ಮತ್ತೊಮ್ಮೆ ಇಲಿಗಳ ಕಾಲ ಬಂದಿದೆ, E–ಲಿ ಗಳ ಕಾಲ! ನಾವು ಮತ್ತೊಮ್ಮೆ ಕಿಂದರಿಜೋಗಿಯನ್ನು ಕರೆಸುವ ಸಂದರ್ಭ ಮಾತ್ರ ಬಾರದೆ ಇರಲಿ!) ಅಲ್ಲಿ ಕಂಡ ಕೆಲವು ಅಂಶಗಳನ್ನು ನಿಮಗೆ ತಿಳಿಸುತ್ತೇನೆ.

ಹ್ಯಾಮೆಲ್ನ್ ಒಂದು ಚಿಕ್ಕ ಊರಾದರೂ, ಚಾರಿತ್ರಿಕ ಊರು. ಕೆಳಗಿನ ಸ್ಯಾಕ್ಸನಿ ಪ್ರಾಂತದ ರಾಜಧಾನಿ. ಈಗಿನ ಜನಸಂಖ್ಯೆ ಸುಮಾರು ೬೦,೦೦೦. ಈ ಊರು ಒಂದು ದೊಡ್ಡ ಪ್ರವಾಸಿ ಕೇಂದ್ರ, ಬಹುಶಃ ಈ ಕತೆಯಿಂದಾಗಿ. ಪ್ರತಿ ವರ್ಷ ಅಲ್ಲಿ ನಡೆಯುವ Pied Piper ಕತೆಯ ಬಯಲು ನಾಟಕ ನೋಡಲು, ಸಂಗೀತ ರೂಪಕ ನೋಡಲು ಸಹಸ್ರಾರು ಜನ ಸೇರುತ್ತಾರೆ.

ಈ ಊರಿನಲ್ಲಿ ಎಲ್ಲೆಲ್ಲಿ ಹೋದರೂ ನಿಮಗೆ Pied Piper ಕತೆಯನ್ನು ಜ್ಞಾಪಿಸುವ ಏನಾದರೂ ಉಲ್ಲೇಖ, ಚಿತ್ರ ಇತ್ಯಾದಿ ಕಣ್ಣಿಗೆ ಬೀಳುತ್ತದೆ. ೧೬೦೨/೦೩ ರಲ್ಲಿ ಕಟ್ಟಿದ Pied Piper House ಎಂಬ ಮನೆ ಇರುವುದಲ್ಲದೆ, ಊರಿನ ಕಾರಂಜಿಗಳು, ಚರ್ಚಿನ ಬಣ್ಣದ ಗಾಜಿನ ಕಿಟಕಿಗಳು, ಅಲ್ಲೆಲ್ಲ ಈ ಕತೆಗೆ ಸಂಬಂಧಪಟ್ಟ ಚಿತ್ರಗಳಿವೆ. ಆ ಊರ ಜನಕ್ಕೆ

ಇದೊಂದು ಮರೆಯಲಾಗದ ದುರ್ಘಟನೆ. ಊರಿನ ಮಕ್ಕಳೆಲ್ಲ ಒಮ್ಮೆಲೇ ಅದೃಶ್ಯರಾದದ್ದು ಎಂಥ ದಾರುಣ ಪ್ರಸಂಗ! ಅದು ಎಲ್ಲೇ ಆದರೂ, ಯಾರಿಗೇ ಆದರೂ ಕರುಳು ಕತ್ತರಿಸುವಂಥ ವಿಷಯ!

Pied Piper Houseನ ಗೋಡೆಯ ಮೇಲೆ ಹೀಗೊಂದು ಉಲ್ಲೇಖವಿದೆ:

"೧೨೮೪ನೆಯ ವರ್ಷದಲ್ಲಿ ಸಂತರು ಜಾನ್ ಮತ್ತು ಪಾಲರ ದಿನದಂದು, ಎಂದರೆ ಜೂನ್ ೨೬ರಂದು, ಬಣ್ಣಬಣ್ಣದ ಬಟ್ಟೆಯನ್ನು ತೊಟ್ಟ ವಾದ್ಯಗಾರನೊಬ್ಬ ಈ ಹ್ಯಾಮೆಲ್ನ್ ಊರಿನಲ್ಲಿ ಹುಟ್ಟಿದ ೧೩೦ ಮಕ್ಕಳನ್ನು ಸಂಮ್ಮೋಹನಗೊಳಿಸಿದ. ಅವರೆಲ್ಲ ಕೊಪೆನ್ ಬಳಿ ಇರುವ ಕ್ಯಾವೆಲ್‌ರೀ ಬಳಿ ಅದೃಶ್ಯರಾದರು."

ಕಾವೆಲ್‌ರೀ ಎಂಬುದು ಅಲ್ಲಿನ ವಧಾಸ್ಥಾನ. ಇಲ್ಲಿ ಎರಡು ವಿಷಯಗಳನ್ನು ಗಮನಿಸಬಹುದು: ೧. ಇಲ್ಲಿ ಇಲಿಗಳ ಮಾತೇ ಬಂದಿಲ್ಲ ೨. ಬ್ರೌನಿಂಗನ ಪದ್ಯದಲ್ಲಿ ಜೂನ್ ೨೨ ಎಂಬ ದಿನಾಂಕ ಮೇಲೆ ಹೇಳಿದ ಜುಲೈ ೨೬ಕ್ಕೆ ಹತ್ತಿರವಾದರೂ, ವರ್ಷ ೧೩೭೬ ಎಂದಿದೆ, ೧೨೮೪ ಅಲ್ಲ.

ಈ ಕತೆಯ ಪ್ರಕಾರ ಇಲಿಗಳ ಕಾಟದಿಂದಾಗಿಯೇ ಜೋಗಿ ಬಂದದ್ದು, ಅವನ್ನು ನಾಶಪಡಿಸಿದ್ದಕ್ಕೆ ತನಗೆ ಮಾತಿನ ಪ್ರಕಾರ ಸಲ್ಲಬೇಕಾಗಿದ್ದ ವರಹಗಳನ್ನು ಕೊಡದೆ ಹೋದದ್ದರಿಂದ ಜೋಗಿ ಆ ಊರಿನ ಮಕ್ಕಳನ್ನೆಲ್ಲ ತನ್ನ ಹಿಂದೆ ಕರೆದುಕೊಂಡು ಹೋದ, ಎಂದು. ಆದರೆ, ಈ ಮೇಲಿನ ಉಲ್ಲೇಖದಲ್ಲಿ ಇಲಿಗಳ ಪ್ರಸ್ತಾಪ ಏಕೆ ಬಂದಿಲ್ಲ ? ಕೆಲವು "ಪೈಡ್ ಪೈಪರ್" ವಿದ್ವಾಂಸರು ಹೇಳುವುದು, ಜೋಗಿಯೊಬ್ಬ ಆ ಊರಿನ ಮಕ್ಕಳನ್ನು ತನ್ನೊಡನೆ ಕರೆದುಕೊಂಡು ಹೋದದ್ದು ನಿಜ ಸಂಗತಿ, ಇಲಿಗಳ ಮಾತು ಈ ಕತೆಯಲ್ಲಿ ಸೇರಿದ್ದು ಅದಾದ ಸುಮಾರು ೨೦೦-೩೦೦ ವರ್ಷಗಳಾದಮೇಲೆ, ಎಂದು. ಇಲಿಗಳ ಮಾತು ಅಲ್ಲಿ ಸೇರಲು ಕಾರಣ? ಹದಿನಾಲ್ಕನೆಯ ಶತಮಾನದಲ್ಲಿ ಯೂರೋಪಿನಲ್ಲೆಲ್ಲ ಒಂದು ಭಯಂಕರ ಪ್ಲೇಗುಮಾರಿ (black plague) ಬಂದು ಲಕ್ಷಾಂತರ ಜನ ಅದಕ್ಕೆ ತುತ್ತಾದರು. ಸಾವಿರಾರು ಮಕ್ಕಳು, ಯುವಕರು ಅದಕ್ಕೆ ಬಲಿಯಾದರು. ಜನರಿಂದ ಜನಕ್ಕೆ ಹರಡುತ್ತಿದ್ದ ಈ ಪಿಡುಗನ್ನು ಹೇಗೆ ನಾಶಪಡಿಸುವುದು ಎಂಬುದು ಬಹು ದೊಡ್ಡ ಚಿಂತೆಯಾಗಿದ್ದಿರಬೇಕು ಜನರ ಮನಸ್ಸಿನಲ್ಲಿ. ಈ ಪಿಡುಗಿನ ಸಾಂಕೇತಿಕ ನಿರೂಪಣೆ ಈ ಕತೆಯಲ್ಲಿ ಇಲಿಗಳ ಕಾಟದ ರೂಪದಲ್ಲಿ ಬಂದಿದೆ ಎಂದು ಹಲವರು ಅಭಿಪ್ರಾಯಪಡುತ್ತಾರೆ. ಕಿಂದರಿಜೋಗಿ ಬಂದು ತಮ್ಮ ಮಕ್ಕಳನ್ನು ಅಪಹರಿಸಿದ್ದು, ಪ್ಲೇಗುಮಾರಿ ಬಂದು ತಮ್ಮ ಮಕ್ಕಳನ್ನು ಆಹುತಿ ತೆಗೆದುಕೊಂಡದ್ದು ಎರಡನ್ನೂ ಸೇರಿಸಿ ಹೆಣೆದಿದೆ ಈ ಕತೆ. ಇನ್ನು ಇಸವಿಯ ವಿಷಯ. ಈ ಕತೆ ಯೂರೋಪಿನಲ್ಲಿ ಹರಡಿ ಬೆಳೆದಂತೆಲ್ಲ ಹ್ಯಾಮೆಲ್ನ್ ಅಲ್ಲದೆ ಇತರ ಊರುಗಳೂ ಇದು ತಮ್ಮ ಊರಿನಲ್ಲೇ ಆದದ್ದು ಎಂದು ಹೇಳಿಕೊಳ್ಳುತ್ತ, ಆ ಕತೆಯನ್ನು ತಮ್ಮ ಸ್ಥಳಪುರಾಣಗಳಿಗೆ ಸೇರಿಸಿಕೊಳ್ಳುತ್ತ, ಇಸವಿಯನ್ನೂ ವ್ಯತ್ಯಾಸಮಾಡಿದ್ದಾರೆ. ಉದಾಹರಣೆಗೆ, "The Rats in Neusadt-Eberswalde" ಎಂಬ ಕತೆಯಲ್ಲಿ ಈ

ಘಟನೆ ೧೬೦೭-೦೮ ರಲ್ಲಿ ನಡೆಯಿತೆಂದು ಹೇಳಿದೆ. The Rat Catcher from Magdalenagrund ಕತೆಯಲ್ಲಿ ಈ ಘಟನೆ ಆಸ್ಟ್ರಿಯಾದ ವಿಯೆನ ನಗರದ ಪಕ್ಕದಲ್ಲಿರುವ Korneuberg ಎಂಬಲ್ಲಿ ೧೬೪೬ರ ಸುಮಾರಿನಲ್ಲಿ (ಆಸ್ಟ್ರಿಯ, ಸ್ವೀಡನ್ನುಗಳ ನಡುವೆ ಆದ ೩೦ ವರ್ಷದ ಯುದ್ಧದ ಸಮಯದಲ್ಲಿ) ನಡೆಯಿತೆಂದು ಹೇಳಿದೆ. ಈ ಕತೆ ಯೂರೋಪಿನಲ್ಲಿ ಮಾತ್ರವಲ್ಲ, ಸಿರಿಯ, ಚೈನಾಗಳಲ್ಲೂ ಪ್ರಚಾರದಲ್ಲಿದೆ.

### ಕತೆಯ ಮೂಲ

ಈ ಕತೆಯ ಬಗ್ಗೆ ನಮಗೆ ದೊರೆತಿರುವ ಅತ್ಯಂತ ಹಳೆಯ ಮಾಹಿತಿಯೆಂದರೆ, ಸುಮಾರು ೧೪೩೦-೧೪೫೦ರಲ್ಲಿ ಲ್ಯಾಟಿನ್‌ನಲ್ಲಿ ಲೂನೆಬರ್ಗ್ ಊರಿನ ಒಂದು ಹಳೆಯ ಗ್ರಂಥಕ್ಕೆ ಸೇರಿಸಿದ ಒಂದು ದಾಖಲೆ. ಹಾಮೆಲ್ನ್‌ನ ಚರ್ಚೊಂದರಲ್ಲಿ ೧೩೦೦ಕ್ಕೂ ಹಿಂದೆ ಬರೆದ ಒಂದು ಕಿಟಕಿ ಗಾಜಿನ ಚಿತ್ರದಲ್ಲಿ ಈ ಕತೆಯ ಬಗ್ಗೆ ಉಲ್ಲೇಖವಿತ್ತು ಎನ್ನುತ್ತಾರೆ ಕೆಲವರು. ಆ ಚಿತ್ರ ಈಗಿಲ್ಲ. ೧೬೬೦ರಲ್ಲಿ ಆ ಕಿಟಕಿಯನ್ನು ದುರಸ್ತುಗೊಳಿಸಿದಾಗ ಆ ಗಾಜನ್ನು ಬದಲಾಯಿಸಿದರು, ಅದರ ಜೊತೆಗೆ ಉಲ್ಲೇಖವೂ ಹೋಯಿತು.

ಯೂರೋಪಿನ ಜಾನಪದ ಕಥಾಸಂಗ್ರಹಗಾರರಲ್ಲಿ ಅತ್ಯಂತ ಹೆಸರುವಾಸಿಯಾದ ಜೇಕಬ್ ಮತ್ತು ವಿಲ್ಹೆಲ್ಮ್ ಗ್ರಿಮ್ಸ್ ಸಹೋದರರು ತಮಗೆ ಸಿಕ್ಕ ಹನ್ನೊಂದು ಮೂಲಗಳನ್ನು ಪರೀಕ್ಷಿಸಿ ಈ ಕತೆಯನ್ನು "Der Rattenfanger" ಅಥವ The Rat Catcher ಎಂಬ ಹೆಸರಿನಲ್ಲಿ ಕೆಳಕಂಡಂತೆ ಸಂಗ್ರಹಿಸಿದ್ದಾರೆ (೧೮೧೬):

"ವರ್ಷ ೧೨೮೪ರಲ್ಲಿ ಹ್ಯಾಮೆಲ್ನ್ ನಗರದಲ್ಲಿ ಒಬ್ಬ ರಹಸ್ಯ ಪುರುಷ ಕಾಣಿಸಿಕೊಂಡ. ಅವನೊಂದು ಬಗೆಯ ವಾದ್ಯ ಊದುತ್ತಿದ್ದ. ಬಣ್ಣಬಣ್ಣದ ನಿಲುವಂಗಿಯನ್ನು ತೊಟ್ಟದ್ದರಿಂದ ಎಲ್ಲರೂ ಅವನನ್ನು ಬಣ್ಣದ ತೊಡಿಗೆಯ ವಾದಕ (Pied Piper) ಎಂದೇ ಕರೆಯುತ್ತಿದ್ದರು. ಇಲಿಗಳನ್ನು ನಾಶಪಡಿಸುವುದರಲ್ಲಿ ತಾನೊಬ್ಬ ದೊಡ್ಡ ಪ್ರವೀಣನೆಂದೂ, ತನಗೆ ಇಂತಿಷ್ಟು ವರಹಗಳನ್ನು ಕೊಟ್ಟರೆ ತಾನು ಆ ಊರಿನಲ್ಲಿ ಉಪದ್ರವ ಕೊಡುತ್ತಿದ್ದ ಇಲಿ ಹೆಗ್ಗಣಗಳನ್ನೆಲ್ಲ ನಾಶಮಾಡುವುದಾಗಿಯೂ ಹೇಳಿದ. ಊರಿನ ಜನ ಅವನೊಡನೆ ಮಾತನಾಡಿ ಒಂದು ಒಪ್ಪಂದ ಮಾಡಿಕೊಂಡು, ಅವನು ಇಲಿಗಳನ್ನೆಲ್ಲ ನಾಶಪಡಿಸಿದರೆ, ಅವನಿಗೆ ಇಂತಿಷ್ಟು ಹಣ ಕೊಡುವೆವೆಂದರು. ಆಗ ಆ ಇಲಿ ನಾಶಕ ತನ್ನ ಜೇಬಿನಿಂದ ಒಂದು ಸಣ್ಣ ರಣಗೊಳಲನ್ನು ತೆಗೆದು ಅದನ್ನು ಊದಲು ಪ್ರಾರಂಭಿಸಿದ. ಕೂಡಲೆ ಇಲಿಗಳು ಹೆಗ್ಗಣಗಳು ಪ್ರತಿಯೊಂದು ಮನೆಯಿಂದಲೂ ಹೊರಬಂದು ಅವನ ಹಿಂದೆ ಸೇರಿಕೊಂಡವು. ಎಲ್ಲವೂ ಬಂದುವೆಂದು ಖಾತ್ರಿಯಾದಮೇಲೆ, ಅವನು ಅವನ್ನೆಲ್ಲ ವೇಜ಼ರ್ ನದಿಯ ಬಳಿಗೆ ಕರೆದೊಯ್ದು, ತನ್ನ ಉಡಿಗೆಯನ್ನು ಒದ್ದೆಯಾಗದಂತೆ ಮೇಲಕ್ಕೆತ್ತಿಕೊಂಡು, ನೀರಿನಲ್ಲಿಳಿದ. ಇಲಿ ಹೆಗ್ಗಣಗಳೆಲ್ಲವೂ ಅವನ ಹಿಂದೆ ಹೋಗುತ್ತ ನೀರಲ್ಲಿ ಬಿದ್ದು ಮುಳುಗಿ ಸತ್ತವು.

ಇಲಿ ಹೆಗ್ಗಣಗಳೇನೋ ಹೋದುವು, ಆದರೆ ಜನಕ್ಕೆ ಇವನಿಗೆ ಇಷ್ಟೊಂದು ಹಣ ಕೊಡುತ್ತೇವೆಂದು ಒಪ್ಪಿಕೊಳ್ಳಬಾರದಿತ್ತು ಎನಿಸಿ, ಏನೇನೋ ಕಾರಣಗಳನ್ನೊಡ್ಡಿ ಅವನಿಗೆ ಅಷ್ಟು ಹಣ ಕೊಡದಿರಲು ಉಪಾಯ ಹೂಡಿದರು. ಕಡೆಗೆ ಅವನೇನೋ ಹೊರಟುಹೋದ, ಆದರೆ ಅವನ ಮನಸ್ಸು ಇವರು ಮಾಡಿದ ಅನ್ಯಾಯದಿಂದ ರೋಸಿತ್ತು. ಅವರ ಬಗ್ಗೆ ತುಂಬ ರೋಷವುಕ್ಕಿತ್ತು. ಜೂನ್ ೨೬ರಂದು ಅವನು ಮತ್ತೆ ಬಂದ. ಆ ದಿನ ಸಂತರು ಜಾನ್ ಮತ್ತು ಪಾಲರ ಪುಣ್ಯದಿನ. ಆ ದಿನ ಅವನು ಬೆಳಿಗ್ಗೆ ಏಳಕ್ಕೇ ಬಂದ (ಕೆಲವರು ಹನ್ನೆರಡಕ್ಕೆ ಬಂದ ಎಂದು ಹೇಳುತ್ತಾರೆ). ಅವನ ಮುಖದಮೇಲೆ ಒಂದು ಭೀಕರ ಕಳೆಯಿತ್ತು. ಅವನೊಂದು ಬೇಟೆಗಾರನ ವೇಷ ಧರಿಸಿದ್ದ. ಅವನ ತಲೆಯ ಮೇಲೆ ವಿಲಕ್ಷಣವಾದ ಒಂದು ಕೆಂಪು ಟೋಪ್ಪಿಗೆಯಿತ್ತು. ರಸ್ತೆಯಲ್ಲಿ ಬಂದು ಮತ್ತೆ ತನ್ನರಣಗೊಳಲನ್ನು ಊದಿದ. ಆದರೆ, ಈ ಸಲ ಬಂದದ್ದು ಇಲಿ ಹೆಗ್ಗಣಗಳಲ್ಲ, ಮಕ್ಕಳು - ನಾಲ್ಕು ವಯಸ್ಸಿಗೆ ಮೇಲಿನ ಹುಡುಗ ಹುಡುಗಿಯರು. ಅವರ ಪೈಕಿ ಅಲ್ಲಿನ ನಗರಾಧ್ಯಕ್ಷನ ಮಗಳೂ ಇದ್ದಳು. ಈ ಗುಂಪು ಅವನ ಹಿಂದೆ ನಡೆಯಿತು. ಎಲ್ಲರೂ ಅಲ್ಲೊಂದು ಬೆಟ್ಟದ ಬಳಿಗೆ ಹೋಗಿ ಅಲ್ಲಿ ಅದೃಶ್ಯರಾದರು.

ಹೀಗಾಯಿತೆಂದು ಹೇಳಿದವಳು ಒಬ್ಬ ದಾದಿ. ಮಗುವೊಂದನ್ನು ನೋಡಿಕೊಳ್ಳುತ್ತಿದ್ದ ಅವಳು, ಆ ಗುಂಪಿನಲ್ಲೇ ಹೋಗಿ, ಆಮೇಲೆ ಹಿಂತಿರುಗಿ ಇತರರಿಗೆ ಈ ಸಮಾಚಾರ ಮುಟ್ಟಿಸಿದಳು. ಈ ಸುದ್ದಿ ಕೇಳಿ ಕಂಗೆಟ್ಟ ತಂದೆತಾಯಿಯರು ತಮ್ಮ ಮಕ್ಕಳನ್ನರಸಿ ಊರ ಬಾಗಿಲಿಗೆ ಓಡಿದರು. ತಾಯಂದಿರು ತಮ್ಮ ಮಕ್ಕಳನ್ನು ಹೆಸರಿಟ್ಟು ಕರೆಯುತ್ತ ಗೋಳಿಟ್ಟರು. ಮುಂದಿನ ಒಂದು ಗಂಟೆ ಕಳೆಯುವಷ್ಟರಲ್ಲಿ, ಜನ ಭೂಜಲಮಾರ್ಗದಲ್ಲಿ ದೂತರನ್ನಟ್ಟಿ ತಮ್ಮ ಮಕ್ಕಳನ್ನು ಹುಡುಕಿಸಿದರು. ಆದರೆ ಮಕ್ಕಳು ಎಲ್ಲೂ ಅವರ ಕಣ್ಣಿಗೆ ಬೀಳಲಿಲ್ಲ.

ಒಟ್ಟಿನಲ್ಲಿ ಅಂದು ೧೩೦ ಮಕ್ಕಳು ಕಣ್ಮರೆಯಾದರು. ಇಬ್ಬರು ಮಾತ್ರ, ಕೆಲವರು ಹೇಳುವಂತೆ, ಮರಳಿ ಬಂದರು. ಆ ಇಬ್ಬರಲ್ಲಿ ಒಬ್ಬ ಕುರುಡ, ಇನ್ನೊಬ್ಬ ಮೂಗ (ಅಥವಾ ಮೂಗಿ). ಕುರುಡನಿಗೆ ಅವರು ಎಲ್ಲಿ ಹೋದರೆಂದು ತೋರಿಸಲು ಆಗಲಿಲ್ಲ, ಆದರೆ ತಾವೆಲ್ಲ ಹೇಗೆ ಆ ಮಾಯಾಪುರುಷನ ಹಿಂದೆ ಹೋದೆವು ಎಂಬುದನ್ನು ಹೇಳಿದ. ಮೂಗ ಅವರು ಹೋದ ಸ್ಥಳವನ್ನೇನೋ ತೋರಿಸಿದ, ಆದರೆ ಅವನಿಗೆ ಆ ಮಾಯಾಪುರುಷ ನುಡಿಸಿದ ಸಂಗೀತ ಏನೂ ಕೇಳಿಸಿರಲಿಲ್ಲ. ಮತ್ತೊಬ್ಬ ಚಿಕ್ಕ ಹುಡುಗ, ಕೋಟಿಲ್ಲದೆ ಬರಿಯ ಅಂಗಿ ತೊಟ್ಟಿದ್ದವನೊಬ್ಬ, ಇತರರ ಜೊತೆ ಹೋಗಿದ್ದವನು ತನ್ನ ಕೋಟು ತೆಗೆದುಕೊಂಡು ಹೋಗಲೆಂದು ಹಿಂತಿರುಗಿ ಬಂದ. ಆದರೆ ಅದನ್ನು ತೆಗೆದುಕೊಂಡು ಮತ್ತೆ ಹೋಗುವಷ್ಟರಲ್ಲಿ ಅವರೆಲ್ಲ ಆ ಬೆಟ್ಟದ ಗವಿಯಲ್ಲಿ ಕಣ್ಮರೆಯಾಗಿದ್ದರು. ಅವರು ಹೋದ ಗವಿಯನ್ನು ಅಲ್ಲಿನ ಜನ ಈಗಲೂ ತೋರಿಸುತ್ತಾರೆ.

ಹದಿನೆಂಟನೆಯ ಶತಮಾನದ ಮಧ್ಯದವರೆಗೂ, ಏಕೆ, ಬಹುಶಃ ಇಂದಿಗೂ ಕೂಡ, ಆ ಮಾಯಾಪುರುಷ ಆ ಬಾಲರನ್ನೆಲ್ಲ ಯಾವ ರಸ್ತೆಯಲ್ಲಿ ಊರ ಹೊರಬಾಗಿಲಿಗೆ

ಕೊಂಡೊಯ್ದನೋ ಆ ರಸ್ತೆ ಒಂದು ನಿಶ್ಶಬ್ದ ಮಾರ್ಗವಾಗಿದೆ, ಏಕೆಂದರೆ ಅಲ್ಲಿ ಎಲ್ಲ ಬಗೆಯ ಸಂಗೀತ ನರ್ತನಗಳನ್ನೂ ನಿಷೇಧಿಸಿದೆ. ಮದುವೆ ಮೆರವಣಿಗೆಯೇನಾದರೂ ಈ ರಸ್ತೆಯ ಬಳಿ ಬಂದರೆ, ಕೂಡಲೆ ವಾದ್ಯಗಾರರೆಲ್ಲ ಆ ರಸ್ತೆ ದಾಟುವವರೆಗೂ ವಾದ್ಯ ನುಡಿಸುವುದನ್ನು ನಿಲ್ಲಿಸುತ್ತಾರೆ. ಮಕ್ಕಳೆಲ್ಲ ಅದೃಶ್ಯರಾದ ಬೆಟ್ಟದ ಗವಿಯ ಜಾಗವನ್ನು ಪೋಪೆನ್‌ಬರ್ಗ್ ಎಂದು ಕರೆಯುತ್ತಾರೆ. ಆ ಗವಿಯ ಇಕ್ಕೆಲಗಳಲ್ಲಿ, ಕ್ರಾಸಿನ ಆಕಾರದಲ್ಲಿ, ಎರಡು ಕಲ್ಲಿನ ಸ್ಮಾರಕಗಳನ್ನು ನಿರ್ಮಿಸಿದ್ದಾರೆ, ಒಂದು ಗವಿಯ ಬಲಗಡೆ, ಇನ್ನೊಂದು ಎಡಗಡೆ. ಗವಿಯಲ್ಲಿ ಹೋದ ಆ ಮಕ್ಕಳು ಮತ್ತೆ ಟ್ರಾನ್ಸಿಲ್ವೇನಿಯಾದಲ್ಲಿ ಹೊರಬಂದರು ಎಂದೂ ಕೆಲವರು ಹೇಳುತ್ತಾರೆ.

ಹ್ಯಾಮೆಲ್ನ್‌ನ ಜನ ತಮ್ಮ ಊರ ದಫ್ತರಿನಲ್ಲಿ ಅಂದು ನಡೆದ ಸಂಗತಿಯನ್ನು ದಾಖಲೆ ಮಾಡಿದರು. ಆ ಮುಂದೆ ತಮ್ಮ ಊರಿನ ಎಲ್ಲ ಘೋಷಣೆ ಪ್ರಕಟಣೆಗಳ ತಾರೀಖನ್ನೂ ತಾವು ತಮ್ಮೂರಿನ ಮಕ್ಕಳನ್ನು ಕಳೆದುಕೊಂಡ ಆ ಘಟನೆಯ ಆಧಾರದ ಮೇಲೆ ನಿಗದಿ ಮಾಡಿ ಮೊದಲಿಟ್ಟರು.

ಸೆಫ್ರೈಡ್ ಪ್ರಕಾರ, ಈ ಘಟನೆ ನಡೆದದ್ದು ಜೂನ್ ೨೨ರಂದು, ೨೬ ಅಲ್ಲ.

ನಗರಸಭೆ ಗೋಡೆಯಮೇಲೆ ಈ ಕೆಳಗಿನ ಉಲ್ಲೇಖವಿದೆ:

ಕ್ರಿಸ್ತ ಶಕ ೧೨೮೪ರಲ್ಲಿ
ಈ ಊರಿನಲ್ಲಿ ಹುಟ್ಟಿದ
೧೩೦ ಮಕ್ಕಳನ್ನು
ವಾದ್ಯಗಾರನೊಬ್ಬ ಈ ಬೆಟ್ಟದ ಗವಿಯಲ್ಲಿ
ಕಣ್ಮರೆಯಾಗಿಸಿದ.

ಆ ಊರಿನ ದಿಡ್ಡೀಬಾಗಿಲಮೇಲೆ, ಈ ದ್ವಾರವನ್ನು ಜಾದೂಗಾರನೊಬ್ಬ ಇಲ್ಲಿನ ೧೩೦ ಮಕ್ಕಳನ್ನು ಕರೆದುಕೊಂಡು ಹೋದ ೨೭೨ ವರ್ಷಗಳಾದಮೇಲೆ ನಿರ್ಮಿಸಲಾಯಿತು ಎಂದು ಬರೆದಿದೆ.

೧೫೭೨ರಲ್ಲಿ, ಅಲ್ಲಿನ ನಗರಾಧ್ಯಕ್ಷ, ಈ ಕತೆಯನ್ನು ತಮ್ಮೂರಿನ ಚರ್ಚಿನ ಕಿಟಕಿಯ ಗಾಜಿನ ಮೇಲೆ ಬರೆಸಿದ. ಆದರೆ ಆ ಬರಹ ಈಗ ಮಾಸಿಹೋಗಿದೆ. ಇದಲ್ಲದೆ, ಈ ಘಟನೆಯ ನೆನಪಾಗಿ, ಒಂದು ನಾಣ್ಯವನ್ನೂ ಅಚ್ಚುಹಾಕಿಸಿದ್ದರು.''

ಗ್ರಿಮ್ಸ್ ಸಹೋದರರು ಈ ಕತೆಗೆ ಬರೆದಿರುವ ಟಿಪ್ಪಣಿಗಳೊಂದರಲ್ಲಿ ಮಾರ್ಟಿನ್ ಶಾಕ್ ಎಂಬುವನು ಈ ಕತೆಯ ಚಾರಿತ್ರಿಕ ಸತ್ಯತೆಯನ್ನು ಒಪ್ಪುವುದಿಲ್ಲ ಎಂದೂ ಸೂಚಿಸಿದ್ದಾರೆ.

ಬ್ರೌನಿಂಗ್ ಕತೆಯಲ್ಲಿ ಆ ಊರಿನ ಪೌರಸಭೆಯವರು ಪೈಡ್ ಪೈಪರನಿಗೆ ತಾವು ಒಪ್ಪಿಕೊಂಡಿದ್ದ ಹಣ ಕೊಡಲು ನಿರಾಕರಿಸಿದರು ಎಂದಿದ್ದರೆ, ಗ್ರಿಮ್ಸ್ ಕತೆಯಲ್ಲಿ ಊರ ಜನವೆಲ್ಲ ಹಾಗೆ ಮಾಡಿದರು ಎಂದಿದೆ. ಗ್ರಿಮ್ಸ್ ಕತೆ ಹೇಳುವಂತೆಯೇ ಆಗಿದ್ದಿರಬಹುದು.

ಊರ ಜನವೆಲ್ಲ ಸೇರಿ ತಾವು ಮಾಡಿದ ತಪ್ಪಿಗೆ ಪಶ್ಚಾತ್ತಾಪ ಪಟ್ಟು ಅಷ್ಟೊಂದು ಸ್ಮಾರಕಗಳನ್ನು ರಚಿಸಿರಬಹುದು.

ಗ್ರಿಮ್ಸ್ ಸಹೋದರರ ಕತೆಯಲ್ಲೂ, ಬ್ರೌನಿಂಗನ ಕತೆಯಲ್ಲೂ ಟ್ರಾನ್ಸಿಲ್ವೇನಿಯಾ ಹೆಸರು ಬರುತ್ತದೆ. ಗ್ರಿಮ್ಸ್ ಸಹೋದರರ ಕತೆಯಲ್ಲಿ ಹ್ಯಾಮೆಲ್ನ್‌ನಲ್ಲಿ ಗವಿಹೊಕ್ಕ ಮಕ್ಕಳು ಟ್ರಾನ್ಸಿಲ್ವೇನಿಯಾದಲ್ಲಿ ಹೊರಬಂದರೆನ್ನುತ್ತಾರೆ ಎಂದಿದೆ. ಬ್ರೌನಿಂಗನ ಕತೆಯಲ್ಲಿ ಟ್ರಾನ್ಸಿಲ್ವೇನಿಯಾದಲ್ಲಿ ಈಗಲೂ ಇರುವ ಒಂದು ಗುಂಪಿನ ಜನ ತಮ್ಮ ಪರಕೀಯವಾಗಿಯೂ ವಿಚಿತ್ರವಾಗಿಯೂ ಕಾಣುವ ಉಡಿಗೆತೊಡಿಗೆಗಳ ಬಗ್ಗೆ ಅದು ಜರ್ಮನಿಯ ಹ್ಯಾಮೆಲ್ನ್ ನಗರದಿಂದ ಬಂದ ತಮ್ಮ ಪೂರ್ವಿಕರಿಂದ ಬಂದದ್ದು ಎಂದು ಹೇಳುತ್ತಾರೆ ಎಂದು ಬರುತ್ತದೆ. ಈ ಟ್ರಾನ್ಸಿಲ್ವೇನಿಯ ಪ್ರದೇಶ (Count Draculaನ ಕತೆ ಕೇಳಿರುವವರಿಗೆ ಈ ಹೆಸರಿನ ಪರಿಚಯ ಇದ್ದೇ ಇರುತ್ತದೆ.) ರುಮೇನಿಯಾದ ಉತ್ತರ ಭಾಗದಲ್ಲಿರುವ ಪ್ರದೇಶ. ಕಾರ್ಪೇತಿಯನ್ ಪರ್ವತಗಳ ಆಗ್ನೇಯ ತುದಿಯಲ್ಲಿದೆ. ಹ್ಯಾಮೆಲ್ನ್ ನಿಂದ ಇಲ್ಲಿಗೆ ಸುಮಾರು ೮೦೦ ಮೈಲುಗಳಾದರೂ ಆಗಬಹುದು. ಅವರನ್ನು ಇಷ್ಟು ದೂರ ಕರೆತರಲು ಕಾರಣ? ಹಿಂದೆ ಈ ಪ್ರದೇಶವನ್ನು ನೆಲೆಗೊಳಿಸಲು ವಾಸ್ತವ್ಯಕ್ಕಾಗಿ ಹೊರದೇಶಗಳಿಂದ ಜನರನ್ನು ನಾನಾ ಉಪಾಯಗಳಿಂದ ಕರೆತರುತ್ತಿದ್ದರೆಂದೂ, ಈ ಕಿಂದರಿಜೋಗಿ ಹಾಗೆ ಜನರನ್ನು ಜಮಾಯಿಸಲು ನೇಮಿಸಲ್ಪಟ್ಟಿದ್ದ ಒಬ್ಬ ದಳ್ಳಾಳಿ ಇರಬಹುದು ಎಂದೂ ಕೆಲವರು ಅನ್ನುತ್ತಾರೆ. ಟ್ರಾನ್ಸಿಲ್ವೇನಿಯಾವರೆಗೂ ಅವರು ಬರಲಿಲ್ಲ, ಜರ್ಮನಿಯ ಪೂರ್ವಕ್ಕಿರುವ ಚೆಕೊಸ್ಲೋವಾಕಿಯಾದ ಮಧ್ಯದಲ್ಲಿರುವ ಮೊರವಿಯಾದಲ್ಲೇ, ಅಂದರೆ ಜರ್ಮನಿಗೂ ರುಮೇನಿಯಾಕ್ಕೂ ಮಧ್ಯೆ, ನಿಂತರು ಎಂದೂ ಕೆಲವರು ಅಭಿಪ್ರಾಯ ಪಡುತ್ತಾರೆ. ಹನ್ನೊಂದು, ಹನ್ನೆರಡು, ಹದಿಮೂರನೆಯ ಶತಮಾನಗಳಲ್ಲಿ ಕ್ರಿಶ್ಚಿಯನ್ನರು ಮುಸ್ಲಿಮರು ಆಕ್ರಮಿಸಿಕೊಂಡಿದ್ದ ತಮ್ಮ ಪವಿತ್ರ ಭೂಮಿಯನ್ನು ಮತ್ತೆ ವಶಪಡಿಸಿಕೊಳ್ಳಲು ನಡೆಸಿದ ಕ್ರೂಸೇಡುಗಳಲ್ಲಿ ಮಕ್ಕಳನ್ನು ಕೂಡ ಉಪಯೋಗಿಸಿಕೊಂಡರು, ಹ್ಯಾಮೆಲ್ನ್‌ನಲ್ಲಿ ನಡೆದ ಪ್ರಕರಣ ಮಕ್ಕಳನ್ನು ಈ ರೀತಿ ಅಪಹರಿಸಿ ಸೈನ್ಯಕ್ಕೆ ಸೇರಿಸಿಕೊಂಡುದರ ಕತೆಯಿರಬಹುದು ಎಂದೂ ಇನ್ನು ಕೆಲವರು ಅಭಿಪ್ರಾಯ ಪಡುತ್ತಾರೆ. ಈ ವಿಷಯದಲ್ಲಿ ವಿದ್ವಾಂಸರ ತರ್ಕ ನಡೆದೇ ಇದೆ, ಯಾವ ಖಚಿತ ತೀರ್ಮಾನವೂ ಆಗಿಲ್ಲ. ಅದಾಗುವವರೆಗೂ ಕತೆಯ ಸ್ವಾರಸ್ಯ ಕುಂದುವುದಿಲ್ಲ!

## ಸಾಹಿತ್ಯ ಕಲಾ ಪ್ರಪಂಚದಲ್ಲಿ ಈ ಕತೆಯ ಸ್ಥಾನ

ನಮ್ಮ ರಂಗಪ್ರಪಂಚದಲ್ಲಿ ಈಚೆಗೆ ಬೊಮ್ಮನಹಳ್ಳಿಯ ಕಿಂದರಿಜೋಗಿಯ ಹಲವು ಪ್ರಯೋಗಗಳು ನಡೆದಿವೆಯೆಂಬುದರ ಬಗ್ಗೆ, ಕನ್ನಡದ ಅತ್ಯಂತ ಪ್ರತಿಭಾವಂತ ಕಲಾವಿದರಲ್ಲೊಬ್ಬರಾದ ಬಿ.ವಿ. ಕಾರಂತರು ಅದನ್ನು ಹಾಡಿದ್ದ ಬಗ್ಗೆ ಹಿಂದೆಯೇ ಹೇಳಿದೆ. ಆದರೂ ಈ ಕತೆಗೆ ನಮ್ಮಲ್ಲಿ ಅದಕ್ಕೆ ಸಲ್ಲಬೇಕಾದಷ್ಟು ಪ್ರಾಶಸ್ತ್ಯ ಸಂದಿಲ್ಲ ಎನ್ನಿಸುತ್ತದೆ.

ಬಾಲಸಾಹಿತ್ಯದಲ್ಲಿ ಅದೊಂದು ಅಮೂಲ್ಯ ಕೃತಿ. ಅಂಥ ಉತ್ತಮ ಕೃತಿಯನ್ನು ನಮ್ಮ ಮಕ್ಕಳಿಗಾಗಿ ಉತ್ತಮ ರೀತಿಯಲ್ಲಿ ಒಳ್ಳೆಯ ಚಿತ್ರಗಳಿಂದ ಕೂಡಿದ ಪ್ರತ್ಯೇಕ ಪುಸ್ತಕವಾಗಿ ಪ್ರಕಟಿಸಬಾರದೆ ಎನ್ನಿಸುತ್ತದೆ. (ಈಚೆಗೇನಾದರೂ ಬಂದಿದ್ದರೆ ಅದು ನನಗೆ ತಿಳಿದಿಲ್ಲ.) ಅಮರ ಚಿತ್ರ ಕಥಾಮಾಲೆಯಲ್ಲೂ ಬಂದಂತೆ ಕಂಡಿಲ್ಲ. ಹಾಗೆ ಕಿಂದರಿಜೋಗಿಯನ್ನೇ ಪ್ರತ್ಯೇಕವಾಗಿ ಒಳಗೊಂಡ ಸಚಿತ್ರ ಪುಸ್ತಕ ನಾನು ಹಿಂದೆ ನೋಡಿದ್ದ ಒಂದೇ ಒಂದು. ಅದು ಮೈಸೂರಿನ ಪ್ರಖ್ಯಾತವಾದ ವಯಸ್ಕರ ಶಿಕ್ಷಣ ಸಮಿತಿಯವರು (ಬಹುಶಃ ೧೯೪೦ರ ದಶಕದ ಕೊನೆಯಲ್ಲಿ?) ಪ್ರಕಟಿಸಿದ್ದ ದಪ್ಪ ಅಕ್ಷರದ ತೆಳು ಹೊದಿಕೆಯ ಪುಸ್ತಕ. ಅದಕ್ಕೆ ಚಿತ್ರಗಳನ್ನು ಬರೆದವರು ಮುಂದೆ ವಿಶ್ವಖ್ಯಾತಿ ಗಳಿಸಿದ ವ್ಯಂಗ್ಯಚಿತ್ರಕಾರ ಆರ್.ಕೆ. ಲಕ್ಷ್ಮಣ್. (ಆಗಿನ್ನೂ ಅವರು ಮೈಸೂರಲ್ಲೇ ಇದ್ದರು.) ಎಂಥ ಉತ್ತಮ ಚಿತ್ರಗಳವು! ಆ ಪುಸ್ತಕವನ್ನು ಯಾರಾದರೂ ಹುಡುಕಿ ತೆಗೆಸಿದರೆ, ಒಂದು ಅಪರೂಪದ ವಸ್ತು ಕೈಗೆ ಸಿಕ್ಕಂತೆ! ಮುದ್ರಣ ಕುಶಲತೆ, ಯಾಂತ್ರಿಕ ಸಹಾಯ ಇಷ್ಟು ಹೆಚ್ಚಾಗಿರುವ ಈ ಕಾಲದಲ್ಲಿ ಅದನ್ನು ಆಕರ್ಷಕವಾಗಿ ಪುನರ್ಮುದ್ರಿಸುವುದು ಏನೇನೂ ಕಷ್ಟದ ಕೆಲಸವಲ್ಲ. ಅದನ್ನು ನಮ್ಮವರು ಕೈಗೆತ್ತಿಕೊಳ್ಳುವರೆಂದು ಆಶಿಸುತ್ತೇನೆ.

ಈ ಕತೆ ನಮ್ಮ ಇತರ ಭಾಷೆಗಳಲ್ಲೂ ಬಂದರೆ ಅದರ ರಂಗಪ್ರಯೋಗ TV, ರೇಡಿಯೋ ಮತ್ತಿತರ ಮಾಧ್ಯಮಗಳ ಮೂಲಕ, ಪುಸ್ತಕಗಳ ಮೂಲಕ, ಎಲ್ಲ ಮಕ್ಕಳಿಗೂ ಹಿರಿಯರಿಗೂ ತಲಪುತ್ತದೆ.

ಯೂರೋಪಿನ ಸಾಹಿತ್ಯ ಮತ್ತು ಕಲಾ ಪ್ರಪಂಚದಲ್ಲಿ ಈ ಕತೆಯ ಪ್ರಭಾವ ಸಾಕಷ್ಟಿದೆ. ಅದು ಇಂಗ್ಲಿಷ್ ಪ್ರಪಂಚಕ್ಕೆ ತಿಳಿದದ್ದು ಬ್ರೌನಿಂಗನ ಪದ್ಯದ ಮೂಲಕ. ಆದರೆ ಈಗ ಆ ಕತೆ ಅದರಜನ್ಮಭೂಮಿಯಾದ ಜರ್ಮನಿಗಿಂತ ಇಂಗ್ಲಿಷ್ ಪ್ರಪಂಚದಲ್ಲೇ ಹೆಚ್ಚು ಜನಪ್ರಿಯವಾಗಿದೆ ಎಂದು ಕೆಲವರು ಹೇಳುತ್ತಾರೆ.

ಕಿಂದರಿಜೋಗಿಯ ತವರೂರು ಹ್ಯಾಮೆಲ್ನ್‌ನಲ್ಲಿ ಪ್ರತಿವರ್ಷವೂ ಬೇಸಿಗೆಯಲ್ಲಿ open-air theaterನಲ್ಲಿ Rats ಎಂಬ ಒಂದು ಸಂಗೀತ ನಾಟಕ ನಡೆಯುತ್ತದೆ. ೧೯೮೪ರಲ್ಲಿ ಈ ಊರು ಪೈಡ್ ಪೈಪರ್ ಪ್ರಕರಣದ ೭೦೦ನೆಯ ವಾರ್ಷಿಕೋತ್ಸವವನ್ನು ನಡೆಸಿತು.

ಜರ್ಮನಿಯ ಪ್ರಖ್ಯಾತ ಕವಿ ಗೈಟೆ ಈ ಕತೆಯನ್ನಾಧರಿಸಿ ಬರೆದ ಪದ್ಯವನ್ನು ಫ್ರಾನ್ಜ್ ಶೂಬರ್ಟ್ ಸಂಗೀತಕ್ಕೆ ಅಳವಡಿಸಿದ್ದಾನೆ. ಅವನ ಕವನದಲ್ಲಿ ಬರುವ ಮಾಯಾಪುರುಷನು ನುಡಿಸುವುದೂ ಒಂದು ತಂತ್ರೀವಾದ್ಯವನ್ನು, ಗಾಳಿಯ ವಾದ್ಯವನ್ನಲ್ಲ. ಹಲವಾರು ಭಾಷೆಗಳಲ್ಲಿ ಅದನ್ನು ಕುರಿತು ಕತೆ ಕಾದಂಬರಿಗಳು, ನಾಟಕಗಳು ಇವೆ. ಯೂರೋಪಿನ ನಾನಾ ಭಾಷೆಗಳಲ್ಲಿ ಮಕ್ಕಳ ಪುಸ್ತಕಗಳಿವೆ. ಮೂಕಿ ಚಿತ್ರಗಳ ಕಾಲದಿಂದ (೧೯೧೧) ಇಲ್ಲಿನವರೆಗೂ ಅನೇಕ ಚಲನಚಿತ್ರಗಳಾಗಿವೆ. ವಾಲ್ಟ್ ಡಿಸ್ನಿ ೧೯೩೪ರಲ್ಲಿ ಈ ಕತೆಯ ಮೇಲೆ

ಒಂದು ಚಿತ್ರ ತಯಾರಿಸಿದ್ದನಂತೆ. ಅನೇಕ ಜನಪ್ರಿಯ ಗಾಯಕರು, ರಾಕ್ ಸಂಗೀತಗಾರರು, ಈ ಕತೆಯ ಬಗ್ಗೆ ಹಾಡುಗಳನ್ನು ಕಟ್ಟಿ ಹಾಡಿದ್ದಾರೆ.

Julian Scuts ಎಂಬ ವಿದ್ವಾಂಸರು "The Pied Piper of Hamelin (Der Rattfanger von hameln) as a Motif in European Poetry" (೧೯೮೫) ಎಂಬ ಲೇಖನದಲ್ಲಿ ಈ ಕತೆಯನ್ನು ಹಲವಾರು ಕವಿಗಳು ಬಳಸಿರುವ ರೀತಿಯನ್ನು ವಿಮರ್ಶಾತ್ಮಕವಾಗಿ ನೋಡಿದ್ದಾರೆ. ಇದರಲ್ಲಿ ಗೈಟೆ, ಬ್ರೌನಿಂಗ್, ವಿಲಿಯಂ ಬ್ಲೇಕ್, ಫ್ರೆಂಚ್ ಕವಿ ಅಪಾಲಿನೇರ್ - ಇವರೆಲ್ಲ ಈ ಕತೆಯ ಅಲಂಕಾರ ಸಂಕೇತವನ್ನು (motif) ಬಳಸಿರುವ ರೀತಿಯನ್ನು ಕುರಿತು ಆಳವಾಗಿ ವಿಮರ್ಶಿಸಿದ್ದಾರೆ. ಬ್ರೌನಿಂಗನ ಅತ್ಯಂತ ಜನಪ್ರಿಯವಾದ ಈ ಕವಿತೆಯ ಬಗ್ಗೆ ಸಾಕಷ್ಟು ವಿಮರ್ಶೆ ನಡೆದಿಲ್ಲ ಎಂದೂ ಅಭಿಪ್ರಾಯಪಟ್ಟು ಅವನಿಗೆ ವಿಶೇಷ ಗಮನ ಕೊಟ್ಟಿದ್ದಾರೆ. ಇದೊಂದು ಉತ್ತಮ ಲೇಖನ ಎನ್ನಿಸಿತು.

### ಮಾಹಿತಿಗಳು, ಮೂಲಗಳು

ಈ ಕತೆಯ ಬಗ್ಗೆ ಅಂತರ್ಜಾಲದಲ್ಲಿ (Internet) ಸ್ವಾರಸ್ಯಕರವಾದ ಮಾಹಿತಿಗಳು ದೊರೆಯುತ್ತವೆ. ಹ್ಯಾಮೆಲ್ನ್ ಊರಿನ ವೆಬ್‌ಸೆಟ್ ಬಗ್ಗೆ ಹಿಂದೆಯೇ ಹೇಳಿದೆ. University of Texasನಲ್ಲಿ ಉಪಾಧ್ಯಾಯರಾದ ಡಾ. ಜೋನಸ್ ಕೂನ್ ಈ ವಿಷಯದ ಬಗ್ಗೆ ತಮ್ಮದೇ ಆದ ವೆಬ್‌ಸೈಟ್ ಒಂದನ್ನು ನಡೆಸುತ್ತಿದ್ದಾರೆ (ವಿಳಾಸ : http:// uts.cc.utexas.edu/_jonask/address.hmtl>. ಈ ವಿಚಾರದಲ್ಲಿ ಇನ್ನೊಬ್ಬ ಖ್ಯಾತ ವಿದ್ವಾಂಸರು University of Pittsburgನಲ್ಲಿ ಜಾನಪದ ಸಾಹಿತ್ಯದಲ್ಲಿ ಪ್ರಾಧ್ಯಾಪಕರಾಗಿದ್ದು ಈಗ ನಿವೃತ್ತರಾಗಿರುವ ಡಾ. ಡಿ.ಎಲ್. ಆಶ್ಲಿಮನ್. ಇವರ ವೆಬ್ ಸೈಟ್ (http://www.pitt.edu_dash/ashliman.html) ಅನ್ನು ನೋಡಿದರೆ ಬಹಳ ವಿಷಯಗಳು ದೊರೆಯುತ್ತವೆ. ನಾನು ಮೇಲೆ ಹೇಳಿರುವ ವಿಷಗಳನ್ನೆಲ್ಲ ಈ ಮೂರು ವೆಬ್‌ಸೈಟ್‌ಗಳಿಂದ ಸಂಗ್ರಹಿಸಿದ್ದು. ಈ ವಿಚಾರದಲ್ಲಿ ಆಸಕ್ತಿಯುಳ್ಳವರು ಈ ಮೂಲಗಳಿಂದಲೂ, ಇತರ ಮೂಲಗಳಿಂದಲೂ ಹೆಚ್ಚಿನ ಸಂಗತಿಗಳನ್ನು ತಿಳಿಯಬಹುದು.

### ಕೊನೆಯ ಮಾತು

ಇಲಿಗಿಂತ ಬಾಲವೇ ದೊಡ್ಡದಾಯಿತು! ಕುವೆಂಪು ಪದ್ಯದಿಂದ ಬ್ರೌನಿಂಗ್, ಹ್ಯಾಮೆಲ್ನ್ ಊರಿನ ಕತೆ, ಗ್ರಿಮ್ಸ್ ಸಹೋದರರ ಕತೆ, ಅದರ ಮೂಲ - ಇವನ್ನೆಲ್ಲ ನೋಡುತ್ತ ಹೋದೆವು. ಕುವೆಂಪುರವರ ಆಸಕ್ತಿ ಬ್ರೌನಿಂಗನ ಕತೆಗಷ್ಟೆ ಸೀಮಿತವಾಯಿತು, ಅದರ ಹಿಂದಕ್ಕೆ ಹೋಗಲಿಲ್ಲ, ಆದರೆ ಜಾನಪದ ಕತೆಗಳ ಜಾಯಮಾನವೇ ಬೇರೆ. ಕತೆ ಇಷ್ಟಾದರೆ, ಅದರ ಚರಿತ್ರೆ ಅಷ್ಟು ಅದೇ ಅದರ ಸ್ವಾರಸ್ಯ. ನಮ್ಮ ಪಂಚತಂತ್ರದ ಕತೆಗಳು

ಪ್ರಪಂಚದಲ್ಲೆಲ್ಲ ಹಬ್ಬಿಲ್ಲವೆ! ಸಿಂಡರೆಲಾ ಕತೆಯ ನೂರು ಪಾಠಾಂತರಗಳಿವೆಯಂತೆ! ಆ ಕತೆ ಚೈನಾದಿಂದ ಹುಟ್ಟಿತೆಂದೂ ಹೇಳುತ್ತಾರೆ! ನನ್ನ ಬಾಲ್ಯದಿಂದಲೂ ನನ್ನನ್ನು ಆಕರ್ಷಿಸಿದ್ದ ಈ ಕಿಂದರಿಜೋಗಿ ಕತೆಯನ್ನು ಅರಸುತ್ತ ಹೋದಂತೆಲ್ಲ ಹೊಸ ಹೊಸ ವಿಚಾರಗಳು ಕಾಣುತ್ತಿವೆ. ಚರಿತ್ರೆಯ ಬಾಗಿಲುಗಳು ಒಂದೊಂದಾಗಿ ತೆರೆಯುತ್ತಿವೆ. ಕನ್ನಡಕ್ಕೆ ಇಂಥ ಕೃತಿಯನ್ನು ಕೊಟ್ಟ ಕುವೆಂಪುರವರಿಗೆ ಧನ್ಯವಾದಗಳು! ಡಾ. ಜೋನಸ್ ಕೂನ್‌ರವರಿಗೂ ಡಾ. ಆಶ್ಲಿಮನ್ ರವರಿಗೂ ಕನ್ನಡದಲ್ಲಿ ಕುವೆಂಪು ರಚಿಸಿದ ಬೊಮ್ಮನಹಳ್ಳಿಯ ಕಿಂದರಿಜೋಗಿಯ ಬಗ್ಗೆ ತಿಳಿಸಿದ್ದೇನೆ. ಈ ವಿಷಯವನ್ನು ತಮ್ಮ ವೆಬ್‌ಸೈಟ್‌ನಲ್ಲಿ ಸೇರಿಸಬೇಕೆಂದು ಕೋರಿದ್ದೇನೆ. ಡಾ. ಕೂನ್ ನನ್ನ ಇ-ಮೈಲ್ ನೋಡಿದ ಕೂಡಲೆ ಇದು ಅತ್ಯಂತ ಸ್ವಾರಸ್ಯಕರವಾಗಿದೆ, ಇದರ ವಿಷಯ ನನಗೆ ತಿಳಿದಿರಲಿಲ್ಲ ಎಂದು ಬರೆದರು. ಡಾ. ಆಶ್ಲಿಮನ್ ಅವರಿಂದ ಉತ್ತರ ನಿರೀಕ್ಷಿಸುತ್ತಿದ್ದೇನೆ.

ಈ ಪೈಡ್ ಪೈಪರ್ ಕತೆಯ ಚಾರಿತ್ರಿಕ, ಜಾನಪದ ಮೂಲಗಳನ್ನು ಕುರಿತು ವಿಷಯಸಂಗ್ರಹ ಮಾಡುವುದರಲ್ಲಿ ನನ್ನ ಪ್ರೀತಿಯ ಮಗಳು ಶ್ರೀಮತಿ ಮಾಧವಿ ರಿಜಿಯೋ ತುಂಬ ಸಹಾಯ ಮಾಡಿದ್ದಾಳೆ. ಪಾಶ್ಚಾತ್ಯ ಸಂಸ್ಕೃತಿಯ ಮೂಲಗಳನ್ನು, ಕತೆ ಪುರಾಣಗಳನ್ನು ಚೆನ್ನಾಗಿ ಅಭ್ಯಾಸ ಮಾಡಿರುವ ಅವಳೊಂದಿಗೆ ಇಂಥ ವಿಚಾರಗಳನ್ನು ಚರ್ಚಿಸುವುದೇ ಒಂದು ಆನಂದ. ಅವಳ ಸಹಾಯವನ್ನು ಇಲ್ಲಿ ಅತ್ಯಂತ ಕೃತಜ್ಞತೆಯಿಂದ ನೆನೆಯುತ್ತೇನೆ.

●

# 'ಭುವನ ಕವಿ'ಯ ಭಾವನಾತ್ಮಕ ಕಥನ ಕವನಗಳು

ಶಶಿಕಲಾ ಚಂದ್ರಶೇಖರ್, ಮೇರಿಲ್ಯಾಂಡ್

'ಐ'ಗಳೇ ನಿಮ್ಮಿಂದ ಕರೆ ಬಂದಾಕ್ಷಣ ಎದ್ದೋಡಿದ್ದೆ, ಹಿರಿಯ ಬಂಧುಗಳೊಬ್ಬರ ಮನೆ ಬಾಗಿಲಿಗೆ. ಊರಿಂದ ಬರುವಾಗ ನನ್ನಂತೆ ಪೆಟ್ಟಿಗೆಯ ತುಂಬಾ ಚಟ್ನಿಪುಡಿ, ಚಕ್ಕುಲಿ, ಉಪ್ಪಿನಕಾಯಿ, ಉಂಡೆಗಳನ್ನು ತಾರದೆ; ಪುಸ್ತಕ, ಇನ್ನಷ್ಟು ಪುಸ್ತಕ ಮತ್ತಷ್ಟು ಪುಸ್ತಕಗಳನ್ನು ತುಂಬಿ ತರುವ ಈ ಹಿರಿಯರು, ನನ್ನನ್ನಾದರಿಸಿ; ನನ್ನೆದುರು, ಕಂಪಿನ ತಾತನ ಬಗ್ಗೆ ಪ್ರೀತಿಯಿಂದ, ಗೌರವದಿಂದ, ವಿಶದವಾಗಿ, ವಿದ್ವತ್‌ಪೂರ್ಣವಾಗಿ, ಪ್ರಬುದ್ಧವಾಗಿ, ಭಾವುಕವಾಗಿ, ವೈಚಾರಿಕವಾಗಿ ಬರೆದ ಎಲ್ಲಾ ಹಿರಿಯ, ಕಿರಿಯ, ಮಹತ್ವದ, ಪ್ರಸಿದ್ಧರಾದ ಲೇಖಕರ ಪುಸ್ತಕಗಳನ್ನೂ ಹರವಿದರು...

ನಿಮ್ಮಿಂದ ಕರೆ ಬಂದಿತ್ತು ಎಂದು ನಮ್ಮಮ್ಮನಿಗೆ ತಿಳಿಸಿದ್ದೇ ತಡ ಮನೆಯಲ್ಲಿದ್ದ ತಾತನ ಎಲ್ಲಾ ಪುಸ್ತಕಗಳನ್ನೂ ಒಪ್ಪವಾಗಿ ಗಂಟುಕಟ್ಟಿ ವಿಮಾನ ಏರಿಸಿ ಕಳುಹಿಸಿದರೆ, ನನ್ನ ಮೇಷ್ಟ್ರು 'ಕುವೆಂಪು ಸಮಗ್ರ ಕಾವ್ಯ'ದ ಎರಡೂ ಸಂಪುಟಗಳನ್ನು ತಮ್ಮ ಆಶೀರ್ವಾದದ ಸಹಿ ಚಿತ್ರಿಸಿ. ಅಮ್ಮ ಕಟ್ಟಿನ ಗಂಟಿನ ಜೊತೆಮಾಡಿ ಕಳುಹಿಸಿದರು....

ಹುಟ್ಟಿದಾಗ ಹೆಸರಿಟ್ಟು, ಮದುವೆಯ ದಿನದಂದು ಧಾರೆ ಮಂಟಪಕ್ಕೆ ಕರೆದೊಯ್ದಿದ್ದ ಮಾವ, ಹುಡಿ ಅಕ್ಕಿನ ಜೊತೆ ಮಡಿಲಿಗೆ 'ಶ್ರೀ ರಾಮಾಯಣ ದರ್ಶನಂ' ಪ್ರತಿ ಹಾಕಿಸಿ ಹರಸಿ ಕಳಿಸಿದ್ದರು ನನ್ನನ್ನು ಗಂಡನ ಮನೆಗೆ, ಬಲು ದೂರದ ಶಿಕಾಗೋಗೆ. ಅರ್ಥವಾಗಲಾರದು ಎನ್ನುವ ಒಳ ಭಯದಿಂದ ಪುಟತೆರೆಯದೇ ಹಾಗೇ ಭಯ ಭಕ್ತಿ ಗೌರವದಿಂದ ಜತನವಾಗಿ ಕಾದಿರಿಸಿಕೊಂಡಿದ್ದ ಪ್ರತಿ, ಮಾವನ ಪ್ರೀತಿಯ ಸಂಕೇತವಾಗಿ, ಕೋಣೆಯ ಕಪಾಟಿನಲ್ಲಿತ್ತು... ಕೈಯ್ಯಳತೆಯ ದೂರದಲ್ಲಿ! ಅದರ ಮಗ್ಗುಲಿಗೇ ನಾನೆಂದೋ ತಂದಿರಿಸಿದ 'ನೆನಪಿನ ದೋಣಿ', 'ಮಲೆಗಳಲ್ಲಿ ಮದುಮಗಳು', 'ಮಲೆನಾಡ ಚಿತ್ರಗಳು'...

ಈ 'ಕಂಪಿನ ತಾತ'ನ ಪರಿಚಯ ನನಗಾದದ್ದು ಎಂದು? ಎಂದು ಯೋಚಿಸತೊಡಗಿದೆ...

'ಟುವ್ವಿ.. ಟುವ್ವಿ.. ಟುವ್ವಿ.. ಎಂದು ಹಕ್ಕಿ ಕೂಗಿತು' ನನಗಿಂತ ಐದು ತರಗತಿ ಮುಂದಿದ್ದ ಅಕ್ಕನ ಪಠ್ಯಪುಸ್ತಕದಲ್ಲಿದ್ದ ಪದ್ಯವಿದು. ಅನಕ್ಷರಸ್ಥಳಾಗಿದ್ದ ನಾನು ಅಕ್ಕನಿಂದ ಕಲಿತು ಸದಾ ಗುನುಗುತ್ತಿದ್ದ ಈ ಪದ್ಯ ನನ್ನ ಮೆಚ್ಚಿನದಾಗಿತ್ತು. ಅಕ್ಷರಸ್ಥಳಾಗುತ್ತಿದ್ದಂತೆ ಕನ್ನಡ ಕಾಪಿ ಪುಸ್ತಕಗಳಲ್ಲಿ ಛಾಪಿಸಿರುತ್ತಿದ್ದ... ಎಲ್ಲಾದರು ಇರು ಎಂತಾದರು ಇರು ಎಂದೆಂದಿಗು ನೀ ಕನ್ನಡವಾಗಿರು... ಸಾಲುಗಳನ್ನು ತಿದ್ದುತ್ತಾ ದುಂಡಾಗಿ ಬರೆಯುವುದನ್ನು ಕಲಿತೆ. ನೊರೆಹಾಲು

ಕುಡಿದು, ಹಿತ್ತಲಿನ ಚಂದ್ರ ಸೀಬೇಮರ ಏರಿ ಹಣ್ಣು ತಿಂದು, ಜಗುಲಿ ಮೇಲೆ ಹುಣಸೇ ಹಣ್ಣು ಕುಟ್ಟಿ ಚಪ್ಪರಿಸಿ, ಗಜ್ಜುಗ, ಅಳಗುಣೆ ಮಣೆ ಆಡಿ, ಅಂಗಳದಲ್ಲಿ ಕುಂಟೆಬಿಲ್ಲೆ ಆಟ ಮುಗಿಸಿ ಗೆದ್ದು, ಸಂಜೆ ದುಂಡುಮಲ್ಲಿಗೆ ಮೊಗ್ಗು ಬಿಡಿಸುತ್ತಿದ್ದ ನಿರುಮ್ಮಳವಾದ ಅಜ್ಜಿ ಮನೆಯ ಬೇಸಿಗೆ ರಜೆಯಲ್ಲಿ ನಮ್ಮೆಲ್ಲರ ಪಾಲಿನ ಅತ್ಯದ್ಭುತ ಮನೋರಂಜನೆಯ ಏಕೈಕ ಸಾಧನ ರೇಡಿಯೋ. ಮಕ್ಕಳ ಕಾರ್ಯಕ್ರಮ, ಸಿನಿಮಾ ರೇಡಿಯೋ ರೂಪಾಂತರ, ನಾಟಕ ಮತ್ತು ಚಿತ್ರಗೀತೆಗಳೊಂದಿಗೆ ಭಾವಗೀತೆಯನ್ನು ಆಕಾಶವಾಣಿ ಬಿತ್ತರಿಸುತ್ತಿತ್ತು. ಆಗ ಕೇಳಿದ ದೋಣಿ ಸಾಗಲಿ... ನಡೆ ಮುಂದೆ... ಯಾವ ಜನ್ಮದ ಮೈತ್ರಿ... ಭರತ ಭೂಮಿ ನನ್ನ ತಾಯಿ... ತಿಳಿ ಮುಗಿಲ ತೊಟ್ಟಿಲಲಿ... ಕೇಳಿ ಕೇಳಿ ಗೆಳೆಯರೇ ದಿವ್ಯಮಂತ್ರ ಘೋಷವ... ಹಾಡುಗಳ ದನಿ ತರಂಗಗಳು ದೇಶ, ಸೀಮೆ, ಖಂಡ ಸಾಗರಗಳನ್ನು ದಾಟಿ ಇಂದೂ ಕಿವಿ ತಲುಪಿದಂತೆನಿಸುವುದು ನನ್ನ ಭ್ರಮೆ ಇದ್ದರೂ ಭಾವ ಸುಳ್ಳಲ್ಲ. ಗೆಳತಿ ಶಾಮಾ ಇಂಪಾಗಿ ಹಾಡುತ್ತಿದ್ದ ಮೋಹಕ ಕಲ್ಪನೆಯ ಸುಂದರ ಕವಿತೆ 'ದೂರ ! ಬಹು ದೂರ!' ... ನೆನಪಾದ ಕ್ಷಣ, ಗೆಳತಿಯರ ಕೈಹಿಡಿದು ದೂರದೂರಿನ ಊರತೀರಕ್ಕೆ ಓಡುವ ಅದಮ್ಯ ಬಯಕೆ ಉಕ್ಕದಿರದು. ಓದಿದವರೆಲ್ಲರ ಚಿತ್ತದಲ್ಲಿ ಜೀವಂತವಾಗಿ ಮೈದಾಳುವ ಈ ಕವಿತೆ ನನ್ನ ಪ್ರಿಯವಾದುದರಲ್ಲೊಂದು. ನನ್ನ ನೆಚ್ಚಿನ ನಂಟ 'ಚಂದ್ರಮ'ನನ್ನು ಬಗೆ ಬಗೆಯಲ್ಲಿ ವರ್ಣಿಸುವ ಕವಿತೆಯ ಸಾಲುಗಳಂತೂ ಚಂದ್ರಮನ ಸೌಂದರ್ಯವನ್ನು ಮತ್ತಷ್ಟು ವೃದ್ಧಿಸುವುವು ನನ್ನೆದೆಯಲ್ಲಿ. ವಾಣಿಜ್ಯ ವಿಷಯಗಳನ್ನು ಐಚ್ಛಿಕವಾಗಿ ಆರಿಸಿಕೊಂಡು, ವಾಣಿಜ್ಯ ಕನ್ನಡ ಕಲಿಯುತ್ತಿದ್ದವಳು ನಾನು. ಪದವಿಯ ಕಡೆವರ್ಷ ಕಲಿತ ಕವಿತೆ 'ದೇವರು ರುಜು ಮಾಡಿದನು'. ಇಂದಿಗೂ ನನ್ನ ನಾಲಿಗೆ ಆ ಪದ್ಯದ ಸಾಲುಗಳನ್ನು ಮರೆತೇ ಇಲ್ಲಾ. ನೀಲಿ ಆಕಾಶದ ಹಿನ್ನೆಲೆಯಲ್ಲಿ ಹಕ್ಕಿಗಳ ದಂಡು, ಮನೆ ಮುಂದಿನ ಶುಗರ್ ಲೋಫ್ ಪರ್ವತದ ಕಡೆಯಿಂದ ಹಾರುತ್ತಾ ಬರುವುದನ್ನು ನಿಟ್ಟಿಸುತ್ತಾ ಗುನುಗುತ್ತೇನೆ ನನ್ನಷ್ಟಕ್ಕೆ ನಾನೇ.

.........ತೇಲುತ ಬರಲ್ಕೆ
ಬಲಾಕ ಪಂಕ್ತಿ
ಲೇಖನ ರೇಖಾ ನ್ಯಾಸದಲಿ,
ಅವಾಙ್ಮಯ ಛಂದಃಪ್ರಾಸದಲಿ,

ಸೃಷ್ಟಿಯ ರಚನೆಯ ಕುಶಲಕೆ ಚಂದಕೆ
ಜಗದಚ್ಚರಿಯಂದದ ಒಪ್ಪಂದಕೆ
ಚಿರಚೇತನ ತಾನಿಹೆನೆಂಬಂದದಿ
ಬೆಳ್ಳಕ್ಕಿಯ ಹಂತಿಯ ಆ ನೆವದಿ
ದೇವರು ರುಜು ಮಾಡಿದನು....

ಇದಕ್ಕಿಂತ ರಮ್ಯ ಕಲ್ಪನೆ ಬೇರೊಂದಿದೆಯೇ?

ಯಾರೇ ನೆನಪಾದಾಗ ಕಣ್ಣು ಕಟ್ಟುವುದು ಅವರ ರೂಪ. ಅವರ ಬೆನ್ನು ಹತ್ತಿ ಬರುವುದು (ಕಂಡ/ಕೇಳಿದ) ಅವರ ವ್ಯಕ್ತಿತ್ವ. ಅದರ ಜೊತೆ ಜೊತೆಯಾಗಿ ಕೈ ಹಿಡಿದು ಬರುವುದು ನಮ್ಮ ಬದುಕಿಗೆ ಅವರ ಇರುವು ಹೆಣೆದುಕೊಂಡ ರೀತಿ. ಬಾಲ್ಯ, ಕಿಶೋರ, ಯೌವ್ವನ ಮತ್ತು ಪ್ರೌಢ ಹೀಗೆ ಎಲ್ಲಾ ಹಂತಗಳಲ್ಲೂ ಪರೋಕ್ಷವಾಗಿ ನಂಟು ಉಳಿಸಿಕೊಂಡು ಬಂದ ಈ ಬಂಧು ಒಬ್ಬ ತಾತ. ವಸಂತದ ಸಂಜೆ ಕಣ್ಮುಚ್ಚಿ ಉಸಿರೆಳೆದಾಗ ಮೂಗಡರುವ ಮಲ್ಲಿಗೆಯ ಕಂಪಿನ ಗುಣ ತಾತನ ಕವಿತೆಗಳಿಗೆ. ಅದಕ್ಕೆಂದೇ 'ಕಂಪಿನ ತಾತ' ಎಂದಿದ್ದು ಇವರನ್ನು.

ಹಲವಾರು ಕೋನಗಳಲ್ಲಿ ನಿಂತು, ವಿವಿಧ ಗಾವುದಗಳಂತರಗಳಿಂದ ಸಮಾಜದ ನೋವು ನಲಿವನ್ನು, ನಿಸರ್ಗವನ್ನು, ಎಲ್ಲಕ್ಕಿಂತ ಮಿಗಿಲಾಗಿ ಜೀವನ ಧರ್ಮವನ್ನು ಬೆರಗಿನಿಂದ ನಿರುಕಿಸಿ, ಮೆರುಗಿನ ಮತ್ತು ಅರಿವಿನ ಪದ ಸಮೂಹಗಳಿಂದ ನಮ್ಮೆದೆಯಲ್ಲಿ ಆ ದೃಶ್ಯಗಳನ್ನು ಮರುಸೃಷ್ಟಿಮಾಡುವ ಈ ರಸಋಷಿಯ ಶಕ್ತಿಗೆ, ಎಲ್ಲಾ ಕನ್ನಡಿಗರ ಸೊಲ್ಲಡಗಿ ತಲೆ ತಾನೇ ತಾನಾಗಿ ಬಾಗುವುದು, ಹಸ್ತ ಸಂಗಮಿಸುವುದು... ಪ್ರೀತಿ ಭಕ್ತಿ ಮತ್ತು ಅಭಿಮಾನದ ಸಂಕೇತವಾಗಿ.

ಕಳೆದ ಶತಮಾನ ಕಂಡರಿತ, ಪ್ರಸ್ತುತ ಶತಮಾನ ಮತ್ತಿನ್ನೂ ಕಾಣಬೇಕಿರುವ ಚೈತನ್ಯ ಈ ಹಿರಿಜೀವದ್ದು ಎನ್ನುವುದು ಸತ್ಯ. 'ಐ'ಗಳೇ ನನ್ನಿಂದ ಬರಹ ಕೇಳಿ ನನಗೊಂದುಪಕಾರ ಮಾಡಿದಿರಿ. ನಿಮ್ಮಿಂದಾಗಿ ಸಾಕಷ್ಟು ಓದುವಂತಾಯ್ತು. ನಿಮಗೆ ನಾನು ಋಣಿ. ಓದುತ್ತಾ ಹೋದಂತೆ ಬರೆಯುವುದನ್ನೂ ಮರೆತೆ. ನಾನೇನೇ ಬರೆದರೂ ಕಾವ್ಯದ ಅಗಾಧತೆಯನ್ನು ಅಡಗಿ ಬರೆವ ಬರಹ ಆಗಲಾರದು ಎನ್ನಿಸುತ್ತಿದೆ. ತ್ರಿಕೋನದ ತಲೆ ಬರೆದು - ಇದೋ 'ಐ'ಗಳೇ ಹಿಮಾಲಯ ಎಂದು ತೋರಿಸಿದರೆ ನಗದಿರಲಾರಿರಾ ನೀವು? ಛಸ್ ಪೀಕ್ ಬೇಯೆಂದ ಶೀಷೆಯಲ್ಲಿ ನೀರು ತಂದು 'ಸಾಗರ' ತಂದಿರುವೆ ಎಂದರೆ ಒಪ್ಪುವಿರೇನು? ಹೀಗೇ ನೆನೆಗುದಿಗೆ ಬಿದ್ದದ್ದೊಂದು ದಿನ ಕಥನ ಕವನ ಓದಲು ಆರಿಸಿಕೊಂಡೆ.

ಕಥನ ಕವನ ನನ್ನ ನೆಚ್ಚಿನ ಶೈಲಿ. (ಕಥೆಗಳನ್ನು ಕವನದಂತೆಯೂ ಕವನಗಳನ್ನು ಕಥೆಗಳಂತೆಯೂ ಬರೆಯುತ್ತೇನೆಂಬ ಆರೋಪ ನನ್ನ ಮೇಲಿದೆ! ಎರಡನ್ನೂ ಕೈಬಿಡು ಎಂಬ ಸಲಹೆಯೂ ಇದೆ!!) ಕಥನ ಕವನ ಸಂಗ್ರಹದಲ್ಲಿರುವ ಕವನಗಳಲ್ಲಿ, ಕವಿ ನಿರೂಪಕನಾಗಿ, ತಾನು ಉಂಡಾಡಿದ ನೆಲ, ಕಂಡು ಒಡನಾಡಿದ ಮಲೆನಾಡಿನ ಸರಳ ಸಾಧಾರಣ ವ್ಯಕ್ತಿಗಳು, ಅನುಭವಿಸಿದ ಘಟನೆಗಳನ್ನು ವರ್ಣಿಸುತ್ತಾ ಹೋದಂತೆ ನಾನು ಓದಿದ 'ಮಲೆನಾಡ ಚಿತ್ರಗಳು', ಹಲವಾರು ಕವಿತೆಗಳು, ಕಾದಂಬರಿ, ಕಾವ್ಯ, 'ಶ್ರೀ ರಾಮಾಯಣ ದರ್ಶನಂ' ಬಗ್ಗೆ ಕೇಳಿದ ಉಪನ್ಯಾಸ ಒಗ್ಗೂಡಿ ಈ ಮಹಾನ್ ಕವಿಯ 'ನಿಲುವು' ಮತ್ತು 'ದರ್ಶನ'ದ ಪ್ರತ್ಯಕ್ಷ ಅನುಭವವಾಗತೊಡಗಿತು. 'ಕರಿ ಸಿದ್ಧ' ಕಥನ ಕವನಗಳ ಅತ್ಯಂತ ಪ್ರಭಾವಶಾಲಿ ಕವಿತೆ. ಇದರ ಅಂತ್ಯ ದುರಂತ. ಮೇಲ್ನೋಟಕ್ಕೆ ಕೆಲವೇ ವಾಕ್ಯಗಳಲ್ಲಿ ಹೇಳಿ ಮುಗಿಸಿ ಬಿಡಬಹುದಾದ ಕಥೆ ಇದು.

ಕೆಳವರ್ಗದ ಕರಿಸಿದ್ದ ಮತ್ತು ಗಿಡ್ಡಿಯರಿಗೆ ಬಹುದಿನಗಳ ನಂತರ ಹುಟ್ಟಿದ ಮಗ ಬೈರ, ತಂದೆ ತಾಯಿಯರ ವಾತ್ಸಲ್ಯದಲ್ಲಿ ಬೆಳೆದ. ಬೈರ ಆಕಸ್ಮಿಕವಾಗಿ ಕಾಲು ಜಾರಿ ಕೆರೆಯಲ್ಲಿ ಮುಳುಗಿ ಸತ್ತ ದಿನ ಆ ಪುಟ್ಟ ಸಂಸಾರದ ಸುಖ ಸಮಾಧಿಯಾಯ್ತು.

ಕಥಾವಸ್ತುವನ್ನು ಮೀರಿದ ಒಂದು ಅಗೋಚರ ದರ್ಶನ ಈ ಕವಿತೆಗಿರುವುದು ಇದರ ವೈಶಿಷ್ಟ್ಯ. ಆ ವೈಶಿಷ್ಟ್ಯತೆಗೆ ಕಾರಣ ಕವಿಯ ಅಂತರ್ ದೃಷ್ಟಿ.

ಕವಿ ನಿರೂಪಕನಾಗಿ ಕಥೆ ಶುರುಮಾಡುವ ರೀತಿಯೇ ಸುಂದರ. 'ತೀರ್ಥಹಳ್ಳಿಯ ಕಳೆದು, ತಾಯಿ ತುಂಗೆಯ ದಾಟಿ, ಒಂಬತ್ತು ಮೈಲಿಗಳ ದೂರದಲ್ಲಿ, ನಮ್ಮೂರು ಕುಪ್ಪಳಿ. ಊರಲ್ಲ ನಮ್ಮ ಮನೆ...' ಈ ಸಾಲುಗಳನ್ನು ಓದುವ ಹೊತ್ತಿಗೆ ಕವಿಯ ಕೈಹಿಡಿದು, ನಾವು 'ದಟ್ಟವಾದಡವಿಗಳು ಕಿಕ್ಕಿರಿದ ಮಲೆನಾಡ'ಲ್ಲಿ 'ಸುತ್ತಲೂ ಎತ್ತರದ ಬೆಟ್ಟಗಳು, ಕಾಡುಗಳು; ಎತ್ತ ನೋಡಿದರತ್ತ ಸಿರಿಹಸಿರು' ತುಂಬಿದ ತಾಣಕ್ಕೆ ಕಾಲಿಟ್ಟ ಅನುಭವ. ಕಣ್ಗಳು ಆನಂದ ಹೀರುತ್ತಾ 'ಆತ್ಮಕ್ಕೊಂದೊಸಗೆ' ತಂದ ಶ್ರೀಮಂತ ನಿಸರ್ಗ ಮನ ತುಂಬಿಕೊಳ್ಳುವ ಹೊತ್ತಿಗೆ ನಿರೂಪಕ ಚಿತ್ರಿಸುವುದು; ದೊಡ್ಡ ಅಣಬೆಯಂತೆ ನೆಲದ ಮೇಲೆದ್ದ ಹುಲ್ಲು ಗುಡಿಸಲು ಮತ್ತು ಪರಿಚಯಿಸುವುದು ಅದರಲ್ಲಿ ಸಂಸಾರ ಮಾಡಿಕೊಂಡಿದ್ದ ಕರಿಸಿದ್ದ ಮತ್ತು ಅವನ ಹೆಂಡತಿ - ಗಿಡ್ಡಿ. ಥಟ್ಟನೆ ನಿರೂಪಕ ಪಿಸುನುಡಿಯುತ್ತಾನೆ. 'ಜಾತಿಯಲ್ಲಿ ಕೀಳಂತೆ! ನೀತಿಯಲಿ? ನಾನರಿಯೆ!'. ನಿರೂಪಕನ ಗಂಟಲ ವ್ಯಂಗ್ಯ ತಟ್ಟದೇ ಇರದು ನಮ್ಮನ್ನು ಈ ಗಳಿಗೆ. ನಿಜವಾದ ಕಥೆ ಶುರುವಾಗುವ ಮುನ್ನ ನಿರೂಪಕ ತನ್ನ ನಿಲುವು, ಮತ್ತು ಸ್ವರೂಪ ಕಟ್ಟಿ ಕೊಡುವುದು ಮುಂದಿನ ಸಾಲುಗಳನ್ನು ಬಳಸಿ;

ಬಡಜನರ ಜೀವದಲಿ ಉಬ್ಬೆಗವ
ಹುಟ್ಟಿಸುವ ಸಂಗತಿಗಳೇನಿಲ್ಲ ಎಂದೆಲ್ಲ
ತಿಳಿದಿಹರು. ಅದರಿಂದ ವಾಲ್ಮೀಕಿ ಮೊದಲಾದ
ಕಬ್ಬಿಗರು ರಾಮನಂತಹ ರಾಜರನೆ ಕುರಿತು
ಕೊಬ್ಬಿರುವ ಕಾವ್ಯಗಳ ರಚಿಸಿದರು. ನಾನೇನು
ವಾಲ್ಮೀಕಿಯೂ ಅಲ್ಲ. ನನ್ನ ಕತೆಯೂ ದೊಡ್ಡ
ಕಾವ್ಯವಾಗಿಲ್ಲ. - ಪುಟ್ಟ ಕವಿ; ಪುಟ್ಟ ಕತೆ!...

ಸತ್ಯ ಕಥೆಯನ್ನು ಆಶಿಸುವ ಜನ ಸಾಮಾನ್ಯರಿಗಾಗಿ ಬರೆದಿರುವೆನೆಂದು ತಿಳಿಸುತ್ತಾ ಕಥೆ ಮುಂದುವರೆಸುತ್ತಾರೆ. ದನ ಕಾಯುವ ಕರಿಸಿದ್ಧ-ದಿನಗೂಲಿ ಮಾಡುವ ಗಿಡ್ಡಿ ಬಹುದಿನ ಮಕ್ಕಳಾಗದೆ ಇದ್ದವರು. ಉಳ್ಳವರು ಮಕ್ಕಳಾಗುವಂತೆ ಕೈಗೊಳ್ಳುವ 'ಪುತ್ರಕಾಮೇಷ್ಟಿ' ಮಾಡಲು ಹಣವೆಲ್ಲಿಂದ ತಂದಾರು? ಇದನ್ನು ನಿರೂಪಿಸುತ್ತಾ 'ಗಂಜಿಗೇ ಗತಿ ಇಲ್ಲ! ನೈವೇದ್ಯಕೆಲ್ಲಿಂದ ತರಬೇಕು?' ಎಂದು ಇರದವರು-ಇರುವವರ ನಡುವಿನ ಅಂತರದ ಬಗ್ಗೆ ನೇರವಾಗಿ ಮನವರಿಕೆ ಮಾಡಿಕೊಡುತ್ತಾರೆ. ಧರ್ಮಶಾಸ್ತ್ರವನ್ನರಿಯದ ಕರಿಸಿದ್ದ-ಗಿಡ್ಡಿಯರು

ಪ್ರಕೃತಿ ಧರ್ಮ ನಂಬಿ ಬಾಳುವೆ ಮಾಡುತ್ತಿದ್ದವರು. ಗಿಡ್ಡಿ ಬಸಿರಾಗಿ ಗಂಡು ಕೂಸೊಂದ ಹೆತ್ತ ದಿನ, ಬಡ ಕರಿಸಿದ್ದ ಅವಳ ಶುಶ್ರೂಷೆ ಮಾಡಲು ನಿಂತ. ಹರಳೆಣ್ಣೆ ದೀಪ ಹತ್ತಿಸಿ, ಅವನ ಜಾತಿಯ ಪದ್ಧತಿಯಂತೆ ಮೊರದಲ್ಲಿ ಮಗುವ ಮಲಗಿಸಿ, ದೆವ್ವಗಳು ಬರದಂತೆ ಹರುಕು ಮೆಟ್ಟಿನ ಚೂರನ್ನು ಬಾಗಿಲಿಗೆ ಕಟ್ಟುತ್ತಾನೆ. ಬಾಗಿಲ ಮೂಲೆಯಲ್ಲಿ ಪೊರಕೆಯೊಂದನ್ನು ಇಟ್ಟು ತೋಟದಾಚಿನ ಭೂತನಿಗೆ ಮುಡುಪು ಕಟ್ಟುತ್ತಾನೆ ಬಡವರಂತೆ. ಸಿರಿವಂತರಂತೆ ತಿರುಪತಿಯ ವೆಂಕಟೇಶನಿಗಲ್ಲ. ಕಾಶಿ ವಿಶ್ವನಾಥನಿಗೂ ಅಲ್ಲ. ಉಡುಪಿಯ ವಸುದೇವನಿಗೂ ಅಲ್ಲ. ಕರಿಸಿದ್ದ ಪ್ರತಿನಿಧಿಸುವ ಹಳ್ಳಿಯ ಜನರ ನಂಬಿಕೆ, ಆಚಾರ, ಅವರ ಪರಿಸ್ಥಿತಿಯನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾನೆ-ನಿರೂಪಕನ ಅಂತರ್ಯದಲ್ಲಿರುವ ಕವಿ. 'ವೆಂಕಟನ ಭಕ್ತರಿಗೆ ಬರುವ ಸಂತಸವಾಯ್ತು, ವಿಶ್ವನಾಥನ ಭಕ್ತರಾನಂದವೇ ಅವನಿಗೂ ಬಂತು. ವೈಷ್ಣವರ ಸುಖವಾಯ್ತು. ಮಾನವರ ಭಕ್ತಿಯೇ ದೇವರಿಗೆ ಭಕ್ತಿ! ನರಭಕ್ತಿಯಳಿದರೆ ಎಲ್ಲಿ ಹರಶಕ್ತಿ?' -ಎನ್ನುತ್ತಾನೆ ನಿರೂಪಕನ ಅಂತರ್ಯದಲ್ಲಿರುವ ದಾರ್ಶನಿಕ.

ಎಣ್ಣೆ ಬೆಣ್ಣೆ ಹಾಲಿನ ಬಲವಿಲ್ಲದೆ ಗಂಜಿ ಮೊಲೆಹಾಲ ಬಲದಿಂದ ಬೆಳೆದ ಬೈರ ತಂದೆತಾಯಿಯರ ಮುದ್ದಿನ ಮಗನಾಗಿದ್ದ. 'ಹೆಸರಿಡಲು ಭಕ್ತರಿಗೆ ಬಿಡಿಗಾಸು ಕೊಡಲಿಲ್ಲ. ಹುಟ್ಟಿಸಿದ ದೇವರೆ ಜಾತಕವ ಬರೆದಿಟ್ಟ.' -ಎನ್ನುತ್ತದೆ ನಿರೂಪಕನ ಧ್ವನಿ. ಶ್ರೀಮಂತ ಪರಿಸರ, ಪರಿಕರಗಳಿಲ್ಲದೆಯೂ ಬೈರ ಧೂಳಿನಲ್ಲಿ, ಮಣ್ಣಿನಲ್ಲಿ, ಹಸುರಿನಲ್ಲಿ ಬಿದ್ದೆದ್ದು ಒರಟಾಗಿ ಕಠ್ರಗೆ ಗಟ್ಟಿ ಮುಟ್ಟಾಗಿ ಬೆಳೆಯುತ್ತಾನೆ ಆ ಮಲೆ ಸೆರಗಿನಲ್ಲಿ.

ಹಂಡನಾಯಿ ಬೈರನ ಸಂಗಾತಿ-ಉಣ್ಣುವಾಗ, ಆಡುವಾಗ ಕಡೆಗೆ ಬೈರನೊಟ್ಟಿಗೆ ಚಾಪೆ ಹಂಚಿ ಮಲಗುವಾಗ ಕೂಡ. ಬೈರ ಹಂಡರ ದಿನಚರಿಯಲ್ಲಿ- ಹಕ್ಕಿ ಮೊಟ್ಟೆ ಕದಿಯುವುದು, ಚಿಟ್ಟೆಗಳನ್ನು ಹಿಡಿದು ಪೀಡಿಸುವುದು, ಗೂಡಲ್ಲಿ ಹಕ್ಕಿ ಮರಿಗಳಿಗೆ ಬಾಯುತ್ತು ಹಾಕುವುದು ಸೇರಿತ್ತು. ಬೈರನಿಗೆ ಹಂಡನೇ ಕುದುರೆ. 'ಹುಟ್ಟುತ್ತಲೇ ಬದ್ಧನಾಗಿರದ' ಬೈರ ಬಾಲ್ಯದ ಎಲ್ಲಾ ಸಂತೋಷಗಳನ್ನು ಅನುಭವಿಸುತ್ತಾ ಬೆಳೆಯತೊಡಗಿದನು-ಸಹಜವಾಗಿ.

ಮಗನ ಬೆಳವಣಿಗೆಯೊಂದು ಹಿರಿ ಹಿಗ್ಗು ತಾಯ್ತಂದೆಯರಿಗೆ. ಅಡಿಗೆ ಮಾಡಿಟ್ಟು ಗಿಡ್ಡಿ ಮಗನಿಗೆ ಕಥೆ ಹೇಳುವಳು, ಬೈರ ಹಂಡನಾಯಿ ತಲೆ ತಟ್ಟುತ್ತಾ ಬೆರಗುಗಣ್ಣುಗಳಿಂದ ಬಾಯ್ದೆರೆದು ಕೇಳುತ್ತಾನೆ ಅಮ್ಮ ಹೇಳುವ ಕಥೆಗಳನ್ನು. ತಾಯಿ ವಾತ್ಸಲ್ಯದಿಂದ ಮಗನಿಗೆ ಕಥೆ ಹೇಳುವ ಗಳಿಗೆಯ ಬೆಚ್ಚಗಿನ ಸಂಸಾರದ ಸಿರಿ ಚಿತ್ರವಿದು. ಅವಳು ಹೇಳುವ ಕಥೆಗಳಲ್ಲಿ ವಿಶೇಷವೇನಿಲ್ಲ. ಏಕೆಂದರೆ ಗಿಡ್ಡಿ ಪಂಡಿತೆಯಲ್ಲ. ಹಳ್ಳಿಯ ಜನರ ಕಲ್ಪನೆಯ, ಹಳ್ಳಿಯರಿಗಾಗಿ ಕಟ್ಟಿದ ಕಟ್ಟುಕಥೆಯಷ್ಟೆ ಎನ್ನುವ ಮಗ್ಗುಲಲ್ಲೇ ನಿರೂಪಕನ ಅರಿವಿನ ಧ್ವನಿ ಥಟ್ಟನೆ ಉಸಿರನ್ನು ಕಸಿಯುತ್ತದೆ.

ಜಗಕೆಲ್ಲ ಒಂದೆ ರಾಮಾಯಣವು ಎಂಬುದದು
ಹೆದ್ದಪ್ಪು. ಇಳೆಗೆಲ್ಲ ವಾಲ್ಮೀಕಿಯೊಬ್ಬನೇ

ಕವಿ ಎಂಬುದೂ ತಪ್ಪು. ತಿರೆಗೆಲ್ಲ ಶ್ರೀರಾಮ-
ನೊಬ್ಬನೇ ಎಂಬರೂ ಬೆಪ್ಪುಗಳೆ. ಹನುಮಂತ-
ರೆನಿತಿಹರು ಮಲೆಯ ಕಾಡುಗಳಲ್ಲಿ! ಒಂದೊಂದು
ಹಳ್ಳಿಯಲಿ ಒಬ್ಬೊಬ್ಬ ಜಸವಂತನಾಗದಿಹ
ವಾಲ್ಮೀಕಿ ನೆಲೆಸಿಹನು

....ಒಬ್ಬೊಬ್ಬ ಗಂಡನಲಿ
ಶ್ರೀರಾಮ ನಡಗಿಹನು; ಒಬ್ಬೊಬ್ಬ ಹೆಂಡತಿಯ
ಎದೆಯೊಳಿರುವಳು ಸೀತೆ. ಇಂತಿರಲು ವಾಲ್ಮೀಕಿ
ಬರೆದಿರುವ ರಾಮಾಯಣವು ಕೋಟಿ ಕಾವ್ಯಗಳ-
ಲೊಂದೆನನ್ನಲತಿಶಯವೆ?

ಇಬ್ಬನಿಯ ಬಿಂದುವಿಗೆ ರಾಮನ ಕಿರೀಟದ ರತ್ನದ ಹಿರಿಮೆಯನ್ನು ತಂದಿತ್ತ ರಸಋಷಿಯ ಭಾವ ವರ್ತುಲಕ್ಕೆ ಮಾತ್ರವೇ ದಕ್ಕುವ ಮಹತ್ವದ ಮಾತುಗಳು ಮೇಲಿನವು. ಮಂಥರೆಯಂತಹ ನಿಕೃಷ್ಟ ಜೀವಕ್ಕೂ ಘನತೆ ತಂದಿತ್ತ ಶತಮಾನದ ಕವಿಯ ಹಿಡಿತಕ್ಕಷ್ಟೇ ಸಿಗುವ ಘನವಾದ ವಾಕ್ಯಗಳಿವು. ವಾಲ್ಮೀಕಿ, ಹನುಮ, ರಾಮ ಸೀತೆಗಳ ಪ್ರತಿರೂಪಗಳು ಜೀವಂತವಾಗಿರುವ ಮಲೆನಾಡ ಮೂಲೆಯಲ್ಲಿ ನಾಗರಿಕತೆಯ ಸೋಂಕಿಲ್ಲದೆ, ಜಗದ ದೊಂಬಿಯ ಗೌಜು ಗದ್ದಲದಿಂದ ದೂರಾಗಿ, ಸಂಸ್ಕೃತಿಯ ಸುಖ ದುಃಖದ ಭಾರಕ್ಕೆ ಹೊರತಾಗಿ 'ಸಿರಿಗೆ ಕರುಬದೆ, ಬಡತನಕ್ಕೆ ಹೇಸಿ ಗೋಳಿಡದೆ ಅತಿಕಾಂಕ್ಷೆ, ಅತಿ ಭೋಗ, ಅತ್ಯಾಶೆ ಅತಿಗಳೊಂದಿಲ್ಲದೆಯೆ ಮಿತಿಯಿಂದ ಬಾಳಿದರು, ಬದುಕಿದರು ಬೈರನೊಡಗೂಡಿ...', ಬಡ(?) ಕರಿಸಿದ್ದ-ಗಿಡ್ಡಿಯರು. ನಿರೂಪಕ ವರ್ಣಿಸುವ ಕರಿಸಿದ್ದನ ಬಡತನ, ನಿಜಕ್ಕೂ ಶ್ರೀಮಂತಿಕೆ. 'ಸಾಕು ಸಾಕೆನ್ನುವುದು ಸಿರಿತನ, ಬೇಕು ಬೇಕೆನ್ನುವುದು ಬಡತನ' ಎಂಬ ವಚನದ ಮಾತೊಂದಿದೆ. 'ಮನೆ ನೋಡಾ ಬಡವರು... ಮನ ನೋಡಾ ಘನವಂತರು' ಎಂಬುದೂ ವಚನದ ಮಾತೇ. ಅಂತಹ ಕರಿಸಿದ್ದ-ಗಿಡ್ಡಿ-ಬೈರರು ಸಿರಿವಂತರು, ಸುಖಿಗಳು, ನಿತ್ಯತೃಪ್ತರು; ಅವರ ಬದುಕಿಗೆ ಗರ ಬಡಿಯುವವರೆಗೆ!

ಒಂದು ದಿನ ಅಪ್ಪ ಮಗನೊಡಗೂಡಿ ಮೀನು ಹಿಡಿಯಲು ಕೆರೆಗೆ ಹೋಗಿರುತ್ತಾನೆ. ಹೂವು ಕೀಳಲು ಕೆರೆಗಿಳಿದ ಬೈರ ಕಾಲು ಜಾರಿ ನೀರಲ್ಲಿ ಮುಳುಗುತ್ತಾನೆ. ಅಳುತ್ತಾ ಕರಿಸಿದ್ದ ಮಗನನ್ನು ಮೇಲಕ್ಕೆ ತಂದ.... ಅಲ್ಲಲ್ಲ ಮಗನ ಶವವನ್ನು ದಡಕ್ಕೆ ಹೊತ್ತು ತಂದ. ಕಂಗೆಟ್ಟ ಅಪ್ಪ ಅಳು ಅಳುತ್ತಾ ಭೂತರಾಯನಲ್ಲಿ ಮಗನನ್ನು ರಕ್ಷಿಸೆಂದು ಬೇಡುತ್ತಾನೆ.

ಅದೇ ವೇಳೆಗೆ ಬಂದ ತಾಯಿ ಗಿಡ್ಡಿ ಎದೆ ಹರಿದು, ತಲೆಗೆದರಿ, ತಲೆ ಜಜ್ಜಿಕೊಳ್ಳುತ್ತಾ, ಚೀರಾಡಿ, ಭೋರಾಡಿ ಅಳುತ್ತಾಳೆ. ಕರುಳು ಕತ್ತರಿಸುವ ಈ ನೋವನ್ನು ನಮ್ಮ ಎದೆಗೂ ಸಂವಹಿಸುವ ನಿರೂಪಕನ ಧ್ವನಿಯಲ್ಲಿನ ಆರ್ದ್ರತೆ, ಇದುವರೆಗೂ ನಿರೂಪಕನೊಡಗೂಡಿ ನಡೆದ ಎಲ್ಲರ ಕಣ್ಣಾಲಿಯನ್ನು ತುಂಬುವುದು ಅರೆಗಳಿಗೆಯೊಳಗೆ.

ಈ ಘಟನೆ ನಡೆಯುವಾಗ ಸುತ್ತಲಿದ್ದ ಪರಿಸರದ ಚಿತ್ರ ಭಾವ ತೀವ್ರತೆಯನ್ನು ಹೆಚ್ಚಿಸುತ್ತದೆ.

ಮಧ್ಯಾಹ್ನದಾ
ಬಿರುಬಿಸಿಲು ಬನ ಬೆಟ್ಟಗಳ ಮೇಲೆ ಮಲಗಿತ್ತು.
ತಿಳಿನೀಲಿಯಾಗಸದಿ ಬಿಳಿಯ ಮೋಡದ ಮಂದೆ
ಚಲಿಸದೆಯೆ ನಿಂತಿತ್ತು. ಏನೂ ತಿಳಿಯದ ಹಸುಳೆ
ಕಣ್ಣು ಬಿಡುವಂತೆ ಕೆರೆ ಮುಗ್ಧತೆಯ ತೋರಿತ್ತು.
ಬೆಟ್ಟ, ಕಾನ್, ಮುಗಿಲು, ಬನ, ಬಯಲು, ಕೆರೆ, ಮರ, ಬಳ್ಳಿ
ಎಲ್ಲಿ ನೋಡಿದರಲ್ಲಿ ಶ್ರೀ ಶಾಂತಿ ನೆಲೆಸಿತ್ತು.

ಹುಂಡ, ಗಿಡ್ಡಿ ಸಿದ್ಧನ ಎದೆಗಳು ಮಾತ್ರ ಬೇರೆ ಲೋಕದಲ್ಲಿದಂತೆ ತೋರಿದವು ಎಂದು ಹೇಳುವಲ್ಲಿ ಕಥೆ ಮುಗಿಯುತ್ತದೆ.

ಕವನದ ಮುಂದಿನ ಸಾಲುಗಳು ಕವಿಯ 'ದಾರ್ಶನಿಕ ಸಿದ್ಧಾಂತದ' ಏರುಧ್ವನಿ. ಇದಕ್ಕೆ ಪರ್ಯಾಯ ಸಾಲುಗಳೇ ಇಲ್ಲ.

ಯಮನ ಕರಣಿಕನಾಗ ಕಾಲದೋಲೆಯ ಮೇಲೆ,
ಚಿತ್ರಗುಪ್ತನು ಬರೆದು ಚಿತ್ರಿಸಿದನಿಂತೆಂದು;
ಪಾರ್ಲಿಮೆಂಟಿನೊಳ್ಬ ಭಾಷಣವ ಮಾಡಿದನು....
ವಂಗದೇಶದ ಕವಿಯು ನಾಟಕವನಾಡಿದನು....
ಹಿಮಗಿರಿಯ ಮೇಲೊಬ್ಬ ಸಾಧುವಾದನು ಸಿದ್ಧ....
ಜರ್ಮನಿಯ ದೇಶದಲಿ ನಡೆದಿದೆ ಮಹಾಯುದ್ಧ....
ಕುಪ್ಪಳಿಯ ಕೆರೆಯಲ್ಲಿ ಬೈರ ಹುಡುಗನು ಬಿದ್ದ....
ಮಡಿದವಗೆ ಮರುಗುವರು ಗಿಡ್ಡಿ, ಕರಿಸಿದ್ದ....
ಹಂಡನಾಯಿಯು ಮರುಗೆ ಕಣ್ಣೀರು ಕರೆದಿತ್ತು....
ಆಫ್ರಿಕದಿ ಕಂಬಿ ತಪ್ಪಿದ ರೈಲು ಬಿದ್ದಿತ್ತು....
ಕಾಶಿಯಲಿ ಹಾರುವರು ಹೇಳುತಿರುವರು ವೇದ....
ಚಿತ್ರಗುಪ್ತನಿಗಿದೆಯೆ ಮೇಲು ಕೀಳಿನ ಭೇದ?

ಬೈರನ ಸಾವು ಲೋಕದ ದೃಷ್ಟಿಯಲ್ಲಿ ಅತ್ಯಂತ ಸಣ್ಣ ವಿಚಾರವಿರಬಹುದು. ಆದರೆ, ಅದೇ ಹೊತ್ತಿಗೆ ಜರುಗಿರಬಹುದಾದ ಜಾಗತಿಕ ಮಹತ್ವದ ಘಟನೆಗೆ ಸರೀಕವಾದದ್ದು. ಬದುಕಿಗತೀತವಾದ ವಲಯದಲಿ ನಿಂತು ನೋಡಿದಾಗ ಈ ಜಗತ್ತಿನಲ್ಲಿ ಯಾವುದೂ ಒಂದಕ್ಕಿಂತಿನ್ನೊಂದು ಮೇಲಾದುದ್ದೂ ಅಲ್ಲ ಅಥವಾ ಕೀಳಾದುದ್ದೂ ಅಲ್ಲ. ಇದಕ್ಕೆ ಪೂರಕವಾದ ಬರಹದ ತುಣುಕೊಂದು 'ಮಲೆನಾಡ ಚಿತ್ರಗಳು' (ಅಪ್ಪಣ್ಣನ ರೇಷ್ಮೆಕಾಯಿಲೆ) ಪುಸ್ತಕದಲ್ಲಿದೆ.

'ಲೋಕರೂಢಿಯ ದೃಷ್ಟಿಯಿಂದ ಎಷ್ಟೇ ಅಲ್ಪವಾದುದಾಗಲಿ ಎಷ್ಟೇ ಮಹತ್ತಾದುದಾಗಲಿ ಪ್ರತಿಯೊಂದು ವಸ್ತುವನ್ನೂ ಪ್ರತಿಯೊಂದು ಸನ್ನಿವೇಶವನ್ನೂ ವಿರಾಟ್ ದೃಷ್ಟಿಯಿಂದ ನೋಡಲೆಳಸುವುದು ನನಗೊಂದು ಹುಚ್ಚು. ಹಾಗೆ ನೋಡಿದರೆ ಅಲ್ಪತ್ವಮಹತ್ವಗಳೆಲ್ಲ ಮಾಯವಾಗಿ ಸಮತ್ವ ಮೂಡುತ್ತದೆ; ನಮ್ಮ ಅಹಂಕಾರವೂ ತಗ್ಗಿ, ಅಣುವಿನಿಂದ ಹಿಡಿದು ಆಕಾಶದವರೆಗೂ, ಅಜ್ಞಾತವಾದ ಇರುವೆಯಿಂದ ಜಗದ್ವಿಖ್ಯಾತನಾದ ಮಹಾತ್ಮನವರೆಗೂ ಎಲ್ಲರೂ ಎಲ್ಲವೂ ಮಹಿಮಾಮಯವಾಗಿ, ಅನಿರ್ವಚನೀಯವಾದ, ಅಪಾರವಾದ ವಿಶ್ವವ್ಯೂಹದಲ್ಲಿ ಸರ್ವಸಮತ್ವದ ಮತ್ತು ಸರ್ವಮಹತ್ವದ ಅನುಭವವುಂಟಾಗಿ, ಹೃದಯದಲ್ಲಿ ನಿಶ್ಚಲತೆಯೂ ಆನಂದವೂ ಶಾಂತಿಯೂ ಮೈದೋರುತ್ತವೆ. ಪ್ರತಿಯೊಂದು ವಸ್ತುವಿನ ಪೂರ್ಣ ಪ್ರಯೋಜನ ವ್ಯಕ್ತವಾಗುವುದು ಅಂತಹ ವಿರಾಟ್ ದೃಷ್ಟಿಯಿಂದಲೆ. ಸೃಷ್ಟಿಯೆಲ್ಲವೂ ಒಂದು ಮಹಾಜಾಲದಂತೆ ಎಂದೂ ಪ್ರತಿಯೊಂದು ವಸ್ತುವೂ ಜಡವಾಗಿರಲಿ ಚೇತನವಾಗಿರಲಿ ಪರಸ್ಪರೋಪಜೀವಿಯೆಂದೂ ಅನೇಕ ಶತಮಾನಗಳ ಹಿಂದೆ ಮೃತ್ಯುಮುಖಿಯಾಗಿದ್ದ ರಾವಣನ ಆರ್ತನಾದ ನಾಳೆ ಸಾಯಲಿರುವ ನೊಣವೊಂದರ ರೋದನಕ್ಕೂ ನಾಳೆ ಅರಳಲಿರುವ ಕುಸುಮವೊಂದರ ಸೌಂದರ್ಯಕ್ಕೂ ಹೇಗೋ ಸಂಬಂಧಪಟ್ಟಿದೆಯೆಂದು ನನ್ನ ದೃಢವಾದ ನಂಬುಗೆ. ಆದ್ದರಿಂದ ಬಣ್ಣ ಬಣ್ಣದ ಸಣ್ಣ ಹಕ್ಕಿಯೊಂದು ಯಾರೂ ಕಾಣದಂತೆ ಮಲೆನಾಡಿನ ಕಾಡಿನ ಒಂದು ಮರದಲ್ಲಿ ಕುಳಿತು ಪ್ರಾತಃಕಾಲದ ಸ್ವರ್ಣೋತ್ಸವದಲ್ಲಿ ಇಂಪಾಗಿ ಗಾನಗೈಯುತ್ತಿದ್ದರೆ ನಾನು ಆ ಸನ್ನಿವೇಶವನ್ನು ಸರ್ವಕಾಲ ಸರ್ವದೇಶರಚಿತವಾದ ವಿರಾಟ್ ರಂಗದ ಭಿತ್ತಿಯಲ್ಲಿಟ್ಟು ನೋಡಿ ಕೇಳಿ ನಲಿಯುತ್ತೇನೆ. ಹಾಗೆ ಮಾಡುವುದರಿಂದ ಸನ್ನಿವೇಶದ ಮಹತ್ವ ನೂರ್ಮಡಿಯಾಗುತ್ತದೆ. ಅದು ಜಗತ್ತಿನಲ್ಲಿ ನಡೆಯುವ ಮತ್ತಾವ ಮಹದ್ವ್ಯಾಪಾರಕ್ಕೂ ಕೀಳಾಗುವುದಿಲ್ಲ. ಬ್ರಹ್ಮವ್ಯೂಹದಲ್ಲಿ ಷೇಕ್ಸ್‌ಪಿಯರನ ನಾಟಕರಚನೆ ಎಷ್ಟು ಮುಖ್ಯವೋ, ಮೊನ್ನೆ ನಡೆದ ಘೋರಯುದ್ಧ ಎಷ್ಟು ಅನಿವಾರ್ಯವೋ, ಅದೂ ಅಷ್ಟೇ ಮುಖ್ಯ, ಅಷ್ಟೇ ಅನಿವಾರ್ಯ ಎಂಬುದು ನನ್ನ ನಂಬುಗೆ. 'ಭುವನ ಕವಿ'ಯ ಭವ್ಯಸ್ವರಮೇಲದಲ್ಲಿ ರನ್ನ ಒಂದು ಲಲಿತರಾಗವಾದರೆ ಗೂಬೆ ಕೂಡ ಒಂದು ಕೀಚುದನಿ!

'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಮೊದಲಲ್ಲಿ ಓದುಗರನ್ನು ಉದ್ದೇಶಿಸಿ 'ಇಲ್ಲಿ ಯಾರೂ ಮುಖ್ಯರಲ್ಲ, ಯಾವುದೂ ಯಃಕಶ್ಚಿತವಲ್ಲ' ಎನ್ನುವುದೂ ಅದೇ ಅರ್ಥದ ಮಾತು. ಈ ವಿರಾಟ್ ದರ್ಶನ ಜೀವನದುದ್ದಕ್ಕೂ ಅವರ ಮನೋಭೂಮಿಯಲ್ಲಿ ಅಂತರ್ಜಲವಾಗಿ ಹರಿದ ದ್ರವ್ಯ.

ಒಟ್ಟಾರೆ ಕಥನ ಕವನಗಳನ್ನು ಓದಿದವರರೆಲ್ಲರ ಎದೆಯಲ್ಲಿ'ಕರಿಸಿದ್ದ' ಬಹುಕಾಲ ನೆಲೆಯಾಗಿ ನಿಲ್ಲುವ ಕವನ.... ನನ್ನೆದೆಯಲ್ಲಿ ನಿಂತಂತೆ.

'ಮರಸು ಬೇಟೆ' ಕರಿಸಿದ್ದನ ಕಥೆ ಮುಗಿದ ನಂತರ ಮುಂದಿನ ಪುಟದಲ್ಲಿ ಪ್ರಕಟವಾಗಿರುವ ಕವನ. ಹಲವಾರು ವೈಯಕ್ತಿಕ ಕಾರಣಗಳಿಗಾಗಿ ನನಗೆ ನಿಚ್ಚಿಗೆಯಾದ

ಕವನ. ಬಂದೊರಗಬಹುದಾಗಿದ್ದ ಗಂಡಾಂತರವೊಂದು ಬಂದೊರಗದೇ, ಮಂಗಳದಲ್ಲಿ ಮುಕ್ತಾಯವಾಗುತ್ತದೆ, 'ಮರಸು ಬೇಟೆ'ಯಲ್ಲಿ.

ಹಲವಾರು ಜನರ ಬದುಕಿನಲ್ಲಿ ಈ ಕವಿತೆಯೊಳಗಿನಂತಹ ಘಟನೆ ನಡೆದಿರಬಹುದು. ಆಗಬಹುದಾಗಿದ್ದ ಅನಾಹುತ ತಪ್ಪಿದ್ದಕ್ಕೆ ಯಾವುದೋ ಅಗೋಚರ ಶಕ್ತಿಯನ್ನೋ, ಗೋಚರವಾದ ಘಟನೆಯನ್ನೋ ಅಥವಾ ಅನಿರೀಕ್ಷಿತವಾಗಿ ಅನಾಹುತ ತಪ್ಪಿಸುವುದಕ್ಕೆ ಕಾರಣರಾದ ವ್ಯಕ್ತಿಯನ್ನೋ ನೆನೆದು ಕೃತಜ್ಞತೆಯನ್ನೊಪ್ಪಿಸುವವರನ್ನು ನೋಡಿದ್ದೇನೆ. ಕೆಲ ಘಟನೆಗಳನ್ನು ಕೇಳಿದ್ದೇನೆ; ವೈಯಕ್ತಿಕವಾಗಿ ಅನುಭವಿಸಿದ್ದೇನೆ. ಈ ಕಾರಣದಿಂದಾಗಿ ಈ ಕವನ ನನಗೆ ಹೆಚ್ಚು ಅರ್ಥಪೂರ್ಣ.

ಇನ ಇಳಿವ ಹೊತ್ತಿಗೆ ಬೇಟೆಗೆಂದು ಹೊರಟು ನಿಂತವನನ್ನು ಕಂಡು ಅಳುತ್ತಾ, ನಾನೂ ನಿನ್ನೊಡನೆ ಬರುವೆನೆಂದು ಗೋಳಿಡುವ ಕಂದನಿಗೆ, ಬೇಡ ಅಲ್ಲಿ ಹುಲಿಯಿದೆ ಹಂದಿ ಇದೆ ಎಂದೆಲ್ಲಾ ಹೆದರಿಸುತ್ತಾನೆ ಅಪ್ಪ. ಕವನದಲ್ಲಿ ಬರುವ ಏಳು ವರ್ಷದ ಕಂದನ ಮುದ್ದಾದ ವರ್ಣನೆಗೆ ಸಾಟಿಯಾದ ಸಾಲುಗಳಿಲ್ಲ.

ಏಳು ವರುಷದ ರನ್ನನವನು;  
ತುಂಬುದಾವರೆ ಕೆನ್ನೆಯವನು;  
ನೇರಳೆಯ ಕರಿಕಣ್ಣಿನವನು  
ದುಂಬಿಗುರುಳವನು !

ಒಟ್ಟಿನಲ್ಲಿ ಎತ್ತಿ ಮುದ್ದಾಡ ಬಯಸುವಂತಹ ರೂಪುಳ್ಳ ಕಂದ. ಹಟ ಬಿಡದ ಕೆಂಪು ತುಟಿಯ ತೊದಲು ನುಡಿಯ ಕಿಶೋರನಿಗೆ ಮುತ್ತು ಕೊಟ್ಟು 'ಬರುವೆನೆಂದು ಹಟವ ಹಿಡಿದರೆ ಕೊಡುವೆ ಪೆಟ್ಟು' ಎಂದು ಗದರಿಸಿ ಕೋವಿ ಹಿಡಿದು ಹೊರಟ ಕಾಡಿನ ಕಡೆಗೆ....ಅಪ್ಪ/ ಬೇಟೆಗಾರ. ಅಪ್ಪನ ಜೊತೆಗೆ ತಾನೂ ಹೋಗಲೇಬೇಕೆಂದು ರಚ್ಚೆ ಹಿಡಿದ ಮಗನನ್ನು, ಜಂತುಗಳಿಂದ ತುಂಬಿದ ಕಾಡು ಸುರಕ್ಷಿತವಲ್ಲ ಎಂದು ಅಂಜಿ, ಅಚ್ಚೆಯಿಂದಲೇ ಜೊತೆಯಲ್ಲಿ ಬರುವುದು ಬೇಡ ಎಂದು ಹೇಳುವ ಅಪ್ಪ ಆಪ್ತರೆನಿಸುತ್ತಾರೆ. ಮಗನ ಹಿಂದೆ ಬಿಟ್ಟು ಬೇಟೆಗೆ ಹೊರಟವನಿಗೇನೋ ಒಳಗುದಿ. ಯಾರೋ ಹಿಂಬಾಲಿಸಿ ಬರುತ್ತಿರುವಂತಹ ಅನಿಸಿಕೆ. ಆಗಲಿರುವ ಅನಾಹುತದ ಅರಿವು ಆರನೆಯ ಇಂದ್ರಿಯಕ್ಕೆ ಗೋಚರವಾದಂತೆ. ಮಳೆಯ ತೇವಕ್ಕೆ ತೋಯ್ದ ಬಿದಿರು, ಮರದಗಾಳಿಗೆ ತೂಗಿ ಒಂದಕ್ಕೊಂದು ಹೊಸೆದು ಮಾಡಿದ ಶಬ್ದ ಯಾರೋ ಚೀರಿಟ್ಟು ಅತ್ತಂತೆ ಅಡವಿಯನ್ನೆಲ್ಲಾ ತುಂಬಿಕೊಂಡಿತು. ಹಕ್ಕಿಗಳೂ ಗೂಡು ಸೇರಿ ಹಾಡುವುದನ್ನು ನಿಲ್ಲಿಸಿಬಿಟ್ಟಿದ್ದವು. ಬಾನಲ್ಲಿ 'ಬೆಳ್ಳಿ' ಕಾಣಿಸಿಕೊಂಡಿತು ಇರುಳು ಕವಿದಂತೆ.

ಮತ್ತೆ ಬೇಟೆಗಾರನಿಗೆ ಯಾರೋ ಕೂಗಿದಂತೆ... ಯಾರೋ ಅತ್ತಂತೆ ಭಾಸವಾಯಿತು. ಬಿದುರು ಮೆಳೆಯ ಮಧ್ಯದಲ್ಲಿ ಸಪ್ಪಳ ಕೇಳಿತೆ? ಅಥವಾ ಬರೀ ಗಾಳಿಯೇನೋ? ಎಂದು ನಿಂತು ನೋಡಿದನು. ಏನೂ ಕಾಣದು, ಕಿವಿಗೊಟ್ಟು ಕೇಳಿದನು, ಏನೂ ಇರಲಾರದು

ಎಂದು ಮುಂದುವರೆದ ಅವನು, ಹತ್ತಿರದ ಕಾಣೆ ಹಣ್ಣಿನ ಮರವನ್ನು ಏರಿ ಕುಳಿತನು, ಮನಸ್ಸು ಮತ್ತು ದೃಷ್ಟಿಯನ್ನು ಕೇಂದ್ರೀಕರಿಸಿ ಬರಲಿರುವ ಪ್ರಾಣಿಗಾಗಿ ಕಾಯುತ್ತಾ.

....ಸುತ್ತ ಕಾಡಿನ
ಮರದ ಕತ್ತಲೆ; ಕೆಳಗೆ ಹಳುವಿನ
ಸಾಂದ್ರ ವಿಸ್ತಾರ.

ಇದು ಬೇಟೆಗಾರನ ಸುತ್ತಿದ್ದ ಪರಿಸರ. ತಾಳ್ಮೆಯನ್ನೂ ಏಕಾಗ್ರತೆಯನ್ನೂ ಯಥೇಚ್ಛವಾಗಿ ಬೇಡುವ 'ಬೇಟೆ' ಒಂದು ತಪಸ್ಸು. ಈ ಬೇಟೆಗಾರ ನುರಿತ 'ಜಾಣಗುರಿಕಾರ'. ಅವನಿಟ್ಟ ಗುರಿ ತಪ್ಪುವುದೇ ಇಲ್ಲ. ಹೀಗೆ ಕಾಯುತ್ತಿರುವಾಗ ಹಳುವಿನಲ್ಲಿ ಏನೋ ಅಲುಗಿದಂತಾಯ್ತು; ಚುರುಕುಗೊಂಡ ಜಾಣ ಬೇಟೆಗಾರ ಕೋವಿಯೇರಿಸಿ ಗುರಿಯಿಟ್ಟು ಬಿಲ್ಲನು ಒತ್ತೇಬಿಟ್ಟ, ಹಾರಲಿಲ್ಲ ಈಡು! ಕೋವಿ ಕೈಕೊಟ್ಟಿತ್ತು. ಏನಾಯ್ತು ಎಂದು ತಿಳಿಯದೇ;

ಕೇಪು ಕೆಟ್ಟಿದೆಯೇನು? ಅಥವಾ
ಕಿವಿಗೆ ಮಸಿಯೈತರದೆ? ಅಥವಾ
ಮಾಟ ಮಾಡಿಹರೇನು? ಅಥವಾ....

ಅಲ್ಲಿಗೇ ಅವನ ಯೋಚನಾಸರಣಿ ತುಂಡಾಯ್ತು. ಶಿವ! ಶಿವಾ! ಎಂದು ಉದ್ಗರಿಸಿದ. ಹಳುವಿನಲ್ಲಿ ಬೇಟೆಗಾರ ಕಂಡದ್ದು ಮೃಗವಲ್ಲಾ! ಕಂಡದ್ದು ಸುರಕ್ಷಿತವಾಗಿರಲೆಂದು ಮನೆಯಲ್ಲಿ ಬಿಟ್ಟುಬಂದಿದ್ದ ಮಗ! ತನ್ನ ಜೀವದ ಜೀವ. ಭಯಂಕರ ಘೋರಾರಣ್ಯವನ್ನು ಹಾದು ಇರುಳ ಕತ್ತಲಲ್ಲಿ ತನ್ನನರಸಿ ಬಂದಿದ್ದಾನೆ. ಮಗನನ್ನು ಕಂಡದ್ದೇ ಅಪ್ಪನ ಪ್ರಾಣ ಹಾರಿ ಹೋದಂತಾಯ್ತು. ಆಗ ಬಹುದಾಗಿದ್ದ ಆಕಸ್ಮಿಕ ದುರಂತದ ಅರಿವು ಬಂದಂತೆ ಇದುವರೆಗೆ ಬೈದ ಕೋವಿಯನ್ನು 'ದೈವ' ಎನ್ನುತ್ತಾನೆ. ಕೋವಿಯೀಗ ಅವನಿಗೆ ಪರಮಪೂಜ್ಯ. ತನ್ನ ಮಗನ ಜೀವದ ಬೆಲೆ ಅರಿತ 'ಬೇಟೆಗಾರ', ಬೇರೆ ಜೀವಿಗಳ ಜೀವದ ಚೈತನ್ಯದ ಮಹತ್ವವನ್ನರಿತ 'ಅಪ್ಪನಾಗಿ', ಅಹಿಂಸಾ ವ್ರತ ಹಿಡಿಯುತ್ತಾನೆ. ಇವನ ಮಾತು ಕೇಳಿದ ಹಳ್ಳಿ ಜನ ನಿನಗೆಲ್ಲೋ ಹುಚ್ಚಿರಬೇಕು. ನಿರ್ಜೀವ ಕೋವಿಗೆ ಕನಿಕರ ಉಂಟೇನು? ಅದೆಲ್ಲೋ ಕೆಟ್ಟದ್ದಿರಬೇಕು- ಎನ್ನುತ್ತಾರೆ. ಅಪ್ಪ ಕೊಡುವ ಉತ್ತರದೊಂದಿಗೆ ಕಥನ ಕವನ ಮುಕ್ತಾಯಗೊಳ್ಳುತ್ತದೆ.

''ನನ್ನ ಹಸುಳೆಯ ಪೊರೆದ ಕೋವಿ
ನನ್ನ ಪುಣ್ಯದ ಪರಮದೇವಿ!
ಹುಚ್ಚದುವೆ ಮೆಚ್ಚು!''

'ಐ'ಗಳೇ, ಇದನ್ನು ಓದುತ್ತ ಹೋದಂತೆ ಇತ್ತೀಚಿನ ಯುದ್ಧದಲ್ಲಿ ಫ್ರೆಂಡ್ಲೀ ಫ್ಯಯರ್ ನಲ್ಲಿ ಸತ್ತ ಯೋಧರ ನೆನಪಾಗುವುದಿಲ್ಲವೇ? ಅವರ ಅಪ್ಪ, ಅಮ್ಮ, ಮಕ್ಕಳು, ಹೆಂಡತಿ, ತಂಗಿ,

ಅಣ್ಣ ಬಳಗ... ಎಲ್ಲಾ ನೆನಪಾಗಿ ಕರುಳು ಚುರ್ ಎನ್ನದೇನು? ಭೂಮಿ ಮೇಲಿನ ಯಾವ ಕೋವಿಯಿಂದಲೂ ಈಡು ಹಾರದೆ, ಜಗತ್ತಿನ ಪ್ರತಿ ಕೋವಿಯೂ ಜೀವ ಪೊರೆವ ಪರಮದೇವಿಯಾಗಲಿ ಎನ್ನುವುದು ನನ್ನ ಪ್ರಾರ್ಥನೆ! ನೀವೇನೆನ್ನುತ್ತೀರಿ 'ಐ'ಗಳೇ? ಕವನದಲ್ಲಿ ಬರುವ ಬೇಟೆಗಾರನ ಹುಚ್ಚು ನನಗೆ ಮೆಚ್ಚಾಗಿ ಕಾಣಿಸಿದಂತೆ ಕೋವಿ ಹೆಗಲೇರಿಸಿಕೊಂಡಿರುವ ಎಲ್ಲರಿಗೂ ಮೆಚ್ಚಾಗಲಿ. ಯಾರ ಕೋವಿಯೂ ಗುಡುಗದಿರಲಿ.

ಮಿಕ್ಕೆಲ್ಲಾ ಕವನ ಕಥನಗಳೂ ಮೆಚ್ಚುವಂತಹವೇ... ನಾಗಿ, ಡೂಲಿ, ಮಂಜಣ್ಣ ಹೇಳಿದ ಸ್ಥಳಕಥೆ, ರಕ್ತರಜನಿ, ಕುಮುದಿನಿ.... ಇವೆಲ್ಲವುಗಳ ಗತಿ, ಲಯ, ವಿಸ್ತಾರ, ವಿಚಾರ, ವಿವರ, ಆಳ ಹಾಗು ನಿರೂಪಣಾ ಶಕ್ತಿ ಕೆಲವೊಮ್ಮೆ ಗಾಳಿಗೂ ಉಸಿರನ್ನು ಕಟ್ಟಿಸುವಂತಹ ಗುಣವುಳ್ಳವು.

ಕಥನ ಕವನಗಳನ್ನು ಓದುತ್ತಾ ಹೋದಂತೆ ಎಷ್ಟೋ ವರ್ಷಗಳ ಹಿಂದೆ ನನ್ನಂತಹ ಚಿಕ್ಕ ಚಿಣ್ಣ ಚಿಲ್ಟೇರಿಗಳನ್ನು ಜಗುಲಿಯ ಸುತ್ತ ಕೂರಿಸಿಕೊಂಡು ಕಥೆ ಹೇಳುತ್ತಿದ್ದ ಸಿದ್ದಕ್ಕಯ್ಯ, ಬಳಗದ ಮಕ್ಕಳನ್ನೆಲ್ಲಾ ಎತ್ತಿನ ಬಂಡಿಯ ಮೇಲೆ ಹೊಲ, ಹೊಳೆ ಸುತ್ತಿಸಿ ರಾತ್ರಿ ಕಥೆ ಹೇಳುತ್ತಿದ್ದ ಎಲೆರಾಂಪುರದ ಸೋದರಮಾವ, ಸಂಜೆ ದನದ ಕೊಟ್ಟಿಗೆ ಕೆಲಸ ಮುಗಿಸಿ, ಹಿತ್ತಲ ಮರದ ಕೆಳಗೆ ಕುಳಿತು ನಮಗೆಲ್ಲಾ ಕಥೆ ಹೇಳುತ್ತಿದ್ದ ಪುಟ್ಟಸ್ವಾಮಿ.... ಇವರೆಲ್ಲಾ ನೆನಪಾಗುತ್ತಾರೆ. ಅದೇ ಆತ್ಮೀಯ ಭಾವ ಈ ಸಂಪುಟದಲ್ಲಿರುವ ಕಥನ ಕವನಗಳಲ್ಲಿ ನನಗಾಗಿ ಅಡಗಿದೆ ಎನ್ನಿಸುತ್ತದೆ.

ದೃಶ್ಯ ಕವಿಯ ಭಾವವಾಗಿ, ಆ ಭಾವ ಅಕ್ಷರವಾಗಿ ಕಾವ್ಯದ ಸಾಲುಗಳು ರೂಪುಗೊಳ್ಳುತ್ತವೆ. ಹೀಗೆ ರೂಪುಗೊಂಡ ಕಣ್ಣಿಗೆ ಗೋಚರಿಸುವ ಸಾಲುಗಳು ಮತ್ತೆ ಅಗೋಚರವಾದ ಭಾವವಾಗಿ ಪರಿವರ್ತನೆಗೊಂಡು ಓದುಗರ ಮನದಲ್ಲಿ, ಕವಿ ಕಂಡ ಭಾವ ದೃಶ್ಯವಾಗಿ ಪುನರ್ ಸೃಷ್ಟಿಯಾಗಬೇಕು. ಅಂತಹ ಕಾವ್ಯ ಎಂದೂ ಜೀವಂತ. ಅದಕ್ಕೆಂದೇ ಕಥನ ಕವನದ ಪ್ರತೀ ಕಾವ್ಯಕ್ಕೂ ಜೀವಕಳೆ ಇದೆ.

ಹೋದವರೆಲ್ಲಾ ಕಂಡಿರುವ, ಇರುವವರಾರೂ ಕಾಣದ,
ಹೋಗುವವರೆಲ್ಲಾ ಕಾಣುವ, ಮೇರೆಯನ್ನೇ ಕಾಣದ
ಮಾಯಾ ಕಡಲಿಗೆ ತೃಣದಂತೆ ತೇಲಿ ಹೋದನು...

ಇದು ಪುಟ್ಟಾಚಾರಿಯ (ಮಲೆನಾಡಿನ ಚಿತ್ರಗಳು) ಸಾವಿನ ಬಗ್ಗೆ ಇರುವ ಉಲ್ಲೇಖನ. ಆದರೆ ಈ ಭುವನ ಕವಿ ತೃಣದಂತೆ ತೇಲಿ ಹೋಗದೇ ಎಂದೂ ನಮ್ಮಲ್ಲಿಯೇ ಉಳಿದು ನಾವು ಬೆಳೆದಂತೆ ನಮ್ಮಲ್ಲಿ ಬೆಳೆಯುತ್ತಲೇ ಇರುವವರು. ನಾವು ಅಳಿಯುವವರೆಗೆ ಉಳಿಯುವ 'ಕಂಪಿನ ತಾತನಿಗೆ' ನಮೋಃ ನಮೋಃ ಎನ್ನದೆ ಇನ್ನೇನನ್ನಲಿ 'ಐ'ಗಳೆ?

ನೀವು ಕೇಳಿದ ಬರಹ ಬರೆಯಲಾರದೆ ಹೋದೆ ಕ್ಷಮೆಯಿರಲಿ 'ಐ'ಗಳೇ.

●

# ಕುವೆಂಪು ಕವಿತೆಗಳು ಮತ್ತು ಸುಗಮಸಂಗೀತ

## ಸಂಧ್ಯಾ ರವೀಂದ್ರನಾಥ್, ಕ್ಯಾಲಿಫ಼ೋರ್ನಿಯ

"ಜಯ ಭಾರತ ಜನನಿಯ ತನುಜಾತೆ, ಜಯ ಹೇ ಕರ್ನಾಟಕ ಮಾತೆ" ಈ ಹಾಡನ್ನು ಕೇಳದವರಾರು? ಹಲವಾರು ವರ್ಷಗಳಿಂದ ಹಲವಾರು ಧಾಟಿಯಲ್ಲಿ ಈ ಹಾಡು ಹಾಡಲ್ಪಟ್ಟಿದೆ. ಕವಿ ಯಾರೆಂದು ತಿಳಿಯದವರೂ ಕೂಡ ಈ ಹಾಡನ್ನು ಗುನುಗುನಿಸುವಷ್ಟರ ಮಟ್ಟಿಗೆ ಈ ಹಾಡು ಪ್ರಸಿದ್ಧವಾಗಿದೆ. ವಿವಿಧ ರಾಗದಲ್ಲಿ, ಲಯದಲ್ಲಿ ಹಾಡಬಲ್ಲ ಈ ಕವಿತೆಯನ್ನು ಬರೆದವರು ರಸಋಷಿ ಕುವೆಂಪು. ಗೀತೆಯಾಗಲಿ ಎಂಬ ಉದ್ದೇಶದಿಂದ ಬರೆದಿದ್ದಲ್ಲ, ಆದರೆ ಅಖಂಡ ಗೇಯಗುಣ, ಪದಲಾಲಿತ್ಯವುಳ್ಳ ಈ ಕವಿತೆ ಹಲವು ಸಂಗೀತ ನಿರ್ದೇಶಕರ ಜಾಣ್ಮೆಯಿಂದ ಹಲವು ಮಾದರಿಯ ಭಾವಗೀತೆಯಾಗಿ ಬೆಳಗಿದೆ. ೪೦-೫೦ರ ದಶಕದಲ್ಲಿ ಕಾಳಿಂಗರಾಯರು, ೬೦-೮೦ರ ದಶಕದಲ್ಲಿ ಮೈಸೂರು ಅನಂತಸ್ವಾಮಿಯವರು ಹಾಗೂ ಸಿ. ಅಶ್ವಥ್ ಅವರ ಸಮರ್ಥ ನಿರ್ದೇಶನದಿಂದ ಯುವಜನರ ಮನಸೆಳೆಯುವಂತಹ ಆಕರ್ಷಕ ಗೀತೆಯಾಗಿದೆ. ಪಿ.ಬಿ. ಶ್ರೀನಿವಾಸ್ ಅವರ ಸಿರಿಕಂಠದಲ್ಲಿ ಸಿನಿಮಾ ಹಾಡು ಆಗಿ ಕೂಡ ಈ ಗೀತೆ ಮೆಚ್ಚುಗೆಗೆ ಪಾತ್ರವಾಗಿದೆ. ಇಷ್ಟೊಂದು ಜನಪ್ರಿಯತೆ ಪಡೆದ ಈ ಹಾಡಿನಲ್ಲಿ ಕುವೆಂಪು ಅವರು ಭಾರತಮಾತೆಯ ಪುತ್ರಿಯಾದ ಕನ್ನಡ ನಾಡನ್ನು ಸುಂದರ ನದಿ ವನಗಳ ಬೀಡು, ಕಲೆಗಳ ತೌರೂರು ಎಂದು ವರ್ಣಿಸುತ್ತಾರೆ. ಈ ಹಾಡು ಈಗ ನಾಡಗೀತೆಯಾಗಿ ನೇಮಕಗೊಂಡಿದೆ.

ಸುಲಭ, ಸುಂದರ ಪದಗಳ ಜೋಡಣೆ ಮತ್ತು ಗೇಯಗುಣಗಳಿಂದ ಕೂಡಿದ ಕುವೆಂಪು ಅವರ ಕವಿತೆಗಳು ಸುಗಮ ಸಂಗೀತಕ್ಕೆ ಬುನಾದಿ ಎನ್ನಬಹುದು. ಜಾನಪದ ಗೀತೆಗಳು ಹಳ್ಳಿಯ ಜನ ಜೀವನದ ವಿವಿಧ ಮುಖಗಳನ್ನು ಎತ್ತಿ ಹಿಡಿಯುವಂತಹದ್ದು. ದಾಸರ ಪದಗಳು ಭಕ್ತಿ ಭಾವ, ವೈರಾಗ್ಯ, ವೇದಾಂತದತ್ತ ಮುಖ ಮಾಡಿಕೊಂಡಿರುವಂತಹದ್ದು. ಕುವೆಂಪು ಅವರ ಕವಿತೆಗಳು ಇವೆಲ್ಲವನ್ನೂ ಆವರಿಸಿ, ಇನ್ನೂ ಒಂದು ಸ್ತರವೇರಿ ರಮಣೀಯ ನಿಸರ್ಗ ಸೌಂದರ್ಯ, ಹೆಣ್ಣು-ಗಂಡುಗಳ ಒಲವು, ದೇಶಭಕ್ತಿ ಮುಂತಾದ ಭಾವುಕ ವಸ್ತುಗಳನ್ನು ಪಡೆದು ಸರಳ ಸುಂದರ ಪದಗಳಲ್ಲಿ ಹೆಣೆದ ಆಕರ್ಷಕ ಗೀತೆಗಳು. ಕುವೆಂಪು ಅವರೇ ಹೇಳಿರುವಂತೆ "ಕವಿತೆ ಇತರ ಕಲೆಗಳಿಗಿಂತಲೂ ಅತಿಶಯವಾದ ಗೌರವಕ್ಕೆ ಪಾತ್ರವಾಗಿದೆ. ಅದು ವಾಙ್ಮಯ ಶರೀರಿಯಾಗಿರುವುದರಿಂದ ರಾಗರಸಭಾವಗಳನ್ನು ಉದ್ದೀಪನಮಾಡಿ ಪವಿತ್ರಗೈಯುವಂತೆಯೆ ಮನಸ್ಸಿಗೆ ಜ್ಞಾನಜ್ಯೋತಿಯನ್ನು ದಾನಮಾಡಿ ಆತ್ಮವನ್ನು ಅತ್ಯುನ್ನತ ಸ್ಥಿತಿಗೆ ಕೊಂಡೊಯ್ಯುತ್ತದೆ."

ಕುವೆಂಪು ಅವರು ಮುಂದುವರೆಸುತ್ತಾರೆ ''ಕಲ್ಪನೆ, ಭಾವ, ಆಲೋಚನೆ ಎಲ್ಲವೂ ಕವಿತೆಯಲ್ಲಿ ಸಮರಸವಾಗಿರಬೇಕು. ಕಲ್ಪನೆ ಮಾತ್ರವಿದ್ದರೆ ಲಘುವಾಗುತ್ತದೆ; ಭಾವ ಮಾತ್ರವಿದ್ದರೆ ಬರುಗನಸಾಗುತ್ತದೆ; ಆಲೋಚನೆ ಮಾತ್ರವಿದ್ದರೆ ಶುಷ್ಕವಾಗುತ್ತದೆ''. ಸುಂದರ ಕಲ್ಪನೆ, ಸುಮಧುರ ಭಾವದಿಂದೊಡಗೂಡಿದ ಕುವೆಂಪು ಅವರ ಕವಿತೆಗಳು ಸುಗಮ ಸಂಗೀತಗಾರರಿಗೆ ದೈವಾನುಗ್ರಹದಂತೆ ಒದಗಿ ಬಂದಿತು. ಈ ರೀತಿ ಕುವೆಂಪು ಅವರು ಹೆಣೆದ ವಿವಿಧ ಪ್ರಕಾರದ - ಪ್ರೇಮಗೀತೆಗಳು, ಮಲೆನಾಡಿನ ನಿಸರ್ಗ ಸೌಂದರ್ಯವನ್ನು ವರ್ಣಿಸುವ ಗೀತೆಗಳು, ವೇದಾಂತ, ದೈವಿಕ ಶಕ್ತಿಯನ್ನು ವಿವರಿಸುವ ಗೀತೆಗಳು, ದೇಶಭಕ್ತಿಗೀತೆಗಳು - ಇವೆಲ್ಲವನ್ನು ಸುಗಮ ಸಂಗೀತ ಶೈಶವಾವಸ್ಥೆಯಲ್ಲಿದ್ದಾಗ ಸಂಗೀತಗಾರರು ಹಸನಾದ ರಾಗಕ್ಕೆ ಅಳವಡಿಸಿ ಹಾಡತೊಡಗಿದರು.

ಸುಗಮ ಸಂಗೀತ ಇತ್ತೀಚೆಗೆ ಹುಟ್ಟಿ ಬೆಳೆದು ಬಂದ ಪ್ರಾಕಾರ. ಸ್ವಾತಂತ್ರ್ಯ ದೊರೆತು ದೇಶ, ಜನಜೀವನ ಪರಿವರ್ತನೆಯಾಗುತ್ತಿದ್ದ ೫೦-೬೦ರ ದಶಕದಲ್ಲಿ ಹೊಸ ಮಾದರಿಯ ಈ ಸಂಗೀತ ಜನ್ಮ ತಾಳಿತು. ಸಾಹಿತ್ಯಪ್ರಧಾನವಾದ ಈ ಸಂಗೀತ ಪ್ರಾಕಾರ ಶಾಸ್ತ್ರೀಯ ಸಂಗೀತದಷ್ಟು ಕಟ್ಟುನಿಟ್ಟಿಲ್ಲದೆ, ಆದರೆ ಅದೇ ರಾಗಗಳ ಮೇಲೆ ರಚಿಸಿದ ಭಾವನಾತ್ಮಕ ಸಂಗೀತ. ೪೦-೫೦ ರ ದಶಕದಲ್ಲಿ ಕಾಳಿಂಗರಾಯರು ಈ ವಿಭಿನ್ನ ರೀತಿಯ ಸಂಗೀತವನ್ನು ಹಾಡಲು ತೊಡಗಿದರು. ಮುಂದೆ ಹೆಚ್.ಆರ್. ಲೀಲಾವತಿಯವರು ಪದ್ಮಚರಣ್ ಅವರ ನಿರ್ದೇಶನದಲ್ಲಿ ಖ್ಯಾತ ಕವಿಗಳ ಗೀತೆಗಳನ್ನು ಹಾಡತೊಡಗಿದರು. ಆಗ ಜನಸ್ತೋಮವನ್ನು ಮುಟ್ಟುವ ಪ್ರಮುಖ ಮಾಧ್ಯಮ - ರೇಡಿಯೋ ಆಕಾಶವಾಣಿಯ 'ನವಸುಮ' ಕಾರ್ಯಕ್ರಮದಲ್ಲಿ ತಿಂಗಳಿಗೊಂದು ಹೊಸಹಾಡು ಪ್ರಸಾರವಾಗತೊಡಗಿತು. ಆ ಗೀತೆಗಳನ್ನು ಬಹುಮಟ್ಟಿಗೆ ಹಾಡುತ್ತಿದ್ದವರು ಹೆಚ್.ಆರ್. ಲೀಲಾವತಿ. ಆ ಗೀತೆಗಳ ಕವಿ ಬಹುಮಟ್ಟಿಗೆ ಕುವೆಂಪು. ಹೀಗೆ ಕುವೆಂಪು ಅವರ ಕವನ ಸುಗಮ ಸಂಗೀತದ ಅವಿಭಾಜ್ಯ ಅಂಗವಾಯಿತು. ಕುವೆಂಪು ಅವರ ಕವನಗಳೇ ಇಲ್ಲದಿದ್ದರೆ ಈ ಮಾದರಿಯ ಸಂಗೀತ ಉತ್ಪತ್ತಿ ಆಗುತ್ತಿತ್ತೇ ಎನ್ನುವಷ್ಟು ಸಾಹಿತ್ಯ-ಸಂಗೀತ ಒಂದಕ್ಕೊಂದು ಹೊಂದಿಕೊಂಡ ಗೀತೆಗಳು, ಒಂದಕ್ಕೊಂದು ಪೂರಕವಾಗಿ ಪೋಷಕವಾಗಿ ಸಹೃದಯರ ಮನಸೆಳೆಯುವ ಗೀತೆಗಳ ಸೃಷ್ಟಿಯಾಯಿತು. ಸಾಹಿತ್ಯ, ಭಾವ, ಸಂಗೀತಗಳ ಸಂಗಮವಾಗಿ ಸುಗಮ ಸಂಗೀತ ಅತ್ಯಂತ ಜನಪ್ರಿಯವಾಯಿತು.

ಆಗ ಕುವೆಂಪು ಅವರ ಹಾಡುಗಳನ್ನು ಮನೆಮನೆಗೂ ತಲುಪುವಂತೆ ಮಾಡಿದ ಖ್ಯಾತಿ ಹೆಚ್.ಆರ್. ಲೀಲಾವತಿಯವರದ್ದು. ಇವರು ಹಾಡಿದ 'ಅಂತರತಮ ನೀ ಗುರು', 'ಇದೆ ನನ್ನ ಬಿನ್ನಹ ನಿನಗೆನ್ನ ತಾಯೇ', 'ಯಾರಾದರು ನೀನಾಗಿರು ಪ್ರಭುವೇ', 'ರಾಘವೇಂದ್ರ ದಯ ತೋರೋ', 'ಶ್ರೀ ಶಾರದಾ ದೇವಿ' ಮುಂತಾದ ಗೀತೆಗಳು ದೈವಿಕಶಕ್ತಿಯತ್ತ ಮನಸ್ಸನ್ನು ಸೆಳೆದರೆ, 'ನಿನ್ನ ಪದಕಮಲದಲಿ ಮನೆ ಮಾಡಿರುವ ಎನಗೆ', 'ನಿನ್ನ ಬಾಂದಲದಂತೆ' ವೇದಾಂತದತ್ತ ಎಳೆಯುತ್ತವೆ. ಈ ಹಾಡುಗಳು ಸ್ಕೂಲು ಕಾಲೇಜುಗಳ ಸಮಾರಂಭಗಳಲ್ಲಿ

ಹಾಡಲ್ಪಟ್ಟು ಯುವಜನರ ಮೆಚ್ಚಿನ ಗೀತೆಗಳಾದವು. ಸಿನಿಮಾ ಗೀತೆಯಾಗಿಯೂ ಜನರ ಮೆಚ್ಚುಗೆಯನ್ನು ಪಡೆದಿರುವ 'ದೋಣಿ ಸಾಗಲಿ'ಯಲ್ಲಿ ಕುವೆಂಪು ಅವರು ''ನಿನ್ನೆ ನಿನ್ನೆಗೆ, ಇಂದು ಇಂದಿಗೆ, ಇರಲಿ ನಾಳೆಯು ನಾಳೆಗೆ'' ಸಾಲಿನಲ್ಲಿ 'Living in the present moment' ಎನ್ನುವ ತತ್ತ್ವವನ್ನು ಹಿಡಿದಿಟ್ಟಿದ್ದಾರೆ. ಇನ್ನು ಅದನ್ನು ರಾಗದ ಚೌಕಟ್ಟಿನಲ್ಲಿ ಅಳವಡಿಸಿದಾಗ ಈ ಸೂತ್ರವನ್ನು ಮರೆಯುವುದೆಂತು ಸಾಧ್ಯ ?

ದೇಶಭಕ್ತಿ, ನಾಡಭಕ್ತಿಗಳ ಅಪಾರ ಖಜಾನೆ ಕುವೆಂಪು ಅವರ ಗೀತ ಗುಚ್ಛಗಳು. 'ವೇದವಾಣಿ ಪುಣ್ಯಜನನಿ' ದೇಶಭಕ್ತಿಯನ್ನು ಭಾವನಾಮಯವಾಗಿ ಚಿತ್ರಿಸಿದರೆ, ಜಡತೆಯನ್ನು ನೀಗಿಸಿ ಜನರನ್ನು ಎಚ್ಚರಿಸಿ, ಮುಂದೆ ಸಾಗುವಂತೆ ಹುರಿದುಂಬಿಸುವ ಗೀತೆಗಳು ಹಲವಾರು. 'ಬಾರಿಸು ಕನ್ನಡ ಡಿಂಡಿಮವಾ' ಗೀತೆಯನ್ನು ಅನಂತಸ್ವಾಮಿಯವರು ರಾಗಕ್ಕೆ ಅಳವಡಿಸಿ ಹಾಡುತ್ತಿದ್ದರೆ ಡಿಂಡಿಮದ ಬಡಿತದೊಡನೆ ಕನ್ನಡಿಗರ ಹೃದಯದ ಬಡಿತವು ಒಂದಾಗಿ ಹುಮ್ಮಸ್ಸು ಮೂಡುತ್ತಿತ್ತು.

ನಂತರ ಬಂದಿದ್ದು ಧ್ವನಿಸುರುಳಿಗಳ ಯುಗ. ಆಗಿನ ಪ್ರಮುಖ ಸಂಗೀತ ನಿರ್ದೇಶಕರು ಅಶ್ವಥ್ ಮತ್ತು ಅನಂತಸ್ವಾಮಿ. ಎಚ್.ಆರ್. ಲೀಲಾವತಿಯವರು ಬರೆದಿರುವಂತೆ ''ಕವನಗಳನ್ನು ಹಾಡುವ ಪರಿಪಾಠದಿಂದ ಸಾಹಿತ್ಯ ಹೆಚ್ಚು ಹೆಚ್ಚು ಜನಕ್ಕೆ ತಲುಪುವುದೆಂಬ ಮಾತನ್ನು ಮರೆಯಬಾರದು. ಇದರಿಂದ ಸಾಹಿತ್ಯದ ಬಗ್ಗೆ ಒಲವು ಮೂಡುವ ಸಾಧ್ಯತೆ ಕೂಡ ಇದೆ. ಒಮ್ಮೆ ರಾಷ್ಟ್ರಕವಿ ಕುವೆಂಪು ಹೇಳಿದ್ದರು. 'ನಿಮ್ಮಂಥ ಗಾಯಕ ಗಾಯಕಿಯರು ಕವನಗಳನ್ನು ಹಾಡದೇ ಇದ್ದಿದ್ದರೆ ಕವನದ ಪುಸ್ತಕಗಳೆಲ್ಲಾ ಬೀರುವಿನಲ್ಲೇ ಇರುತ್ತಿತ್ತು.' ಎಂದು. ಇದು ಅಕ್ಷರಶಃ ನಿಜ. ತೋಟದಲ್ಲಿ ಬೆಳೆವ ಹೂವುಗಳನ್ನು ಮನೆಮನೆಗೂ ತಲುಪಿಸುವ ಹೂವಾಡಗಿತ್ತಿಯರಿದ್ದ ಹಾಗೆ ಸುಗಮ ಸಂಗೀತಗಾರರು.'' ಹೀಗೆ ಸುಗಮ ಸಂಗೀತ ಧ್ವನಿಸುರುಳಿಗಳ ಮಾಧ್ಯಮದಲ್ಲಿ ಜನಮನವನ್ನು ಗೆದ್ದು ಕುವೆಂಪು ಮತ್ತು ಇತರ ಶ್ರೇಷ್ಠ ಕವಿಗಳ ಕವನಗಳು ಎಲ್ಲರ ಕಿವಿಗೂ ಬೀಳುವಂತಾಯಿತು.

'ಉತ್ತಮ ಕವಿತೆಯಲ್ಲಿ ಆಳವಾದ ಆಲೋಚನೆ ಇರಲೇಬೇಕು. ಅದರಲ್ಲಿಯೂ ಕಾವ್ಯವು ವ್ಯಂಜಕವಾದರಂತೂ ಹಾಗಿರುವುದು ಅತ್ಯಾವಶ್ಯಕ. ಶ್ರೇಷ್ಠ ಪ್ರತಿಭಾ ಸಂಪನ್ನನಾದ ಕವಿ ಸೃಷ್ಟಿಸಮುದ್ರದ ತಳದವರೆಗೂ ನುಗ್ಗಿ ಅತ್ಯುತ್ತಮವಾದ ಭಾವ ಚಿಂತಾರತ್ನಗಳನ್ನು ತನ್ನ ಕಲ್ಪನೆಯ ತಟ್ಟೆಯಲ್ಲಿಟ್ಟು ತಂದು ಬದುಕಿಗೆ ನಿವೇದಿಸಬೇಕು; ಮೇಲೆ ತೇಲುವ ಬರಿಯ ಬೆಳ್ನೊರೆಯನ್ನು ಮಾತ್ರ ಸಂಗ್ರಹಿಸಿದರೆ ಸಾಲದು'' ಎಂದಿದ್ದಾರೆ ಕುವೆಂಪು. ಅವರೇ ಮುಂದುವರಿಸಿ 'ಕವಿತೆಯಲ್ಲಿ ವೇದ ಶಾಸ್ತ್ರ ಕಾವ್ಯಗಳ ಪ್ರಭಾವಗಳೆಲ್ಲ ಐಕ್ಯವಾಗಿವೆ.' ಎಂದಿದ್ದಾರೆ. ಈ ರೀತಿಯ ಆಳವಾದ ಆಲೋಚನೆಗಳುಳ್ಳ ಅವರ ಕವಿತೆಗಳು ಬೇಕಾದಷ್ಟೇ ಇದ್ದರೂ, ನನ್ನ ಮೆಚ್ಚಿನ 'ಇಳಿದು ಬಾ ತಾಯಿ'ಯಲ್ಲಿ ಕುವೆಂಪು ಅವರು ತ್ರಿಶ್ವಮುಖವಾದ ಪರಬ್ರಹ್ಮದಲ್ಲಿ ಅಭವದುತ್ತಾಗಿ, ಭವದ ಬಿತ್ತಾಗಿ, ಋತದ ಚಿತ್ತಾಗಿರುವ ಪರಾಶಕ್ತಿಯನ್ನು

ಹೃದಯಕ್ಕೆ ಇಳಿದು ಬರುವಂತೆ ಆಹ್ವಾನಿಸುತ್ತಾರೆ. ಗಾಳಿಗೆ ಉಸಿರು, ಬೆಂಕಿಗೆ ಉರಿ, ಉದಕಕ್ಕೆ ಅದರ ಜೀವವಾಗಿರುವ ಜಗನ್ಮಾತೆಯನ್ನು ಬಾ ಎಂದು ಕರೆದು 'ನಿನ್ನ ಅವತಾರ ನನ್ನ ಉದ್ಧಾರ ಬಾ ದಿವ್ಯ ಮುಕ್ತಿಯೇ' ಎಂದು ಬೇಡುತ್ತಾರೆ. ಎಲ್ಲವನು ಮಾಡಿ, ಎಲ್ಲರೊಳಗೂಡಿ, ಜ್ಯೋತಿಯಾದರೂ ತಮೋಲೀಲೆಯಲಿ ಜಡದ ಮುದ್ರೆಯಾಗಿರುವ, ಶಿವನಿಗೆ ಶಕ್ತಿಯಾಗಿ, ವಿಷ್ಣುವಿಗೆ ಲಕ್ಷ್ಮಿಯಾಗಿ, ಬ್ರಹ್ಮನಿಗೆ ರಾಣಿಯಾಗಿರುವ ಬ್ರಹ್ಮಬೋಧೆಯನ್ನು ಮತಿಗಾಗಮಿಸು ಎನ್ನುತ್ತಾರೆ. 'ಹೃದಯ ಪದ್ಮ ಅರಳಿ, ಮನೋದ್ವಾರ ತೆರೆದಿದೆ, ಇಳಿದು ಬಾ' ಎಂದು ಕರೆಯುತ್ತಾರೆ. ಇಷ್ಟು ಗಾಢವಾದ ಸುಲಭವಾಗಿ ಅರ್ಥವಾಗದ ಭಾವನೆಗಳನ್ನು ಸರಳ ಪದಗಳಿಂದ ಪದ್ಯದಂತೆ ಹೆಣೆದಿರುವುದೇ ಒಂದು ವೈಶಿಷ್ಟ್ಯ. ಅದರ ಜೊತೆಗೆ ಇಲ್ಲಿರುವ ಅನುಪ್ರಾಸ, ಗೇಯಗುಣಗಳನ್ನು ಗಮನಿಸಿ. ಇಂತಹ ಕ್ಲಿಷ್ಟವಾದ ಕವಿತೆಗೆ ಸಂಗೀತ ಸಂಯೋಜಿಸಿರುವುದು ಅನಂತಸ್ವಾಮಿಯವರು. ಈ ರೀತಿಯ ರಾಗದ ಚೌಕಟ್ಟಿನಲ್ಲಿರುವ ಗೀತ ಮನಸ್ಸಿನಲ್ಲಿ ಅಚ್ಚಳಿಯದೇ ನಿಂತುಬಿಡುತ್ತದೆ. ಪದಗಳನ್ನು ಸರಾಗವಾಗಿ ನೆನಪಿನಲ್ಲಿಟ್ಟುಕೊಳ್ಳಬೇಕಾದರೆ ಒಂದು ಪದ್ಯ ಗೀತವಾಗಬೇಕು. ತಾಳಕ್ಕೆ ಸರಿಯಾಗಿ ಲಯಬದ್ಧವಾಗಿ ಪದಗಳ ಜೋಡಣೆಯಿದ್ದರೆ ಮರೆಯದಂತೆ ಮನಸ್ಸಿನಲ್ಲಿ ನಾಟಿಬಿಡುತ್ತದೆ. ಈ ಗುಣವನ್ನು ಕುವೆಂಪು ಅವರ ಕವಿತೆಗಳಲ್ಲಿ ಕಾಣಬಹುದು. ಅದನ್ನು ಗುರುತಿಸಿ ಭಾವಕ್ಕೆ ತಕ್ಕ ರಾಗ, ಗತಿಗೆ ತಕ್ಕ ತಾಳದಿಂದ ಅಪರೂಪದ ಗೀತೆಯಾಗಿಸಿದ ಅನಂತಸ್ವಾಮಿಯವರಿಗೆ ನಮನ.

'ಪ್ರತಿಯೊಬ್ಬ ಮಗುವು ಹುಟ್ಟುತ್ತಲೇ ವಿಶ್ವಮಾನವ. ಬೆಳೆಯುತ್ತ ನಾವು ಅದನ್ನು ಅಲ್ಪ ಮಾನವನನ್ನಾಗಿ ಮಾಡುತ್ತೇವೆ. ಮತ್ತೆ ಅದನ್ನು ವಿಶ್ವಮಾನವನನ್ನಾಗಿ ಮಾಡುವುದೇ ವಿದ್ಯೆಯ ಕರ್ತವ್ಯವಾಗಬೇಕು' - ಎಂದು ಕುವೆಂಪು 'ಓ ನನ್ನ ಚೇತನ ಆಗು ನೀ ಅನಿಕೇತನ' ಕವಿತೆಯಲ್ಲಿ ವಿಶ್ವಮಾನವತೆಯನ್ನು ಸಾರಿದ್ದಾರೆ. ಈ ಗೀತೆಯೂ ಕೂಡ ಅನಂತಸ್ವಾಮಿಯವರ ಸಿರಿಕಂಠದಲ್ಲಿ 'ಮನೆಯನೆಂದು ಕಟ್ಟದಿರು, ಕೊನೆಯನೆಂದು ಮುಟ್ಟದಿರು, ನೀ ಅನಂತವಾಗಿರು' ಎಂದು ಅವಿಸ್ಮರಣೀಯವಾಗಿ ಉಳಿದಿದೆ.

ಮಲೆನಾಡಿನಲ್ಲಿ ಹುಟ್ಟಿ ಬೆಳೆದ ಕುವೆಂಪು ಅವರದ್ದು ಪ್ರಕೃತಿ ಸೌಂದರ್ಯವನ್ನು ವರ್ಣಿಸುವುದರಲ್ಲಿ ಎತ್ತಿದ ಕೈ. ಅವರು ಪ್ರಕೃತಿಯಲ್ಲಿ ದೇವರನ್ನು ಕಾಣುತ್ತಿದ್ದರು ಎನ್ನುವುದಕ್ಕೆ 'ತೆರೆದಿದೆ ಮನೆ ಬಾ ಓ ಅತಿಥಿ' ಮುಂತಾದ ಗೀತೆಗಳು ಉದಾಹರಣೆ. ಕುವೆಂಪು ಅವರ ಈ ರೀತಿಯ ಅನೇಕ ಗೀತೆಗಳನ್ನು ಸುಗಮ ಸಂಗೀತಗಾರರು ಹಾಡಿ ಜನಪ್ರಿಯಗೊಳಿಸಿದ್ದಾರೆ : 'ಬಾ ಫಾಲ್ಗುಣ ರವಿ ದರ್ಶನಕೆ', 'ಆನಂದಮಯ ಈ ಜಗಹೃದಯ', 'ಉದಯ ಗಗನದಲಿ ಅರುಣನ ಛಾಯೆ' - ಇವು ಕೆಲವು ನಿದರ್ಶನ ಮಾತ್ರ.

ಸದಾ ಮನಸ್ಸಿನಲ್ಲಿ ಹಸಿರಾಗಿ ಉಳಿವ ಹಲವಾರು ಪ್ರೇಮಗೀತೆಗಳಿಗೆ ಸುಗಮ ಸಂಗೀತಗಾರರು ರಾಗದ ಚೌಕಟ್ಟು ಹೊಂದಿಸಿದ್ದಾರೆ: ''ನಾನೆ ವೀಣೆ, ನೀನೆ ತಂತಿ, ಅವನೆ

ವೈಣಿಕ'', ''ಯಾವ ಜನ್ಮದ ಮೈತ್ರಿ'', ''ಬಾ ಚಕೋರಿ ಚಂದ್ರಮಂಚಕೆ'', ''ಹೃದಯ ಕಮಲದಿ ಮಧುರ ಪ್ರೇಮ ಮಕರಂದವಿದೆ'', ಇತ್ಯಾದಿ.

ಭಾವ, ಕಲ್ಪನೆ, ಆಲೋಚನೆ, ಗೇಯಗುಣವಿದ್ದೂ ಕವಿತೆಗಳು ಗೀತೆಗಳಾಗದೆ ಇದ್ದರೆ ಪುಸ್ತಕದಲ್ಲೇ ಉಳಿದುಬಿಡುತ್ತವೆ. ಜನಮನಗಳನ್ನು ತಲಪುವುದಿಲ್ಲ. ಸುಗಮಸಂಗೀತದಿಂದಲೇ ಕುವೆಂಪು ಅವರ ಕವಿತೆಗಳು ಜನಪ್ರಿಯವಾದವು ಎಂದಲ್ಲದಿದ್ದರೂ, ಸುಗಮ ಸಂಗೀತದಿಂದ ಅವರ ಎಷ್ಟೋ ಕವಿತೆಗಳು ಅಪಾರ ಜನಪ್ರಿಯತೆಯನ್ನು ಹೊಂದಿದವು ಎನ್ನುವುದು ಸುಳ್ಳಲ್ಲ. ಉದಾಹರಣೆಗೆ :

ನೀನೆಂತು ಪೊರೆವೆಯೋ ಅದನು ನಾನರಿಯೆ,
ನೀ ಪೊರೆವೆ ಎಂಬುದನು ಮಾತ್ರ ನಂಬಿರುವೆ

ಬಿಸಿಲ ಬೇಗೆಗೆ ಬೆಂದು ಬಸವಳಿದ ಬನದೆಡೆಗೆ
ಹೊಸಮುಗಿಲ ಮಳೆಯಂತೆ ನೀ ಬರಲುಬಹುದು
ರವಿಯ ಹೊಂಬೆಳಕಂತೆ ಶಶಿಯ ಕೌಮುದಿಯಂತೆ
ಸೌಂದರ್ಯರೂಪದಲಿ ಬಳಿಗೆ ಬರಬಹುದು

ಈ ಕವಿತೆ 'ತನುವು ನಿನ್ನದು ಮನವು ನಿನ್ನದು, ನನ್ನ ಜೀವನ ಧನವು ನಿನ್ನದು' ಕವಿತೆಯಂತೆಯೇ ಸುಂದರವಾಗಿದ್ದರೂ, ಹಾಡಿನ ರೂಪ ಪಡೆಯಲಿಲ್ಲವಾದ್ದರಿಂದ ಜನರ ಕಿವಿಗೆ ಬಿದ್ದಿಲ್ಲ. ನಿರ್ದೇಶಕರು ಹಾಡಿನಂತೆ ಮಾರ್ಪಾಡುಗೊಳಿಸಿ, ಗಾಯಕರು ಹಾಡಿದ್ದರೆ ಇದೂ ಜನರ ಮನಸ್ಸಿಗೆ ತಲುಪುತ್ತಿತ್ತು. ಈಚೆಗೆ ಕನ್ನಡ ಜನ ಕನ್ನಡ ಓದುವುದನ್ನು ಕಡಿಮೆಮಾಡಿದ್ದಾರೆ. ಇನ್ನು ಕವಿತೆಗಳನ್ನು ಓದುವ ಮಂದಿಯಂತೂ ಬಹಳ ಕಡಿಮೆ. ಈ ಪರಿಸ್ಥಿತಿಯಲ್ಲಿ, ಗೀತೆಗಳು ಹಾಡಾಗಿ ಕಿವಿಗೆ ಬೀಳುವುದು ಒಂದು ಪ್ರಮುಖ ಹಾಗೂ ಯಶಸ್ವೀ ಮಾಧ್ಯಮ.

ಆದರೆ ಕೆಲವೊಮ್ಮೆ ಸಂಗೀತಗಾರರು ಕವಿತೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳದೆ ಭಾವಕ್ಕೆ ಸರಿಹೊಂದದ ಧಾಟಿಯಲ್ಲಿ ಸಂಗೀತ ಸಂಯೋಜನೆ ಮಾಡಿರುವ ಪ್ರಸಂಗಗಳೂ ಇವೆ. ನಾನು ಈಚೆಗೆ ಕೇಳಿದ ಧ್ವನಿಸುರುಳಿಯೊಂದರಲ್ಲಿ ಕುವೆಂಪು ಅವರ 'ನಿನ್ನೆಡೆಗೆ ಬರುವಾಗ ಸಿಂಗರದ ಹೊರೆಯೇಕೆ' ಪ್ರೇಮಗೀತೆಯಾಗಿ ಯುಗಲಗಾನವಾಗಿ ಹಾಡಲ್ಪಟ್ಟಿದೆ! ಈ ರೀತಿ ನಡೆಯದಂತೆ ಸಂಗೀತ ಸಂಯೋಜಕರು ಜಾಗರೂಕತೆಯಿಂದಿರುವುದು ಅವಶ್ಯಕ.

ಇನ್ನು ಹೊರನಾಡ ಕನ್ನಡತಿಯಾದ ನಾನು ಅವರ 'ಎಲ್ಲಾದರು ಇರು, ಎಂತಾದರು ಇರು, ಎಂದೆಂದಿಗೂ ನೀ ಕನ್ನಡವಾಗಿರು' ಪದ್ಯದ ಬಗ್ಗೆ ಬರೆಯದೆ ಹೇಗೆ ಇರಲಿ? ಇದು ನಮಗೆಂದೇ ಬರೆದಿರುವ ಗೀತೆಯಂತೆ ಆಗಿಬಿಟ್ಟಿದೆ! ಇದನ್ನು ಉದಹರಿಸದ ಜನರೇ ಇಲ್ಲ. ಈ ಗೀತೆಯೂ ಕೂಡ ಹಲವಾರು ರೀತಿಯಲ್ಲಿ ಹಾಡಲ್ಪಡುತ್ತದೆ. ಕಾಳಿಂಗರಾಯರಿಂದ ಹಿಡಿದು ಈಗಿನ ಎಲ್ಲ ಸುಗಮ ಸಂಗೀತಗಾರರೂ ಈ ಕವಿತೆಗೆ ರಾಗ ಹಾಕಿ ಹಾಡಿದ್ದಾರೆ.

ಕುವೆಂಪು ಅವರ ಕವನಗಳು ಖಾಲಿಯಾಗದ ಉಗ್ರಾಣದಂತೆ. ಇವು ಸುಗಮಸಂಗೀತಕ್ಕೆ ಬುನಾದಿ ನೀಡಿದ್ದಷ್ಟೇ ಅಲ್ಲದೆ, ಮುಂದಿನ ಪೀಳಿಗೆಯವರು ಅದೇ ಮಾದರಿಯಲ್ಲಿ ಬರೆಯಲು ಸ್ಫೂರ್ತಿಯನ್ನೂ ನೀಡಿದೆ. ಇನ್ನು ಮುಂದೆಯೂ ಸುಗಮ ಸಂಗೀತ ಕುವೆಂಪು ಅವರ ಇತರ ಕವನಗಳನ್ನು ಜನಮನಕ್ಕೆ ತಲುಪಿಸಲಿ, ಕನ್ನಡದ ಕಂಪು ಇನ್ನಷ್ಟು ಪಸರಿಸಲಿ!



ಗ್ರಂಥ ಋಣ :

'ಕಲಾ ಸುಂದರಿ' - ಕುವೆಂಪು

'ಸುಗಮ ಸಂಗೀತ ಒಂದು ಸಿಂಹಾವಲೋಕನ' - ಎಚ್.ಆರ್. ಲೀಲಾವತಿ

# ಭಾಗ ೩

# ಕಥೆ, ಕಾದಂಬರಿ, ನಾಟಕ ಸಾಹಿತ್ಯ

''ಮಲೆನಾಡಮ್ಮನ ಮಡಿಲಿನಲಿ ಕರ್ಮುಗಿಲೊಡಲಿನಲಿ
ಮನೆಮಾಡಿರುವೆನು ಸಿಡಿಲಿನಲಿ ಮಿಂಚಿನ ಕಡಲಿನಲಿ''

# ಕಾನೂರು ಹೆಗ್ಗಡಿತಿ : ಸಮಾಜಶಾಸ್ತ್ರದ ದೃಷ್ಟಿಯಲ್ಲಿ

## ವೈ.ಆರ್. ಮೋಹನ್, ಅಲಬಾಮ

### ಪ್ರಸ್ತಾವನೆ

'ಕಾನೂರು ಹೆಗ್ಗಡಿತಿ' ಬರಿಯ ಕಾದಂಬರಿ ಮಾತ್ರವಲ್ಲ; ಅದು ಮಲೆನಾಡಿನ ಶೂದ್ರ ಪ್ರಪಂಚದ ಸಮಷ್ಟಿ ದರ್ಶನ. ಈ ಕಾದಂಬರಿಯಲ್ಲಿ ಕಥೆ ಮುಖ್ಯವಲ್ಲ. ಕಥೆಯ ಕುತೂಹಲಕ್ಕಾಗಿ ಇದನ್ನು ಓದಬೇಡಿ ಎಂದು ಕುವೆಂಪುರವರೇ ಮುನ್ನುಡಿಯಲ್ಲಿ ಎಚ್ಚರಿಸಿದ್ದಾರೆ. ಈ ಕೃತಿಯಲ್ಲಿ ಕಥಾನಾಯಕ ಮತ್ತು ಕಥಾನಾಯಕಿ ಎಂದು ಗುರುತಿಸಬಹುದಾದ, ಅವರಿಲ್ಲದೆ ಕಥೆ ಮುಂದುವರಿಯುವುದಿಲ್ಲ ಎನ್ನುವಂತಹ ವ್ಯಕ್ತಿಗಳು ಯಾರೂ ಇಲ್ಲ. ಹೂವಯ್ಯ-ಸೀತೆಯರು ಇಲ್ಲದೆ ಹೋದರೂ ಇಲ್ಲಿ ಚಿತ್ರಿತವಾಗಿರುವ ಜನಜೀವನ ಸಹಜವಾಗಿ ಜರಗುತ್ತ ಹೋಗುತ್ತದೆ. ಪ್ರತಿಯೊಂದು ಪಾತ್ರಕ್ಕೂ ವಿಶಿಷ್ಟ ವ್ಯಕ್ತಿತ್ವ ಇರುವುದರಿಂದ ಅವು ಸ್ವತಂತ್ರವಾಗಿ ನಿಲ್ಲಬಲ್ಲವು. ಈ ಕೃತಿಯಲ್ಲಿ ಬರುವ ಪ್ರಕೃತಿ ಸನ್ನಿವೇಶಗಳು ಬಹಳ ಮುಖ್ಯ. ಈ ಕಾದಂಬರಿಯ ಪಾತ್ರಗಳು ದಿನನಿತ್ಯದ ಪರಸ್ಪರ ಒಡನಾಟದಲ್ಲಿ ಸೃಷ್ಟಿಸುವ ಸಂಕೀರ್ಣ ಸಾಮಾಜಿಕ ಸಂಬಂಧಗಳು, ನಡವಳಿಕೆಗಳು, ನಂಬಿಕೆಗಳು, ಕಟ್ಟುಕಟ್ಟಳೆಗಳು, ಹಬ್ಬ ಹರಿದಿನಗಳು, ಜಾತಿ ಮತ್ತು ಸಾಮಾಜಿಕ ಅಂತಸ್ತು, ಮನೆಯೊಳಗಿನ ಹಿಂಸಾಕೃತ್ಯಗಳು, ಬಡತನ, ಕುಡಿತ, ಜೂಜಾಟ ಮುಂತಾದ ಸಾಮಾಜಿಕ ಸಮಸ್ಯೆಗಳು ಈ ಮಲೆನಾಡಿನ ಜನರ ಬದುಕಿನಲ್ಲಿ ಹೇಗೆ ಹಾಸುಹೊಕ್ಕಾಗಿ ಬಂದಿವೆ ಎನ್ನುವುದರ ಕೂಲಂಕಷ ವಿಶ್ಲೇಷಣೆ ಈ ಲೇಖನದ ಮುಖ್ಯ ಗುರಿ.

'ಕಾನೂರು ಹೆಗ್ಗಡಿತಿ' ಪ್ರಕಟವಾದ ಕಾಲ (೧೯೩೬)ದ ಮಲೆನಾಡಿಗೂ, ಇಂದಿನ ಮಲೆನಾಡಿಗೂ, ಅಜಗಜಾಂತರ ವ್ಯತ್ಯಾಸ. ಆಗ ಎಲ್ಲೆಲ್ಲೂ ಹಬ್ಬಿದ್ದ ದಟ್ಟವಾದ ಕಾಡು ಈಗ ಇಲ್ಲವಾಗಿದೆ. ಆ ಕಾಡನ್ನು ಅವಲಂಬಿಸಿದ್ದ ಪ್ರಾಣಿಗಳು ಮತ್ತು ಪಕ್ಷಿ ಸಂಕುಲಗಳು ಕಾಡು ಕ್ಷೀಣಿಸಿದಂತೆ ಕಣ್ಮರೆಯಾಗುತ್ತಿವೆ. ೧೯೫೦ರ ದಶಕದಲ್ಲಿ ಡಿ.ಡಿ.ಟಿ. ರಸಾಯನದ ವ್ಯಾಪಕವಾದ ಬಳಕೆ ಮಲೇರಿಯ ಹರಡಲು ಕಾರಣವಾಗಿದ್ದ ಸೊಳ್ಳೆಗಳ ಸರ್ವನಾಶಕ್ಕೆ ಕಾರಣವಾಯಿತು. ಮಲೇರಿಯ ಇಲ್ಲದ ಮಲೆನಾಡು ಹೊರಗಿನವರಿಗೆ ಆಕರ್ಷಣೀಯವಾದ ಗಡಿನಾಡಿನಂತೆ ಕಂಡು ಹೊರಗಿನ ಜನ ಹಿಂಡುಹಿಂಡಾಗಿ ಬಂದು ಎಲ್ಲೆಂದರಲ್ಲಿ ನೆಲಸಿದರು. ಜನಸಾಂದ್ರತೆ ಹೆಚ್ಚಾಗಿ ಭೂಮಿಯ ಮೇಲೆ ವಿಪರೀತ ಒತ್ತಡ ಬಿದ್ದು, ವ್ಯವಸಾಯಕ್ಕೆ ಯೋಗ್ಯವಾದ ಭೂಮಿ ಸಿಕ್ಕಲ್ಲೆಲ್ಲ ಜನ ನೆಲಸಿ ಮಲೆನಾಡಿನ ಒಂದೇ ಮನೆಯ ಹಳ್ಳಿಗಳು ಹಲವಾರು ಮನೆಗಳ ಹಳ್ಳಿಗಳಾಗಿ ಮಾರ್ಪಾಡಾಗಿವೆ. ಇದರಿಂದ

ಮದ್ಯಪಾನ ಗೃಹಗಳು, ಸೂಳೆಗಾರಿಕೆ, ಕಳ್ಳತನ, ಜೂಜುಗಾರಿಕೆ, ಗುಂಪುಗಳ ಘರ್ಷಣೆ, ಜಾತಿ ರಾಜಕೀಯ ಮುಂತಾದ ಸಮಸ್ಯೆಗಳು ಈಗ ಮಲೆನಾಡಿನಲ್ಲಿ ಹೆಚ್ಚಾಗಿ ವ್ಯಾಪಕವಾಗಿವೆ. ಈಗಿನ ಇಂಥ ಸಮಸ್ಯೆಗಳ ವಿಶ್ಲೇಷಣೆ ಈ ಲೇಖನದ ಉದ್ದೇಶವಲ್ಲ.

## ಮಲೆನಾಡಿನ ಸಾಮಾಜಿಕ ಜೀವನ

### ಪ್ರಕೃತಿಯ ಮಧ್ಯೆ :

ಈ ಕಾದಂಬರಿಯ ಉದ್ದಕ್ಕೂ ಪ್ರಕೃತಿ ಮಹತ್ತರ ಪಾತ್ರ ವಹಿಸುತ್ತದೆ. ಮಲೆನಾಡಿನ ಜನ ಪ್ರಕೃತಿಯ ಮಕ್ಕಳಾಗಿ ಬೆಳೆದುಬಂದಿದ್ದಾರೆ. ಪ್ರಕೃತಿ ಈ ಜನರ ಪಾಲಿಗೆ ಅವರ ಅಗತ್ಯಗಳನ್ನು ಪೂರೈಸುವ ಅಕ್ಷಯ ಪಾತ್ರೆಯಾಗಿದೆ. ಹಸಿದವರಿಗೆ ಹಣ್ಣುಹಂಪಲುಗಳನ್ನು ನೀಡಿ, ಬಾಯಾರಿದವರಿಗೆ ಬೆಟ್ಟದಮೇಲಿಂದ ಹರಿದು ಬರುವ ಝರಿಯ ನೀರು ಕುಡಿಸಿ, ದಣಿದವರಿಗೆ ಮರದ ನೆರಳು ಆಶ್ರಯವನಿತ್ತು ಸಾಂತ್ವನಗೊಳಿಸುತ್ತದೆ. ನೆಲೆನಿಲ್ಲುವರ ಗುಡಿಸಲುಗಳಿಗೆ ಬೇಕಾಗುವ ಮರ ಮಟ್ಟು ಮುಂತಾದವುಗಳನ್ನು ಒದಗಿಸುತ್ತದೆ. ಮೂವತ್ತರ ದಶಕದ ಮಲೆನಾಡಿನ ಪರ್ವತಾರಣ್ಯಗಳು ಅನೇಕ ಬಗೆಯ ಪ್ರಾಣಿಗಳಿಗೆ ಮತ್ತು ಪಕ್ಷಿ ಸಂಕುಲಗಳಿಗೆ ಆಶ್ರಯ ನೀಡಿದ್ದವು. ಎಲ್ಲೆಲ್ಲೂ ಹಬ್ಬಿದ ದಟ್ಟವಾದ ಕಾಡು ಜನರ ಜೀವನದ ಎಲ್ಲ ಅಂಶಗಳ ಮೇಲೆ ಪ್ರಭಾವ ಬೀರಿತ್ತು. ಕಾಡು ಅವರ ಜೀವನದಲ್ಲಿ ಹಾಸುಹೊಕ್ಕಾಗಿ ಸೇರಿಹೋಗಿತ್ತು. ಜನಸಂಖ್ಯೆ ವಿರಳವಾಗಿದ್ದು ಒಂದೇ ಮನೆಯ ಹಳ್ಳಿಗಳು ದಟ್ಟವಾದ ಕಾಡಿನ ಮಧ್ಯೆ ಅಲ್ಲಲ್ಲಿ ಹುದುಗಿಕೊಂಡಿರುತ್ತಿದ್ದವು. ಕಾನೂರು ಅಂಥ ಒಂದು ಹಳ್ಳಿ.

### ರೈತರ ಬಡಜೀವನ - ಗೌಡರ ದರ್ಬಾರ

ಋತುಮಾನವನ್ನನುಸರಿಸಿ ಗದ್ದೆಗಳ ಬೇಸಾಯ, ತೋಟದ ಕೆಲಸ, ಮನೆಯ ಸುತ್ತಲಿನ ಕೆಲಸಗಳು ಸಾಗುತ್ತಿದ್ದವು. ಬೇಸಗೆಯಲ್ಲಿ ಜನರಿಗೆ ಸ್ವಲ್ಪ ವಿರಾಮ ಸಿಗುತ್ತಿತ್ತು. ಆ ಸಮಯದಲ್ಲಿ ಜನರು ಭಾಗವತರಾಟ, ಅಪರೂಪಕ್ಕೆ ಬರುತ್ತಿದ್ದ ಕಂಪನಿ ನಾಟಕಗಳು, ರಥೋತ್ಸವ ಮುಂತಾದ ಮನರಂಜನೆಗಳಲ್ಲಿ ಕಾಲಕಳೆಯುತ್ತಿದ್ದರು. ಮಳೆಗಾಲ ಬಂತೆಂದರೆ ದಿನವಿಡಿ ಬಿಡುವಿಲ್ಲದ ಕೆಲಸ - ಗದ್ದೆಗಳನ್ನು ಹೊಳಕೆಹೊಡೆದು, ಹೂಟಿಮಾಡಿ ಸಸಿ ನೆಟ್ಟಿಗೆ ತಯಾರು ಮಾಡುವುದು, ಗದ್ದೆಗಳಲ್ಲಿ ನೀರು ನಿಲ್ಲುವಂತೆ ಮಾಡಲು ಅಂಚು ಕಡಿಯುವುದು, ಸಾಗುವಳಿಯಾವ ಗದ್ದೆಗಳಿಗೆ ಅಗೇಡಿಯಿಂದ ತಂದ ಸಸಿ ನಟ್ಟಿ ಮಾಡುವುದು, ನೆಟ್ಟ ಗದ್ದೆಗಳಿಗೆ ಕಾಡು ಪ್ರಾಣಿಗಳು ಬಾರದಂತೆ ಕಾವಲಿರುವುದು - ಹೀಗೆ ಜನರಿಗೆ ಕೈತುಂಬ ಕೆಲಸವಿದ್ದು ಸೋಮಾರಿತನಕ್ಕೆ ಅವಕಾಶವಿರುತ್ತಿರಲಿಲ್ಲ. ಜನರು ಸದಾ ಕಾರ್ಯನಿರತರಾಗಿರುತ್ತಿದ್ದುದರಿಂದ ಅವರ ಜೀವನ ಒಂದು ಬಗೆಯ ಶಿಸ್ತಿನಲ್ಲಿ ನಡೆದುಕೊಂಡು ಹೋಗುತ್ತಿತ್ತು.

ಆಗಿನ ಕಾಲದ ಮಲೆನಾಡಿನಲ್ಲಿ ರಸ್ತೆಗಳಿಲ್ಲದೆ ಸಂಚಾರ ದುಸ್ತರವಾಗಿತ್ತು. ಮಳೆಗಾಲದಲ್ಲಿ ಮಲೆನಾಡು ಹೊರಗಿನ ಸಂಪರ್ಕ ಕಡಿದುಕೊಂಡು ಮೂಲೆಗುಂಪಾಗುತ್ತಿತ್ತು. ಮಲೆನಾಡಿಗರು ಮಳೆಗಾಲಕ್ಕೆ ಬೇಕಾಗುವ ಸಾಮಾನು ಸರಂಜಾಮುಗಳನ್ನು ಮಳೆಗಾಲಕ್ಕೆ ಮುಂಚಿತವಾಗಿ ಹೊಂದಿಸಿಕೊಳ್ಳಬೇಕಿತ್ತು. ಮಳೆಗಾಲದಲ್ಲಿ ತಮ್ಮ ಆಹಾರದ ಪೌಷ್ಟಿಕಾಂಶವನ್ನು ಮೀನುಗಾರಿಕೆಯಿಂದ ಹೆಚ್ಚಿಸಿಕೊಳ್ಳುತ್ತಿದ್ದರು. ನೆರೆ ಬಂದ ಸಮಯದಲ್ಲಿ ಹಳ್ಳಹೊಳೆಗಳ ತೆರೆಯನ್ನೇರಿ ಬರುವ ಹತ್ತುಮೀನುಗಳ ಶಿಕಾರಿ ನಡುರಾತ್ರಿಯ ಮುಖ್ಯ ಬೇಟೆಯಾಗಿತ್ತು. ಇದಲ್ಲದೆ, ರೈತರು ತಮ್ಮ ಗದ್ದೆಗಳಿಗೆ ಹರಿದು ಬರುವ ನೀರಿಗೆ ಕೂಣಿ ಒಡ್ಡಿ ಮೀನುಹಿಡಿಯುವುದು ಸರ್ವೇಸಾಮಾನ್ಯವಾಗಿತ್ತು. ಮಳೆಗಾಲದಲ್ಲಿ ಮಲೆನಾಡಿನಲ್ಲಿ ಸಿಗುತ್ತಿದ್ದ ತರಕಾರಿಗಳು ಎರಡು - ಗದ್ದೆ ಸೌತೆಕಾಯಿ ಮತ್ತು ಬಾಳೇಕಾಯಿ. ಬಾಳೇದಿಂಡಿನ ಮೇಲೋಗರ ಮಲೆನಾಡಿನ ಒಂದು ವಿಶೇಷ.

ಕಾನೂರಿನ ಅವಿಭಾಜ್ಯ ಕುಟುಂಬದ ಯಜಮಾನರು ಚಂದ್ರಯ್ಯ ಗೌಡರು. ಅವಿಭಾಜ್ಯ ಕುಟುಂಬದ ಎಲ್ಲ ವ್ಯವಹಾರಗಳ ಮೇಲೆ ಸರ್ವಾಧಿಕಾರ ಪಡೆದಿದ್ದರು. ಗದ್ದೆ ತೋಟಗಳು ಕುಟುಂಬದ ಆದಾಯದ ಅಸ್ಥಿವಾರವಾಗಿದ್ದವು. ಆದಾಯ ಹೆಚ್ಚಿಸಲು ಲೇವಾದೇವಿ ನಡೆಸುತ್ತಿದ್ದರು. ಆ ಕಾಲದಲ್ಲಿ ಮಲೆನಾಡಿನಲ್ಲಿ ಬ್ಯಾಂಕುಗಳಿರಲಿಲ್ಲ. ಮಲೆನಾಡಿಗರಿಗೆ ಕಾನೂರು ಸಾಹುಕಾರರಂತವರೆ ಬ್ಯಾಂಕು, ಕೋರ್ಟು/ ಕಚೇರಿಗಳಾಗಿದ್ದರು. ಸಾಲ ಪಡೆಯಲು ಗೌಡರ ಬಳಿ ಹೋಗುತ್ತಿದ್ದಂತೆ ವ್ಯಾಜ್ಯ ಇತ್ಯರ್ಥಕ್ಕಾಗಿಯೂ ಅವರಲ್ಲಿಗೇ ಹೋಗಬೇಕಿತ್ತು. ಸಾಹುಕಾರರ ಬಳಿ ಸಾಲ ಕೇಳಲು ಹೋಗುವವರ ಚಿಂತಾಜನಕ ಸ್ಥಿತಿಗತಿ ಮಲೆನಾಡಿನ ಒಂದು ದಾರುಣ ಸಮಸ್ಯೆಯನ್ನು ಸಂಕ್ಷಿಪ್ತವಾಗಿ ಪ್ರತಿಬಿಂಬಿಸುತ್ತದೆ. ಕಡು ಬಡತನದ ದಾರುಣ ದುರಂತಮಯ ಚಿತ್ರ ಕುವೆಂಪು, ಕಾನೂರು ಹೆಗ್ಗಡಿತಿಯ 'ಅಣ್ಣಯ್ಯ ಗೌಡರ ಸಂಸಾರ ಶೂಲ'ದಲ್ಲಿ ಪರಿಣಾಮಕಾರಿಯಾಗಿ ಮೂಡಿಸಿದ್ದಾರೆ. ತಮ್ಮ ಊರು ಮದುವೆಗಳಿಗೆ ಹೆಚ್ಚು ಹೆಚ್ಚಾಗಿ 'ತೆರ' ಕೊಡಬೇಕಾಗಿ ಬಂದುದರಿಂದಲೇ ಅಣ್ಣಯ್ಯ ಗೌಡರ ಸಾಲ ಬೆಳೆದು ಬಂದಿತ್ತು. ಇಳಿವಯಸ್ಸಿನ ಅಣ್ಣಯ್ಯ ಗೌಡರು ಹೆಚ್ಚು 'ತೆರ' ತೆತ್ತು ಮೂರನೆಯ ಮದುವೆಯಾಗಿದ್ದು, ವಯಸ್ಸಿಗೆ ಬಂದ ಮಗ ಓಬಯ್ಯನಿಗೆ ಹಿಡಿಸಲಿಲ್ಲ. ಅವನು ತನಗೆ ಮದುವೆ ಮಾಡದಿದ್ದರೆ ಮನೆಬಿಟ್ಟು ಹೋಗುತ್ತೇನೆಂದು ಬೆದರಿಸುತ್ತಲಿದ್ದನು. ಮಗನ ಮದುವೆಗೆಂದು ಹಣ ಸಾಲ ತರಲು ಅಣ್ಣಯ್ಯ ಗೌಡರು, ಕಾನೂರು ಗೌಡರ ದರ್ಬಾರಿಗೆ ಹೋಗಿ ಆಳುದ್ದದ ಶರೀರವನ್ನು ಗೇಣುದ್ದ ಮಾಡಿಕೊಂಡು ಬೇಡಿದರೂ ಫಲಿಸದೆ ನಿರಾಶರಾಗಿ, ಚಿಂತಾಕ್ರಾಂತರಾಗಿ, ರೋಗಗ್ರಸ್ತಳಾಗಿ ಮರಣಶಯ್ಯೆಯಲ್ಲಿದ್ದ ಮಡದಿ ಮತ್ತು ರೋದಿಸುತ್ತಿದ್ದ ಮಗಳನ್ನು ಸಾಂತ್ವನಗೊಳಿಸಲು ತಮ್ಮ ನರಕ ಸದೃಶವಾದ ಗುಡಿಸಿಲಿಗೆ ಬರುವ ದೃಶ್ಯವನ್ನು ಹೃದಯವಿದ್ರಾವಕವಾಗಿ ಕುವೆಂಪು ವರ್ಣಿಸಿದ್ದಾರೆ. ಅಣ್ಣಯ್ಯಗೌಡರ ಬಡತನಕ್ಕೆ

ಆಗಿನಕಾಲದಲ್ಲಿ ರೂಢಿಯಲ್ಲಿದ್ದ ಸಾಹುಕಾರರು ಕೊಟ್ಟ ಪತ್ರಕ್ಕೆ ಹೆಬ್ಬೆಟ್ಟಿನ ಗುರುತು ಹಾಕಿ ಹಣ ಪಡೆಯುವುದು ಮುಖ್ಯ ಕಾರಣವಾಗಿತ್ತು. ಅನಕ್ಷರಸ್ಥರಾದ ಸಾಲಗಾರರು ಪತ್ರದಲ್ಲಿ ಏನಿದೆ ಎನ್ನುವುದನ್ನು ತಿಳಿದುಕೊಳ್ಳದೆ ಹೆಬ್ಬೆಟ್ಟಿನ ಮುದ್ರೆ ಒತ್ತಿ ಸಾಹುಕಾರರ ಸಾಲದ ಬಲೆಗೆ ಬೀಳುತ್ತಿದ್ದರು.

ಅವಿಭಾಜ್ಯ ಕುಟುಂಬಗಳು ಮಲೆನಾಡಿನಲ್ಲಿ ವಿರಳವಾಗುತ್ತಿವೆ. ಅವಿಭಾಜ್ಯ ಕುಟುಂಬಗಳಲ್ಲಿ ಈರ್ಷ್ಯೆ, ದ್ವೇಷ, ಜಗಳ ಮತ್ತು ಹೊಡೆದಾಟಗಳು ಸಾಮಾನ್ಯ ಸಂಗತಿಗಳು. ಕಾನೂರಿನ ಗೃಹಕೃತ್ಯದಲ್ಲಿ ಮನೆಗೆ ಯಾರು ಯಜಮಾನಗಿತ್ತಿ ಎನ್ನುವುದನ್ನು ನಿರ್ಧರಿಸುವ ಸಲುವಾಗಿ ನಡೆಯುತ್ತಿದ್ದ ಸುಬ್ಬಮ್ಮ ಮತ್ತು ನಾಗಮ್ಮನವರ ನಡುವಣ ಘರ್ಷಣೆ, ಇದಕ್ಕೊಂದು ನಿದರ್ಶನ. ಅವಿಭಾಜ್ಯ ಕುಟುಂಬಗಳು ಒಡೆದು ಪಾಲಾಗುವ ಆಧುನಿಕ ಧೋರಣೆ 'ಮನೆಯ ಚರಸೊತ್ತಿನ ಹಿಸ್ಸೆ'ಯಲ್ಲಿ ವಿವರವಾಗಿ ನಿರೂಪಣೆಗೊಂಡಿದೆ.

## 'ತೆರ' ಪದ್ಧತಿಯಿಂದ ಸಾಲದ ಶೂಲ

ಮೂವತ್ತರ ದಶಕದಲ್ಲಿ ಮಲೆನಾಡಿನಲ್ಲಿ ವರದಕ್ಷಿಣೆ ಇರಲಿಲ್ಲ. ಅದಕ್ಕೆ ಬದಲಾಗಿ ಮದುವೆಯಾಗುವ ವರನು, ವಧುವಿಗೆ ತೆರ ಕೊಡಬೇಕಾಗಿತ್ತು. 'ತೆರ'ದಿಂದ ಬಂದ ಹಣ ವಧುವಿನ ಸ್ವಂತ ಹಣವಾಗಿರುತ್ತಿತ್ತು. ಅವಳು ಆ ಹಣವನ್ನು ವೃದ್ಧಿಗೊಳಿಸಿಕೊಂಡು ತನ್ನ ಸ್ವಂತಕ್ಕೆ ಉಪಯೋಗಿಸಿಕೊಳ್ಳಬಹುದಿತ್ತು. ತೆರದ ಮೊತ್ತವನ್ನು ವಧುವಿನ ವಯಸ್ಸಿನ ಮೇಲೆ ನಿರ್ಧರಿಸುತ್ತಿದ್ದರು. ೧೬-೨೦ ವಯಸ್ಸಿನ ಹುಡುಗಿಯರಿಗೆ ಹೆಚ್ಚಿನ ತೆರ ಕೊಡಬೇಕಿತ್ತು. ವಧುವಿಗೆ ನಡುವಯಸ್ಸು ಸಮೀಪಿಸುತ್ತಿದ್ದರೆ ತೆರ ಕಡಿಮೆಯಾಗುತ್ತಿತ್ತು. ತೆರ ಸ್ವಲ್ಪಮಟ್ಟಿಗಾದರೂ ಹೆಂಗಸರಿಗೆ ಆರ್ಥಿಕ ಸಹಾಯ ಒದಗಿಸುತ್ತಿತ್ತು. ಆಗಿನ ಕಾಲದಲ್ಲಿ ಮಲೆನಾಡಿನ ಗಂಡಸರು ೩-೪ ಮದುವೆಯಾಗುವುದು ಸಾಮಾನ್ಯವಾಗಿತ್ತು. ಕಾರಣ, ಹೆಂಡತಿ ಹೆರಿಗೆಗೆ ಹೋದರೆ ವಾಪಸ್ಸು ಬರುವ ಭರವಸೆ ಇರಲಿಲ್ಲ. ಮಲೇರಿಯದಿಂದಾಗಿ ಹೆಂಗಸರು ಹೆರಿಗೆಯಕಾಲದಲ್ಲಿ ರಕ್ತಸ್ರಾವವಾಗಿ ಸಾಯುತ್ತಿದ್ದರು. ಹೆಂಡತಿ ಸತ್ತವನು ಮತ್ತೆ ಮದುವೆಯಾಗಬೇಕಾದರೆ ಹೆಚ್ಚಿನ ತೆರ ಕೊಡಬೇಕಿತ್ತು. ಹೀಗೆ, ಹೆಚ್ಚಿನ ತೆರ ತೆತ್ತು ಮದುವೆಯಾಗಿ, ಅಣ್ಣಯ್ಯ ಗೌಡರು ಮೈತುಂಬ ಸಾಲ ಮಾಡಿಕೊಂಡಿದ್ದರು.

## ಊಳಿಗ ಪದ್ಧತಿ

ಕಾನೂರು ಹೆಗ್ಗಡಿತಿ ಬರೆದ ಕಾಲದಲ್ಲಿ ಮಲೆನಾಡಿನಲ್ಲಿ ಜನಸಾಂದ್ರತೆ ಕಡಿಮೆಯಾಗಿತ್ತು. ಮಲೇರಿಯಕ್ಕೆ ಹೆದರಿ, ಬೇರೆ ಪ್ರಾಂತಗಳಿಂದ ಜನ ಮಲೆನಾಡಿಗೆ ಬರುತ್ತಿರಲಿಲ್ಲ. 'ತಪ್ಪು ಮಾಡಿದವರನ್ನು ಕೊಪ್ಪಕ್ಕೆ ಹಾಕು' ಎನ್ನುವ ಗಾದೆಯನ್ನು ಜನ ಅಕ್ಷರಶಃ ನಂಬಿದ್ದರು. ಋತುಮಾನವನ್ನು ಅನುಸರಿಸಿ ಆಗಬೇಕಿದ್ದ ಬೇಸಾಯದ ಕೆಲಸಗಳಿಗೆ ಜನ ಸಿಗುವುದು ಕಷ್ಟವಾಗಿತ್ತು. ದೊಡ್ಡ ಹಿಡುವಳಿಗಾರ ಕುಟುಂಬಗಳಲ್ಲಿ ಊಳಿಗದ ಆಳುಗಳು

ಇರುತ್ತಿದ್ದರು. ಊಳಿಗ ಪದ್ಧತಿಯಲ್ಲಿ ಆಳುಗಳನ್ನು ಕುಟುಂಬದ ಆಸ್ತಿಯ ಅಂಗವಾಗಿ ಪರಿಗಣಿಸುತ್ತಿದ್ದರು. ಕುಟುಂಬ ಪಾಲಾಗುವ ವೇಳೆಯಲ್ಲಿ ಊಳಿಗದ ಆಳುಗಳನ್ನೂ ಹಂಚಿಕೊಳ್ಳುತ್ತಿದ್ದರು. ಊಳಿಗ ಪದ್ಧತಿ ವಂಶ ಪಾರಂಪರ್ಯವಾಗಿ ಬೆಳೆದು ಬರುತ್ತಿತ್ತು. ತಾತನೋ, ಮುತ್ತಾತನೊ ಸಾಹುಕಾರನಲ್ಲಿ ಸಾಲ ಪಡೆದು, ಅದನ್ನು ತೀರಿಸುವ ಭರವಸೆಯ ಮುಚ್ಚಳಿಕೆಗೆ ನಿರಕ್ಷರಕುಕ್ಷಿಗಳಾದ ಅವರು, ಹೆಬ್ಬೆಟ್ಟಿನ ಗುರುತು ಹಾಕಿ ಒಪ್ಪಿಗೆ ಕೊಟ್ಟು, ಆ ಮುಚ್ಚಳಿಕೆಯಲ್ಲಿ ಸಾಲವನ್ನು ತಾನಲ್ಲದಿದ್ದರೂ ತನ್ನ ಮಕ್ಕಳು, ಮೊಮ್ಮಕ್ಕಳು ಜೀತಮಾಡಿ ತೀರಿಸುವ ಭರವಸೆಗೆ ಬದ್ಧರಾಗಿ, ಅಂತಹ ವ್ಯವಸ್ಥೆಗೆ ಬಲಿಯಾಗುತ್ತಿದ್ದರು. ಸಾಹುಕಾರರ ಚಕ್ರಬಡ್ಡಿಯ ವಿಷವೃತ್ತದಲ್ಲಿ ಜೀತದ ಹಣ ಬಡ್ಡಿಗೆ ಹೋಗಿ ಸಾಲದ ಅಸಲು ಹಾಗೇ ಉಳಿದು ತಲೆಮಾರುಗಳು ದುಡಿದರೂ ತೀರದ ಸಮಸ್ಯೆಯಾಗುತ್ತಿತ್ತು. ದೊಡ್ಡ ಹಿಡುವಳಿಗಾರರಿಗೆ ಬೇಸಾಯದ ಸಮಯದಲ್ಲಿ ಜೀತದಾಳುಗಳಲ್ಲದೆ ಇನ್ನೂ ಹೆಚ್ಚಿನ ಜನ ಕೆಲಸಕ್ಕೆ ಬೇಕಾಗುತ್ತಿದ್ದರು. ಈ ಕಾರಣದಿಂದಾಗಿ ಜಮೀನ್ದಾರರು ಘಟ್ಟದ ಕೆಳಗೆ ಹೋಗಿ ಚೆಂಗೂಲಿ ಮಾಡುವವರನ್ನು ಮುಂಗಡ ಹಣಕೊಟ್ಟು ತೋಟಗದ್ದೆಗಳಲ್ಲಿ ಕೆಲಸಮಾಡಲು ಕರೆತರುತ್ತಿದ್ದರು. ಹೀಗೆ ಘಟ್ಟದ ಮೇಲಕ್ಕೆ ಬರುವ ಚೆಂಗೂಲಿಯವರು ಒಬ್ಬ 'ಸೇರೇಗಾರ'ನ ಅಧೀನದಲ್ಲಿರುತ್ತಿದ್ದರು. ಮುಂಗಡವಾಗಿ ಕೊಟ್ಟ ಹಣ ತೀರುವವರೆಗೂ ಕೆಲಸ ಮಾಡಬೇಕೆಂಬ ಕರಾರಿಗೆ ಸೇರೇಗಾರನ ಮೂಲಕ ಅವರು ಬದ್ಧರಾಗಿರುತ್ತಿದ್ದರು. ಈ ಕೆಲಸಗಾರರಿಗೆ ಜಮೀನ್ದಾರರು ಗುಡಿಸಲು ಕಟ್ಟಿಕೊಳ್ಳಲು ಜಾಗ ಕೊಟ್ಟು, ಮಾಡಿಗೆ ಬೇಕಾದ ಹುಲ್ಲು ಇತ್ಯಾದಿ ಸಾಮಗ್ರಿಗಳನ್ನು ಒದಗಿಸಿ, ವರ್ಷಕ್ಕೆ ಒಂದು ಜೊತೆ ಬಟ್ಟೆ ಕೊಡಬೇಕಿತ್ತು. ಇವರ ದಿನಗೂಲಿ ಹಣವನ್ನು ಅವರು ಮುಂಗಡವಾಗಿ ಪಡೆದ ಹಣಕ್ಕೆ ಜಮೀನ್ದಾರರು ಜಮಾ ಮಾಡಿಕೊಳ್ಳುತ್ತಿದ್ದರು. ಹೀಗಾಗಿ, ಇವರು ಸದಾ ಬಡತನದಲ್ಲೇ ಜೀವನ ನಡೆಸಬೇಕಾಗಿ ಬರುತ್ತಿತ್ತು. ಇವರಲ್ಲಿ ಕೆಲವರು ತಮ್ಮ ಹೆಂಡತಿ ಮಕ್ಕಳೊಂದಿಗೆ ಬರುತ್ತಿದ್ದರು. ಮಿಕ್ಕವರು ಒಬ್ಬಂಟಿಗರಾಗಿ ಬಂದು ಒಂಟಿ ಜೀವನ ನಡೆಸುತ್ತಿದ್ದರು. ಈ ಹೆಂಗಸರಲ್ಲಿ ಕೆಲವರು ತಮ್ಮ ಚಾಣಾಕ್ಷತನದಿಂದ ಸಾಹುಕಾರರ ಉಪಪತ್ನಿಯರಾಗಿ ಮೆರೆಯುತ್ತಿದ್ದರು. ಈ ಕಾದಂಬರಿಯಲ್ಲಿ ಬರುವ ಗಂಗೆ ಅಂಥ ಒಂದು ಹೆಂಗಸು. ಅವಳ ಕುತೂಹಲಕಾರಿ ಕತೆಯನ್ನು ಕುವೆಂಪು 'ಮಾಯಗಾರ್ತಿ ಗಂಗೆ' ಎಂಬ ಅಧ್ಯಾಯದಲ್ಲಿ ವರ್ಣಿಸಿದ್ದಾರೆ.

### ಜಾತಿಯ ಚೌಕಟ್ಟು

ಜಾತಿಗಳ ಚೌಕಟ್ಟಿನೊಳಗೆ ಈ ಕಾದಂಬರಿಯ ಪಾತ್ರಗಳು ತಮ್ಮ ದಿನನಿತ್ಯದ ಚಟುವಟಿಕೆಗಳನ್ನು ನಡೆಸಿಕೊಂಡು ಹೋಗುತ್ತವೆ. ಜಾತಿ ಈ ಪಾತ್ರಗಳ ಅಂತಸ್ತನ್ನು ನಿರ್ಧರಿಸಿ ಅವರು ಏನು ಮಾಡಬೇಕು, ಏನು ಮಾಡಬಾರದು ಎನ್ನುವುದನ್ನು ಸ್ಪಷ್ಟಪಡಿಸಿ, ಬದುಕನ್ನು ಸರಳಗೊಳಿಸುತ್ತದೆ. ನಿರಕ್ಷರಕುಕ್ಷಿಗಳಾದ ಮಲೆನಾಡಿಗರು ಜಾತಿಪದ್ಧತಿಯನ್ನು ಅಕ್ಷರಶಃ ಪಾಲಿಸುತ್ತಾರೆ. ಬ್ರಾಹ್ಮಣರ ಪ್ರತಿನಿಧಿಯಾಗಿ ವೆಂಕಪ್ಪಯ್ಯ ಜೋಯಿಸರು ತಮ್ಮ ವೈದಿಕ

ವೃತ್ತಿಯಿಂದ ಹಳೆಯ ಕಂದಾಚಾರಗಳನ್ನು ಪರಂಪರಾನುಗತವಾಗಿ ನಡೆಸಿಕೊಂಡು ಬಂದಿದ್ದಾರೆ. ಜೋಯಿಸರು, ಚಂದ್ರಯ್ಯ ಗೌಡರಿಗಿಂತಲೂ ಕಿರಿಯವರಾದರೂ ಕೀಳು ಜಾತಿಯ ಗೌಡರನ್ನು ಏಕವಚನದಲ್ಲಿ ಸಂಬೋಧಿಸುವುದು ವಾಡಿಕೆ. ಹೂವಯ್ಯ, ವೆಂಕಪ್ಪಯ್ಯನವರಿಗಿಂತ ಹೆಚ್ಚು ವಿದ್ಯಾವಂತನಾದರೂ ಜಾತಿ ವ್ಯವಸ್ಥೆಯಲ್ಲಿ ಅವನ ಅಂತಸ್ತು ಕಡಿಮೆ. ಅಸ್ಪೃಶ್ಯತೆ, ಜಾತಿ ಪದ್ಧತಿಯ ಒಂದು ಅಮಾನುಷ ನಡವಳಿಕೆ. ಈ ಅಸ್ಪೃಶ್ಯ ಜಾತಿಯವರಲ್ಲೇ ಅನೇಕ ಪಂಗಡಗಳಿದ್ದು, ಅವರಲ್ಲಿಯೇ, ಹಳೇಪೈಕದವರು, ಬೇಲರು, ಕರಾದಿಯವರು ಮುಂತಾದ ಮೇಲುಕೀಳೆಂಬ ತಾರತಮ್ಯವಿರುತ್ತಿತ್ತು. ಮುತ್ತಳ್ಳಿ ಮದುವೆಯಲ್ಲಿ ಶೂದ್ರ ಕನ್ಯೆಯ ಕುತ್ತಿಗೆಗೆ ತಾಳಿ ಕಟ್ಟಿಸಿದರು ಎಂಬ ಕಾರಣದಿಂದಾಗಿ, ಅಗ್ರಹಾರದ ಬ್ರಾಹ್ಮಣರು ವೆಂಕಪ್ಪಯ್ಯನವರಿಂದ ದೂರವಾಗುತ್ತಾರೆ. ಶೂದ್ರ ಕನ್ಯೆ ಐಶ್ವರ್ಯವಂತ ಮನೆತನದವಳಾದರೂ ಬ್ರಾಹ್ಮಣರ ಅಂತಸ್ತಿಗೆ ಸರಿಸಮವಾಗಲಾರಳು. ಆದರೆ, ಮಕ್ಕಳನ್ನು ಅವರಷ್ಟಕ್ಕೆ ಬಿಟ್ಟರೆ ಜಾತಿಯ ತಾರತಮ್ಯವಿಲ್ಲದೆ ಸಹಜವಾಗಿ ಒಡನಾಡಿಕೊಂಡಿರುತ್ತಾರೆ ಎನ್ನುವುದಕ್ಕೆ ವಾಸು, ಬ್ರಾಹ್ಮಣ ಮಾಣೆಗಳೊಡನೆ ಸ್ನೇಹ ಬೆಳೆಸಿಕೊಂಡಿದ್ದುದು ಸಾಕ್ಷಿಯಾಗಿದೆ.

## ಮಲೆನಾಡಿಗರ ಭಾಷೆ ಮತ್ತು ಉಡುಗೆ ತೊಡುಗೆಗಳು

**ಭಾಷೆ :**

ಮಲೆನಾಡಿಗರು ಮೆದುಮಾತಿನ ಮಿತಭಾಷಿಗಳು. ಈ ಜನ ಕನ್ನಡವನ್ನು ರಾಗವಾಗಿ ಎಳೆದು ಮಾತನಾಡುತ್ತಾರೆ. ಮಾತು ಮಾತಿಗೆ 'ಮಾರಾಯ' ಎಂಬುದನ್ನು ಸೇರಿಸುವುದು ಇವರ ವಾಡಿಕೆ. ಅಲ್ಲದೆ, ಅವರ ಅನೇಕ ನುಡಿಗಟ್ಟುಗಳೂ ವಿಶಿಷ್ಟವಾಗಿರುತ್ತವೆ. ಉದಾಹರಣೆಗೆ : ವಡಾಸು (ಅಪರೂಪದ ವಸ್ತು), ಬದ್ದೆಗೂ (ನಿಜಕ್ಕೂ), ಪರಿಕಾರ (ನಿಲುವಂಗಿ), ಪಡಿ (ದಿನಗೂಲಿ), ಬಾಯಿಗೆ ಕೊಡಿ (ಎಲೆ ಅಡಿಕೆ ಕೊಡಿ), ಗುಡಿ (ಗುಡಿಸಲು), ಅನ್ನೇಕಾರ (ಮೋಸಗಾರ), ಬಡು (ಸತ್ತ ಪ್ರಾಣಿ), ಬಾಡು (ಮಾಂಸ), ಪಿರಿಪಿರಿ (ರಗಳೆ), ಉಪದ್ರ (ತೊಂದರೆ), ತುಂಡು ಕಡುಬು (ಮಾಂಸದ ಸಾರು ಮತ್ತು ಅಕ್ಕಿಹಿಟ್ಟು ಕುಟ್ಟಿ ಮಾಡಿದ ಕಡುಬು) - ಇವೇ ಮುಂತಾದ ಪದಗಳನ್ನು ಮಾತಿನಲ್ಲಿ ಬಳಸುತ್ತಾರೆ.

ಮಲೆನಾಡಿಗರ ಮಾತಿನ ವೈಖರಿಯನ್ನು ಕಾದಂಬರಿಯಲ್ಲಿ ಬರುವ ಈ ಅಕ್ಕ ತಂಗಿಯರ ಸಂಭಾಷಣೆ ನಿರೂಪಿಸುತ್ತದೆ :

''ಅಕ್ಕಯ್ಯಾ, ರಂಗಿ ಸತ್ತುಹೋತಂತೆ ಕಣೇ. ಸತ್ತುಹೋತಂತಲ್ಲಾ, ಎಲ್ಲಿಗೆ ಹೋತು?''

''ಎಲ್ಲಿಗೆ ಹೋತು ಅಂದರೆ ? ಸತ್ತು ಹೋತು''

"ಓ! ಸತ್ತುಹೋತೇನೂ, ಸತ್ತು ಎಲ್ಲಿಗೆ ಹೋತು?"

"ಸ್ವರ್ಗಕ್ಕೆ"

"ಸ್ವರ್ಗ ಇರಾದೆಲ್ಲಿ ?"

"ಮೋಡ, ಆಕಾಶ, ನಕ್ಷತ್ರ ಎಲ್ಲಾ ದಾಟಿಹೋದರೆ ಸಿಕ್ತದೆ"

"ರಂಗಿ ಹ್ಯಾಂಗೆ ಹೋತೇ ಅಷ್ಟು ದೂರ ?"

"ದೇವತೆಗಳು ಬಂದು ಕರ್ಕೊಂಡೋದ್ರು"

"ನಾವೂ ಹೋಗಾನೇನೆ ಅಲ್ಲಿಗೆ?"

"ಥೂ! ಹಾಳುಬಾಯಿ ನುಡಿಬೇಡ"

ಇಂತಹ ಹಲವು ಉದಾಹರಣೆಗಳನ್ನು ಕಾದಂಬರಿಯುದ್ದಕ್ಕೂ ನೋಡಬಹುದು.

### ಉಡುಗೆ-ತೊಡುಗೆ :

ಮಲೆನಾಡಿಗರು ಸ್ನೇಹಪರರು, ಅತಿಥಿ ಸತ್ಕಾರಕ್ಕೆ ಹೆಸರಾದವರು. ಈ ಜನರ ಉಡುಗೆತೊಡುಗೆಗಳಲ್ಲಿ ಸರಳತೆ ಎದ್ದು ಕಾಣುತ್ತದೆ. ಅರ್ಧ ತೋಳಿನ ಷರಟು, ಮೊಳಕಾಲಿನವರೆಗೆ ಬರುವ ಕಚ್ಚೆ, ತಲೆಗೆ ಅಡಿಕೆ ಹಾಳೆಯಿಂದ ಮಾಡಿದ ಶಿರಸ್ತ್ರಾಣ ಇವು ಪುರುಷರ ದೈನಂದಿನ ಉಡುಪು. ಸೀರೆಯನ್ನು ಗೊಬ್ಬೆಕಟ್ಟಿ ಉಡುವುದು, ಕೂದಲನ್ನು ಎಣ್ಣೆಹಾಕಿ ಬಾಚಿ ಹೂ ಮುಡಿದು ಅಲಂಕಾರ ಮಾಡಿಕೊಳ್ಳುವುದು, ಮುಂಗೈ ಮೇಲೆ ಹಚ್ಚೆ ಹುಯ್ಸಿಕೊಳ್ಳುವುದು ಮಲೆನಾಡಿನ ಹೆಗ್ಗಡತಿಯರ ವೈಶಿಷ್ಟ್ಯ. ಮಳೆಗಾಲದಲ್ಲಿ ಗಂಡಸರು ಕಂಬಳಿಕೊಪ್ಪೆ ಹಾಕಿಕೊಳ್ಳುತ್ತಾರೆ. ಇದು ಅವರನ್ನು ಮಳೆಯಿಂದ ರಕ್ಷಿಸುವುದಲ್ಲದೆ ದೇಹವನ್ನೂ ಬೆಚ್ಚಗಿಡುತ್ತದೆ. ಮಳೆಗಾಲದಲ್ಲಿ ಹೆಂಗಸರು ಸಾಮಾನ್ಯವಾಗಿ 'ಗೊರಬು' ಉಪಯೋಗಿಸುತ್ತಾರೆ. ಗೊರಬು ಎಲೆ ಮತ್ತು ಬಳ್ಳಿಗಳಿಂದ ಹೆಣೆದು ಮಾಡಿದ ಅರ್ಧ ಗೋಳಾಕೃತಿಯ, ಮಳೆಯಿಂದ ರಕ್ಷಣೆ ಪಡೆಯುವ, ಒಂದು ಸಾಧನ. ಗಂಡಸರು ಮತ್ತು ಹೆಂಗಸರು ಸದಾ ತಂಬೂಲ ಜಗಿಯುವುದು ಈ ಜನಕ್ಕೆ ಪ್ರಾಚೀನ ಕಾಲದಿಂದ ಬಂದ ಅಭ್ಯಾಸ. ಅತಿಥಿಗಳಿಗೆ ಕೈಕಾಲು ತೊಳೆಯಲು ತಂಬಿಗೆಯಲ್ಲಿ ನೀರು ಕೊಡುವುದು, ತಾಂಬೂಲ ನೀಡುವುದು, ಬಾಯಾರಿಕೆಗೆ ನೀರಿನ ಜೊತೆಗೆ ಬೆಲ್ಲ ಕೊಡುವುದು ಮಲೆನಾಡಿನ ವಿಶಿಷ್ಟ ಸಂಪ್ರದಾಯ.

## ಮಲೆನಾಡಿಗರ ನಂಬಿಕೆಗಳು ಮತ್ತು ಹಬ್ಬಗಳು

### ಭೂತಗಣಾರಾಧನೆ

ಪರ್ವತಾರಣ್ಯಗಳಿಂದ ಆವೃತವಾಗಿರುವ ಮಲೆನಾಡ ಪರಿಸರ ಜನರ ಮನಸ್ಸಲ್ಲಿ ವಿವಿಧ ಭಾವನೆಗಳ ಸಂಘರ್ಷಣೆ ಉಂಟಾಗುವಂತೆ ಮಾಡಿ ನಿಸರ್ಗವನ್ನು ಕುರಿತು ಅನೇಕ

ಬಗೆಯ ನಂಬಿಕೆಗಳನ್ನು ಬೆಳೆಸಿಕೊಳ್ಳುವಂತೆ ಮಾಡುತ್ತದೆ. ದಟ್ಟವಾದ ಕಾಡಿನ ಕತ್ತಲೆ ಮತ್ತು ನೀರವತೆ ನಿಸರ್ಗದ ನಿಗೂಢತೆಯನ್ನು ಹೆಚ್ಚಿಸಿ ಮಾನವರಲ್ಲಿ ಭಯ-ಭೀತಿ ಹುಟ್ಟಿಸಿ, ದೆವ್ವ-ಪಿಶಾಚಿ ಮುಂತಾದ ಅಲೌಕಿಕ ಶಕ್ತಿಗಳಲ್ಲಿ ನಂಬಿಕೆ ಹುಟ್ಟಿಸಿ, ಆ ಶಕ್ತಿಗಳನ್ನು ಒಲಿಸಿಕೊಳ್ಳಲು ಪೂಜೆ, ಹರಕೆ, ಬಲಿಕೊಡುವುದು ಮುಂತಾದ ಪದ್ಧತಿಗಳನ್ನು ಜನರು ರೂಢಿಗೊಳಿಸಿಕೊಳ್ಳುತ್ತಾರೆ. ಮಲೆನಾಡಿಗರ ಬದುಕಿನಲ್ಲಿ ರೂಢಿಸಿಕೊಂಡು ಬಂದ ಒಂದು ಪದ್ಧತಿ 'ದೈಯದ ಹರಕೆ.' 'ಕಾನೂರಿನಲ್ಲಿ ದೈಯದ ಹರಕೆ' ಎಂಬ ಅಧ್ಯಾಯದಲ್ಲಿ ಈ ಹರಕೆಯನ್ನು ಕುವೆಂಪು ವರ್ಣರಂಚಿತವಾಗಿ ವಿವರಿಸಿದ್ದಾರೆ. ದೆವ್ವ-ಭೂತಗಳಿಗೆ ಬಲಿ ಕೊಟ್ಟು ಆರಾಧಿಸುವ ಮೊದಲು ಜೋಯಿಸರಿಂದ 'ಜೈನೆಡೆ' (ಮಾಂಸಾಹಾರವಿಲ್ಲದ ಎಡೆ) ಹಾಕಿಸುವುದು ವಾಡಿಕೆ. ಈ ಪದ್ಧತಿ ಮಲೆನಾಡಿಗರ ಪೂರ್ವೀಕರು ಜೈನ ಮತಸ್ಥರಾಗಿದ್ದಿರಬಹುದೆಂಬ ವಿವಾದಾತ್ಮಕ ವಾದಕ್ಕೆ ಇಂಬು ಕೊಡುತ್ತದೆ. ಜೈನೆಡೆ ಹಾಕಿದ ಮೇಲೆ ಭೂತಗಣಾರಾಧನೆ ಪ್ರಾರಂಭವಾಗುತ್ತದೆ. ಹರಕೆ ಹೊತ್ತವರು ತಮ್ಮ ಬಲಿಪ್ರಾಣಿಗಳನ್ನು ಎಳೆದುಕೊಂಡೋ, ಹೊತ್ತುಕೊಂಡೋ ಆಯಾ ದೈಯದ 'ಬನ'ಗಳಿಗೆ ಹೋಗುತ್ತಾರೆ. ಮೇಕೆಗಳ ಅರಚುವಿಕೆಯೂ, ಕಾಲು ಕಟ್ಟಿದ ಕೋಳಿಗಳ ನಾನಾ ತೆರನಾದ ಕೂಗುವಿಕೆಯೂ ವಾಯುಮಂಡಲವನ್ನೆಲ್ಲ ತುಂಬುತ್ತದೆ. ಚೌಡಿಯ ಬನದಲ್ಲಿ ಬಲಿ ಪ್ರಾಣಿಗಳನ್ನು ಚಿತ್ರಹಿಂಸೆ ಮಾಡಿ ಕೊಲ್ಲುತ್ತಿದ್ದು, ಅಲ್ಲಿ ಬಹಳ ಮಂದಿ ಸೇರುತ್ತಿದ್ದರು. ಭೂತದ ಬನದಲ್ಲಿ, ಹಳೇಪೈಕದ ತಿಮ್ಮ ಎಂತಹ ದೊಡ್ಡ ಪ್ರಾಣಿಯನ್ನಾದರೂ ಒಂದೇ ಕೊಚ್ಚಿಗೆ ಕೊಲ್ಲುತ್ತಿದ್ದ. ಹಾಗಾಗಿ, ಅಲ್ಲಿಗೂ ಜನ ಹೆಚ್ಚಿನ ಸಂಖ್ಯೆಯಲ್ಲಿ ಹೋಗುತ್ತಿದ್ದರು. ಅವನ ಕತ್ತಿಯ ಕೈಚಳಕ ನೋಡುವುದೇ ಅವರಿಗೊಂದು ಹಬ್ಬ! ತಿಮ್ಮ ಮೊದಲು ಕೋಳಿಗಳ ತಲೆ ಕತ್ತರಿಸಿ ರಕ್ತವನ್ನು ಭೂತದ ಕಲ್ಲಿಗೆ ಹಚ್ಚುತ್ತಾನೆ. ತಲೆ ಹೋದ ಕೋಳಿಗಳು ರೆಕ್ಕೆಗಳನ್ನು ರಪ್ಪರಪ್ಪನೆ ಬಡಿದುಕೊಂಡು ದಿಕ್ಕುದಿಕ್ಕಿಗೆ ಹಾರಿಹಾರಿ ಬೀಳತೊಡಗುವುವು. ಕೋಳಿಗಳ ಬಲಿ ಮುಗಿದ ಮೇಲೆ ಹೋತಗಳ ಸರದಿ. ಬಲಿಷ್ಟವಾದ ಕರಿಯ ಹೋತ ಒಂದನ್ನು ಬಲಿ ಕೊಡಲು ಎಳೆದಾಗ ಅದು ಪ್ರತಿಭಟಿಸಿ ಬೇರೆ ದಿಕ್ಕಿಗೆ ಎಳೆಯತೊಡಗುತ್ತದೆ. ಈ ಜಗ್ಗಾಟದಲ್ಲಿ ನಿಂಗ ಮುಗ್ಗರಿಸಿ ಬಿದ್ದು, ಹೋತ ತಪ್ಪಿಸಿಕೊಂಡು ಓಡಿ ಕೆರೆಗೆ ಹಾರುತ್ತದೆ. ಪುಟ್ಟಣ್ಣ ಕೆರೆಗೆ ಹಾರಿ ಹೋತವನ್ನು ಉಪಾಯದಿಂದ ಮೇಲಕ್ಕೆ ತರುತ್ತಾನೆ. ಅಷ್ಟರಲ್ಲಿ ಹೂವಯ್ಯ ಬಂದು ಹೋತ ಬಲಿಯಾಗುವುದನ್ನು ತಪ್ಪಿಸಿದಾಗ, ಅವನ ಈ ಕರುಣೆಯ ಕಾಯಕ ಚಂದ್ರೇಗೌಡರನ್ನು ಕೆರಳಿಸುತ್ತದೆ.

ಈ ಭೂತಗಣಾರಾಧನೆಗೆ ಅನಕ್ಷರತೆಯೇ ಮೂಲ ಕಾರಣ. ನಿರಕ್ಷರಕುಕ್ಷಿಗಳಾದ ಮಲೆನಾಡಿಗರು ತಮ್ಮ ರಕ್ಷಣೆಗೆ ಭೂತ-ಪಿಶಾಚಿಗಳ ಮೊರೆ ಹೋಗುತ್ತಿದ್ದರು. ಭೂತರಾಯನಲ್ಲಿ ಕೆಲವರಿಗೆ ಅಚಲವಾದ ನಂಬಿಕೆ ಹಾಗೂ ಭಯಮಿಶ್ರಿತ ಭಕ್ತಿ. ಈ ಅಂಥ ಶ್ರದ್ಧೆ ಕೆಲವು ಸಮಯ ದುರಂತದಲ್ಲಿ ಪರ್ಯಾವಸಾನವಾಗುತ್ತಿತ್ತು. ಇಂತಹ ಒಂದು ದುರಂತವನ್ನು ಕುವೆಂಪು 'ತೆಂಗಿನ ಕಾಯಿಯ ಮಂತ್ರ ಶಕ್ತಿ' ಅಧ್ಯಾಯದಲ್ಲಿ ಮನಕರಗುವಂತೆ

ನಿರೂಪಿಸಿದ್ದಾರೆ. ಮನೆ ಪಾಲಾಗುವ ಗಲಾಟೆಯಲ್ಲಿ ನಿಂಗ ತನ್ನ ಸ್ವಂತ ವಸ್ತು / ಸಣ್ಣಪುಟ್ಟ ಒಡವೆಗಳನ್ನು ಜೋಪಾನಮಾಡಲು ಕಾಡಿನ ಗುಪ್ತ ಸ್ಥಳಗಳಲ್ಲಿ ಗುಂಡಿ ತೋಡಿ ಹುದುಗಿಸಿ ಇಟ್ಟಿದ್ದನು. ಇದನ್ನು ಕಂಡುಕೊಂಡ ಗಂಗ ಹುಡುಗ ತನ್ನ ಕಳ್ಳಿನ ಸಾಲ ತೀರಿಸಲು ಕಳ್ಳಂಗಡಿಯವನಿಗೆ ಆ ಗುಪ್ತ ಸ್ಥಳ ತೋರಿಸಿ, ಅಲ್ಲಿ ಹುಗಿದಿದ್ದ ವಸ್ತುಗಳನ್ನು ಅವರಿಬ್ಬರೂ ಸೇರಿ ಅಪಹರಿಸುತ್ತಾರೆ. ತನ್ನ ವಸ್ತುಗಳು ಕಳುವಾಗಿದ್ದು ಕಂಡ ನಿಂಗ ಎಲ್ಲರನ್ನು ಶಪಿಸುತ್ತಾ, ರೋದಿಸುತ್ತಾ ಬರುತ್ತಿದ್ದಾಗ ಬಾಡುಗಳ್ಳ ಸೋಮನ ಸಲಹೆಯಂತೆ ಭೂತರಾಯನಿಗೆ ಮೊರೆ ಹೋಗಲು ನಿರ್ಧರಿಸುತ್ತಾನೆ. ಮೂರು ಕಣ್ಣು ಮತ್ತು ಜುಟ್ಟು ಇರುವ ತೆಂಗಿನಕಾಯಿಗೆ ಅರಸಿನಕುಂಕುಮ, ವಿಭೂತಿ, ಕೋಳಿಚೊಟ್ಟೆಯ ರಕ್ತ ಮುಂತಾದವುಗಳನ್ನು ಲೇಪಿಸಿ, ಅದನ್ನು ಭೂತರಾಯರಿಗೆ ಅರ್ಪಿಸಿ ತನ್ನ ವಸ್ತುಗಳನ್ನು ಕದ್ದವರು ಆ ತೆಂಗಿನ ಕಾಯಿ ಮುಟ್ಟಿದರೆ ರಕ್ತ ಕಾರಿಕೊಂಡು ಸಾಯಬೇಕು ಎಂಬ ಕೋರಿಕೆಯೊಡನೆ ತೆಂಗಿನ ಕಾಯಿ ಮಂತ್ರ ಶಕ್ತಿಯನ್ನು ಪರೀಕ್ಷಿಸಲು ಸಿದ್ಧನಾಗುತ್ತಾನೆ. ದೊಡ್ಡವರ ಕೈಯಲ್ಲಿ ತೆಂಗಿನಕಾಯಿ ಮುಟ್ಟಿಸಿದ ಮೇಲೆ ನಿಂಗ, ಹುಡುಗರೂ ಕಾಯಿ ಮುಟ್ಟಬೇಕೆಂದು ಒತ್ತಾಯ ಮಾಡುತ್ತಾನೆ. ಆಗ ಗಂಗ ಹುಡುಗನ ಜಂಘಾಬಲ ಉಡುಗಿಹೋಗಿ 'ನಾನೊಲ್ಲೆ, ನಾನೊಲ್ಲೆ' ಎಂದು ಕೂಗಿಕೊಂಡಾಗ, ನಿಂಗ, 'ಹೋಗಲಿ ಬಿಡಿ; ಅಂತೂ ಗುಮಾನಿ ನಿಮ್ಮ ಮೇಲೆ', ಎಂದು ಮುಂದೆ ಹೋಗುತ್ತಾನೆ. ಆಗ ಸೇಸಿ, ಮುಂದೆ ಹೋದ ನಿಂಗನನ್ನು ಕರೆದು, ಮಗ ಗಂಗನನ್ನು ಗುದ್ದಿ ಕರೆತಂದು, ಬಲಾತ್ಕಾರವಾಗಿ ತೆಂಗಿನಕಾಯಿ ಮುಟ್ಟಿಸುತ್ತಾಳೆ. ಕಾಯಿ ಮುಟ್ಟಿದ ಗಂಗ ಚಿಟ್ಟನೆ ಚೀರಿ ಮೂರ್ಛೆ ಹೋಗುತ್ತಾನೆ. ಭಯದಿಂದ ರಾತ್ರಿಯೆಲ್ಲ ಜ್ವರ ಬಂದು, ನರಳಿ, ಬೆಳಗಿನ ಜಾವ ಗಂಗ ಹುಡುಗ ಪ್ರಾಣಬಿಡುತ್ತಾನೆ. ಈ ಅಧ್ಯಾಯ ಮಲೆನಾಡಿಗರ ಮೌಢ್ಯಕ್ಕೆ ಕನ್ನಡಿ ಹಿಡಿದಂತಿದೆ.

## ಹಬ್ಬಗಳ ಆಚರಣೆ

ಮಲೆನಾಡಿಗರು ಮೂರು ಮುಖ್ಯ ಹಬ್ಬಗಳನ್ನು ಆಚರಿಸುತ್ತಾರೆ: ಭೂಮಿ ಹುಣ್ಣಿಮೆ, ದೀಪಾವಳಿ ಮತ್ತು ಎಳ್ಳಮಾಸ್ಯೆ. ಭೂಮಿ ಹುಣ್ಣಿಮೆ ಹಬ್ಬದ ವಿಶೇಷವೆಂದರೆ 'ಕಳಮ ಶ್ರೀ'ಯ ಪೂಜೆ. ಹಬ್ಬದ ಹಿಂದಿನ ದಿನ ಕಾಡಿಗೆ ಹೋಗಿ ಅರವತ್ತು ಬಗೆಯ ಸೊಪ್ಪುಗಳನ್ನು, ನೂಲೇಗೆಣಸುಗಳನ್ನು ತರುತ್ತಾರೆ. ಅರವತ್ತು ಬಗೆಯ ಸೊಪ್ಪು ಸೇರಿಸಿ 'ಬೆರೆಕೆಸೊಪ್ಪಿನ ಪಲ್ಯ' ಮಾಡುತ್ತಾರೆ. ನೂಲೇಗೆಣಸು ಆ ಬಳ್ಳಿಯ ಬುಡದ ಗಡ್ಡೆ. ಈ ಗೆಣಸು ಅರ್ಧ ಅಡಿ ದಪ್ಪ ನಾಲ್ಕೈದು ಅಡಿ ಉದ್ದವಾಗಿರುತ್ತದೆ. ಗೆಣಸನ್ನು ಬೇಯಿಸಿ ಸಿಪ್ಪೆ ಸುಲಿದರೆ ತಿರುಳು ಬೆಣ್ಣೆಯಂತೆ ಮೃದುವಾಗಿರುತ್ತದೆ. ಈ ಹಬ್ಬದಲ್ಲಿ ತಯಾರಿಸುವ ವಿಶೇಷ ಖಾದ್ಯಗಳೆಂದರೆ: ಕೆಸುವಿನ ಕೊಟ್ಟೆಹಿಟ್ಟು, ಮತ್ತು ಕೊಚ್ಚಲಿಮೀನಿನ ಪಲ್ಯ. ಕಳಮ ಶ್ರೀಗೆ ಜೈನ ಎಡೆ ನಿವೇದಿಸುತ್ತಾರೆ. ಹಬ್ಬದ ದಿನ ಬೆಳಕು ಹರಿಯುವ ಮುನ್ನ ಗದ್ದೆಗಳಿಗೆ ಹೋಗಿ ಬತ್ತದ ಪೈರನ್ನು ಹೊತ್ತು ನಿಂತ ಗರ್ಭವತಿಯಾದ ಭೂಮಿಯನ್ನು ವಿಧಿವತ್ತಾಗಿ ಪೂಜಿಸುತ್ತಾರೆ.

ದೀಪಾವಳಿ ರೈತರಿಗೆ ಬಹು ದೊಡ್ಡ ಹಬ್ಬ. ಮಾಗಿಯ ಕಾಲಕ್ಕೆ ಮುಂಚಿತವಾಗಿ ಬರುವ ಈ ಹಬ್ಬ ಮುಂಬರುವ ಫಸಲಿನ ಭರವಸೆಯಿಂದಾಗಿ ಹಳ್ಳಿಗರಿಗೆ ಹರ್ಷದಾಯಕವಾದ ಹಬ್ಬ ಹಬ್ಬದ ತಯಾರಿ 'ಕರಿ ಗುಡಿಸುವುದ'ರಿಂದ ಪ್ರಾರಂಭವಾಗುತ್ತದೆ. 'ಕರಿಗುಡಿಸುವುದು' ಎಂದರೆ ಮನೆಯ ಮೂಲೆ ಮುಡುಕುಗಳನ್ನು ಗುಡಿಸಿ ಸಾರಿಸಿ ಸ್ವಚ್ಛ ಮಾಡುವುದು. ಗುಡಿಸಿ ಸಾರಿಸಿದ ಜಾಗದಲ್ಲಿ ಮನೆಯ ಹೆಣ್ಣುಮಕ್ಕಳು ನಾನಾ ತರದ ರಂಗೋಲೆ ಹಾಕುತ್ತಾರೆ. ಆನಂತರ ಗೋಪೂಜೆಗಾಗಿ ಉಗುಣೆಕಾಯಿ ತರಲು ಕಾಡಿಗೆ ಹೋಗುತ್ತಾರೆ. ಸಂಗ್ರಹಿಸಿದ ಉಗುಣೆಕಾಯನ್ನು ಚೆಂಡು ಹೂವಿನೊಡನೆ ಸೇರಿಸಿ ಮಾಲೆ ಕಟ್ಟುತ್ತಾರೆ. ಪೂಜೆಯ ದಿನ ಗೋವುಗಳನ್ನು ಈ ಮಾಲೆಗಳಿಂದ ಶೃಂಗರಿಸುತ್ತಾರೆ. ಬಣ್ಣದ ನೀರಿನಲ್ಲಿ ಅದ್ದಿದ ಸೇರು, ಪಾವು, ಚಟಾಕುಗಳಿಂದ ದನಕರುಗಳ ಮೈಮೇಲೆ ಠಸ್ಸೆ ಹೊಡೆದು ಅಲಂಕರಿಸುತ್ತಾರೆ. ಹೂ ಮಾಲೆಗಳಲ್ಲಿ ಚಪ್ಪೆ ರೊಟ್ಟಿ ಕಟ್ಟಿ ಇಡುವುದು ಸಂಪ್ರದಾಯ. 'ಭೂರಿಸ್ನಾನ'ಕ್ಕೆ ಬಚ್ಚಲನ್ನು ಸ್ವಚ್ಛ ಮಾಡಿ ನೀರಿನ ಹಂಡೆಗೆ ಅರಿಸಿನ ಕುಂಕುಮ ಲೇಪಿಸಿ ನೀರು ತುಂಬುತ್ತಾರೆ. ಹಬ್ಬದ ದಿನ ಬೆಳಗಿನ ಜಾವ ಭೂರಿಸ್ನಾನ ಪ್ರಾರಂಭವಾಗುತ್ತದೆ. ಎಲ್ಲರೂ ಮೈಗೆ ಎಣ್ಣೆ ಹಚ್ಚಿಕೊಂಡು ಸ್ನಾನಮಾಡುವುದು ವಿಧಿವತ್ತಾಗಿ ನಡೆಯುತ್ತದೆ. ಸ್ನಾನದ ನಂತರ ಮನೆ ದೇವರ ಪೂಜೆ. ಆನಂತರ ಮೇಣಿ ಪೂಜೆ ನಡೆಯುತ್ತದೆ. ಮೇಣಿ ಪೂಜೆಯಲ್ಲಿ ರೈತಾಪಿ ಜೀವನಕ್ಕೆ ಅಗತ್ಯವಾದ ನೇಗಿಲು ಮುಂತಾದ ಉಪಕರಣಗಳನ್ನು ಪೂಜಿಸುತ್ತಾರೆ. ಆನಂತರ ಒಂದು ಶೃಂಗಾರ ಮಾಡಿದ ಹಸುವಿಗೆ ಪೂಜೆಯಾಗುತ್ತದೆ. ಈ ಪೂಜೆಯಾದ ಮೇಲೆ ಕೊಟ್ಟಿಗೆಯಲ್ಲಿ ಕೂಡಿದ್ದ ದನಕರುಗಳನ್ನು ಜಾಗಟೆ ಬಡಿದು, ಶಂಖ ಊದಿ ಹೊರಕ್ಕೆ ಅಟ್ಟುತ್ತಾರೆ. ಶಬ್ದಕ್ಕೆ ಹೆದರಿ ದಿಕ್ಕಾಪಾಲಾಗಿ ಓಡುವ ದನಕರುಗಳನ್ನು ಯುವಕರು, ಹುಡುಗರು ಬೆನ್ನಟ್ಟಿಹೋಗಿ ಅವುಗಳ ಕತ್ತಿನಲ್ಲಿರುವ ಮಾಲೆಗಳನ್ನು ಚಪ್ಪೆ ರೊಟ್ಟಿ ಸಮೇತ ಕಿತ್ತು ತರುತ್ತಾರೆ. ಆನಂತರ ಹಬ್ಬದ ಊಟವನ್ನುಂಡು ಸಾಯಂಕಾಲ ಗದ್ದೆಗಳಿಗೆ ದೀಪಹಚ್ಚಲು ತಯಾರಾಗುತ್ತಾರೆ. ಅಡಿಕೆ ದೆಬ್ಬೆಗಳನ್ನು ಸೀಳಿ ಕೋಲುಗಳನ್ನಾಗಿ ಮಾಡಿ, ತುದಿಗೆ ಎಣ್ಣೆ ಬಟ್ಟೆ ಸುತ್ತಿ ದೊಂದಿ ಮಾಡುತ್ತಾರೆ. ಈ ದೊಂದಿಗಳನ್ನು ರೈತರು ತಮ್ಮ ತಮ್ಮ ಗದ್ದೆ ಅಂಚಿನಲ್ಲಿ ಹುಗಿದು ದೊಂದಿ ಹೊತ್ತಿಸಿ 'ದೀಪ್ ದೀಪೋಳಿಗೆ' ಎಂದು ಕೂಗುವ ಕೂಗು ಮಲೆನಾಡಿನ ಬೆಟ್ಟಗುಡ್ಡ ಕಣಿವೆಗಳಲ್ಲಿ ಮಾರ್ದನಿಗೊಳ್ಳುತತ್ತದೆ.

ದೀಪಾವಳಿಯ ವಿಶಿಷ್ಟ ಸಂಪ್ರದಾಯ – 'ಅಂಟಿಕೆ-ಪಂಟಿಕೆ'. ಅಂಟಿಕೆ-ಪಂಟಿಕೆ ಅಂದರೆ ದೀಪಾವಳಿ ಹಬ್ಬದ ರಾತ್ರಿ ಮನೆಮನೆಗೆ ಹೋಗಿ ದೀಪದಾನ (ಅಂಟಿಕೆ) ಮಾಡುವುದು. ಅಂಟಿಕೆ-ಪಂಟಿಕೆ ಗುಂಪಿಗೆ ಒಬ್ಬ ನಾಯಕನಿರುತ್ತಾನೆ. ಈ ನಾಯಕನೇ ದೀಪಧಾರಿ. ಉಳಿದವರು ಅವನ ಸಹಾಯಕರು – ಎಣ್ಣೆ ಡಬ್ಬ ಹಿಡಿಯುವವನು, ಮನೆಯವರು ಕೊಟ್ಟ ದಿನಸಿ ಸಾಮಾನು ಹೊರುವವನು, ಹಾಡು ಹೇಳುವವರು – ಇವರೆಲ್ಲ ನಾಯಕನಿಗೆ ನೆರವಾಗುತ್ತಾರೆ. ನಿಶಬ್ದವಾದ ನಡುರಾತ್ರಿಯಲ್ಲಿ ದೀಪ ಹಿಡಿದು ಬರುವ ಇವರು

ದೂರದಿಂದಲೇ ಹಾಡು ಹೇಳುತ್ತ ಮನೆಯವರನ್ನು ಎಚ್ಚರಿಸುತ್ತಾರೆ. ಎಚ್ಚರಾದ ಮನೆಯವರು ದೀಪದಾನ ತೆಗೆದುಕೊಳ್ಳಲು ತಯಾರಾಗುತ್ತಾರೆ. ಅಂಟಿಕೆ-ಪಂಟಿಕೆಯವರು ಮನೆಬಾಗಿಲಿಗೆ ಬಂದು 'ಬಾಗಿಲ ತೆಗಿರಮ್ಮ ಭಾಗ್ಯದ ಲಕ್ಷ್ಮಮ್ಮ ಜ್ಯೋತೀನ ಒಳಗೆ ಕರಕೊಳ್ಳಿ', ಎಂದು ಹಾಡುತ್ತಾರೆ. ಆಗ ಮನೆಯ ಗೃಹಿಣಿ ಹಣತೆ ಹಿಡಿದು ಹೊರಬಂದು ಅವರ ದೀಪದಿಂದ ತನ್ನ ಹಣತೆ ಹಚ್ಚಿಕೊಂಡು ಆ ಹಣತೆಯನ್ನು ಮನೆದೇವರ ಬಳಿ ಇಟ್ಟು ನಮಸ್ಕರಿಸುತ್ತಾಳೆ. ಬಂದವರಿಗೆ ದಣಿವಾರಿಸಿಕೊಳ್ಳಲು ನೀರು ಬೆಲ್ಲ ಕೊಟ್ಟು ಉಪಚರಿಸುತ್ತಾರೆ. ಅಂಟಿಕೆಪಂಟಿಕೆಯವರು ಒಂದಾದಮೇಲೊಂದರಂತೆ ಹಾಡು ಹೇಳುತ್ತಾರೆ. ಆನಂತರ ಮನೆಯ ಯಜಮಾನ ಕಾಣಿಕೆ ಅರ್ಪಿಸಿ ಅವರನ್ನು ಬೀಳ್ಕೊಡುತ್ತಾನೆ. ಕಾಣಿಕೆಯಲ್ಲಿ ನಗದು ಹಣ ಮತ್ತು ದಿನಸಿ ಪದಾರ್ಥಗಳು ಸೇರಿರುತ್ತವೆ. ಹೀಗೆ ಅವರು ಮನೆಮನೆಗೆ ಹೋಗಿ ದೀಪದಾನ ಮಾಡುತ್ತಾರೆ. ತರುವಾಯ ಒಂದು ಪ್ರಶಸ್ತವಾದ ದಿನ ಮನೆಗೆ ಒಬ್ಬರಂತೆ ಪ್ರತಿ ಮನೆಯವರನ್ನು ಆಹ್ವಾನಿಸಿ 'ಗುಡ್ಡದೌಂತ್ಲ' (ಗುಡ್ಡದ ಔತಣ) ಏರ್ಪಡಿಸುತ್ತಾರೆ. ಈ ಗುಡ್ಡದೌಂತ್ಲದಲ್ಲಿ ಭಾಗವಹಿಸುವವರು ವೈಮನಸ್ಸು ಮರೆತು ಸೌಹಾರ್ದತೆಯಿಂದ ನಡೆದುಕೊಳ್ಳಬೇಕು. ಬದುಕಿನಲ್ಲಿ ಸೌಹಾರ್ದತೆ ಇಲ್ಲದಿದ್ದರೆ ಸುಖವಿಲ್ಲ ಎನ್ನುವುದು ಈ ಹಬ್ಬದ ಒಂದು ಆದರ್ಶ ಸಂದೇಶ.

ಎಳ್ಳಮಾಸೆಯಲ್ಲಿ ತೀರ್ಥಹಳ್ಳಿಯಲ್ಲಿ ದೊಡ್ಡ ಜಾತ್ರೆ ನಡೆಯುತ್ತದೆ. ಈ ಜಾತ್ರೆಗೆ ಬರುವ ಜನ ಪಾಪ ಪರಿಹಾರಾರ್ಥವಾಗಿ ರಾಮತೀರ್ಥದಲ್ಲಿ ಸ್ನಾನ ಮಾಡುತ್ತಾರೆ. ಜಾತ್ರೆಗೆ ಅನೇಕ ವಿಧದ ಅಂಗಡಿಗಳು ಬಂದಿರುತ್ತವೆ. ಕೋಮುವಾರು ಸೌಹಾರ್ದತೆಗೆ ಹೆಸರಾದ ಈ ಹಬ್ಬದಲ್ಲಿ ಇಸ್ಲಾಂ ಮತಸ್ಥರು ಹುಲಿವೇಷ ಹಾಕುವುದು ಒಂದು ವಿಶಿಷ್ಟ ಪದ್ಧತಿ. ಹುಲಿವೇಷ ನೋಡಲೆಂದೇ ಸುತ್ತ ಮುತ್ತಲಿನ ಹಳ್ಳಿಗಳಿಂದ ಜನ ಕಿಕ್ಕಿರಿದಿರುತ್ತಾರೆ. ನಾಟಕ, ಸಿನಿಮ ಮುಂತಾದವುಗಳಿಂದ ಖುಶಿ ಪಡೆದ ಜನ ತಮ್ಮ ಮನೆಗಳಿಗೆ ಹಿಂತಿರುಗುತ್ತಾರೆ.

**ಕೆರಲು ಕೊಡುವುದು :**

ದೀಪಾವಳಿ ಸಮಯದಲ್ಲಿ ಚಿಕ್ಕವರು ದೊಡ್ಡವರಿಗೆ, ನಾದಿನಿಯರು ಭಾವಂದಿರಿಗೆ, ಭಾವಂದಿರು ತಮ್ಮ ನೆಂಟಭಾವರಿಗೆ 'ಕೆರಕಲು ಕೊಡುವುದು' ಮಲೆನಾಡಿಗರ ಒಂದು ಲಘುಹಾಸ್ಯದ ವಿಶಿಷ್ಟ ಪದ್ಧತಿ. ಭಾವನೆಂಟ ಕರೆದಾಗ ಭಾವ 'ಓ'ಗೊಂಡರೆ, ನೆಂಟ ಅವನಿಗೆ ''ಕೆರಕೊಳ್ಳಿ'' ಎಂದು ಹೇಳಿ ಜೋರಾಗಿ ನಗುತ್ತಾನೆ! ಇದೇ ರೀತಿ ನಾದಿನಿ ಭಾವನನ್ನು ಕರೆದಾಗ ಅವನು 'ಓ'ಗೊಂಡರೆ ಅವಳು ''ಕೆರಕೊಳ್ಳಿ'' ಎಂದು ಹೇಳಿ ಕಿಲಕಿಲನೆ ನಗುತ್ತಾಳೆ. ಚಿಕ್ಕವರು ದೊಡ್ಡವರನ್ನು ಕರೆದಾಗ ಅವರು 'ಓ'ಗೊಂಡರೆ ಅವರಿಗೆ 'ಕೆರಕೊಳ್ಳಿ' ಎಂದು ಹೇಳಿ ಖುಷಿ ಪಡುತ್ತಾರೆ!

## ಮಲೆನಾಡಿಗರ ಹವ್ಯಾಸ ಮತ್ತು ಮನರಂಜನೆಗಳು

### ಬೇಟೆ ಮತ್ತು ಬೇಟೆಯ ವಿಧಾನಗಳು

ಬೇಟೆ ಮಲೆನಾಡಿಗರ ಬಾಳಿನಲ್ಲಿ ಹಾಸುಹೊಕ್ಕಾಗಿ ಬಂದಿರುವ ಒಂದು ಹವ್ಯಾಸವಾಗಿದೆ. ನಾನಾ ತರದ ಬೇಟೆಗಳ ವರ್ಣನೆ ಈ ಕಾದಂಬರಿಗೆ ಕಳೆ ಕಟ್ಟಿದಂತಿವೆ. ಮಲೆನಾಡಿನಲ್ಲಿ ಮನೋರಂಜನೆಗಾಗಿ ಪ್ರತ್ಯೇಕ ಸಂಘ/ಸಂಸ್ಥೆಗಳಿರಲಿಲ್ಲ. ಬೇಟೆ ಮಲೆನಾಡಿಗರಿಗೆ ಮನೋರಂಜನೆ ಒದಗಿಸುವುದಲ್ಲದೆ ಅವರ ಆಹಾರವನ್ನು ಪುಷ್ಟಿಗೊಳಿಸುತ್ತದೆ. ಬೇಟೆಗಾರರು ಬಳಸುವ ಹತಾರುಗಳಲ್ಲಿ ಮುಖ್ಯವಾದವು ಕೇಪಿನ ಕೋವಿ ಮತ್ತು ತೋಟಾಕೋವಿ. ಈ ಹತಾರುಗಳಿಲ್ಲದವರು ಪ್ರಾಚೀನ ವಿಧಾನಗಳಿಂದ - ಬಲೆ ಹಾಕುವುದು, ಉಳ್ಳ ಒಡ್ಡುವುದು, ಮುಂತಾದವುಗಳಿಂದ ಸಣ್ಣ ಪುಟ್ಟ ಪ್ರಾಣಿಗಳನ್ನು ಬೇಟೆಯಾಡುತ್ತಿದ್ದರು. ಬಿಲ್ಲುಬಾಣಗಳಿಂದ ಏಡಿ ಶಿಕಾರಿ ಮಾಡುತ್ತಿದ್ದರು. ಹೊಂಡ ತೋಣಕುವುದು, ಕೂಣಿಹಾಕುವುದು ಇತ್ಯಾದಿ ವಿಧಾನಗಳಿಂದ ಮೀನುಹಿಡಿಯುವುದು ಮಲೆನಾಡಿಗರ ಆಪ್ಯಾಯಮಾನ ಕ್ರೀಡೆ ಮತ್ತು ಹವ್ಯಾಸ.

ಈ ಕಾದಂಬರಿಯ ಐದು ಅಧ್ಯಾಯಗಳಲ್ಲಿ ಮಲೆನಾಡಿಗರ ಬೇಟೆ ಪದ್ಧತಿಗಳನ್ನು ಕುವೆಂಪು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾರೆ. 'ಸೇರೇಗಾರರ ಕೇಪಿನ ಕೋವಿ'ಯಲ್ಲಿ ಸೇರೆಗಾರರು ಕಾಡುಕೋಳಿ ಶಿಕಾರಿ ಮಾಡಿ ಅಚಾತುರ್ಯದಿಂದ ಕೋಳಿಯನ್ನು ಕಳೆದುಕೊಂಡ ವಿವರಣೆ ಇದೆ. ಈಡು ಹೊಡೆದನಂತರ ಪುನಃ ಈಡು ಹಾಕುವುದರಲ್ಲಿದ್ದಾಗ ಮೂರ್ಛೆಹೋಗಿದ್ದ ಕೋಳಿ ಎಚ್ಚೆತ್ತು ಓಡತೊಡಗಿದಾಗ, ಅದನ್ನು ಹಿಡಿಯುವ ಅವಸರದಲ್ಲಿ ಕೋವಿಯ ನಳಿಗೆಗೆ ಗುಂಡು ಹಾಕಿ ಕತ್ತ ಅಡಕುವುದನ್ನು ಮರೆತು, ಮುಂದೆ ಮಟ್ಟಿನಲ್ಲಿ ಅಡಗಿ ಕುಳಿತಿದ್ದ ಬೈರನನ್ನು ಕಾಡುಪ್ರಾಣಿಯೆಂದು ಭಾವಿಸಿ ಈಡು ಹಾರಿಸಿದಾಗ, ಅವನಿಗೆ ಪುಣ್ಯವಶಾತ್ ಗುಂಡು ತಗಲದೆ ಹೋದ ಸಂದರ್ಭದ ವಿವರಣೆ ಹಾಸ್ಯಭರಿತವಾಗಿದ್ದರೂ, ಬೇಟೆಯಲ್ಲಿ ನಡೆಯಬಹುದಾದ ಆಕಸ್ಮಿಕಗಳ ಮೇಲೆ ಗಮನ ಹರಿಸುತ್ತದೆ.

'ಕತ್ತಲಗಿರಿಯ ಸರುವಿನಲ್ಲಿ ಕಾಡುಹಂದಿಯ ಬೇಟೆ'ಯಲ್ಲಿ ಕಾಡಿನ ವರ್ಣನೆ ಎಷ್ಟು ಸಹಜವಾಗಿ ಬಂದಿದೆ ಎಂದರೆ, ನಾವೇ ಕಾಡನ್ನು ಹೊಕ್ಕ ಅನುಭವವಾಗುತ್ತದೆ. ಅಲ್ಲಿನ ಥಂಡಿಗೆ ಮೈ ನಡುಗುತ್ತದೆ; ಈಡಿನ ಸದ್ದು ಗೊಂದಲ ಉಂಟುಮಾಡಿ ಹಾಸ್ಯ ಪ್ರಸಂಗಗಳಿಗೆ ಕಾರಣವಾಗುತ್ತದೆ. ಹಂದಿಯ ಕಳೇಬರ ಕಾಯುತ್ತಿದ್ದ ಕಿಲಿಸ್ತರ ಜಾಕಿಯಿಂದ, ಟೈಗರ್ ನಾಯಿಯ ಕೊಲೆಯಾಗುವ ಹೃದಯವಿದ್ರಾವಕ ವಿವರಣೆ ಈ ಅಧ್ಯಾಯದ ಮುಖ್ಯ ಹಾಗೂ ಗಂಭೀರ ಘಟನೆ. ಹಂದಿಯನ್ನು ಹಸಿಗೆ ಮಾಡಿ ಮಲೆನಾಡಿನ ಪದ್ಧತಿಯಂತೆ ಮಾಂಸವನ್ನು ಪಾಲುಮಾಡಿ ಹಂಚಿಕೊಳ್ಳುವುದು ಹಿಂದಿನಿಂದ ಬಂದ ಪದ್ಧತಿ. ಬೇಟೆಯಲ್ಲಿ ಭಾಗವಹಿಸಿದ ನಾಯಿಗೂ ಒಂದು ಪಾಲು ಕೊಡುವುದು ಮಲೆನಾಡಿಗರ ಶುನಕಪ್ರಿಯತೆಗೆ ಸಾಕ್ಷಿಯಾಗಿದೆ.

‘ಆ ಹುಲಿ!’ ಅಧ್ಯಾಯದಲ್ಲಿ ಗಾಯಗೊಂಡ ಹುಲಿಯನ್ನು ಹುಡುಕಿಕೊಂಡು ಹೋಗುವುದರಲ್ಲಿ ಇರುವ ಅಪಾಯವನ್ನು ಪರಿಣಾಮಕಾರಿಯಾಗಿ ವಿವರಿಸಲಾಗಿದೆ. ಇದಕ್ಕೆ ಮೊದಲು ಕೋವಿ ಕಟ್ಟಿ ಹುಲಿಯನ್ನು ಗಾಯಗೊಳಿಸಿರುತ್ತಾರೆ. ಕೋವಿಕಟ್ಟುವುದು ಬೇಟೆಗಾರನಿಲ್ಲದೆ ಪ್ರಾಣಿಯನ್ನು ಕೊಲ್ಲುವ ಒಂದು ವಿಧಾನ. ಹುಲಿ ತಾನು ತಿಂದು ಬಿಟ್ಟ ‘ಬಡು’ವಿಗೆ ತಿರುಗಿ ಬರುವುದು ಖಾತ್ರಿಯಾದರೆ, ಹುಲಿಯ ಎತ್ತರದ ಅಂದಾಜಿಗೆ ಸಿಡಿಯಲು ಸಿದ್ಧಪಡಿಸಿದ ಕೋವಿಗಳನ್ನು ನೆಟ್ಟ ಮರದ ತುಂಡುಗಳಿಗೆ ಬಿಗಿದು ಕಟ್ಟಿ, ಹೆದೆ ಏರಿಸಿ, ಕೋವಿಯ ಚಾಪಿಗೆ ಸೂತ್ರ ಬಿಗಿದು, ಅದನ್ನು ಹುಲಿ ಬರುವ ದಾರಿಗೆ ಅಡ್ಡಲಾಗಿ ತಂದು ಇಟ್ಟಿರುತ್ತಾರೆ. ಹುಲಿ ಬಂದು ಸೂತ್ರವನ್ನು ಮುಟ್ಟಿದರೆ ಚಾಪು ಎಳೆದು ಕೋವಿ ಈಡು ಹಾರಿ ಗುಂಡು ತಗಲಿದ ಹುಲಿ ಸಾಯಬಹುದು, ಅಥವಾ ಗಾಯಗೊಳ್ಳಬಹುದು.

‘ಕಣೆ ಹಂದಿಯ ಬೇಟೆ’ ಯಲ್ಲಿ ನಾಯಿಗಳು ‘ಗುದ್ದು’ ನುಗ್ಗಿಸಿದ (ಗುದ್ದುಗಳಲ್ಲಿ ಅನೇಕ ವಿಧಗಳಿರುತ್ತವೆ. ಗುದ್ದು ಎಂದರೆ ಚಿಪ್ಪಿನ ಹಂದಿ ಕೊರೆದು ಮಾಡಿದ ಸುರಂಗ. ಈ ಗುದ್ದುಗಳಲ್ಲಿ ಕೆಲವು ಬಹಳ ಉದ್ದವಾಗಿರುತ್ತವೆ. ಇಂಥ ಗುದ್ದಿಗೆ ‘ಸರಗುದ್ದು’ ಎಂದು ಹೆಸರು. ಸರಗುದ್ದಿಗೆ ಹೊಕ್ಕ ಹಂದಿಯನ್ನು ಯಾರೂ ಏನೂ ಮಾಡಲು ಸಾಧ್ಯವಿಲ್ಲ. ಎರಡೂ ಕಡೆ ಬಾಯಿ ತೆರೆದ ಗುದ್ದುಗಳಿಗೆ ಆಡುಗುದ್ದುಗಳೆಂದು ಹೆಸರು. ಹಂದಿ ಒಂದು ಕಡೆಯಿಂದ ಒಳಹೊಕ್ಕು ಇನ್ನೊಂದು ಕಡೆಯಿಂದ ಹೊರಬಂದು ತಪ್ಪಿಸಿಕೊಳ್ಳಬಹುದು. ಹತ್ತಾರು ಮಾರು ಉದ್ದವಿರುವ ಗುದ್ದಿಗೆ ಹಂದಿ ಹೊಕ್ಕರೆ ಅದನ್ನು ಕಷ್ಟಪಟ್ಟು ಅಗೆದು ತೆಗೆಯಬಹುದು ಅಥವಾ ಹೊಗೆ ಹಾಕಿ ಹೊರಗೆ ಬರುವಂತೆ ಮಾಡಬಹುದು). ಕಣೆ ಹಂದಿಯನ್ನು ಗುದ್ದಿನ ಬಾಯಿಗೆ ಬೆಂಕಿ ಹಾಕಿ ಹೊಗೆ ಎಬ್ಬಿಸಿ, ಹಂದಿ ಗುದ್ದಿನ ಹೊರಗೆ ತಲೆ ಹಾಕಿದಾಗ ಬೇಟೆಗಾರ ಅದರ ತಲೆಯನ್ನು ಒತ್ತಿ ಹಿಡಿದು, ಬಾಕುವಿಂದ ತಲೆಯನ್ನು ಕೊಚ್ಚಿ ಅದು ಸತ್ತನಂತರ ಗುದ್ದಿನಿಂದ ಹೊರಗೆ ಎಳೆದು ಹಾಕುವುದು ನೋಡುವವರಿಗೆ ಮುಜಗರ ಹುಟ್ಟಿಸುವ ಶಿಕಾರಿ.

ಈ ಎಲ್ಲ ಬೇಟೆಗಳಿಗೆ ಮುಕುಟ ಪ್ರಾಯವಾದ ಬೇಟೆ ‘ದೊಡ್ಡ ಬೇಟೆ.’ ಈ ಬೇಟೆಯಲ್ಲಿ ನಾಲ್ಕಾರು ಹಳ್ಳಿಗಳ ಜನ ಒಟ್ಟಾಗಿ ಸೇರುತ್ತಾರೆ. ಹೀಗೆ ಒಟ್ಟಾದವರಲ್ಲಿ ಕೋವಿ ಹೊಂದಿರುವ ಈಡುಗಾರರನ್ನು ಆಯಕಟ್ಟಿನ ಸ್ಥಳಗಳಲ್ಲಿ ‘ಬಿಲ್ಲಿಗೆ’ ಕೂರಿಸುತ್ತಾರೆ. ಮಿಕ್ಕವರು ಹಳು ಸೋವುದರಲ್ಲಿ ಭಾಗವಹಿಸುತ್ತಾರೆ. ಹಳು ಸೋವೆಂದರೆ ಹಳುವಿನಲ್ಲಿ ಹುದುಗಿಕೊಂಡ ಪ್ರಾಣಿಗಳನ್ನುಗಲಾಟೆ ಮಾಡಿ ಎಬ್ಬಿಸಿ ಬಿಲ್ಲಿಗೆ ಕುಳಿತವರ ಕಡೆಗೆ ಹೋಗುವಂತೆ ಮಾಡುವುದು. ತಮ್ಮ ಬಿಲ್ಲಿಗೆ ಬಂದ ಪ್ರಾಣಿಗಳನ್ನು ಬಿಲ್ಲಿಗೆ ಕುಳಿತ ಬೇಟೆಗಾರ ಗುಂಡಿಟ್ಟು ಕೊಲ್ಲುತ್ತಾನೆ. ಕೊಂದ ಪ್ರಾಣಿಗಳನ್ನು ಒಟ್ಟುಗೂಡಿಸಿ ಹಸಿಗೆ ಮಾಡಿ ಮಲೆನಾಡ ಸಂಪ್ರದಾಯದಂತೆ ಮಾಂಸ ಹಂಚಿಕೊಳ್ಳುವುದು ಹಿಂದಿನಿಂದ ಬಂದ ಪದ್ಧತಿಯಾಗಿದೆ.

### ಕೋಳಿ ಅಂಕ

'ಕೋಳಿಯಂಕದ ಪಟ್ಟೆಯಲ್ಲಿ' ಮಲೆನಾಡಿಗರ ಮತ್ತೊಂದು ದುರ್ವ್ಯಸನದ ವರ್ಣನೆ ಬರುತ್ತದೆ. ಕೋಳಿಯಂಕಕ್ಕೆ ಕೋಳಿಗಳನ್ನು ತರಬೇತು ಮಾಡುವುದೇ ಕೆಲವರ ವೃತ್ತಿ. ಕೋಳಿಯಂಕದ 'ಗಿರ' ಹಿಡಿದವರು ಅಂಕದಿಂದ ಅಂಕಕ್ಕೆ ಹೋಗಿ 'ಮೇಲ್ಜೂಜು' ಕಟ್ಟಿ ಸಮಯ ಮತ್ತು ಹಣ ಎರಡನ್ನೂ ಹಾಳುಮಾಡಿಕೊಳ್ಳುತ್ತಾರೆ. ಇಂತವರಿಗೆ ಸದಾ ಬಡತನ ತಪ್ಪಿದ್ದಲ್ಲ. ಅಂಕದ ಕೋಳಿಗಳಿಗೆ 'ಕರ್ಣ' 'ಅರ್ಜುನ' ಮುಂತಾದ ಹೆಸರಿಟ್ಟು ಅವುಗಳ ಮೇಲೆ 'ಮೇಲು ಜೂಜು' ಕಟ್ಟುತ್ತಾರೆ. ಗೆದ್ದ ಕೋಳಿಯ ಯಜಮಾನನಿಗೆ ಸತ್ತ ಕೋಳಿಗಳು ಸೇರುತ್ತವೆ; ಮೆಲು ಜೂಜಿನ ಹಣವೂ ಸಿಗುತ್ತದೆ. ಸೋತವನು ಎಲ್ಲವನ್ನೂ ಕಳೆದುಕೊಳ್ಳುತ್ತಾನೆ.

### ಕುಡಿತ ಮತ್ತು ಕಳ್ಳಂಗಡಿಗಳು

ಮಳೆಗಾಲದಲ್ಲಿ ಮಲೆನಾಡಿನಲ್ಲಿ ಹೆಚ್ಚುಕಡಿಮೆ ಎಲ್ಲ ಮನೆಗಳಲ್ಲೂ ಅಕ್ಕಿ ಹುಳಿಸಿ ಹೆಂಡ ತಯಾರಿಸುತ್ತಿದ್ದರು. ಕಾಡಿನಲ್ಲಿ ಬಗಿನೆ ಮರಗಳು ಯಥೇಚ್ಛವಾಗಿದ್ದು ಬಗಿನೆ ಕಳ್ಳು ಮಡಿಕೆಗಳಲ್ಲಿ ಶೇಖರಿಸಿ ಸಾಯಂಕಾಲ ಕಳ್ಳುಗೊತ್ತುಗಳಲ್ಲಿ ಸೇರಿ ಜನ ಗಮ್ಮತ್ತು ಮಾಡುತ್ತಿದ್ದರು. ಪೇಟೆ ಪಟ್ಟಣಗಳಲ್ಲಿ ಜನ, ಬಾರ್‌ಗಳಿಗೆ ಕ್ಲಬ್‌ಗಳಿಗೆ ಹೋಗುವಂತೆ ಮಲೆನಾಡಿಗರು ಕಳ್ಳುಗೊತ್ತುಗಳಿಗೆ, ಕಳ್ಳಂಗಡಿಗೆ ಹೋಗುತ್ತಿದ್ದರು. ಅಲ್ಲಿ ಅವರು ಸೇರಿ ಸೇವಿಸುತ್ತಿದ್ದ ಕಳ್ಳು, ಹೆಂಡ, ಮತ್ತು ಮಾಂಸದ ಹುರಿತುಂಡಿನ ವಾಸನೆ ಓದುಗರ ಮೂಗು ಆಘ್ರಾಣಿಸುವಷ್ಟು ಸ್ಪಷ್ಟವಾಗಿ ಕುವೆಂಪು ವರ್ಣಿಸಿದ್ದಾರೆ.

ಕುಡಿತ ಮಲೆನಾಡಿನವರಿಗೆ ಪರಂಪರಾನುಗತವಾಗಿ ಬಂದ ಅಭ್ಯಾಸ. ಈ ಅಭ್ಯಾಸ ಅತಿರೇಕಕ್ಕೆ ಹೋದಾಗ ಅದೊಂದು ಸಮಸ್ಯೆಯಾಗುತ್ತದೆ. ಕುಡಿತದಿಂದ ಆಗುವ ಅನಾಹುತಗಳು ಅನೇಕ. ಕುಡಿತ ಮತ್ತು ಹೊಡೆತ ಮಲೆನಾಡಿನ ಮನೆಗಳಲ್ಲಿ ಕಂಡುಬರುವ ದೊಡ್ಡ ಸಮಸ್ಯೆ. ಕುಡಿದು ಬಂದು, ಗಂಡ ಹೆಂಡತಿಗೆ ಹೊಡೆಯುವುದು ಸಾಮಾನ್ಯ ಸಂಗತಿ. ಇದು ಮುಖ್ಯವಾಗಿ ಗೃಹಶಾಂತಿಗೆ ಮಾರಕವಾಗುತ್ತದೆ.

## ಬದಲಾವಣೆಗಳ ಮುನ್ಸೂಚನೆ

### ಹೊಸ ತಲೆಮಾರಿನ ಪ್ರಭಾವ

ತಲೆಮಾರುಗಳ ಸಂಘರ್ಷಣೆ ಮತ್ತು ಅವುಗಳ ನಡುವಣ ಅಂತರದ ಪರಿಣಾಮಗಳನ್ನು 'ಹಳತು-ಹೊಸತು ಸೇರಿದರೆ' ಅಧ್ಯಾಯದಲ್ಲಿ ಕುವೆಂಪು ವಿವರಿಸಿದ್ದಾರೆ. ಮನೆಯ ಯಜಮಾನ ಮನೆಯವರೊಡನೆ ದರ್ಪದಿಂದ ನಡೆದುಕೊಳ್ಳುವುದು

ಮಲೆನಾಡಿನ ಹಳೆಯ ಸಂಪ್ರದಾಯ. ನೆಂಟರೊಡನೆ ಸಲಿಗೆಯಿಂದ ವರ್ತಿಸುವ ಯಜಮಾನ ಮನೆ ಮಕ್ಕಳಿಗೆ ಸಲಿಗೆ ಕೊಟ್ಟರೆ ಹಾಳಾಗುತ್ತಾರೆ ಎನ್ನುವ ನಂಬಿಕೆಯಿಂದ, ಬಿಗುವಾಗಿ ವರ್ತಿಸುತ್ತಾನೆ. ಹಳೆಯ ತಲೆಮಾರಿನವರಾದ ಕಾನೂರು ಚಂದ್ರಯ್ಯ ಗೌಡರು, ಮುತ್ತಳ್ಳಿ ಶ್ಯಾಮಯ್ಯ ಗೌಡರು, ಅಗ್ರಹಾರದ ವೆಂಕಪ್ಪಯ್ಯ ಜೋಯಿಸರು ಇವರೆಲ್ಲ ಕಡು ಸಂಪ್ರದಾಯಸ್ಥರಾಗಿದ್ದು, ಲಾಗಾಯ್ತಿನಿಂದ ಬಂದ ನಂಬಿಕೆ, ನಡವಳಿಕೆಗಳ, ಕಟ್ಟುಕಟ್ಟಳೆಗಳ ಪರವಾಗಿ ವಾದ ಮಾಡಿದರೆ, ಅವರಿಗೆ ವಿರುದ್ಧವಾಗಿ ಎರಡನೆಯ ತಲೆಮಾರಿನವರಾದ ಹೂವಯ್ಯ, ರಾಮಯ್ಯ, ಚಿನ್ನಯ್ಯ, ಮೊದಲಾದ ಯುವಕರು ತಮ್ಮ ವೇಷಭೂಷಣಗಳಲ್ಲಿ, ಮಾತಿನಲ್ಲಿ, ನಂಬಿಕೆಯಲ್ಲಿ, ನಡತೆಯಲ್ಲಿ, ಕ್ರಾಂತಿಕಾರಕವಾದ ಹೊಸ ಆಲೋಚನೆಗಳನ್ನು ಮೈಗೂಡಿಸಿಕೊಂಡು ಹಿರಿಯ ತಲೆಮಾರಿನವರಿಗೆ ಸವಾಲು ಹಾಕುವಂತೆ ಮಾತನಾಡುತ್ತಿದ್ದರು. ಹೊಸ ತಲೆಮಾರಿನ ಹುಡುಗರ ಕ್ರಾಪಿನ ತಲೆ, ನೆಲ ತಾಗುವಂತೆ ಉಟ್ಟ ಬಿಳಿಯ ಪಂಚೆ, ಮಾತಿನಲ್ಲಿ ಇಂಗ್ಲಿಷ್ ಬಳಕೆ, ಪೂಜೆ ಮುಂತಾದ ವಿಷಯಗಳಲ್ಲಿ ಆಸಕ್ತಿ ಇಲ್ಲದಿರುವುದು, ಈ ಲಕ್ಷಣಗಳು ಮುಂಬರುವ ಸಾಮಾಜಿಕ ಬದಲಾವಣೆಗೆ ಮುನ್ಸೂಚನೆಯಾಗಿದ್ದವು. ಇಂತಹ ಬದಲಾವಣೆಗಳ ಹರಿಕಾರನಾಗಿ ತೀರ್ಥಹಳ್ಳಿ-ಕೊಪ್ಪದ ಕೊರಕಲುಬಿದ್ದ ರಸ್ತೆಯಲ್ಲಿ ಶರವೇಗದಲ್ಲಿ ಸೈಕಲ್ಲನ್ನು ಓಡಿಸಿಕೊಂಡು ಬರುವ ಸವಾರ, ಮಲೆನಾಡು ಕ್ರಮೇಣ ಬದಲಾಗುತ್ತಿದೆ ಎನ್ನುವುದಕ್ಕೆ ಸಾಕ್ಷಿಯಾಗುತ್ತಾನೆ. ಹೂವಯ್ಯ ತನ್ನ ಧೀಮಂತ ವ್ಯಕ್ತಿತ್ವ ಸಹೃದಯತೆ ಮತ್ತು ಅನುಕಂಪದಿಂದ ಅವನ ಸಾನ್ನಿಧ್ಯಕ್ಕೆ ಬಂದವರಿಗೆ ಹೊಸ ಆಲೋಚನೆ, ತಿಳುವಳಿಕೆ ಮತ್ತು ಸತ್ಕಾರ್ಯಗಳಿಂದ ತಮ್ಮ ಬದುಕನ್ನು ಸಾರ್ಥಕಗೊಳಿಸಿಕೊಳ್ಳುವಂತೆ ಮಾರ್ಗದರ್ಶನ ಮಾಡುತ್ತಾನೆ. ಹೂವಯ್ಯ ಬುದ್ಧದೇವನ ಕೃಪಾಮಹಿಮೆಯಿಂದ ಮಲೆನಾಡಿನಲ್ಲಿ ಹೊಸ ಕ್ರಾಂತಿಯ ಹರಿಕಾರನಾಗುತ್ತಾನೆ.

'ಹತ್ತು ವರ್ಷಗಳ ಮೇಲೆ'

ಮಲೆನಾಡಿನಲ್ಲಿ ಯಾವ ರೀತಿಯ ಬದಲಾವಣೆಗಳಾಗುತ್ತಿವೆ ಎನ್ನುವುದರ ವಿವರಣೆ 'ಹತ್ತು ವರ್ಷಗಳಾದ ಮೇಲೆ' ಎಂಬ ಅಧ್ಯಾಯದಲ್ಲಿ ಕೊಡುತ್ತ ಕುವೆಂಪು ಹೀಗೆ ಹೇಳಿದ್ದಾರೆ:

'ಮಲೆನಾಡಿಗೆ ನವಜೀವನ ಕಾಲಿಟ್ಟಿತು. ಅದಕ್ಕೆ ಮುಖ್ಯ ಕಾರಣ ಕಾಲಮಹಿಮೆಯಾಗಿದ್ದರೂ ಕೂಡ ಕಾನೂರು, ಮುತ್ತಳ್ಳಿ, ಸೀತೆಮನೆ ಮತ್ತು ಸುತ್ತಣ ಹಳ್ಳಿಗಳಲ್ಲಿ ಹೂವಯ್ಯನ ಪ್ರಭಾವವೂ ಗಣ್ಯವಾಗಿತ್ತು.... ಸೀತೆಯ ಪ್ರಭಾವವೂ ಸದ್ದುಗದ್ದಲವಿಲ್ಲದೆ ಕೆಲಸ ಮಾಡಿತ್ತು!

'ಕಾನೂರು ಮುತ್ತಳ್ಳಿಗಳಿಗೆ ಮಧ್ಯೆ, ರಸ್ತೆಗೆ ಸಮೀಪವಾಗಿ, ಕಾಡಿನ ನಡುವೆ ಇದ್ದ ಕಳ್ಳಂಗಡಿ ಕುಸಿದುಬಿದ್ದು, ಒರಲೆ ಹಿಡಿದು, ಪಾಳಾಗಿತ್ತು. ನಾಲ್ಕಾರು ಗ್ರಾಮಗಳಿಗೆ

ಅನುಕೂಲವಾಗುವಂತೆ ಒಂದು ಆಸ್ಪತ್ರೆ, ಸ್ಕೂಲು, ಪೋಸ್ಟಾಫೀಸು, ಅಂಗಡಿಗಳು ಮೂಡಿ ವರ್ಧಿಸುತ್ತಿದ್ದವು. ಹಿಂದೆ ಬೈಸಿಕಲ್ಲಿನ ಪರಿಚಯಕ್ಕೂ ಪರದೇಶಿಯಾಗಿದ್ದ ಆ ರಸ್ತೆ ಮೋಟಾರುಕಾರು, ಬಸ್ಸುಗಳ ಕೋಟಲೆಯಿಂದ ಬೇಸರಗೊಂಡಿತ್ತು. ಸ್ವದೇಶಿ ಖಾದಿಗಳ ಪ್ರಚಾರವೂ ತಕ್ಕಮಟ್ಟಿಗೆ ನಡೆದಿತ್ತು. ಗಾಂಧಿ ಟೋಪಿಗಳೂ ಆಗಾಗ ಬಂದು ಉಪನ್ಯಾಸ ಕೊಡುತ್ತಿದ್ದವು. ಅಕ್ಷರ ಬಲ್ಲವರು ಪತ್ರಿಕೆಗಳನ್ನು ಓದುವ ಅಭ್ಯಾಸಮಾಡಿ, ವಿಶಾಲ ಪ್ರಪಂಚದ ವಿಚಾರಗಳನ್ನು ಕುರಿತು ಮಾತಾಡುತ್ತಿದ್ದರು. ಮಾರಿಯ ಹರಕೆ, ದೆವ್ವದ ಪೂಜೆ ಮೊದಲಾದ ಮೂಢಾಚಾರಗಳಿಗೆ ಬದಲಾಗಿ ಉತ್ಕೃಷ್ಟ ಮತವಿಧಾನಗಳು ಆಚರಣೆಗೆ ಬರುತ್ತಿದ್ದವು. ಕಾಡಿಗೆ ನಾಗರಿಕತೆ ಕಾಲಿಟ್ಟಿತ್ತು.'

ಈ ಎಲ್ಲ ಅಭಿವೃದ್ಧಿಗಳೊಂದಿಗೆ ಈಗಿನ ಮಲೆನಾಡಿನಲ್ಲಿ ಅಭಾವಗಳು ಮತ್ತು ಕುಂದುಕೊರತೆಗಳು ಸೇರಿ ಸಂಕೀರ್ಣ ಸಮಸ್ಯೆಗಳಾಗಿ ಪರಿಣಮಿಸಿವೆ. ಮಲೆನಾಡಿನಲ್ಲಿ ಜನ ಸಾಂದ್ರತೆ ಹೆಚ್ಚುತ್ತಿದ್ದರೂ ಅಡಿಕೆ ಕೊಯ್ಲು, ಅಡಿಕೆ ಸುಲಿಯುವುದು ಮುಂತಾದ ವಿಶಿಷ್ಟ ಕಾರ್ಯಗಳಿಗೆ ಜನ ಸಿಗುವುದು ಕಷ್ಟವಾಗುತ್ತಿದೆ. ಕೆಲಸಗಾರರ ಅಭಾವ ಮಲೆನಾಡಿಗರಿಗೆ ದೊಡ್ಡ ಸಮಸ್ಯೆಯಾಗಿದೆ. ಸುಸಜ್ಜಿತ ಆಸ್ಪತ್ರೆಗಳಿಲ್ಲದಿರುವುದು ಒಂದು ದೊಡ್ಡ ಕೊರತೆ. ಸಾಗುವಳಿಗೆ ಯೋಗ್ಯವಾದ ಭೂಮಿ ಸಿಗದಿರುವುದು ಇನ್ನೊಂದು ಕೊರತೆ. ಪೇಟೆ-ಪಟ್ಟಣಗಳ ಪ್ರಭಾವದಿಂದ ಜನರಲ್ಲಿ ದುರ್ವ್ಯಸನಗಳು ಹೆಚ್ಚುತ್ತಿವೆ. ಒಟ್ಟಿನಲ್ಲಿ ಮಲೆನಾಡಿನ ಭವಿಷ್ಯ ಡೋಲಾಯಮಾನವಾಗಿದೆ.

ಕನ್ನಡ ಕಾದಂಬರಿ ನಡೆದು ಬಂದ ದಾರಿಯಲ್ಲಿ 'ಕಾನೂರು ಹೆಗ್ಗಡಿತಿ' ಒಂದು ಮೈಲಿ ಕಲ್ಲು. ಮಲೆನಾಡಿನ ಮಹಾಭಾರತ ಎನ್ನಬಹುದಾದ ಈ ಕೃತಿಯನ್ನು ಎಷ್ಟು ಸಲ ಓದಿದರೂ ಮತ್ತೆ ಮತ್ತೆ ಓದಬೇಕೆನ್ನಿಸುತ್ತದೆ. ಈ ಕೃತಿ ಸಮಾಜ ಶಾಸ್ತ್ರದ ವಿದ್ಯಾರ್ಥಿಗಳಿಗೆ ಮಲೆನಾಡಿನ ಜನಜೀವನದ ಆಳವಾದ ಅಭ್ಯಾಸ ಮಾಡಲು ದೊರಕಿದ ವಿಷಯಸಂಗ್ರಹಣೆಯ ಅಕ್ಷಯಪಾತ್ರೆ ಎಂದರೆ ಉತ್ಪ್ರೇಕ್ಷೆಯಾಗಲಾರದು.

●

# 'ಮಲೆಗಳಲ್ಲಿ ಮದುಮಗಳು'
# ಮದುಮಗಳ ಮಲೆಗಳಲ್ಲಿ ನಾ ಕಂಡ ಮಲೆನಾಡು

ರಮೇಶ್ ಎ.ಎಮ್. ಗೌಡ, ಕ್ಯಾಲಿಫೋರ್ನಿಯ

ಯಾವುದೇ ಕ್ರೀಡೆಯನ್ನು ನೋಡಿದಾಗ ನಾವು ಮನರಂಜನೆ ಪಡೆಯುತ್ತೇವೆ. ಆದರೆ, ಅದರಲ್ಲಿ ನಾವು ಪಾಲ್ಗೊಂಡು ಆಡಿದಾಗಲೇ ಕ್ರೀಡೆಯ ಕಷ್ಟ ಅರ್ಥವಾಗಿ, ಕ್ರೀಡೆಯ ಬಗ್ಗೆಯೂ, ಅದರಲ್ಲಿ ಭಾಗವಹಿಸಿ ಆಡುವವರ ಬಗ್ಗೆಯೂ ಅಭಿಮಾನ ನಮ್ಮಲ್ಲಿ ಮೂಡುತ್ತದೆ. ನಾನು ಒಬ್ಬ ಸಾಮಾನ್ಯ ಸಾಹಿತ್ಯಾಸಕ್ತ; ಸಾಹಿತ್ಯ ಓದಿ ಸಂತೋಷಪಡುತ್ತಿದ್ದೆ. ಆದರೆ, ಈಗ ಬರೆಯಲು ಕುಳಿತಾಗ ಕಷ್ಟ ಅನುಭವವಾಗುತ್ತದೆ. ಆ ಅನುಭವ ನನ್ನಲ್ಲಿ ಸಾಹಿತಿಗಳ ಮೇಲಿನ ಅಭಿಮಾನ ಹೆಚ್ಚಿಸುತ್ತಿದೆ. ಸಾಹಿತ್ಯ ಕ್ಷೇತ್ರದಲ್ಲೆ ಹೆಸರುಗಳಿಸಿದ 'ಯುಗದ ಕವಿ, ಜಗದ ಕವಿ' ಎಂದು ಕರೆಯಲ್ಪಟ್ಟ ಮಹಾ ಸಾಹಿತಿ ಕುವೆಂಪುರವರ ಕೃತಿ, 'ಮಲೆಗಳಲ್ಲಿ ಮದುಮಗಳು' (೧೯೬೭) ಕುರಿತು ನನ್ನ ಅನಿಸಿಕೆಗಳನ್ನು ಓದುಗರಲ್ಲಿ ಹಂಚಿಕೊಳ್ಳುವ ನನ್ನೀ ಪ್ರಯತ್ನ ಅನುಭವವನ್ನು ಎಚ್ಚರಗೊಳಿಸಿದೆ. ಆದರೂ, ಮಲೆನಾಡಿನವನಾದ ನನ್ನನ್ನು ಈ ಗ್ರಂಥದ ಸಂಪಾದಕರು ನನ್ನ ಅನುಭವಗಳ ಬಗ್ಗೆ ಬರೆಯಲು ಉತ್ತೇಜನ ಕೊಟ್ಟುದರಿಂದ ಆ ಅನುಭವಗಳನ್ನು ನಿಮ್ಮಲ್ಲಿ ಹಂಚಿಕೊಳ್ಳುತ್ತಿದ್ದೇನೆ.

ಮಲೆನಾಡಿನ ಕಾಡಿನ ವೈಭವದ ಮಧ್ಯೆಯ ಒಂದು ಪುಟ್ಟ ಹಳ್ಳಿಯಲ್ಲಿ ಹುಟ್ಟಿ ಬೆಳೆದವನೆಂಬ ಅಭಿಮಾನ ನನ್ನಲ್ಲಿ ಹುಟ್ಟಿ ಬೆಳೆದು ಬಂದಿದೆ. ಕುವೆಂಪುರವರು ಹೇಳಿದಂತೆ ಮಾನವರೆಲ್ಲರೂ 'ವಿಶ್ವಮಾನವರು' ಎಂದೆನಿಸಿಕೊಂಡರೂ, ಈ ಜಗತ್ತೇ ನನ್ನದೆಂದು ಹೇಳಿಕೊಳ್ಳುವ ಹೆಗ್ಗಳಿಕೆ ನನ್ನಲ್ಲಿದ್ದರೂ, ನನ್ನ ಹೆಮ್ಮೆ ಕೇಂದ್ರೀಕರಿಸುವುದು ನನ್ನ ಬಾಲ್ಯದ ಚಿರ-ಪರಿಚಿತ ವಾತಾವರಣ, ನನ್ನೂರಿನ ಸುತ್ತು-ಮುತ್ತಲಿನ ನಿಸರ್ಗದ ಚೆಲುವು, ನನ್ನ ಬಂಧುಗಳು, ಸ್ನೇಹಿತರು, ನಾನು ಬೆಳೆದು ಬಂದ ಮಲೆನಾಡ ಸಂಸ್ಕೃತಿ, ನಮ್ಮ ಹಬ್ಬಗಳು, ನಮ್ಮ ದೇವರು, ನಮ್ಮ ಭಾಷೆ, ನಾವು ಬಾಲ್ಯದಲ್ಲಿ ಆಡಿದ ಆಟಗಳು - ಇವುಗಳಲ್ಲಿ. ಅದು ನನ್ನ ಮನಸ್ಸಿಗೆ ಹಿತವಾದ ಅನುಭವ ಕೊಡುತ್ತಿದೆ. ಈಗ ಅವೆಲ್ಲರಿಂದ ದೂರದಲ್ಲಿ ಕುಳಿತು ಆ ಹಿತ ಅನುಭವಗಳನ್ನು ಮೆಲುಕು ಹಾಕುತ್ತಿರುವುದೊಂದೇ ನನ್ನ ಪಾಲಿಗುಳಿದ ಭಾಗ್ಯ! ಮೌಂಟ್ ಎವರೆಸ್ಟ್ ನೋಡದಿದ್ದರೂ, ತಾಜ್ ಮಹಲನ್ನು ಸಂದರ್ಶಿಸದಿದ್ದರೂ, ಅವು ನಮ್ಮ ದೇಶದ್ದು ಎಂಬ ಹೆಮ್ಮೆ ನನ್ನಲ್ಲಿ ಮೂಡುತ್ತದೆ. ಆದರೆ, ನನ್ನ ಪ್ರೀತಿಯ, ಹುಟ್ಟಿ ಬೆಳೆದ ಮಲೆನಾಡಿನಲ್ಲಿ ನನಗೆ ಅಂತಹ ಅಭಿಮಾನ ನೂರ್ಮಡಿಯಷ್ಟು! ಹಾಗೆಯೇ, ನಮ್ಮೂರು

ಸುತ್ತು-ಮುತ್ತಲಿನ ಜನಜೀವನದ ಮೇಲೆ ಹೆಣೆದಂತಹ 'ಕಾನೂರು ಹೆಗ್ಗಡತಿ', 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳನ್ನು ಓದುವಾಗಲಂತೂ ದೂರದಲ್ಲಿ ಕುಳಿತಿದ್ದರೂ ನನ್ನೂರೇ ನನ್ನ ಕಣ್ಣ ಮುಂದೆ ಕಟ್ಟಿದಂತಾಗುವುದು.

ಈ ಲೇಖನವನ್ನು ಬರೆಯಲು ಕುಳಿತಾಗ 'ಮಲೆಗಳಲ್ಲಿ ಮದುಮಗಳು'ದಲ್ಲಿ ಬರುವ ಕಥೆಯನ್ನು ನಿರೂಪಿಸುವ ಮನಸ್ಸಾಗಿತ್ತು. ಆದರೆ, ಕಥೆಯನ್ನು ನಿಜವಾಗಿಯೂ ಓದಿಯೇ ಅನುಭವಿಸಬೇಕು. ಕುವೆಂಪುರವರು ತಮ್ಮ 'ಕಾನೂರು ಹೆಗ್ಗಡತಿ' ಕಾದಂಬರಿಯಲ್ಲಿ 'ಅರಿಕೆ' ಮಾಡುತ್ತ - ಇದನ್ನು ಕಥೆಯ ಕುತೂಹಲಕ್ಕಾಗಿ ಓದಬೇಡಿ; ಸಾವಧಾನವಾಗಿ, ಸಚಿತ್ರವಾಗಿ ಸಜೀವವಾಗಿ ಓದಿ - ಎಂದು ಹೇಳಿದುದನ್ನು ನಾನಿಲ್ಲಿ ನೆನೆಸಿಕೊಳ್ಳುತ್ತಿದ್ದೇನೆ. ಅವರ ಮಾತಿನಂತೆ ನಾನಿಲ್ಲಿ ಕಥೆಯ ನಿರೂಪಣೆಗೆ ಹೊರಟಿಲ್ಲ. ಕಾದಂಬರಿ ನನ್ನಲ್ಲಿ ಮೂಡಿಸಿದ ಅಪೂರ್ವ ಅನುಭವಗಳನ್ನು ಇಲ್ಲಿ ನೆನೆಸಿಕೊಂಡು, ಅವನ್ನು ನಿಮ್ಮಲ್ಲಿ ಹಂಚಿಕೊಳ್ಳುವುದು ನನ್ನ ಮುಖ್ಯ ಉದ್ದೇಶ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಬರುವ ಸನ್ನಿವೇಶಗಳು ಮಲೆನಾಡಿನ ಜೀವನದ ಅನುಭವವಿಲ್ಲದವರಿಗೆ ಬರಿಯ ಊಹೆಯಂತೆ ಕಾಣಬಹುದು; ಕೆಲವೊಮ್ಮೆ ನಂಬಲಸಾಧ್ಯವಾಗಬಹುದು. ಆದರೆ, ಅಲ್ಲಿ ಬರುವ ಸನ್ನಿವೇಶಗಳೆಲ್ಲವೂ ನಾ ಕಂಡ ನಿತ್ಯದ ಮಲೆನಾಡ ನಿಜ ಜೀವನ. ಕೆಲವು ದಶಕಗಳ ನಂತರ ಮಾರ್ಪಾಟಾದ ಮಲೆನಾಡಿನಲ್ಲಿ ಇವು ಕೊಂಚ ಬದಲಾವಣೆ ಹೊಂದಿದ್ದರೂ, ಹತ್ತೊಂಬತ್ತನೆಯ ಮತ್ತು ಇಪ್ಪತ್ತನೆಯ ಶತಮಾನದ ಮಲೆನಾಡು ನಿಜಕ್ಕೂ ಹೇಗಿತ್ತೆಂದು ಕುವೆಂಪುರವರ ಲೇಖನಿಯ ಮೂಲಕ ಈ ಕಾದಂಬರಿಯಲ್ಲಿ ಸಹಜವಾಗಿ ರೂಪಗೊಂಡಿದೆ. ಆ ಕಾಲದ ದಿನ-ನಿತ್ಯದ ಜೀವನವನ್ನು ಚಿತ್ರಿಸುವುದರಲ್ಲಿ ಕುವೆಂಪುರವರು ಈ ಕಾದಂಬರಿಯಲ್ಲೂ, ಅವರ ಇನ್ನೊಂದು ಜನಪ್ರಿಯ ಕಾದಂಬರಿ, 'ಕಾನೂರು ಹೆಗ್ಗಡತಿ'ಯಲ್ಲೂ ಯಶಸ್ವಿ ಪಡೆದಿದ್ದಾರೆ.

ಈ ಕಾದಂಬರಿಯಲ್ಲಿ ಬರುವ ಗುತ್ತಿ ಒಬ್ಬ ಜೀತದಾಳು. ಅವನ ಪಾತ್ರ ಇಲ್ಲಿ ಮುಖ್ಯವಾಗಿ ಬೆಳೆದು ಬಂದಿದೆ. ಜೀತ ಮಾಡುವುದು (Bonded Labor) ನಾ ಕಂಡಂತೆ ಕಳೆದ ಶತಮಾನದ ಅರವತ್ತರ ದಶಕದಲ್ಲಿಯೂ ಇದ್ದಿತ್ತು. ಅವನ ಜೀವನ ವಿವರಣೆಯ ಮೂಲಕ ಕುವೆಂಪು ಜನಸಾಮಾನ್ಯರ ಬದುಕು ಆಗಿನ ಮಲೆನಾಡಿನಲ್ಲಿ ಹೇಗಿದ್ದಿತ್ತು ಎಂಬುದನ್ನು ಮನಮುಟ್ಟುವಂತೆ ನಿರೂಪಿಸಿದ್ದಾರೆ. ಇದನ್ನು ತಿಳಿದುಕೊಳ್ಳಬೇಕಾದರೆ ಕಾದಂಬರಿಯನ್ನು ಓದಿಯೇ ತೀರಬೇಕು. ಅದು ಎಂಥವನ ಹೃದಯವನ್ನೂ ಮುಟ್ಟುವಂಥದೆ! ೧೯೩೩ರಲ್ಲಿ ಪ್ರಕಟವಾದ ಶಿವರಾಮ ಕಾರಂತರ ಕಾದಂಬರಿ, 'ಚೋಮನ ದುಡಿ'ಯಲ್ಲೂ ಇಂತಹ ಜೀತದ ಬಾಳನ್ನು ಕಾಣಬಹುದು. ಕುವೆಂಪುರವರ 'ಕಾನೂರು ಹೆಗ್ಗಡತಿ' (೧೯೩೬) ಕಾದಂಬರಿಯಲ್ಲೂ ಇಂತಹರ ಬದುಕಿನ ವರ್ಣನೆ ಸಾಕಷ್ಟು ವಿವರವಾಗಿದೆ. 'ಜೀತ', ಮಲೆನಾಡೇ ಏಕೆ, ಭಾರತದ ಎಲ್ಲ ಕಡೆಯಲ್ಲೂ ವ್ಯಾಪಕವಾಗಿತ್ತು.

ಗುತ್ತಿ ಜಾತಿಯಲ್ಲಿ 'ಹೊಲೆಯ'; ಹೊಲೆಯನಾಗಿ ಹುಟ್ಟಿದ್ದು ಅವನ ತಪ್ಪೆ? ಎಲ್ಲರೂ ಹೊಲೆಯರನ್ನು ನಿಕೃಷ್ಟವಾಗಿ ನೋಡುತ್ತಿದ್ದರು. ಈ ಭಾವನೆ ಈಚೀಚಿನವರೆಗೂ ವಾಡಿಕೆಯಲ್ಲಿತ್ತು. ಆದರೆ, ಗಾಂಧೀಜಿಯವರು ಅವರನ್ನು 'ಹರಿಜನ'ರೆಂದು ಕರೆದು, ಸಮಾಜದಲ್ಲಿ ಅವರಿಗೊಂದು ವಿಶೇಷ ಸ್ಥಾನವನ್ನು ಕಲ್ಪಿಸಿದರು. ಈಗ ಅವರನ್ನು 'ಹಿಂದುಳಿದ ಜನಾಂಗ'ವೆಂದು ಪರಿಗಣಿಸಲಾಗಿದೆ. ಅಮೆರಿಕ ಕೂಡ ಅಂತಹ ಜಾತಿವರ್ಗಣೆಗೆ ಹೊರತಲ್ಲ! ಆಫ್ರಿಕದಿಂದ ಜೀತಾದಾಳಾಗಿ ಕರೆದು ತಂದು, ಅಂಥವರನ್ನು 'ನೀಗ್ರೊ' (ಅಥವಾ 'ನಿಗ್ಗರ್') ಎಂದು ಕರೆದರು; ಮುಂದೆ ಅವರು 'ಬ್ಲ್ಯಾಕ್ ಅಮೆರಿಕನ್'ರಾಗಿ, ಈಗ 'ಆಫ್ರಿಕನ್ ಅಮೆರಿಕನ್' ಆಗಿ ಮಾರ್ಪಟ್ಟಿರುತ್ತಾರೆ.

ಗುತ್ತಿಯ ನಿತ್ಯಜೀವವನ್ನು ವರ್ಣಿಸುವುದರಲ್ಲಿ ಅಂಥವರ ಮೇಲಿನ ಕುವೆಂಪುರವರ ಅನುಕಂಪೆಯನ್ನು ನಾವು ಕಾಣಬಹುದು. ನಾಡಿನ ಬೆನ್ನೆಲುಬುಗಳಂತಿದ್ದ ಅವರನ್ನು ಮುಂದೆ 'ಶ್ರೀ ಸಾಮಾನ್ಯ'ರೆಂದು ಕರೆದು, ಅಂಥವರ ಬದುಕಿನ ಕಷ್ಟ-ನಿಷ್ಠುರ, ಅವರು ಬಾಳಿನಲ್ಲಿ ಅನುಭವಿಸುವ ತೃಪ್ತಿ, ಅವರ ಆಚಾರ, ಸಂಪ್ರದಾಯ ಇವನ್ನೆಲ್ಲಾ ಮನಮುಟ್ಟುವಂತೆ ತಮ್ಮ ಕಾದಂಬರಿಗಳಲ್ಲಿ ನಿರೂಪಿಸಿದ್ದಾರೆ. ಇಲ್ಲಿ, ನಾನು ಮೊದಲೆ ತಿಳಿಸಿದಂತೆ ಆ ಎಲ್ಲ ವಿವರಗಳನ್ನು ಕೊಡುವುದು ನನ್ನ ಉದ್ದೇಶವಲ್ಲ. ಆದರೆ, ಕೆಲವೇ ಸನ್ನಿವೇಶಗಳನ್ನು ಮಾತ್ರ ಇಲ್ಲಿ ಹೇಳಲಿಚ್ಛಿಸುತ್ತೇನೆ.

ಕುವೆಂಪುರವರ ಕಾದಂಬರಿಗಳಲ್ಲಿ ಮನುಷ್ಯರು ಹೇಗೆ ಪಾತ್ರವಹಿಸುತ್ತಾರೋ, ಅದೇ ರೀತಿ, ಪ್ರಾಣಿಗಳೂ, ನಿಸರ್ಗವೂ ಬಹು ಮುಖ್ಯ ಪಾತ್ರ ವಹಿಸುವುದನ್ನು ನಾವು ಕಾಣಬಹುದು. ಅಲ್ಲಿನ ನಿಸರ್ಗ ಸೌಂದರ್ಯವನ್ನು ವಿವರಿಸುವಲ್ಲಿ ಕುವೆಂಪುರವರ ಕೈಚಳಕ ಎಷ್ಟೊಂದು ಚಮತ್ಕಾರವಾಗಿದೆ ಎಂದರೆ ಈ ಕಾದಂಬರಿಯನ್ನು ಓದುತ್ತಿದ್ದಂತೆ ಅದು ನನ್ನ ಕಣ್ಣಮುಂದೆ ಕಟ್ಟಿದಂತಾಗುತ್ತದೆ. ಮಲೆನಾಡಿನ ವಾತಾವರಣದಲ್ಲಿ ಬೆಳೆದ ನನಗೊಬ್ಬನಿಗೇ ಅಂತಹ ಅನುಭವವಾಗುವುದಲ್ಲದೆ ಎಲ್ಲ ಓದುಗರಿಗೂ ಆಗುವುದರಲ್ಲಿ ಆಶ್ಚರ್ಯವೇನಿಲ್ಲ. ಪರ್ವತಾರಣ್ಯದ ರುದ್ರಪ್ರಕೃತಿ, ಬೆಳಕಿಲ್ಲದ ಭೀಕರ ರಾತ್ರಿಗಳು, ಮಳೆಗಾಲದ ಪ್ರವಾಹಭರಿತ ತುಂಗಾನದಿಯ ಭೀಕರ ರೌದ್ರಾವತಾರ ಇವೆಲ್ಲವೂ ಕಾದಂಬರಿಯಲ್ಲಿ ಕಣ್ಮುಂದೆ ಕಟ್ಟುವಂತೆ ವರ್ಣಿತವಾಗಿದೆ. ಈ ಪ್ರಕೃತಿಯ ಮಧ್ಯೆ ಮಲೆನಾಡಿಗರು ತಮ್ಮ ಜೀವನ ನಡೆಸಿಕೊಂಡು ಹೋಗುತ್ತಿರುತ್ತಾರೆ. ಇಲ್ಲಿ ಕೆಲವೇ ಉದಾಹರಣೆಗಳನ್ನು ಕೊಡುತ್ತಿದ್ದೇನೆ. 'ಸಿಂಬಾವಿ ಮನೆಗೆ ಬೆಳಗಾಗುವುದು ತಡವಾಗಿ' – ಎಂದು ಒಂದುಕಡೆ ಉಲ್ಲೇಖವಾಗಿದೆ. ಅಂದರೆ, ಸೂರ್ಯನ ಬೆಳಕು ಆ ಮನೆಗೆ ಮುಟ್ಟುವುದು ಬಹಳ ತಡವಾಗಿ, ಏಕೆಂದರೆ ಆ ಮನೆಯ ಸುತ್ತು-ಮುತ್ತಲೂ ಅಷ್ಟೊಂದು ಎತ್ತರದ ಪರ್ವತ ಶ್ರೇಣಿಗಳು ಹರಡಿಕೊಂಡಿರಬೇಕು. ಅಲ್ಲಿಗೆ ಸಿಂಬಾವಿ ಮನೆಯಿರುವ ವಾತಾವರಣವು ಎಷ್ಟೊಂದು ಸುಂದರವಾಗಿರಬಹುದೆಂದು ಓದುಗರು ಊಹಿಸಬಹುದಲ್ಲವೆ ?

ಓದುಗರಲ್ಲಿ ಅರಿಕೆಮಾಡಿಕೊಳ್ಳುತ್ತ ಕುವೆಂಪು 'ಮಲೆಗಳಲ್ಲಿ ಮದುಮಗಳು' ನಲ್ಲಿ ಹೀಗೆ ಹೇಳುತ್ತಾರೆ : - 'ಇಲ್ಲಿ ಯಾರೂ ಮುಖ್ಯರಲ್ಲ; ಯಾರೂ ಅಮುಖ್ಯರಲ್ಲ; ಯಾವುದೂ ಯಃಕಶ್ಚಿತವಲ್ಲ! ಇಲ್ಲಿ ಯಾವುದಕ್ಕೂ ಮೊದಲಿಲ್ಲ; ಯಾವುದಕ್ಕೂ ತುದಿಯಿಲ್ಲ; ಯಾವುದೂ ಎಲ್ಲಿಯೂ ನಿಲ್ಲುವುದಿಲ್ಲ; ಕೊನೆಮುಟ್ಟುವುದೂ ಇಲ್ಲ!....' - ಎಂದು. (ಇಲ್ಲಿ ಈ ಮಾತುಗಳು ಅವರ 'ಅನಿಕೇತನ' ಕವನವನ್ನು ಜ್ಞಾಪಿಸುವುದಿಲ್ಲವೆ?) ಅಂದರೆ, ಈ ಕಾದಂಬರಿಯಲ್ಲಿ ಯಾರದೂ ಮುಖ್ಯ ಪಾತ್ರವಿಲ್ಲ; ಎಲ್ಲರೂ ಸಮರಾದ ಪಾತ್ರಧಾರಿಗಳು. ಕಥೆಯಲ್ಲಿ ಬರುವ ಮನುಷ್ಯಪಾತ್ರ ಎಷ್ಟು ಮುಖ್ಯವೋ, ಅಷ್ಟೇ ಮುಖ್ಯ ಪ್ರಾಣಿಗಳದ್ದೂ, ನಿಸರ್ಗದ್ದೂ ಅಹುದು! ಒಂದೆಡೆ ಹೀಗೆ ನಿರೂಪಿಸಿದ್ದಾರೆ ಕುವೆಂಪು:

'ಬೇರೆ ಇನ್ನಾವ ಸದ್ದೂ ಇರದೆ ನಿಶ್ಶಬ್ದವಾಗಿದ್ದ ಹಳೆಮನೆಯ ಆ ವಟಾರದಲ್ಲಿ ಸುಬ್ಬಣ್ಣ ಹೆಗ್ಗಡೆಯವರ ಕುಟ್ಟೊರಳಿನ ಸದ್ದೊಂದೇ ಸಾಮ್ರಾಟವಾಗಿತ್ತು.

'ತುಸು ಹೊತ್ತಿನಲ್ಲಿಯೆ ಜಗುಲಿಯ ಎದುರಾಗಿ ಅಂಗಳದಲ್ಲಿದ್ದ ಒಡ್ಡಿಗಳಲ್ಲಿಯೂ, ಒಡ್ಡಿಗಳ ಹಿಂದಿದ್ದ ಕೊಟ್ಟಿಗೆಯಲ್ಲಿಯೂ ಗೊರಸಿನ ಸದ್ದು ಕೊಂಬಿನ ಸದ್ದು ದೊಂಟೆಯ ಸದ್ದು ಹೋತ ಸೀನಿದ ಸದ್ದು ಸಲಗನ ಗುರುಗುರು ಸದ್ದು ಒಂದಾದಮೇಲೊಂದು ಕೇಳಿಸತೊಡಗಿತು. ಹಾಗೆಯೆ ತೋಟದ ಬೇಲಿಯಲ್ಲಿಯೊ, ಅಥವಾ ಅಮಟೆಯ ಮರದಲ್ಲಿಯೊ ಹಂಡಹಕ್ಕಿಗಳೆರಡು ಸಿಳ್ಳು ಪಡಿಸಿಳ್ಳುಗಳಿಂದ ಪ್ರಣಯ ಸಂಭಾಷಣೆಗೆ ಮೊದ್ಠಲು ಮಾಡಿದವು. ಅದಾದ ಸ್ವಲ್ಪ ಹೊತ್ತಿನಲ್ಲಿಯೆ, ಎಲೆಯುದುರಿ ಬರಲಾಗಿ ಕೆಂಪು ಹೂ ಮಾತ್ರ ತುಂಬಿಹೋಗಿದ್ದ ಹಾಲಿವಾಣದ ಮರದಲ್ಲಿ ಎಂದು ತೋರುತ್ತದೆ ಕಾಜಾಣವೊಂದು ಆಲಾಪನೆಗೆ ತೊಡಗಿತು'

'....ಒಡ್ಡಿಯೊಳಗೆ ಆಗುತ್ತಿದ್ದ ಸದ್ದುಗಳೆಂದರೆ ಹೆಗ್ಗಡೆಯವರಿಗೆ ಬಹುಕಾಲ ಸಾಧನದಿಂದ ಸಾಕ್ಷಾತ್ಕಾರವಾಗಿದ್ದು ಅವರಿಗೆ ಮಾತ್ರವೇ ಸಂವೇದ್ಯವಾಗುತ್ತಿದ್ದ ಯಾವುದೋ ಗುಪ್ತಲಿಪಿಯ ಸಂಕೇತ ಸ್ವರ ವಿಜ್ಞಾನವಾಗಿತ್ತು....'

ಮೇಲಿನ ನಿರೂಪಣೆಯಲ್ಲಿ ಮನುಷ್ಯ-ಪ್ರಾಣಿ-ನಿಸರ್ಗಗಳೊಳಗಿನ ನಿಕಟ ಸಂಬಂಧ ವ್ಯಕ್ತವಾಗುವುದಿಲ್ಲವೆ ?

ಅಂತೆಯೆ, 'ದನಗೋಳಾಗಿ' ಹೊಯ್ಯುವ ಮಳೆಯನ್ನೂ ಲೆಕ್ಕಿಸದೆ ಗುತ್ತಿ ತನ್ನ ಪ್ರೀತಿಯ ನಾಯಿಯ ಜೊತೆ ಧನಿಯ ಕೆಲಸಕ್ಕಾಗಿ ಹೊರಟಾಗ, ಹಳ್ಳ ತುಂಬಿ ಬಂದು, ಪ್ರಯಾಣ ಬಹಳ ಕಷ್ಟವಾದರೂ, ಅದನ್ನು ಲೆಕ್ಕಿಸದೆ ಸೊಂಟದ ಮೇಲಿಗೂ ನೀರು ತುಂಬಿದ್ದ ಹಳ್ಳವನ್ನು ದಾಟುವ ಸಾಹಸವನ್ನು ಎಣಿಸಿದಾಗ, ನಾಗರಿಕರಿಗೆ ಭೀಕರವಾಗಿ ಕಾಣುವ ವರ್ಷಕಾಲದ ಆ ಭಯಂಕರ ರುದ್ರಪ್ರಕೃತಿಯಲ್ಲಿ ಗುತ್ತಿ ಒಂದಂಶವಾಗಿದ್ದನು. ಗುತ್ತಿ; ಬೆಟ್ಟದಲ್ಲಿ ಬಂಡೆಯಂತೆ, ಕಾಡಿನಲ್ಲಿ ಮರದಂತೆ ಆ ಪ್ರಕೃತಿಯ ಒಂದಂಗವಾಗಿದ್ದನು, ಎಂದೆನಿಸುತ್ತದೆ.

ಮಲೆನಾಡಿನ ಅರಣ್ಯ ಸೌಂದರ್ಯ ಎಂಥವರ ಮನಸ್ಸನ್ನೂ ಸೂರೆಗೊಳ್ಳುವಂಥದು. ಇತ್ತೀಚೆಗೆ, ಕಾಡು ಕಡಿದು ಜನರು ತಮ್ಮ ಉಪಯೋಗಕ್ಕೆ ಉಪಯೋಗಿಸಿಕೊಳ್ಳುತ್ತಿದ್ದರೂ, ಅಲ್ಲಿ ಇಂದಿಗೂ ಮೀಸಲಾಗಿರುವ (Reserve Forest) ಗಳನ್ನು ಕಾಣಬಹುದು. ಆಗುಂಬೆಯಲ್ಲಿ ಈಗಲೂ ಅತಿ ಮಳೆಯಾಗಿ (ಸುಮಾರು ೪೦೦ ಇಂಚುಗಳಷ್ಟು), ಪ್ರಪಂಚದಲ್ಲೆ ಎರಡನೆಯ ಸ್ಥಾನ ಪಡೆದಿದ್ದು, ಕೆಲವು Rain Forestಗಳ ರಕ್ಷಣೆಗೂ ಸಹಾಯವಾಗಿದೆ. ಆಗುಂಬೆಗೂ, ಈ ಕಾದಂಬರಿಯಲ್ಲಿ ವರ್ಣಿತವಾಗಿರುವ ತೀರ್ಥಹಳ್ಳಿಯ ಸುತ್ತು-ಮುತ್ತಲಿನ ಹಳ್ಳಿಗಳಿಗೂ ಕೇವಲ ೨೫ ಮೈಲುಗಳಷ್ಟೆ! ಕುವೆಂಪುರವರು ತಮ್ಮ ಕಾದಂಬರಿಗೆ 'ಮಲೆಗಳಲ್ಲಿ ಮದುಮಗಳು' ಎಂದು ಹೆಸರಿಟ್ಟುದು ಅರ್ಥಪೂರ್ಣವಾಗಿದೆ. ಇಲ್ಲಿ 'ಮದುಮಗಳು' ಎಂಬುದು ಸಾಂಕೇತಿಕವಾದರೂ ಬಹುಕಾಲದಿಂದ ಮೆರೆಯುತ್ತಿರುವ ನಿಜ 'ಮದುಮಗಳೆಂ'ದರೆ ಅಲ್ಲಿಯ ಅರಣ್ಯ 'ವನಮಾತೆ'. ವಿವಿಧ ಸಸ್ಯವರ್ಗಗಳು, ಭೂತಾಕಾರದ ಮರ-ಮಟ್ಟುಗಳು, ಗಿಡ-ಮೂಲಿಕೆಗಳು, ನಿರ್ಭೀತಿಯಿಂದ ಅಲೆಯುತ್ತಿರುವ ಹುಲಿ-ಚಿರತೆಗಳು, ಜೀರುಂಡೆಗಳು, ಇಂಬಳಗಳು, ಮಳೆ ನೀರು ತುಂಬಿ ಹರಿಯುತ್ತಿರುವ ನದಿ-ತೊರೆಗಳು - ಇವೇ ಮೊದಲಾದವುಗಳಿಂದ ಶೋಭಿತಳಾದ ಈ ಮದುಮಗಳು ಮಲೆನಾಡಿಗೆ ಒಂದು ವಿಶಿಷ್ಟ ಕಳೆ ಕೊಟ್ಟಿರುತ್ತಾಳೆ. ತಿಮ್ಮಿ-ಚಿನ್ನಮ್ಮನಂತಹ ಮದುಮಕ್ಕಳ ಜೊತೆಗೇ ಸುಂದರವಾಗಿ ಹರಡಿದ, ಮನುಷ್ಯನ ಕೈವಾಡವಿಲ್ಲದೆ ಇನ್ನೂ ಮಲಿನರಹಿತವಾಗಿ ಮೆರೆಯುತ್ತಿರುವ ಈ ಅರಣ್ಯಗಳು ನಿಜವಾದ 'ಮದುಮಗಳಂ'ತೆ ಶಾಶ್ವತವಾಗಿ (ಹಾಗೆಂದು ಆಸೆಯಿಟ್ಟರೋಣವೇ?) ನಿಂತಂತಿದೆ! ಈ ಒಂದು ನಿಟ್ಟಿನಲ್ಲಿ ಕುವೆಂಪು ಮಾಡಿದ ಅರಿಕೆಯಲ್ಲಿನ - ಯಾವುದಕ್ಕೂ ಮೊದಲಿಲ್ಲ, ತುದಿಯಿಲ್ಲ, ಎಲ್ಲಿಯೂ ನಿಲ್ಲುವುದಿಲ್ಲ, ಕೊನೆಮುಟ್ಟುವುದೂ ಇಲ್ಲ - ಎಂಬ ಮಾತು ವಿಶೇಷ ಅರ್ಥ ಕಲ್ಪಿಸುತ್ತದೆ! ನನಗೆ ಈಗಲೂ ನಮ್ಮೂರನ್ನು ಭೇಟಿ ಮಾಡಿದಾಗ ಅಲ್ಲಿನ ಅರಣ್ಯ-ವನಗಳನ್ನು ನೋಡಿ ಅತೀವ ಆನಂದ ಉಕ್ಕಿ ಬರುತ್ತದೆ, ಎದೆ ತುಂಬಿಬರುತ್ತದೆ.

ನನಗೆ ಮೆಚ್ಚುಗೆಯಾದ ಇನ್ನೊಂದು ವಿಷಯವೆಂದರೆ, ಕುವೆಂಪುರವರು ಗುತ್ತಿ ಮತ್ತು ಬೇರೆ ಬೇರೆ ಜನರಲ್ಲುಂಟಾಗುವ ಸಂವೇದನೆಗಳನ್ನು ಮನಮುಟ್ಟುವಂತೆ ವರ್ಣಿಸಿದುದು. ಗುತ್ತಿ ಒಬ್ಬ ಹೊಲೆಯ. ಆದರೆ, ಅವನ ಸಂಕಟಗಳಿಗೆ ಹೊಲೆತನವಿದೆಯೆ ? ಅವನ ಸಂವೇದನೆ ಬೇರೆಯದೆ ? ತನ್ನ ನಾಯಿ, 'ಹುಲಿ', ಇಂಬಳದ ಕಡಿತದಿಂದ ಮೂಗಿನಲ್ಲಿ ರಕ್ತ ಬರುವುದನ್ನು ನೋಡಿಯೋ, ಚಿರತೆಯ ಕಡಿತದಿಂದ ಗಾಯಗೊಂಡು ನರಳುತ್ತಿರುವುದನ್ನು ನೋಡಿಯೋ, ಅವನು ಪಡುತ್ತಿರುವ ಸಂಕಟ ಎಂಥವರ ಹೃದಯವನ್ನೂ ಕರಗಿಸುತ್ತದೆ. 'ಹುಲಿ'ಯನ ಮೇಲೆ ಅವನಿಗೆ ಮಡದಿ ತಿಮ್ಮಿಯಷ್ಟೇ ಪ್ರೀತಿ. ಅವನು 'ಹುಲಿ'ಯನ್ನು 'ಹಡ್ಬೆಗುಟ್ಟಿದ್ದು! ನಾ ಹೋದಲ್ಲೆಲ್ಲ ನನ್ನ ಬೆನ್ನತ್ತಿ ಬಂದು ಸಾಯತ್ತೆ' - ಎಂದು ಹೇಳಿದ ಮಾತುಗಳು ತೋರಿಕೆಗೆ ಬೈಗುಳವೆಂಬಂತೆ ಕಂಡುಬಂದರೂ, ಆ 'ಬೈಗುಳ'ದಲ್ಲಿಯೇ ಗುತ್ತಿಗೆ ನಾಯಿಯ ಮೇಲಿನ ಪ್ರೀತಿಯನ್ನು ಗುರುತಿಸಬಹುದು. ಅವನು, 'ಹುಲಿ'ಯನ್ನು

ತುಂಗಾನದಿಯ ಪ್ರವಾಹದಲ್ಲಿ ಕಳೆದುಕೊಂಡಾಗ ಅವನಲ್ಲಾಗುವ ಸಂಕಟದಲ್ಲಿ ಓದುಗರೂ ಭಾಗಿಗಳಾಗಿ, ಅವರ ಕಣ್ಣು ಒದ್ದೆಯಾದಲ್ಲಿ ಆಶ್ಚರ್ಯವೇನಿಲ್ಲ! ಇನ್ನು 'ಕೀಳುಜಾತಿ'ಯವರೆನ್ನಿಸಿಕೊಂಡ ಹೊಲೆಯರು 'ಮೇಲುಜಾತಿ'ಯವರ ದಬ್ಬಾಳಿಕೆಗೆ ಗುರಿಯಾಗುವುದೂ ಓದುಗರನ್ನು ತಲ್ಲಣಿಸುವಂಥದೆ! ಒಂದು ಸನ್ನಿವೇಶದಲ್ಲಿ ತಂದೆ ತಾಯಿಯರ ಮುಂದೆಯೇ, 'ಒಡೆಯ'ನ ಸಮಕ್ಷಮದಲ್ಲಿ ಅವನ ಆದೇಶದಂತೆ, ನಿರಪರಾಧಿ, ಸಣ್ಣಬೀರನನ್ನು ಕಂಬಕ್ಕೆ ಕಟ್ಟಿ ಆಗುಂಬೆ ಸಾಬಿ ಬೆತ್ತದಿಂದ ಛಡಿ ಹೊಡೆದಾಗ ಸಣ್ಣಬೀರನ ನರಳುವಿಕೆ ನಮಗೆ ಹೃದಯವಿದ್ರಾವಕವಾಗುವುದರ ಜೊತೆಗೇ ಆಕ್ರೋಶವನ್ನೂ ಉಂಟುಮಾಡುತ್ತದೆ!

ಗುತ್ತಿ ಮತ್ತು ಮುಕುಂದಯ್ಯ ತಾವು ಒಲಿದ ತರುಣಿಯರನ್ನು 'ಹಾರಿಸಿ'ಕೊಂಡು ಹೋಗುವ ಸಾಹಸಗಳ ಸ್ವಾರಸ್ಯ, ಅವರು ಒಳಗಾದ ಕಷ್ಟಗಳನ್ನು ಓದಿಯೇ ತಿಳಿದುಕೊಳ್ಳಬೇಕು. ಆ ಸಂದರ್ಭಗಳಲ್ಲಿ ಮಲೆನಾಡಿನ ಅರಣ್ಯ ಸೌಂದರ್ಯವಂತೂ, ಸಜೀವವಾಗಿ ನಮ್ಮ ಕಣ್ಣ ಮುಂದೆ ಕಟ್ಟುತ್ತದೆ. ನಿಸರ್ಗದೊಡನೆಯ ಇಂತಹ ಸಂಬಂಧಗಳು ಕಾದಂಬರಿಯ ತುಂಬ ಹರಡಿಕೊಂಡಿದೆ.

ಮಲೆನಾಡಿನ ಗೌಡರು, ಹೆಗ್ಗಡೆಯರು, ನಾಯ್ಕರು - ಇವರೆಲ್ಲರೂ ಒಕ್ಕಲಿಗರೆ. ಕಾದಂಬರಿಯಲ್ಲಿ ಒಕ್ಕಲಿಗರ ಸಂಸ್ಕೃತಿಯನ್ನು ಕುವೆಂಪು ಚೆನ್ನಾಗಿ ವರ್ಣಿಸಿದ್ದಾರೆ. ಅತಿಥಿ ಸತ್ಕಾರವಂತೂ ಮಲೆನಾಡಿನಲ್ಲಿ ಬೆಳೆದು ಬಂದ ವಿಶಿಷ್ಟ ಪದ್ಧತಿ. ಸಮಜಾತಿಯವರಾಗಲೀ, 'ಕೀಳುಜಾತಿ'ಯವರಿಗಾಗಲೀ ನೀಡುವ ಸತ್ಕಾರ ಆದರ್ಶವಾದುದು. ಗುತ್ತಿಗೆ ಲಕ್ಕುಂದದಲ್ಲಿ ದೊರೆಯುವ ಸತ್ಕಾರ ಇದಕ್ಕೆ ಒಂದೇ ಒಂದು ನಿದರ್ಶನ. ಇವು ಕುವೆಂಪುರವರ ಬದುಕಿನ ನಿಜ ನೆನಹುಗಳಿರಬೇಕು! ನನಗಂತೂ ಈ ಅತಿಥಿ-ಸತ್ಕಾರ ಹೆಮ್ಮೆ ತರುತ್ತಿದೆ.

ಕಾದಂಬರಿಯಲ್ಲಿ ವರ್ಣಿಸಿದ ಮಲೆನಾಡಿಗರ ಬದುಕಿಗೂ ಇತ್ತೀಚೆಗಿನ ಬದುಕಿಗೂ ಸ್ವಲ್ಪ ವ್ಯತ್ಯಾಸ ಕಂಡುಬಂದರೂ, ಅದು ಆಗಿನ ಕಾಲದ ಜನಜೀವನದ ಮೇಲೆ ಬೆಳಕು ಚೆಲ್ಲುತ್ತದೆ. ಅವರು ವಾಸಿಸುತ್ತಿದ್ದ ಗುಡಿಸಲುಗಳು ಈಗ ಕ್ರಮೇಣ ಸುಧಾರಿತವಾಗಿವೆ. ಹುಲ್ಲು, ಸೋಗೆಯ ಮನೆಗಳು ಈಗ ಮಾಯವಾಗುತ್ತಿವೆ. ಆಗಿನ ಕಾಲದಲ್ಲಿ ಹಂಚಿನ ಮನೆಗಳಿದ್ದವರು ಸಿರಿವಂತರೆನಿಸಿಕೊಳ್ಳುತ್ತಿದ್ದರು. ಸಾಮಾನ್ಯರ ಮನೆಗಳೆಲ್ಲವೂ ಹುಲ್ಲಿನ ಮನೆಗಳೇ! ಸಗಣಿಯಿಂದ ಸಾರಿಸಿದ ಮಣ್ಣಿನ ನೆಲ, ಮಣ್ಣಿನ ಗೋಡೆಗಳು, ಇವೇ ಆಗಿನ ಕಾಲದಲ್ಲಿ ಶ್ರೀಸಾಮಾನ್ಯರಿಗೆ ದೊರೆಯುತ್ತಿದ್ದ ಭೋಗಗಳು. ಕೆಲವೊಮ್ಮೆ, ಭೀಕರ ಮಳೆಗೆ ತುತ್ತಾಗಿ, ಮಣ್ಣಿನ ಗೋಡೆಗಳು ಕುಸಿದು, ಮಳೆಯಿಂದ ರಕ್ಷಿಸಿಕೊಳ್ಳಲು ಸೋಗೆಯೇ ಗತಿ. ಬಾಗಿಲುಗಳಂತೂ 'ತಟ್ಟೆ'ಗಳಿಂದಲೇ ಮಾಡಿದುವು! ಸಿರಿವಂತರ ಮನೆಗಳಲ್ಲಿ ಮಾತ್ರ ಮರದ ಬಾಗಿಲು, ತಾಳ-ಚಿಲುಕಗಳು ಇರುತ್ತಿದ್ದುವು. ಹೊಲೆಗೇರಿಗಳೇ ಬೇರೆಯಾಗಿರುತ್ತಿದ್ದುವು. ಅಲ್ಲಿಗೆ 'ಮೇಲುಜಾತಿ'ಯವರಿಗೆ ಪ್ರವೇಶವಿಲ್ಲ! ಅವರು ಹಿಂದುಗಳೆನಿಸಿಕೊಂಡರೂ,

ಅವರಿಗೆ ದೇವಸ್ಥಾನ-ಪೂಜೆಗಳಲ್ಲಿ ಭಾಗವಿಲ್ಲ! ಅವರು ಸತ್ತ ಪೂರ್ವಜರು, ಭೂತಗಳನ್ನೇ ಆರಾಧಿಸುವವರು. ಪಂಜುರ್ಲಿ-ಜಕಣಿಗಳೇ ಅವರ ದೇವರುಗಳು.

ಮಲೆನಾಡಿನ ವರ್ಣನೆ, ನಾವು ಅಲ್ಲೇ ಬಾಳಿ ದಿನನಿತ್ಯ ಭಾಗಿಗಳಾಗಿದ್ದರೂ, ಕುವೆಂಪುರವರ ಲೇಖನಿಯಲ್ಲಿ ಒಂದು ವಿಶಿಷ್ಟ 'ತೈಲ ಚಿತ್ರ'ದಂತೆ ಕಾಣಿಸಿಕೊಳ್ಳುತ್ತದೆ. ಇದು ಅವರ ಚಮತ್ಕಾರದ ಶೈಲಿಯನ್ನು ವ್ಯಕ್ತಪಡಿಸುತ್ತದೆ. ಕಾದಂಬರಿಯಲ್ಲಿ ನಿರೂಪಿಸಿದ ಶಿಕಾರಿಗಳಂತೂ ಬಹಳ ಚೆನ್ನಾಗಿ ವರ್ಣಿತವಾಗಿವೆ. ಶಿಕಾರಿ ಮಲೆನಾಡಿನ ಶೂದ್ರರಿಗೆ ಬಹಳ ಮೆಚ್ಚಿನ ಕ್ರೀಡೆ! ಹಂದಿ, ಸಾರಗ, ಜಿಂಕೆ, ಮೊಲ, ಕಾಡುಕುರಿ, ಕಾಡುಕೋಳಿ ಇವೇ ಮುಂತಾದುವುಗಳು ಇಂತಹ ಶಿಕಾರಿಗಳ ಗುರಿ. ನನಗೆ ಚಿಕ್ಕಂದಿನಲ್ಲಿ ಅದು ಬಹಳ ಅಚ್ಚು-ಮೆಚ್ಚಿನ ಹವ್ಯಾಸವಾಗಿತ್ತು. ಇಂತಹ ಶಿಕಾರಿಗಳ ವರ್ಣನೆಯನ್ನು ಓದುತ್ತಿದ್ದಂತೆ ನನ್ನ ಬಾಲ್ಯದ ಅನುಭವಗಳೇ ನನ್ನ ಕಣ್ಣ ಮುಂದೆ ಚಿತ್ರಿಸಿದಂತಾಗುವುದು! ಮಾಂಸಗಳ 'ತುಂಡು', 'ಸಂಡಿಗೆ'ಗಳನ್ನು ಹೆಂಡ ಕುಡಿಯುವಾಗ 'ಕಚ್ಚಿ'ಕೊಳ್ಳಲು ಉಪಯೋಗಿಸುತ್ತಾರೆ. ಕುಡಿತವಂತೂ ಮಲೆನಾಡಿನಲ್ಲಿ ಸರ್ವೇಸಾಮಾನ್ಯ. ಈ ದುಃಶ್ಚಟಗಳಿಂದ ಅನಾಹುತಗಳೂ, ಕೊಲೆಗಳೂ ಆಗುತ್ತಿರುತ್ತವೆ.

ಸಾಗಣಿಕೆಯ (Transportation) ಅಭಾವದಿಂದಾಗಿ, ಹೊರಗಿನ ಸಾಮಗ್ರಿಗಳು, ತರಕಾರಿಗಳು ಮಲೆನಾಡಿಗೆ ಸಕಾಲದಲ್ಲಿ ತಲುಪುತ್ತಿರಲಿಲ್ಲ; ಅದೂ, ಮಳೆಗಾಲದಲ್ಲಿ ಇದು ತೀರ ಕಷ್ಟತರ. ಅಲ್ಲೇ ಬೆಳೆಯುವ, ಸಿಗುವ ಸಾಮಗ್ರಿಗಳಿಂದ ಮಾಡುವ ಆಹಾರಗಳ ವರ್ಣನೆ ಈ ಕಾದಂಬರಿಯಲ್ಲಿ ತುಂಬ ಚೆನ್ನಾಗಿ ನಿರೂಪಿತವಾಗಿದೆ. ಕರಿ ಮೀನಿನ (ಒಣಗಿದ ಗದ್ದೆಮೀನು) ಚಟ್ನಿ, ಕೆಸುವಿನ ಸೊಪ್ಪು, ಏಡಿಮೀನು, ಕೋಳಿ, ಕುರಿ, ಹಂದಿಮಾಂಸ, ಕಾಡಿನಲ್ಲಿ ಬೇಟೆ ಮಾಡಿದ ಪ್ರಾಣಿಗಳ ಮಾಂಸ, ನಾನಾ ತರದ ಸೊಪ್ಪು, ಬಾಳೆಕಾಯಿ, ಎಳೆಹಲಸಿನಕಾಯಿ (ಬಡುಕು), ಕಡಲೆಬೀಜ - ಇವೇ ಮೊದಲಾದುವುಗಳು ಮಲೆನಾಡಿನ ನಿತ್ಯ ಬಳಕೆಯ ಆಹಾರ ಸಾಮಗ್ರಿಗಳು. ಅಕ್ಕಿ ರೊಟ್ಟಿ ಈಗಲೂ ಮಲೆನಾಡಿನವರ ಅಚ್ಚು-ಮೆಚ್ಚಿನ ಬೆಳಗಿನ ಉಪಹಾರ. ಬಗನೆ ಕಳ್ಳು (ಹೆಂಡ) ಮಲೆನಾಡಿನ ಪ್ರೀತಿಪಾತ್ರವಾದ, ನಲ್ಮೆಯ ಕುಡಿತ.

ಮಲೆನಾಡಿನ ವೇಷ-ಭೂಷಣಗಳೂ, ಅಲ್ಲಿಯವರ ಮಾತು, ನುಡಿಗಟ್ಟುಗಳೂ, ಒಂದು ವಿಶಿಷ್ಟತೆ ಪಡೆದಿದೆ. ಅಲ್ಲಿ ಕಾಣುವ ಪ್ಯಾಂಟ್-ಶರ್ಟುಗಳು ಇತ್ತೀಚಿಗಿನ ಬದಲಾವಣೆಯ ಸಂಕೇತ. ಹಿಂದಿನ ಕಾಲದಲ್ಲಿ, ಗಂಡಸರು ಗಿಡ್ಡದಾಗಿ ಅಡ್ಡಪಂಚೆ ಉಡುತ್ತಿದ್ದರು. ವಿಶೇಷ ಕಾಲಗಳಲ್ಲಿ ತಲೆಗೊಂದು ಕೆಂಪು ರುಮಾಲು ಒಡೆಯರೇ ಅಲ್ಲದೆ, ಗುತ್ತಿಯಂತಹ ಕೆಲಸದಾಳುಗಳ ತಲೆಯನ್ನೂ ಏರುತ್ತಿತ್ತು; ಅಲ್ಲದೆ 'ಕಸೆ ಅಂಗಿ'ಯೂ ಆಗಾಗ್ಗೆ ಮೈಯನ್ನು ಅಲಂಕರಿಸುತ್ತಿತ್ತು. ಕಿವಿಯಲ್ಲೊಂದು ಒಂಟಿಯೂ ಕೆಲವೊಮ್ಮೆ ಶೋಭಿಸುತ್ತಿತ್ತು. ಕ್ರಾಪು ಇತ್ತೀಚಿಗಿನ ಭೂಷಣ. ಹೆಚ್ಚಾಗಿ ಎಲ್ಲರೂ ಜುಟ್ಟು ಬಿಟ್ಟಿರುತ್ತಿದ್ದರು. ಮಳೆಗಾಲದಲ್ಲಿ

ಮಳೆಯ ರಭಸದಿಂದ ತಡೆದುಕೊಳ್ಳಲೂ, ಮೈ ಬೆಚ್ಚಗಾಗಿಡಲೂ, ಕಂಬಳಿಯ ಗುಪ್ಪೆಯನ್ನು ಉಪಯೋಗಿಸುತ್ತಿದ್ದರು. ಹೆಂಗಸರು ಸೀರೆಗಳನ್ನು ಬೆನ್ನು – ಸೆರಗು ಅಥವಾ ಗೊಬ್ಬೆ ಸೆರಗು ಹಾಕಿ (ಸ್ವಲ್ಪ ಕೊಡವ ಶೈಲಿಯಲ್ಲಿ) ಉಡುವುದು ಸರ್ವೇಸಾಮಾನ್ಯ. ಗಟ್ಟದ ಕೆಳಗಿನ ಸೆಟ್ಟರು ಹೆಂಗಸರು ಉಡುವ ಮಾದರಿ ಅವರಿಗೆ ಒಲ್ಲದು. ಗಂಡಸರು, ಹೆಂಗಸರು ಓಲೆಯನ್ನು ಹಾಕಿಕೊಳ್ಳುವುದು, ಶ್ರೀಮಂತ ಗಂಡಸರು ಬಲಗೈಗೆ ಚಿನ್ನದ ಸಲಿಗೆ, ಸೊಂಟಕ್ಕೆ ಚಿನ್ನದ ಉಡಿದಾರ ತೊಡುವುದು ವಾಡಿಕೆಯಾಗಿತ್ತು. ನನ್ನ ಅಜ್ಜ–ಅಜ್ಜಿಯರು ಮಲೆನಾಡಿನ ಇಂತಹ ಮಾದರಿ ಉಡಿಗೆ ತೊಡುವುದನ್ನು ನಾನು ನೋಡಿರುತ್ತೇನೆ.

ರಾಗವಾಗಿ ಮಾತಾಡುವುದು ಮಲೆನಾಡಿನವರ ವೈಶಿಷ್ಟ್ಯ. ಅವರ ಕೆಲವು ನುಡಿಗಟ್ಟುಗಳೂ ವಿಶಿಷ್ಟವಾದುದು. ಹಾವು ಕಚ್ಚುವುದು 'ಬಳ್ಳಿ ಮುಟ್ಟು'ವುದಾಗುತ್ತದೆ; ಬಾರೀ ಮಳೆಬಂದಲ್ಲಿ ಅದನ್ನು 'ದನಗೋಳು ಹೊಯ್ಯುತ್ತೆ' ಎಂದು ಹೇಳುತ್ತಾರೆ; ಮದುವೆಯ ಚೌಕಟ್ಟಿನ ಹೊರಗಿನ ಹೆಣ್ಣು–ಗಂಡಿನ ಕೂಡುವಿಕೆಯನ್ನು 'ಸೀರುಡುಕೆ' ಎಂದು ಕರೆಯುತ್ತಾರೆ. 'ಜೈಮುನಿ ಬರೆದು' ಕೊಡುವುದೆಂದರೆ, ಮಲೆನಾಡ ಹಳ್ಳಿ ಭಾಷೆಯಲ್ಲಿ ಜಾಮೀನು' ಬರೆದು ಕೊಡುವುದೆಂದು; ಎಲ್ಲಾದರೂ ಸಂಕಷ್ಟಕ್ಕೆ ಸಿಕ್ಕಿದ ಸಂದರ್ಭವನ್ನು 'ಪಂಜುರ್ಲಿಗೆ ಸಿಕ್ಕ ಜಕಣಿ' ಎಂದು ಹೇಳಿಕೊಳ್ಳುತ್ತಾರೆ. ಈ ಭಾಷೆ ಮತ್ತು ನುಡಿಗಟ್ಟುಗಳ ಮಧ್ಯೆ ಗಟ್ಟದಿಂದ ಬಂದ ಸೆಟ್ಟರ ತುಳು ಭಾಷೆಯೂ ಮಲೆನಾಡಿನಲ್ಲಿ ಅಲ್ಲಲ್ಲಿ ಕೇಳಿಬರುತ್ತದೆ. ಅವರು ಆಡುವ ದಕ್ಷಿಣ ಕನ್ನಡ ಹಳ್ಳಿಭಾಷೆ, – ನಾವ್ ಹೋಪ ಮಾರಾಯ (ನಾವು ಹೋಗೋಣ ಮಹಾರಾಯ), ಅಂವ ಬತ್ತ ಅನ್ತ್ ನಾ ಕಾಂತ್ ಕೂಕಂಡಿದ್ದಿ (ಅವನು ಬರುತ್ತಾನೆಂದು ನಾನು ಕಾಣುತ್ತ ಕುಳಿತಿದ್ದೆ – ಇತ್ಯಾದಿ ಭಾಷೆಯೂ ಅಪರೂಪಕ್ಕೆ ಅಲ್ಲಲ್ಲಿ ಕೇಳಿ ಬರುತ್ತದೆ. ಈ ಮಧ್ಯೆ ಮಲೆಯಾಳಂ ಮಾತಾಡುವ ಕಣ್ಣಾ ಪಂಡಿತರಂತಹರ 'ಅತು ಅಗೆತಿತ್ತಲ್ಲ ಪಾತ್ರಿಕಳೆ, ರಾತ್ರ ಕಾಲತಲ್ಲಿ ಹಂತಿ ಉತ್ತಿತ್ತಲ್ಲವಾ?' (ಅದು ಅಗೆದಿದ್ದಲ್ಲ ಪಾತ್ರಿಗಳೆ, ರಾತ್ರಿ ಕಾಲದಲ್ಲಿ ಹಂದಿ ಉತ್ತಿದ್ದಲ್ಲವಾ?) ಎಂಬ ಮಾತು ಓದುಗರನ್ನು ನಗೆಗಡಲಲ್ಲಿ ಮುಳುಗಿಸುತ್ತದೆ. ಹೀಗೆ ಮಲೆನಾಡ ಜೀವನದಲ್ಲಿ ಈ ಎಲ್ಲ ಬಗೆಯ ವೈವಿಧ್ಯವೂ ಸೇರಿ ಅದಕ್ಕೊಂದು ಕಳೆಗೊಟ್ಟಿದೆ. ಕ್ರೈಸ್ತ ಮತವನ್ನು ಪ್ರಚುರಪಡಿಸಲು ಬಂದ ಪಾದ್ರಿಗಳು, 'ಬೀಸು ಕಲ್ಲನ್ನು' (ಬೈಸಿಕಲ್ಲು) ಬಳಸಿಕೊಂಡ ಪ್ರಕರಣವೊಂದನ್ನು ಕಾದಂಬರಿಯಲ್ಲಿ ಓದಿ ನಗುವಂತಾಗುವುದು. ಈ ಪಾದ್ರಿಗಳು ಮಲೆನಾಡಿನ ಜೀವನವನ್ನು ಸ್ವಲ್ಪ ಅಸ್ತ–ವ್ಯಸ್ತ ಮಾಡಿದ ವಿಚಾರವೂ ಅಲ್ಲಿದೆ. ಪಾದ್ರಿಗಳು ಮತ ಪ್ರಚಾರಕ್ಕೆ ಬೈಬಲ್ಲು ಉಪಯೋಗಿಸುವುದಕ್ಕಿಂತಲೂ ಬೀಸುಕಲ್ಲನ್ನೆ ಪ್ರಧಾನವಾಗಿ ಉಪಯೋಗಿಸಿಕೊಂಡಂತಿದೆ. ಹೊರಗಿನ ಮಲೆನಾಡಿನದಲ್ಲದ ಸಂಪ್ರದಾಯಗಳು ಹೇಗೆ ಅವರ ಜೀವನದ ಮೇಲೆ ಪರಿಣಾಮ ಮಾಡುತ್ತಿವೆ ಎಂಬುದನ್ನು ಇಂತಹ ಉದಾಹರಣೆಗಳು ಒದಗಿಸಿಕೊಡುತ್ತವೆ.

'ರವಿ ಕಾಣದ್ದನ್ನು ಕವಿ ಕಂಡ' ಎನ್ನುವ ಮಾತನ್ನು ಕುವೆಂಪುರವರು ನಿಜವಾಗಿಯೂ ಈ ಕಾದಂಬರಿಯಲ್ಲಿ ಸಾಧಿಸಿದ್ದಾರೆ. ಕಾಡಿನ ಚಿತ್ರವನ್ನೆ ಉದಾಹರಣೆಗೆ ತೆಗೆದುಕೊಂಡಲ್ಲಿ,

ಜನಸಾಮಾನ್ಯರು ಕಾಡನ್ನು ನೋಡಿದ್ದರೂ, ಅವನ್ನು ಹೊಕ್ಕು ಉಪಯೋಗ ಪಡೆದಿದ್ದರೂ, ಅದರ ಭೀಕರತೆ, ಸೂರ್ಯೋದಯದಿಂದ ಸೂರ್ಯಾಸ್ತಮಾನದವರೆಗೂ ಬದಲಾಗುತ್ತಿರುವ ಆಕರ್ಷಕ ಸೌಂದರ್ಯ, ಮಳೆಗಾಲದ ಮೈನಡುಗಿಸುವ ರೌದ್ರತೆ - ಇವೆಲ್ಲವನ್ನೂ 'ಕಾಡಕವಿ' ಕುವೆಂಪು ಸೆಳೆದು ಹಿಡಿದಿದ್ದರಿಂದ, ನಮ್ಮಂಥವರ ಗಮನಕ್ಕೆ ಪರಿಣಾಮಕಾರಿಯಾಗಿ ಈ ಕಾದಂಬರಿಯಲ್ಲಿ ತಂದಿರುತ್ತಾರೆ. ಗುತ್ತಿ ತಿಮ್ಮಿಯನ್ನು 'ಹಾರಿಸಿ'ಕೊಂಡು ಬಂದಾಗ, ಮಲೆಯಲ್ಲಿ ಸಿಕ್ಕಿ ಅವರು ಪಟ್ಟ ಕಷ್ಟ, ಕಲ್ಲುಮಂಟಪದಲ್ಲಿ ರಾತ್ರಿಯೆಲ್ಲ ಕಳೆದು ಪ್ರಾತಃಕಾಲದಲ್ಲಿ ಮೂಡುದಿಕ್ಕಿನಲ್ಲಿ ಕೆಂಬಣ್ಣದ ಓಕುಳಿ ಚೆಲ್ಲುತ್ತ ಸೂರ್ಯೋದಯವಾಗುವುದನ್ನು ಅನುಭವಿಸಿದ ತಿಮ್ಮಿಯ ಆನಂದ ಇದಕ್ಕೊಂದು ಉದಾಹರಣೆ. ಒಂದು ಹಳ್ಳಿಯ ಚಿತ್ರ, ವಿವಿಧ ವರ್ಗದ (ಸಾಬಿ, ಹೊಲೆಯ, ಗೌಡ, ಪಾದ್ರಿ, ಬ್ರಾಹ್ಮಣ, ಗಟ್ಟದ ಕೆಳಗಿನ ಆಳುಗಳು) ಆಚಾರ, ಸಾಕುಪ್ರಾಣಿಗಳ ವಿಚಾರ, ಮದುವೆ, ಶಿಕಾರಿ, ಸಾಲ, ವಸೂಲಿ, ಹಬ್ಬ, ದೇವರು, ಭೂತಾರಾಧನೆ, ಗದ್ದೆ ಕೆಲಸ, ಮನೆಯ ಮುಂಬಾಗಿಲಿನಿಂದ ಹಿಡಿದು ಅಡುಗೆ ಮನೆಯವರೆಗಿನ ರಾಜಕೀಯ, ಗಂಡು-ಹೆಣ್ಣಿನ ಸಂಬಂಧ, ಸಮಾಜದ ವಿವಿಧ ದೃಷ್ಟಿಕೋನ, ಪ್ರಕೃತಿಯ ವೈಭವ - ಇವುಗಳೆಲ್ಲದರ ಮಧ್ಯೆಯೇ ನಾನು ಬೆಳೆದು ಬಂದಿದ್ದರೂ, ನನಗೆ ಅವುಗಳ ವಿಶಿಷ್ಟ ಅನುಭವವಾದುದು ಕಾದಂಬರಿ ಓದಿದ ಮೇಲೆಯೇ!

ಮಲೆನಾಡಿನ ಜೀವನದ ವೈವಿಧ್ಯ, ಅಲ್ಲಿನ ಸಿರಿಸೊಬಗು ಎಲ್ಲವನ್ನೂ ಈ ಕಾದಂಬರಿಯ ಮೂಲಕ ಸಜೀವವಾಗಿ ಸೆರೆಹಿಡಿದು ನಮಗೆಲ್ಲರಿಗೂ ಪರಿಚಯ ಮಾಡಿಕೊಟ್ಟ ಕೀರ್ತಿ ಕುವೆಂಪುರವರದು. ಅವರದೊಂದು ದೇವತಾ ಶಕ್ತಿ, ಬರಿಯ ಕವಿಶಕ್ತಿಯೊಂದೇ ಅಲ್ಲ. ಆ ಕವಿಮಹರ್ಷಿಗೆ ನನ್ನ ನಮ್ರತೆಯ ನಮನಗಳು!



# ‘ಮಲೆನಾಡಿನ ಚಿತ್ರಗಳು’ ಸಂಕಲನ ಕುರಿತು

ಎಚ್.ಕೆ. ಚಂದ್ರಶೇಖರ್, ನ್ಯೂಯಾರ್ಕ್

ಕುವೆಂಪು ಅವರನ್ನು ನಾಡಿನ ರಾಷ್ಟ್ರಕವಿ, ಮಹಾಕವಿ ಎಂದೇ ಗುರುತಿಸುವುದು ವಾಡಿಕೆಯಷ್ಟೆ. ಅವರ ಗದ್ಯರಚನೆಯ ಹರಹೂ ಅಸಾಮಾನ್ಯವಾದದ್ದು. ವಿಮರ್ಶೆ, ಭಾಷಣಗಳು, ಜೀವನಚರಿತ್ರೆಗಳು, ಅನುವಾದಿತ ಗ್ರಂಥಗಳು, ಕತೆ ಕಾದಂಬರಿ ಚಿತ್ರಗಳು, ಶಿಶುಸಾಹಿತ್ಯ - ಹೀಗೆ ವಿವಿಧ ಪ್ರಕಾರಗಳಲ್ಲಿ ಅವರ ಕೃತಿರಚನೆ ಸಾಹಿತ್ಯಾಭ್ಯಾಸಿಗಳನ್ನು ಬೆರಗುಗೊಳಿಸುತ್ತದೆ. ಈ ಲೇಖನದಲ್ಲಿ ಅವರ ಏಕಮಾತ್ರ ಲಘುಪ್ರಬಂಧಗಳ ಸಂಕಲನ ‘ಮಲೆನಾಡಿನ ಚಿತ್ರಗಳು’ ಕುರಿತು ಪರಿಚಯಿಸುವ ಪ್ರಯತ್ನ ಮಾಡಿದ್ದೇನೆ.

ಲಲಿತಪ್ರಬಂಧ ಎಂಬ ಪ್ರಕಾರವೇ ಹೊಸಗನ್ನಡ ಸಾಹಿತ್ಯದ ವಿಶಿಷ್ಟ ಕೊಡುಗೆ. ಇದರ ಉಗಮವಾದದ್ದು ಕಳೆದ ಶತಮಾನದ ಎರಡು ಮೂರರ ದಶಕಗಳಲ್ಲಿ. ಅತ್ಯಂತ ಲವಲವಿಕೆಯ ಮತ್ತು ರಂಜನೀಯವಾದ ಈ ಸಾಹಿತ್ಯಸ್ವರೂಪವನ್ನು ನವೋದಯದ ಅನೇಕ ಮಹತ್ವದ ಲೇಖಕರು ಪಾಶ್ಚಾತ್ಯ ಪ್ರೇರಣೆಯಿಂದಾಗಿ ಕನ್ನಡಕ್ಕೆ ನೀಡಿದ್ದಾರೆ. ಆಗಿನ ಮೈಸೂರು ವಿಶ್ವವಿದ್ಯಾನಿಲಯದ ಮಹಾರಾಜ ಕಾಲೇಜಿನ ವಾತಾವರಣ ನವೋದಯ ಸಾಹಿತ್ಯದ ಉಗಮಕ್ಕೆ ಹೇಳಿ ಮಾಡಿಸಿದಂತಿತ್ತು. ಹೊಸದಾಗಿ ಆರಂಭವಾಗಿದ್ದ ವಿಶ್ವವಿದ್ಯಾನಿಲಯದಲ್ಲಿ ಪಾಠ ಹೇಳುತ್ತಿದ್ದವರು ರಾಲೋ, ಕಸಿನ್ಸ್, ಮ್ಯಾಕಿಂಟಾಶ್ ಮೊದಲಾದ ಪಾಶ್ಚಾತ್ಯ ವಿದ್ವಾಂಸರೇ ಅಲ್ಲದೆ ಎ.ಆರ್. ಕೃಷ್ಣಶಾಸ್ತ್ರಿಗಳು, ವೆಂಕಣ್ಣಯ್ಯನವರು, ಬಿಎಂಶ್ರೀ ಮೊದಲಾದ ಕನ್ನಡ ಸಾಹಿತಿಶ್ರೇಷ್ಠರು. ಇಂಗ್ಲಿಷ್ ಕಾವ್ಯಗದ್ಯಪ್ರಕಾರಗಳ ಉತ್ಕಟ ಪ್ರಭಾವಕ್ಕೆ ಒಳಗಾದ ಪ್ರತಿಭಾವಂತ ವಿದ್ಯಾರ್ಥಿಗಳಾದರೋ ಕನ್ನಡವನ್ನು ವಿವಿಧ ಸ್ವರೂಪಗಳಲ್ಲಿ ಶ್ರೀಮಂತಗೊಳಿಸಲು ಉತ್ಸಾಹದಿಂದ ತೊಡಗಿಸಿಕೊಂಡ ಕುವೆಂಪು, ಮೂರ್ತಿರಾಯರು, ತೀನಂಶ್ರೀ ಮುಂತಾದವರು! ಈ ಪಟ್ಟಿ ದೊಡ್ಡದೇ. ಕುವೆಂಪು, ಮೂರ್ತಿರಾಯರು. ತೀನಂಶ್ರೀ ಇವರೆಲ್ಲ ಇಂಗ್ಲಿಷ್ ಭಾಷೆಯ ಸುಪ್ರಸಿದ್ಧ ಪ್ರಬಂಧಕಾರರೆನಿಸಿದ ಬೇಕನ್, ಆಡಿಸನ್, ಸ್ಟೀಲ್, ಗೋಲ್ಡ್‌ಸ್ಮಿತ್, ಚಾರ್ಲ್ಸ್ ಲ್ಯಾಂಬ್ ಮುಂತಾದವರ ‘ಎಸ್ಸೆ’ಗಳಿಂದ ಪ್ರಭಾವಿತರಾಗಿ ಕನ್ನಡದಲ್ಲಿ ಪ್ರಯೋಗ ನಡೆಸಿದರು. ‘ಲಘು ಪ್ರಬಂಧ’ ಮತ್ತು ‘ಹರಟೆ’ - ಈ ಜಾಡಿನ ಎರಡು ಮುಖಗಳು. ಪ್ರಬಂಧದ ರಚನೆಗೆ ನಿಜವಾದ ಘನತೆಯನ್ನು ತಂದುಕೊಟ್ಟ ಮೂರ್ತಿರಾಯರು ಈ ಪ್ರಕಾರ ಹೇಗಿರಬೇಕು ಎಂದು ಅವರ ‘ಹರಟೆ ಮತ್ತು ಪ್ರಬಂಧ’ ಲೇಖನದಲ್ಲಿ ಸೂಚಿಸುತ್ತಾರೆ. ಅವರ ನಿಲುವಿನಲ್ಲಿ ಹರಟೆಗೆ ಆರಂಭವುಂಟೇ

ಹೊರತು ಅಂತ್ಯವೂ ಇಲ್ಲ, ಕೇಂದ್ರವೂ ಇಲ್ಲ.... ಅನಿಶ್ಚಿತ ಗತಿಯೇ ಅದರ ಲಕ್ಷಣ. ಪ್ರಬಂಧಕ್ಕಾದರೋ ಆದಿ ಅಂತ್ಯ ಕೇಂದ್ರಗಳೆಲ್ಲವೂ ಉಂಟು. ಪ್ರಬಂಧಕಾರನ ವ್ಯಕ್ತಿತ್ವವೇ ಅದರ ಕೇಂದ್ರ. ಪ್ರಬಂಧವೆಲ್ಲ ಆ ಕೇಂದ್ರದ ಸುತ್ತ ಬೆಳೆಯುತ್ತದೆ. ಕುವೆಂಪು ಈ ಸಂಕಲನದ ಮುನ್ನುಡಿಯಲ್ಲಿ ತಮ್ಮದು ಲಘು ಪ್ರಬಂಧ, ಹರಟೆಯಲ್ಲ ಎಂದು ಸೂಚಿಸಲು ಹರಟೆಯನ್ನು ಗೇಲಿ ಮಾಡುತ್ತಾರೆ: 'ಹರಟೆಗೆ ತುದಿಯಿಲ್ಲ ಬುಡವಿಲ್ಲ, ಗೊತ್ತಿಲ್ಲ ಗುರಿಯಿಲ್ಲ.... ಪೂರ್ವಾನುಭವಗಳೆಂಬ ಸ್ವಪ್ನಾರಣ್ಯದಲ್ಲಿ ಪೋಲಿಪೋಲಿಯಾಗಿ ಅಲೆಯುವುದೇ ಹರಟೆ' ಎನ್ನುತ್ತಾರೆ! ಪ್ರಬಂಧರಚನೆಗೆ ಕೈ ಹಾಕದವರೇ ವಿರಳ. ಕುವೆಂಪು, ಬೇಂದ್ರೆ, ವಿ.ಸೀ., ಪುತಿನ ಮೊದಲಾದ ಉಚ್ಚಮಟ್ಟದ ಕವಿಗಳು, ಎ.ಎನ್. ಮೂರ್ತಿರಾವ್, ಶ್ರೀರಂಗ, ನಾ. ಕಸ್ತೂರಿ, ಗೊರೂರ್, ಕಾರಂತರಂಥ ವಿಚಾರವಾದಿಗಳೂ ಹಾಗೂ ವಿನೋದಪ್ರಿಯರೂ ಈ ವರ್ಗಕ್ಕೆ ಸೇರುತ್ತಾರೆ. ಈ ಮಾರ್ಗದಲ್ಲಿ ಹಾಸ್ಯಸಾಹಿತ್ಯವನ್ನು ಬೆಳೆಸಿದ ರಾಶಿ, ರಾಜರತ್ನಂ, ಪ್ರಭುಶಂಕರ, ರಾಕು, ಅ.ರಾ. ಮಿತ್ರ, ಎಚ್.ಕೆ. ರಂಗನಾಥ್ ಮತ್ತಿತರ ಅಸಂಖ್ಯಾತ ಲೇಖಕರನ್ನು ನೆನೆಯಬೇಕಾಗುತ್ತದೆ. ಈ ಪ್ರಕಾರದಲ್ಲಿ ಭಾವಗೀತದ ಸೊಗಸಿದೆ, ಸಣ್ಣಕತೆಯ ಮನೋರಂಜಕತೆ ಇದೆ. ಅಗತ್ಯ ಬಿದ್ದಾಗ ಚುರುಕಾದ ವಿಡಂಬನೆಯನ್ನು ಮೃದುಹಾಸ್ಯದೊಂದಿಗೆ ಬಳಸಿ ಬದುಕಿನ ಏರುಪೇರುಗಳನ್ನು ಚಿತ್ರಿಸುವ ಸಾಮರ್ಥ್ಯ ಇದೆ. ಮಲೆನಾಡಿನ ಚಿತ್ರಗಳು ಕುವೆಂಪು ಅವರ ಪೂರ್ವಾಶ್ರಮದ ಅನುಭವಗಳಂತಿದ್ದು ಅವರ ಅಸಾಮಾನ್ಯ ವ್ಯಕ್ತಿತ್ವದಲ್ಲಿ ಕೇಂದ್ರೀಕರಿಸಿವೆ. ಅವರು ಪ್ರಕೃತಿ ಕವಿ; ನಿಸರ್ಗದಿಂದ ಮೋಹಿತರಾದವರು. ಕಾವ್ಯದಲ್ಲಿಯಂತೆ ಈ ಪ್ರಬಂಧಗಳಲ್ಲೂ ಅವರ ಅಚಲ ನಿಸರ್ಗಪ್ರೇಮ ವ್ಯಕ್ತಗೊಳ್ಳುತ್ತದೆ. ಅವರ ಮಲೆನಾಡಿನ ಪ್ರಕೃತಿ ವರ್ಣನೆಯ ಚಿತ್ರೀಕರಣಕಲೆ ಅಸದೃಶವಾದದ್ದು. ಕುವೆಂಪು ಅವರ ಮಾನಸಪುತ್ರರೆನಿಸಿರುವ ಡಾ. ಪ್ರಭುಶಂಕರರು ಹೇಳಿರುವಂತೆ 'ಮಲೆನಾಡು-ಕುವೆಂಪು ಎರಡೂ ಸಮಾನ ಚೇತನಗಳಾಗಿವೆ; ಸಮಾನಾರ್ಥಕ ಪದಗಳಾಗುವಷ್ಟರಮಟ್ಟಿಗೆ....'. ಈ ಸಂಕಲನವನ್ನು ಆರಂಭಿಸುವ ಮೊದಲು ಓದುಗನನ್ನು 'ಮಲೆನಾಡಿಗೆ ಬಾ' ಎಂಬ ಕವನದಲ್ಲಿ ಸ್ವಾಗತಿಸುತ್ತಾರೆ. ಈ ಕವನ ರಚಿಸಿದಾಗ ಅವರು ಇಪ್ಪತ್ತೈದು ವರ್ಷಗಳೂ ತುಂಬಿರದ ತರುಣರು. ಚಂದದ ಪ್ರಾಸ ಧರಿಸಿ ಹಾಡಲೆಂದೇ ರಚಿತವಾದಂತಿರುವ ಸುಂದರವಾದ ಕವನ :

> ಮಲೆನಾಡಮ್ಮನ ಮಡಿಲಿನಲಿ
> ಕರ್ಮುಗಿಲಿನೊಡಲಿನಲಿ
> ಮನೆಮಾಡಿರುವೆನು ಸಿಡಿಲಿನಲಿ
> ಮಿಂಚಿನ ಕಡಲಿನಲಿ !
> ಜನಗಳ ಬೀಡು
> ಚೆಲ್ವಿನ ನಾಡು
> ಮೋಹನ ಭೀಷಣ ಮಲೆನಾಡು !

ನೇಸರು ಮೂಡುವ ಪೆಂಪಿಹುದು,
ಮುಳುಗುವ ಸೊಂಪಿಹುದು;
ತಿಂಗಳ ಬೆಳಕಿನ ಕಾಂತಿಯಿದೆ,
ಇರುಳಿನ ಶಾಂತಿಯಿದೆ.
ಕೋಗಿಲೆಯಲ್ಲಿ
ಲಾವುಗೆಯಿಲ್ಲಿ
ಗಿಣಿಗಳ ನುಣ್ಚರವಿಹುದಿಲ್ಲಿ!

ಮೊರೆಯುತ ಹರಿಯುವ ತೊರೆಯಿಹುದು,
ತುಂಬಿದ ಕೆರೆಯಿಹುದು;
ಹಾಡುತಲೇರಲು ಬೆಟ್ಟವಿದೆ,
ಬಣ್ಣಿಸೆ ಘಟ್ಟವಿದೆ.
ಬಿಸಿಲಿದೆ, ತಂಪಿದೆ;
ಹೂಗಳ ಕಂಪಿದೆ;
ಹಸುರಿನ, ಹಣ್ಣುಗಳಿಂಪಿನೆದೆ !

ರನ್ನನು ಪಂಪನು ಬಹರಿಲ್ಲಿ;
ಶ್ರೀಗುರುವಿಹನಿಲ್ಲಿ!
ಮಿಲ್ಟನ್, ಷೆಲ್ಲಿ, ಬಹರಿಲ್ಲಿ;
ಕವಿವರರಿಹರಿಲ್ಲಿ !
ಮುದ್ದಿನ ಹಳ್ಳಿ
ಈ ಕುಪ್ಪಳ್ಳಿ;
ಬಾ, ಕಬ್ಬಿಗ ನಾನಿಹೆನಿಲ್ಲಿ !

ಮಲೆನಾಡಿನ ಜೀವನದ ವಿಶಿಷ್ಟ ಅನುಭವಗಳನ್ನು ಸ್ವಾರಸ್ಯಪೂರ್ಣವಾಗಿ, ಕುತೂಹಲಕರವಾಗಿ ಹಾಸ್ಯ ವಿಡಂಬನೆಗಳೊಡನೆ ಹನ್ನೆರಡು ಪ್ರಬಂಧಗಳಲ್ಲಿ ಕುವೆಂಪು ನಮಗೆ ಪರಿಚಯಮಾಡಿಸಿಕೊಡುತ್ತಾರೆ. ವರ್ಡ್ಸ್‌ವರ್ತ್, ಷೆಲ್ಲಿ, ಕೀಟ್ಸ್‌ಮುಂತಾದ ನಿಸರ್ಗ ಕವಿಗಳಿಂದ ರೋಮಾಂಚನಗೊಂಡು ಬಾಲ್ಯದಲ್ಲಿ ವಿಹರಿಸಿ ಮನಸ್ಸಿನಲ್ಲಿ ತುಂಬಿಕೊಂಡಿದ್ದ ತವರಿನ ಅನುಭವಗಳನ್ನು ಗದ್ಯದಲ್ಲಿ ವೈಭವೀಕರಿಸಿ ಸಫಲರಾಗುತ್ತಾರೆ. ಪುಸ್ತಕದ ಮುನ್ನುಡಿಯಲ್ಲಿ ಕುವೆಂಪು 'ನೆನಹು ಬಾಳಿನ ಬುತ್ತಿ.... ಹಿತವೋ ಅಹಿತವೋ ಬೇಕಾದುದನ್ನು ಉಳಿಸಿಕೊಳ್ಳುತ್ತದೆ' ಎಂದು ಹೇಳಿ ಪ್ರಕೃತಿ ಅಲ್ಲಲ್ಲಿ ದಾನ ಮಾಡಿರುವ ಭವ್ಯ ಸುಂದರ ದೃಶ್ಯಗಳನ್ನು ಕಲ್ಪನೆಯಲ್ಲಿ ಸೆರೆಯಾಗಿಸಿ ಬಯಸಿದಾಗ ದರ್ಶನ ಪಡೆಯುತ್ತೇನೆ ಎನ್ನುತ್ತಾರೆ. ಈ ಕಾರಣದಿಂದ ಅವರು ಮೈಸೂರಿನಲ್ಲಿದ್ದರೂ ತಮ್ಮ ಪ್ರಿಯ ಮಲೆನಾಡಿನ ತಾಣಗಳಾದ ನವಿಲುಕಲ್ಲು, ಕವಿಶೈಲಗಳನ್ನು ಆಹ್ವಾನಿಸಿಕೊಂಡು ಧ್ಯಾನಿಸುವುದುಂಟು. ಅಲ್ಲಿನ

ಪರ್ವತಶ್ರೇಣಿಗಳು, ಆ ವಿಶಾಲ ನೀಲಗಗನ, ಆ ಅಪಾರ ಅರಣ್ಯರಾಶಿ, ಆ ಸಹಸ್ರಪಕ್ಷಿಗಳ ವಸಂತಗಾನ, ಹಸುರಿನ ಹೆಮ್ಮೆ.... ಸಂಜೆಯಲ್ಲಿ ಬಣ್ಣದ ಮೆರವಣಿಗೆ ಎಲ್ಲವೂ ಅವರನ್ನು ಮೈಮರೆಸುತ್ತವೆ. ಅವರೇ ಹೇಳುವಂತೆ 'ಕಲೆಯ ಕಣ್ಣಿಲ್ಲದವರಿಗೆ ಕವಿಶೈಲ ಒಂದು ಕಲ್ಲುಕಾಡು - ಕಲಾವಂತನಿಗೆ ಅದು ಸಗ್ಗವೀಡು'. ನವಿಲುಕಲ್ಲೂ ಹಾಗೆಯೇ. ಸುತ್ತಮುತ್ತಣ ಕಾಡುಗಳಲ್ಲಿರುವ ನವಿಲುಗಳು ಬಂದು ಆ ಶಿಲಾಶಿಖರದಲ್ಲಿ ವಿಹರಿಸುವುದರಿಂದ ಅದಕ್ಕೆ ಆ ಹೆಸರು. ತಾವು ಸ್ನೇಹಿತರೊಂದಿಗೆ ನವಿಲುಕಲ್ಲಿಗೆ ಬೆಳಗಿನ ಜಾವ ವಿಹಾರ ಹೊರಟು ಗಿರಿಕಂದರಗಳನ್ನು ಆವರಿಸಿದ್ದ ಮಂಜಿನ ಸಾಗರದಲ್ಲಿ, ಬಹುದೂರದ ಪೂರ್ವದಿಗಂತದಲ್ಲಿ ಅರುಣಕಾಂತಿಯ ಆಗಮನ ನೋಡುತ್ತ ಭಾವಪರವಶರಾದುದನ್ನು ವರ್ಣಿಸುತ್ತಾರೆ.

ಮೈಸೂರಿನಲ್ಲಿ ಒಂದು ಬಾರಿ ಗುರು ವೆಂಕಣ್ಣಯ್ಯನವರು, ತೀನಂಶ್ರೀ, ಡಿ.ಎಲ್.ನ. ಮೊದಲಾದ ಮಿತ್ರರು ಎಲ್ಲರೊಡನೆ ಕುಕ್ಕನಹಳ್ಳಿ ಕೆರೆಯಮೇಲೆ ವಾಯುವಿಹಾರಕ್ಕೆ ಹೋಗಿದ್ದಾಗ ಅವರಿಗೆಲ್ಲ ಮಲೆನಾಡಿನ ಕೆಲವು ಅನುಭವಗಳನ್ನು ಹೇಳಿದರಂತೆ. ಥಟ್ಟನೆ ವೆಂಕಣ್ಣಯ್ಯನವರು ಅನುಭವಗಳನ್ನು ಬರೆದರೆ ಪ್ರಬುದ್ಧ ಕರ್ಣಾಟಕದಲ್ಲಿ ಅಚ್ಚು ಹಾಕಿಸೋಣ ಅಂದರಂತೆ. ನಂತರದಲ್ಲಿ ಪುಟ್ಟಪ್ಪನವರು ಕೆಲವು ಚಿತ್ರಗಳನ್ನು ಬರೆದು ತೋರಿಸಿದಾಗ ವೆಂಕಣ್ಣಯ್ಯನವರು ನಿಮ್ಮ ಸಜೀವವಾಣಿಯಲ್ಲೇ ಇದರ ಪ್ರಾಶಸ್ತ್ಯ ಹೆಚ್ಚಾಗಿತ್ತು ಎಂದು ಹೇಳಿ ಇವರ ಕಥನಕೌಶಲವನ್ನು ಮೆಚ್ಚಿಕೊಂಡರಂತೆ. ನಂತರದಲ್ಲಿ ಮಲೆನಾಡಿನ ಚೆಲುವು ಗೆಲುವುಗಳನ್ನೂ ದೃಶ್ಯಗಳನ್ನೂ ವ್ಯಕ್ತಿಗಳನ್ನೂ ಹನ್ನೆರಡು ಚಿತ್ರಗಳಲ್ಲಿ ಹಿಡಿದಿಟ್ಟು ೧೯೩೩ ರಲ್ಲಿ ಕುವೆಂಪು ಪ್ರಕಟಿಸಿದರು. ಅನೇಕಾನೇಕ ಪಾಶ್ಚಾತ್ಯ ನಿಸರ್ಗಕವಿಗಳ ಪ್ರಕೃತಿವರ್ಣನೆಗಳನ್ನು ಓದಿ ಮಾರುಹೋಗಿದ್ದ ಕುವೆಂಪು ಸಹಜವಾಗಿ ತಮ್ಮ ತವರಲ್ಲಿಯೇ ಕಂಡ ಸೌಂದರ್ಯರಾಶಿಯನ್ನು ವೈಭವೀಕರಿಸುತ್ತ ಮಲೆನಾಡಿನ ಬಗೆಬಗೆಯ ವ್ಯಕ್ತಿಗಳ ಕುತೂಹಲಕರ ವರ್ಣನೆಗಳೊಂದಿಗೆ ರಂಜಕ ಚಿತ್ರಗಳನ್ನು ಈ ಸಂಕಲನದಲ್ಲಿ ನೀಡಿದ್ದಾರೆ. ಈ ಚಿತ್ರಗಳನ್ನು ಬಹುಪಾಲು ಅವರ ವಿಶಿಷ್ಟ ಶೈಲಿಯಲ್ಲಿಯೇ ಕೆಳಗೆ ಕಾಣಿಸಿದ್ದೇನೆ.

### ೧. ಹಾಸ್ಯದ ಚಟಾಕಿ :

ಈ ಪ್ರಬಂಧದ ಮೊದಲಲ್ಲಿ ಕುವೆಂಪು ತಮ್ಮ ತವರಿನ ಬಗ್ಗೆ ಬರೆಯುತ್ತಾರೆ. 'ಮಲೆನಾಡಿನ ಹಳ್ಳಿಗಳೆಂದರೆ ವಿಶೇಷವಾಗಿ ಒಂದು ಮನೆಯ ಊರುಗಳು. ಮನೆಗೊಂದು ದೊಡ್ಡ ಹೆಬ್ಬಾಗಿಲು, ಸುತ್ತ ದಪ್ಪವಾದ ಗೋಡೆ....ನಾಜೋಕಿನ ದೃಷ್ಟಿಗಿಂತ ಬಲದ ದೃಷ್ಟಿಯೇ ಹೆಚ್ಚು. ಇಲ್ಲದಿದ್ದರೆ ಮಳೆಯಲ್ಲಿ, ಬಿರುಗಾಳಿಯಲ್ಲಿ, ಸಿಡಿಲುಮಿಂಚುಗಳ ರುದ್ರ ನಲಿದಾಟದಲ್ಲಿ ಮನೆ ಬಾಳಬೇಕಲ್ಲ!' ಕುವೆಂಪು ಹೆಮ್ಮನೆಯ ಹೆಸರು ಕುಪ್ಪಳಿ - ಕುಪ್ಪಳಿಸಿಕೊಂಡು ಬರಬೇಕಾಗಿದ್ದುದರಿಂದ ಆ ಹೆಸರು ಎಂದು ಸ್ಥಳಪುರಾಣವಂತೆ. ಕಾಲು ರಸ್ತೆ ಹಿಡಿದು ಗುಡ್ಡಗಾಡು ದಾಟುತ್ತ ಎರಡೂ ಕಾಲೆತ್ತಿ ಹಳ್ಳಗಳನ್ನು ಕುಪ್ಪಳಿಸಿ ಹಾರಿಕೊಂಡು ಬರಬೇಕಲ್ಲ! ಇವರ ಉಪ್ಪರಿಗೆ ಮನೆಯ ಪೂರ್ವೋತ್ತರ ದಕ್ಷಿಣಭಾಗಗಳಲ್ಲಿ ಭೀಮಾಕಾರದ

ಪರ್ವತಶ್ರೇಣಿಗಳು....ಪಶ್ಚಿಮದಲ್ಲಿ ದಟ್ಟಕಾಡು ದಾಟಿ ಬೆಟ್ಟಗಳು. ಮನೆಗೆ ಹೊಂದಿಕೊಂಡಂತೆ ಅಡಕೆತೋಟದ ಸೆರಗು. ಇನ್ನು ದೃಶ್ಯವೋ! ದಿನದಿನಕ್ಕೆ ಹೊತ್ತುಹೊತ್ತಿಗೆ ಬದಲಾಗುವ ಸೌಂದರ್ಯ - ಮಳೆಗಾಲದಲ್ಲಿ, ಬೇಸಗೆಯಲ್ಲಿ, ಚಳಿಗಾಲದಲ್ಲಿ, ಬೆಳುದಿಂಗಳಲ್ಲಿ, ಕದ್ದಿಂಗಳಲ್ಲಿ ವಿವಿಧ ನೋಟಗಳು !

ಮೈಸೂರಿನಿಂದ ತವರಿಗೆ ಧಾವಿಸಿ ಉಪ್ಪರಿಗೆಯಲ್ಲಿ ಕೂತು ಗೆಳೆಯರೊಂದಿಗೆ ಗದಾಯುದ್ಧವೋ, ಜೈಮಿನಿ ಭಾರತವೋ, ಪಂಪನೋ, ಷೆಲ್ಲಿಯೋ, ವರ್ಡ್ಸ್‌ವರ್ತನೋ - ಯಾವುದಾದರೊಂದು ಕವಿಕಾವ್ಯ ಸನ್ನಿವೇಶದಲ್ಲಿರುವಾಗ ಸಹಸ್ರಾರು ಪಕ್ಷಿಗಳ ಕಂಠಧ್ವನಿಗಳು, ಹುಲಿ ಹಂದಿ ಸಿಂಗಳೀಕ ಇತ್ಯಾದಿ ಜಂತುಗಳ ಕೂಗೂ ಕೇಳಿ ಬರುತ್ತದೆ. ಈ ಸಂಭ್ರಮದ ಜೀವನದಲ್ಲಿ ಒಂದು ದಿನ ಬೆಳಿಗ್ಗೆ ಸ್ನೇಹಿತರೊಡನೆ ಇದ್ದಾಗ ಯಾವದೋ ಕಾಡುಪ್ರಾಣಿಯ ಹೂಂಕಾರ ಕೇಳಿ ಎಲ್ಲರೂ ಜೋಡುನಳಿಗೆ ತೋಟಾಕೋವಿ ರೈಫಲ್ ಹಿಡಿದು ಬೇಟೆಗೆ ಹೊರಡುತ್ತಾರೆ.

ಕುವೆಂಪು ಹಳ್ಳಿಯ ಬೇಟೆಯ ವಿಧಾನಗಳಲ್ಲಿ ಮೂರನ್ನು ಇಲ್ಲಿ ವರ್ಣಿಸುತ್ತಾರೆ. ಒಂದು ದೊಡ್ಡಬೇಟೆ - ಅನೇಕರು ಜತೆಮಾಡಿಕೊಂಡು ಹೋಗುವಂಥದ್ದು. ಕೆಲವರು ಬಿಲ್ಲಿನವರು - ಇವರಲ್ಲಿ ಬಂದೂಕು ಇರಲೇಬೇಕು. ಇನ್ನು ಕೆಲವರು ಹಳುವಿನವರು. ಈ ಜನ ನಾಯಿಗಳ ಸಹಾಯದಿಂದ ಕೂಗುಕಾಕಿನ ಸಹಾಯದಿಂದ ಪ್ರಾಣಿಗಳನ್ನು ಬೆದರಿಸಿ 'ಕಂಡಿ'ಗಳಿಗೆ ಓಡಿಸುತ್ತಾರೆ. ಪ್ರಾಣಿ ಕಂಡಿಯಲ್ಲಿ ಕಾಣಿಸಿದೊಡನೆ ಬಿಲ್ಲಿನವರು ಬಂದೂಕು ಹಾರಿಸುತ್ತಾರೆ. ಬಂದ ಜಂತು ಪಾರಾಗುವುದೂ ಸಾಮಾನ್ಯ. ಎರಡನೆಯದು ಸಾರಿಕೆ ಬೇಟೆ - ಒಬ್ಬನೇ ಕಾಡಿನಲ್ಲಿ ಅಲೆಯುತ್ತ ಹೋಗಿ ಕಣ್ಣಿಗೆ ಬಿದ್ದ ಪ್ರಾಣಿಯನ್ನು ಹೊಡೆಯುವುದು. ಮೂರನೆಯದು ಮರಸು ಬೇಟೆ. ಯಾವುದಾದರೂ ಮರದ ಮೇಲೆ ಮರೆಮಾಡಿಕೊಂಡು ಕೂತಿದ್ದು ಪ್ರಾಣಿ ಕಂಡಾಗ ಗುಂಡು ಹಾರಿಸುವುದು. ಈ ಮೂರೇ ಅಲ್ಲದೆ ಕೋವಿ ಕಟ್ಟುವುದು, ಬೆಳದಿಂಗಳ ಬೇಟೆ ಎಂಬುವೂ ಉಂಟು.

ಈ ಬಾರಿ ಅವರು ಹೊರಟದ್ದು ಸಾರಿಕೆ ಬೇಟೆಗೆ. ಸ್ನೇಹಿತರಲ್ಲಿ ಒಬ್ಬೊಬ್ಬರೂ ಬೇರೆ ಬೇರೆ ಜಾಡನ್ನು ಹಿಡಿದು ಹೊರಟರು. ಕುವೆಂಪು ಕಣಿವೆಯಿಳಿದು ದಿಬ್ಬವೇರಿ ತಮ್ಮ ಮನೆಯ ನಾಯಿ ರೋಜಿ ಬೊಗಳುವುದನ್ನು ಕಾಣುತ್ತಾರೆ. ನಾಯಿ ಬಗುಳುತ್ತ ಹಿಂದಕ್ಕೂ ಮುಂದಕ್ಕೂ ಹಾರಾಡುತ್ತಿದೆ. ಮುಂದೆ ಹಸುರು ಕಿರುಬಯಲಲ್ಲಿ ನಿಂತಿದೆ ಒಂದು ಸರ್ಪ, ರಾಜಸರ್ಪ! ನಾಯಿ ಹಾವುಗಳ ಪರಸ್ಪರ ಪ್ರತಿಕ್ರಿಯೆಯನ್ನು ಕುವೆಂಪು ಬಹು ಸುಂದರವಾಗಿ ವರ್ಣಿಸುತ್ತಾರೆ. 'ನಾಗರಹಾವು ಬಿಂಕದಿಂದ ಕೊಂಕಿದ ತನ್ನ ಹೆಡೆಯನ್ನು ಮುಂದೆಸೆಯಲು ನಾಯಿ ಹಿಂದಕ್ಕೆ ಹಾರುವುದು; ಹಾವು ಹೆಡೆಯನ್ನು ಹಿಂದಕ್ಕೆಸೆಯಲು ಅದು ಮುಂದೆ ಹಾರುವದು'. ಕುವೆಂಪುಗೆ ತಮ್ಮ ಮುದ್ದಿನ ನಾಯಿ ಹಾವು ಕಡಿದು ಸಾಯುತ್ತದೋ ಎಂಬ ಭಯ. ಏಕೆಂದರೆ ಕೈಯಲ್ಲಿದ್ದ ರೈಫಲ್‌ನಲ್ಲಿ ಇದ್ದದ್ದು ಒಂದು ತೋಟಾದಲ್ಲಿ ಒಂದೇ ಗುಂಡು!

ಗುರಿ ತಪ್ಪಿದರೆ ಹಾವಿನ ಬದಲು ನಾಯಿ ಸಾಯಬಹುದು! 'ಹಚಾ ಹಚಾ' ಎಂದು ಎಷ್ಟು ಕೂಗಿದರೂ ನಾಯಿ ಕದಲೊಲ್ಲದು.... ಇದ್ದಕ್ಕಿದ್ದಂತೆ ಕೈಯಲ್ಲಿದ್ದ ರೈಫ಼ಲ್ಲಿನಿಂದ ಅರಣ್ಯದ ಕಡೆ ಗುಂಡು ಮೊಳಗಿಸಿದರು. ಜನ ಓಡಿ ಬಂದರು. ಬೇರೆ ನಾಯಿಗಳೂ ಬಂದವು. ಹಾವು ನಾಯಿಗಳಿಂದ ಕಚ್ಚಿಸಿಕೊಂಡು ಬಿಲದೊಳಗೆ ತಪ್ಪಿಸಿಕೊಂಡಿತು.

ಮನೆಗೆ ಹಿಂತಿರುಗುತ್ತ ಸ್ನೇಹಿತರ ಲೇವಡಿ ತಪ್ಪಿಸಿಕೊಳ್ಳಲು ಹಂದಿ ಹೊಡೆದೆ ಎಂದು ಬುರುಡೆ ಹೊಡೆಯುತ್ತಾರೆ! ಉಂಡ ಮೇಲೆ ನಿಜಸ್ಥಿತಿಯನ್ನು ವರ್ಣಿಸಿದಾಗ ಎಲ್ಲರೂ ಬಿದ್ದುಬಿದ್ದು ನಗುತ್ತಾರೆ.

ಈ ಕಥನದಲ್ಲಿ ಮಲೆನಾಡಿನ ಒಂದು ಜೀವನವೈಶಿಷ್ಟ್ಯವಾದ ಬೇಟೆಗಾರಿಕೆ ಚೆನ್ನಾಗಿ ಮನದಟ್ಟಾಗುತ್ತದೆ. ಹಾವು ಮತ್ತು ನಾಯಿಯ ಹೋರಾಟದ ಸಜ್ಜಂತೂ ಎದುರಿಗೆ ನಡೆಯುತ್ತಿದೆಯೇನೋ ಅನ್ನಿಸುವಂಥ ರಮ್ಯ ಶಬ್ದಚಿತ್ರ.

## ೨. ಕಾಡಿನಲ್ಲಿ ಕಳೆದ ಒಂದಿರುಳು

ಇದೂ ಒಂದು ಬೇಟೆಯ ಕಥನ. ದಟ್ಟವಾದ ಕಾಡಿನಲ್ಲಿ ಕುವೆಂಪು ಇಬ್ಬರು ಗೆಳೆಯರೊಡನೆ (ತಿಮ್ಮ, ಓಬು) ನಡೆದು ಮೊದಲೇ ಕಟ್ಟಿದ್ದ ಅಟ್ಟಣೆಗಳ ಮೇಲೆ ಸೇರಿ ರಾತ್ರಿ ಕಳೆದ ವರ್ಣನೆ. ಒಬ್ಬೊಬ್ಬರೂ ಹದಿನೈದು ಇಪ್ಪತ್ತು ಗಜಗಳ ದೂರದಲ್ಲಿ ಸ್ಥಾಪಿತರಾಗುತ್ತಾರೆ. ಕಾಡಿನ ಕಗ್ಗತ್ತಲೆ ಎಂದರೆ ಹೇಗಿರುವುದೆಂಬುದನ್ನು ಅನುಭವದಿಂದ ತಿಳಿಯಬೇಕಲ್ಲದೆ ಬಣ್ಣಿಸಿದರೆ ಸಾಲದು ಎನ್ನುತ್ತಾರೆ ಕುವೆಂಪು. ಕಗ್ಗತ್ತಲಿನಲ್ಲಿ ಮರದ ಬುಡದಲ್ಲಿ ಸರಸರ ಸದ್ದು. ಹಂದಿಯಿರಬಹುದೇ? ಅದು ಎಲ್ಲಿರಬಹುದೆಂದು ಊಹಿಸಿ ಗುಂಡು ಹಾರಿಸುವುದೇ? ಆದರೆ ಸರಿಯಾಗಿ ಪರೀಕ್ಷಿಸದೆ ಗುಂಡು ಹಾರಿಸಿದರೆ ಗೋವೋ ಇನ್ನು ಯಾವ ಕೊಲ್ಲಬಾರದ ಜಂತುವೋ ಆಗಿದ್ದರೆ?.... ಇದ್ದಕ್ಕಿದ್ದಂತೆ ಒಂದಿನಿತು ಚಂದ್ರನ ಹೊಳಪು ಕಾಣಿಸುತ್ತದೆ. ಬೇಟೆಗಾರ ಕಬ್ಬಿಗನಾಗುತ್ತಾನೆ. 'ಪರ್ವತ ಶಿಖರ ಶಿರೋರೇಖೆಯಲ್ಲಿ ಬೆಳೆದಿದ್ದ ಭೀಮಭೂರುಹರಾಜಿ ಜ್ಯೋತ್ಸ್ನಾಪ್ರದೀಪ್ತವಾದ ನೀಲಾಕಾಶಪಟದಲ್ಲಿ ಚಿತ್ರಿತವಾದಂತೆ ತೋರಿತು' ಸ್ವಲ್ಪ ಹೊತ್ತಿನಲ್ಲಿಯೇ ವೃಕ್ಷಮಾಲೆಗಳ ಹಿಂಗಡೆಯಲ್ಲಿ ಚಂದ್ರ! 'ಜೊನ್ನದ ಬಣ್ಣದಿ ತುಂಬಿದ ಬಿಂಬದ ಹೊನ್ನಿನ ಸೊನ್ನೆಯು ಮೂಡಿದುದು' ಈ ಸೌಂದರ್ಯೋಪಾಸನೆಯಲ್ಲಿ ಕವಿ ಮೈಮರೆತು ಕೋವಿಯಮೇಲೆ ತಲೆಯಿಟ್ಟು ನಿದ್ದೆಹೋಗುತ್ತಾರೆ. ಧಿಗ್ಗನೆ ನಿದ್ರಾಭಂಗ! ಈಡಿನ ಢಂಕಾರವೊಂದು ಸುತ್ತುಮುತ್ತಲಿನ ಪರ್ವತಕಂದರಗಳಲ್ಲಿ ಪ್ರತಿಧ್ವನಿತವಾಗಿ ಮರಳಿ ಮೌನದಲ್ಲಿ ಮುಳುಗುತ್ತಿದೆ.

ಬೆಳಗಾದೊಡನೆ ಓಬು ಹಂದಿಗೆ ಈಡು ಹೊಡೆದೆನೆಂದು ಜಂಬಕೊಚ್ಚುತ್ತಾನೆ. ಕೆಳಗೆ ನಡೆದಾಡಿದಾಗ ರಕ್ತ ಚೆಲ್ಲಿದ್ದು ಕಂಡರೂ ಪ್ರಾಣಿ ಯಾವುದೂ ಕಾಣುವುದಿಲ್ಲ. ಮನೆಯ ಕಡೆ ನಡೆಯುತ್ತ ವನದಂಚಿಗೆ ಬರುತ್ತಾರೆ. ಅಲ್ಲೊಂದು ಬಂಡೆಗಳಿಂದ ಬಯಲಾದ ಪ್ರದೇಶದಲ್ಲಿ

ನಿಂತು ನೋಡುತ್ತಾರೆ ಎಂದೂ ಮರೆಯದ ಸ್ವರ್ಗೀಯ ಸುಂದರ ದೃಶ್ಯವನ್ನು! ಈ ಕಥನದಲ್ಲಿ ಬೇಟೆಗಾರರಾಗಿ ಬನಕ್ಕೆ ಹೋದವರು ಕಬ್ಬಿಗರಾಗಿ ಮನೆಗೆ ಬರುತ್ತಾರೆ.

ಇದೊಂದು ಅರಣ್ಯಪ್ರದೇಶದ ಅದ್ವಿತೀಯ ರುದ್ರ ಗಂಭೀರ ಚಿತ್ರ. ಕುವೆಂಪು ಭಾವಾವಿಷ್ಟರಾದಂತೆ ಭಾಷೆ ಸಂಸ್ಕೃತಮಯವಾಗಿ ಕಾವ್ಯಕನ್ನಡವಾಗುತ್ತದೆ. ಅವರ ಅಸಾಧಾರಣ ಸಾಹಿತ್ಯಪ್ರಜ್ಞೆಯ ಬಳಕೆಯಲ್ಲಿ ಓದುಗ ತಾನೇ ಅನುಭವಿಸಿದಂತೆ ತೋರಿಬರುವ ಹಾಗೆ ವರ್ಣನೆ ರಂಜಿಸುತ್ತದೆ.

೩. ಅಜ್ಜಯ್ಯನ ಅಭ್ಯಂಜನ

ಎಲ್ಲ ಪ್ರಬಂಧಗಳಲ್ಲೂ ಹಿತವಾಗಿ ಹಾಸುಹೊಕ್ಕಾಗಿರುವ ಹಾಸ್ಯ ಇಲ್ಲಿ ಮಿಂಚುತ್ತದೆ. ಇದು ನಿರುದ್ವಿಗ್ನ ಮಲೆನಾಡಿನ ದಿನಚರಿಯ ಒಂದು ಸುಂದರ ಚಿತ್ರೀಕರಣ. ಪ್ರಾರಂಭದಲ್ಲಿ ನಗರದ ಅಶಾಂತತೆಗೆ ವಿರುದ್ಧವಾದ ಮಲೆನಾಡಿನ ಶಾಂತವಾತಾವರಣದ ಬಗ್ಗೆ ಕೆಲವು ಮಾತಿದೆ. ಇಲ್ಲಿ ಅಲ್ಲಿನಂತೆ ಪತ್ರಿಕೆಗಳ ಗಲಭೆ ಇಲ್ಲ. ಇಲ್ಲಿರುವುದು ಕೇವಲ ಶಾಂತಿ. ವನ್ಯವಾದರೂ ಅನಾಗರಿಕವಲ್ಲದ್ದು. ಸುತ್ತ ಮಾಲೆಮಾಲೆಯಾದ ಮಲೆಗಳು, ದಟ್ಟವಾದ ಕಾಡುಗಳು. ಹಕ್ಕಿಯ ಜೋಗುಳ. ಮೇಲೆ ನೀಲಾಕಾಶ, ಅನಂತ ಅಪಾರ ಪ್ರಶಾಂತ. ನಗರದಲ್ಲಾದರೋ 'ಸಾಯಂಕಾಲದಲ್ಲಿ ದಿನದ ಬೇಸರವನ್ನು ಪರಿಹರಿಸಿಕೊಳ್ಳಬೇಕೆಂದು ಉಪನ್ಯಾಸಮಂದಿರಗಳಿಗೆ ಹೋಗಿ ನೀರಸವಾದ ಭಾಷಣಗಳನ್ನು ಕೇಳಿ ಬೇಜಾರಿಗೆ ಬದಲಾಗಿ ಅಶಾಂತಿಯನ್ನು ತುಂಬಿಕೊಂಡು ಗೊಣಗುತ್ತ ಹಿಂತಿರುಗುವ ಪ್ರಸಂಗ'.

ಇಂತಹ ಶಾಂತಿಪ್ರಪಂಚವೆನಿಸಿದ ಮಲೆನಾಡಿನಲ್ಲಿ ಕ್ರಾಂತಿಕಾಲಗಳು ಇಲ್ಲದೆ ಇಲ್ಲ. ಪೋಲೀಸರ ಕಾಟ, ಜಮಾಬಂದಿ ಇತ್ಯಾದಿ. ಇವುಗಳ ಜತೆ ಇನ್ನೊಂದಿದೆ - ಅದೆಂದರೆ ಅಭ್ಯಂಜನ! ಆ ದಿನ ಮನೆಯಲ್ಲಿ ಗಲಭೆಯೋ ಗಲಭೆ. ಕುವೆಂಪು ಹುಡುಗರಾಗಿದ್ದಾಗ ಅವರಿಗೆ ಪಾಠಹೇಳಿಕೊಡಲು ಇದ್ದ ಐಗಳು ಎಣ್ಣೆಹಚ್ಚಿ ತಿಕ್ಕಿ ಅಭ್ಯಂಗ ಮಾಡಿಸುತ್ತಿದ್ದುದನ್ನು ನೆನೆಯುತ್ತಾರೆ. ಹುಡುಗರಿಗೆ ಅಭ್ಯಂಗದ ದಿನ ಕಾಡಿನಲ್ಲಿ ಪೋಲಿ ಅಲೆಯಲು ಅವಕಾಶವಿಲ್ಲ. ಮನೆಯಲ್ಲಿ ಬೆಳಿಗ್ಗೆ ಆರು ಗಂಟೆಯಿಂದ ರಾತ್ರಿ ಎಂಟರವರೆಗೂ ಎಣ್ಣೆಸ್ನಾನದ ತೀರ್ಥಯಾತ್ರೆ! ಅದೇನು ಒಬ್ಬರೇ ಇಬ್ಬರೇ? ಮನೆಮಂದಿಗೆಲ್ಲ ಅಭ್ಯಂಗ!

ಅಜ್ಜಯ್ಯನ ಅಭ್ಯಂಗವೇ ಅರ್ಧದಿನವೆಲ್ಲ ಆಗುತ್ತಿತ್ತು. 'ಅವರು ವಯಸ್ಸಾದವರು. ದೇವರಲ್ಲಿ ಬಹಳ ಭಕ್ತಿ. ಕಳ್ಳನ್ನು ಬಹಳ ಮಿತವರಿತು ತೀರ್ಥದಂತೆ ಪಾನಮಾಡುತ್ತಿದ್ದರು. ಅನ್ನಕ್ಕಿಂತಲೂ ಅಭ್ಯಂಜನವೇ ಶ್ರೇಷ್ಠ ಎನ್ನುವುದು ಅವರ ಧ್ಯೇಯೋಕ್ತಿಯಾಗಿತ್ತು.' ಮನೆಯ ಭಾರೀ ಬಚ್ಚಲುಮನೆಯಲ್ಲಿ ಒಂದು ದೊಡ್ಡ ಒಲೆ. ಮೇಲೆ ಎರಡು ಹಂಡೆಗಳನ್ನು ಹೂಳಿಡುತ್ತಿದ್ದರು. ನೀರು ತಕಪಕ ಕುದಿಯುತ್ತಿರಬೇಕು. ಅಲ್ಲಿಂದ ನೀರು ತೆಗೆದು ಬೇರೆ ಕಡಾಯಿಗಳಿಗೆ ಹಾಕಿ ತಣ್ಣೀರು ಬೆರಸಿ ಹದ ಮಾಡಲು ಇಬ್ಬರು ಆಳುಗಳು.... ಅಭ್ಯಂಗದಲ್ಲಿ

ಬಿಸಿನೀರನ್ನು ಉಪಯೋಗಿಸುವುದಿಲ್ಲ - ಬರೀ ಸುಡುನೀರೇ! ಎಷ್ಟೋ ಸಾರಿ ಹುಡುಗರನ್ನು ಬಲಾತ್ಕಾರದಿಂದ ಎಳೆದುಕೊಂಡುಹೋಗಿ ಆ ನೀರಿನಲ್ಲಿ ಅದ್ದಿದಾಗ ಅವರು ಕಿಟಾರನೆ ಕಿರಿಚಿಕೊಂಡು ಕಲ್ಲಿನ ಮೇಲೆ ಬಿದ್ದು ಗಾಯಮಾಡಿಕೊಂಡದ್ದೂ ಉಂಟು. ಎಣ್ಣೆ ಹಾಕುವಾಗಲಂತೂ ಹುಡುಗರ ಪಾಡು ಬೇಡ. ತಲೆಯಿಂದ ಇಳಿದ ಎಣ್ಣೆ 'ಲಲಾಟಮಾರ್ಗವಾಗಿ ಭ್ರೂಮಧ್ಯೆ ಇಳಿದು ಕಮಲನಯನಗಳನ್ನು ಪ್ರವೇಶಿಸಿದಾಗ' ನೆಗೆನೆಗೆದುಬಿದ್ದು ಕಿರಿಚಾಟ! ಸರಿ, ಐಗಳು ಇನ್ನೊಬ್ಬನಿಗೆ ಎಣ್ಣೆ ತಿಕ್ಕುವುದನ್ನು ಕೂಡಲೆ ಬಿಟ್ಟು ಬೊಬ್ಬೆಯಿಡುವ ಹುಡುಗನ ಶುಶ್ರೂಷೆಗೆ ತೊಡಗಬೇಕು!

ಅಜ್ಜಯ್ಯ ಪುರಾಣಪ್ರಸಿದ್ಧರ ಹೆಸರುಗಳನ್ನು ವಟಗುಟ್ಟುತ್ತ ದೇಹದ ವಿವಿಧ ಭಾಗಗಳಲ್ಲಿ ಎಣ್ಣೆಯ ಬಟ್ಟುಗಳನ್ನಿಟ್ಟುಕೊಂಡು ಆಳಿಗೆ ಉಜ್ಜಲು ಅಪ್ಪಣೆ ಕೊಡುವರು. ಮಕ್ಕಳು ಈ ಪ್ರಾರಂಭೋತ್ಸವವನ್ನು ಭಯಭಕ್ತಿಯಿಂದ ನೋಡುತ್ತಿದ್ದುದು ಸಾಮಾನ್ಯ. ಅಜ್ಜಯ್ಯ ಮೀಯುವ ನೀರಿಗೆ ಕೈಯ್ಯಿಟ್ಟರೆ ಫಕ್ಕನೆ ಹೊರಕ್ಕೆಳೆದುಕೊಳ್ಳಬೇಕಾಗುವಷ್ಟು ಬಿಸಿ! ಮೊದಲ ಬಾರಿ ಬಿಸಿನೀರಲ್ಲಿ ಮಿಂದೊಡನೆ ಮೂರ್ಛೆ! ಅಷ್ಟು ಸುಡುನೀರಲ್ಲಿ ಮಿಂದರೆ ಜ್ಞಾನ ತಪ್ಪದೆ ಇನ್ನೇನು? ನಂತರ ಅಜ್ಜಯ್ಯ ದೀರ್ಘಕಾಲ ಮಲಗುವರು. ಎದ್ದನಂತರ ಪಾನಕಸೇವನೆ. ಕೂಡಲೆ ಒಬ್ಬರಲ್ಲ ಇಬ್ಬರು ಚೊಂಬುಗಳಲ್ಲಿ ಕಡಾಯಿಯಿಂದ ಮೊಗೆಮೊಗೆದು ನೀರನ್ನು ಎತ್ತರದಿಂದ ರಪ್ ರಪ್ ಎಂದು ನೆತ್ತಿಗೆ ಹೊಡೆಯುವರು. ನಂತರದಲ್ಲಿ ಆಳುಗಳು ಮೈಕೈಗಳನ್ನೂ ತಲೆಯನ್ನೂ ಸೀಗೆಯಿಂದ ಉಜ್ಜುವರು. ಪುನಃ ಮೂರ್ಛೆ! ಕೆಲವರು ಪಾನಕ ಕುಡಿಸುವರು, ಕೆಲವರು ಗಾಳಿ ಬೀಸುವರು.... ತೋಟದಾಚೆಯ ಭೂತರಾಯನಿಗೆ ಅಂಗಲಾಚುವರು! ಅಂತೂ ಅಜ್ಜಯ್ಯ ಎದ್ದು ನಾರಾಯಣ ಎಂದು, ಪುನಃ ಜಳಕ. ಪುನಃ ಮೂರ್ಛೆ!

ಜಳಕ ಮುಗಿದಕೂಡಲೆ ಕಂಬಳಿ ಹೊದ್ದು ಮಲಗಿಬಿಡುವರು. ಆ ರಾತ್ರಿ ಊಟವಿಲ್ಲ ಬರೀ ಹಾಲು.

ಅಜ್ಜಯ್ಯನ ಕಾಲವಾದಮೇಲೆ ಅಭ್ಯಂಗಮಹೋತ್ಸವವೂ ಮುಗಿಯಿತು!

ಹಾಸ್ಯದ ಹೊನಲು ಹರಿಸುವ, ಈಗ ನೋಡಲು ಕಾಣಸಿಗದ ಮುಗ್ಧಮನೋರಂಜಕ ಚಿತ್ರ.

### ೪. ಬಂದನಾ ಹುಲಿರಾಯನು

ಇದು ಇನ್ನೊಂದು ಬೇಟೆಯ ಪ್ರಸಂಗ - ರಂಗಯ್ಯನ ಮರಸುಬೇಟೆಯದು. ಮಲೆನಾಡಿನ ಕಾಡುಗಳಲ್ಲಿ ಹಣ್ಣಿನ ಮರಗಳಿಗೇನೂ ಬರಗಾಲವಿಲ್ಲ. ಕಾಡುಮಾವು, ಕಣಗಿಲು ಹಣ್ಣು, ಗೋಳಮಟೆ ಹಣ್ಣು, ಹೆಬ್ಬಲಸು - ಹೀಗೆ ಅನೇಕ. ಕಾಡುಪ್ರಾಣಿಗಳು ಹಣ್ಣಿನ ಕಂಪು ಹಿಡಿದು 'ಕಂಡಿ'ಗಳಿಗೆ ಬರುವುದನ್ನೇ ಕಾದು ಮರೆಯಿಂದ

ಬೇಟೆಯಾಡುವುದೇ ಮರಸುಬೇಟೆ. ರಂಗಯ್ಯ ಸಾಯಂಕಾಲ ಕೋವಿಯೊಂದನ್ನು ಹೆಗಲಮೇಲೆ ಹೇರಿಕೊಂಡು, ಕಂಬಳಿ ಹೊದ್ದು ಎಲೆಯಡಿಕೆ ಚೀಲ ಬಗಲಿಗೆ ಸಿಕ್ಕಿಸಿಕೊಂಡು ಬೆಟ್ಟ ಏರುತ್ತಾನೆ. ನಾಲ್ಕೈದು ಕಂಡಿಗಳನ್ನು ಪರೀಕ್ಷಿಸಿ ಒಂದನ್ನು ಆರಿಸಿಕೊಂಡು ಸುತ್ತಿನ ಪೊದೆಗಳನ್ನು ಕಡಿದುಹಾಕಿ ನಡುವೆ ಮರೆಯಾಗಿ ಮರಸು ಕೂರುತ್ತಾನೆ.

ಮರಸಿಗೆ ಕೂತವರು ಅಲ್ಲಾಡುವಂತಿಲ್ಲ. ಎಷ್ಟೋ ಹೊತ್ತು ರಂಗಯ್ಯ ಅಲ್ಲಾಡದೆ ಕೂತಿದ್ದ. ಇಲ್ಲಿ ಧೂಮಪಾನ ಮಾಡುವಂತಿಲ್ಲ - ಪ್ರಾಣಿಗಳು ಇರಲಿ ಸೊಳ್ಳೆಗಳೂ ಹತ್ತಿರ ಸುಳಿಯುವುದಿಲ್ಲ. ರಂಗಯ್ಯ ಕೂತೇ ಕೂತ. ನಿಧಾನವಾಗಿ ಎಲೆ ತೆಗೆದು ನೀವಿ ಸುಣ್ಣ ಬಳಿದು ಅಡಿಕೆ ತುಂಬಿ ಗಾಣಕ್ಕೆ ಕಬ್ಬು ಕೊಡುವಂತೆ ಬಾಯಿಮೂಲೆಯಿಂದ ಎಲೆಯನ್ನು ಒಳಗೆ ತೂರಿಸಿದ. ಹೊಗೆಸೊಪ್ಪು ತೆಗೆದು ಮೆಲ್ಲಗೆ ತೀಡಲಾರಂಭಿಸಿದ. ಬಾಯಿಗೆ ಹಾಕಿಕೊಳ್ಳಲು ತಲೆಯೆತ್ತಿ ಮುಂದೆ ನೋಡುತ್ತಾನೆ, ಎದುರು ಒಂದೂವರೆ ಮಾರು ದೂರದಲ್ಲಿ ಕೂತಿದೆ ಹೆಬ್ಬುಲಿ!

ರಂಗಯ್ಯ ಅಂಜುಬುರುಕನೇನಲ್ಲ. ಎಷ್ಟೋ ಪ್ರಾಣಿಗಳನ್ನೂ ಹುಲಿಗಳನ್ನೂ ಹಿಂದೆ ಕೊಂದಿದ್ದುಂಟು. ಆದರೆ ಈಗ.... ದೊಡ್ಡ ಹುಲಿ ಎದುರಿನಲ್ಲೇ ಕೂತಿದೆ! 'ಹಾಳು ಹೆಬ್ಬುಲಿ, ಕೆಲವು ಅತಿಥಿಗಳಂತೆ, ಹೇಳದೆ ಕೇಳದೆ, ಒಂದಿನಿತು ಸದ್ದನ್ನು ಕೂಡ ಮಾಡದೆ ಅಲ್ಲಿ ಬಂದು ಕುಳಿತದ್ದು, ತಲ್ಲೀನನಾಗಿದ್ದ ಅವನ ದೃಷ್ಟಿಗೆ ಬೀಳಲೇ ಇಲ್ಲ.... ಅವನಿಗೆ ಇದ್ದಕ್ಕಿದ್ದಹಾಗೆ ಲೋಕಗಳೆಲ್ಲಾ ಮುಳುಗಿಹೋದಂತಾಯಿತು' ಬಾಯಿ ಎಲೆಯಡಿಕೆ ಜಗಿಯುವುದನ್ನು ನಿಲ್ಲಿಸಿತು. ಚಳಿಗಾಳಿಯಲ್ಲಿ ಸೆಖೆ ಆರಂಭವಾಯಿತು. ಹಣೆ ಬೆವರಿಹೋಯಿತು.

ಹುಲಿ ಕುಹಕ ಮೋಸ ತುಂಬಿದ ಹೀನಜಂತು ಎಂದು ಕುವೆಂಪು ಇಲ್ಲಿ ಬರೆಯುತ್ತಾರೆ. ಭಯಂಕರ ವ್ಯಕ್ತಿತ್ವಕ್ಕೆ ತಕ್ಕ ಆತ್ಮಗೌರವ ಇಲ್ಲದ ಪ್ರಾಣಿ. ಬೇರೆ ಯಾವ ಪ್ರಾಣಿಯೂ ಕಾಡಲ್ಲಿ ಓಡಾಡಿದರೆ ಸರ ಸರ ಸದ್ದಾಗುತ್ತದೆ. ಹುಲಿ ಮಾತ್ರ ಸ್ವಲ್ಪವೂ ಸದ್ದುಮಾಡದೆ ಸಂಚರಿಸಬಲ್ಲುದು. ಈ ಕಾರಣದಿಂದ ಹುಲಿ ಬಂದು ಕೂತದ್ದು ರಂಗಯ್ಯನಿಗೆ ಗೊತ್ತಾಗಿಯೇ ಇಲ್ಲ. ಎದುರಿಗೆ ಮೀಸೆ ಕುಣಿಸುತ್ತ, ವನಪ್ರಾಂತವನ್ನು ಅತ್ತ ಇತ್ತ ನೋಡುತ್ತ ಸರಿಯಾದ ಆಳಿನ ಎದೆಯೆತ್ತರ ಕೂತಿದೆ!

ರಂಗಯ್ಯನ ಬಳಿ ಇದ್ದದ್ದು ಒಂಟಿನಳಿಗೆ ಕೋವಿ, ದೇಹ ಕಂಪಿಸಲು ಆರಂಭವಾಯಿತು. ಜೀವದ ಮೇಲೆ ಆಸೆ ಬಿಟ್ಟ. ಹೆಂಡಿರು ಮಕ್ಕಳನ್ನು ನೆನೆದ. ಕಣ್ಣೀರು ಹರಿಯಿತು. ತೋಟ ಮನೆ ನೆನೆದ. ಇಷ್ಟರಲ್ಲಿ ಹುಲಿ ಒಮ್ಮೆ ಗರ್ಜಿಸಿತು, - 'ಮರಣಕ್ಕೆ ಸಿದ್ಧನಾಗು' ಎಂದು ಹೇಳಿದಂತೆ! ದೇವತೆಗಳಿಗೆ ಹರಕೆಹೊತ್ತ.

ಹುಲಿಗಳು ಮನುಷ್ಯರ ಸದ್ದನ್ನು ಕೇಳಿದರೆ ಓಡಿಹೋಗುತ್ತವೆ ಎಂದು ಅವನು ತಿಳಿದಿದ್ದುದು ಈಗ ನೆನಪಿಗೆ ಬಂತು. ಸದ್ದು ಮಾಡಲು ಧೈರ್ಯಮಾಡಿ, 'ಹೋ!' ಎಂದು

ಕೂಗಿದ. ಇನ್ನೊಂದು ಸಾರಿ ಕೂಗಿದ. ಹಾಳು ಹುಲಿಗೆ ಕಿವುಡೋ? ನಿರಾಶೆಯಿಂದ ನಿರ್ಲಕ್ಷ್ಯತೆ - ಮೊಂಡಕೆಚ್ಚು ಜನಿಸಿತು. 'ಹೋ....!' ಎಂದು ಗಟ್ಟಿಯಾಗಿ ಅರಚಲು ಆರಂಭಿಸಿದ. ಹುಲಿ ಕೂತೇ ಇತ್ತು! ರಂಗಯ್ಯನ ಕೂಗು ಮಾಲೆಮಾಲೆಯಾಗಿ ಮನೆ ಮುಟ್ಟಿತು. ಅವನ ತಮ್ಮ ಸಿದ್ದ ಕೋವಿಹಿಡಿದು ಸದ್ದಾದ ಸ್ಥಳಕ್ಕೆ ಕೂಗುತ್ತ ಓಡಿಬಂದ. ಹುಲಿ ತಟಕ್ಕನೆ ಕಣ್ಮರೆಯಾಯಿತು.

ಈ ಸಂಗತಿ ರಂಗಯ್ಯನ ಬಾಯಿಂದಲೇ ಕುವೆಂಪು ಕೇಳಿದರಂತೆ. ಕಥನದ ಉದ್ದಕ್ಕೂ ಅನಿಶ್ಚಿತತೆ, ಆತಂಕ ತುಂಬಿ ಮುಂದೆ ಏನಾಯಿತು ಎಂದು ಆತುರಬಿಟ್ಟು ಓದುವಂತೆ ಮಾಡುತ್ತದೆ. ಮಲೆನಾಡಿನಲ್ಲಿ ಹಸು ಕುರಿ ಮುಂತಾದವನ್ನು ಹೊಡೆದುಹಾಕುವ ಹುಲಿಯ ಬಗ್ಗೆ ಜನಕ್ಕೆ ಕನಿಕರ ಇರುವುದಿಲ್ಲ. ಅದನ್ನು ಬೇಟೆಯಾಡಿದರೆ ಅನೇಕಾನೇಕ ಸಾಕುಪ್ರಾಣಿಗಳನ್ನು ರಕ್ಷಿಸಿದಂತೆ ಎಂದೇ ಗಣಿಸುತ್ತಾರೆ.

೫. ಪುಟ್ಟಾಚಾರಿಯ ಕಾಡುಕೋಳಿ

ಪುಟ್ಟಾಚಾರಿ ಊರಿನ ದೊಡ್ಡ ಬೇಟೆಗಾರ. ಒಂದು ಬಾರಿ ತಿಂಗಳು ಬೆಳಕಿನ ರಾತ್ರಿ ಕಡವೆ ಬೇಟೆಗೆಂದು ಹೊರಟವನು ಕತ್ತಲಲ್ಲಿ ತಿಳಿಯದೆ ಎರಡು ಎತ್ತುಗಳನ್ನು ಗುಂಡಿಟ್ಟು ಕೊಂದು ಊರಿನವರ ತಿರಸ್ಕಾರಕ್ಕೆ ಪಾತ್ರನಾಗಿದ್ದ. ಕಡೆಗಾಲದಲ್ಲಿ ದಿಕ್ಕಿಲ್ಲದೆ ಯಾರಿಗೂ ಬೇಡವಾಗಿ ನರಳಿ ಸತ್ತ. ಅವನು ಬದುಕಿದ್ದಾಗ ಎಷ್ಟೋ ಹುಲಿಗಳನ್ನು ಕೊಂದು ಅನೇಕಾನೇಕ ಸಾಕುಪ್ರಾಣಿಗಳನ್ನು ರಕ್ಷಿಸಿದ್ದ ಎಂಬುದನ್ನು ಜನ ಮರೆತೇ ಬಿಟ್ಟಿದ್ದರು. ಇದನ್ನು ಹೇಳಿದ ನಂತರ ಪುಟ್ಟಪ್ಪನವರು ಪುಟ್ಟಾಚಾರಿ ಒಮ್ಮೆ ಕಾಡುಕೋಳಿಯನ್ನು ಬೇಟೆಯಾಡಿದ ಪ್ರಸಂಗವನ್ನು ನಿರೂಪಿಸುತ್ತಾರೆ. ಕಾಡುಕೋಳಿ ಕೂಗಿದ್ದು ಕೇಳಿದ ಒಂದು ಬೆಳಗ್ಗೆ ಪುಟ್ಟಾಚಾರಿ ಕೋವಿ ಹಿಡಿದು ಹೊರಡುತ್ತಾನೆ. ಕಾಡಿನಲ್ಲಿ ಸುತ್ತಿಯೇ ಸುತ್ತಿದರೂ ಒಂದೂ ಕಣ್ಣಿಗೆ ಕಾಣುವುದಿಲ್ಲ. ದೂರದಲ್ಲಿ ಅಲ್ಲೊಂದು ಹೆಣ್ಣು ಹೆಬ್ಬುಲಿ ಎದೆಯೆತ್ತರದ ಹುಲ್ಲಿನ ನಡುವೆ ಮರಿಗಳೊಂದಿಗೆ ಕೂತಿದೆ; ಅದರ ಬಾಲ ಹುಲ್ಲಿನ ಮೇಲೆ ಕಾಣಿಸಿದ್ದು ಹುಂಜದ ಪುಕ್ಕವಿರಬೇಕು ಎಂದು ಪುಟ್ಟಾಚಾರಿ ಭಾವಿಸುತ್ತಾನೆ.

ಮುಂದೆ ಮಂಡಿಯೂರಿ ಮೆಲ್ಲಗೆ ನಡೆದು ಕೋವಿ ಹಾರಿಸಲು ಎದ್ದು ನಿಂತು ನೋಡುತ್ತಾನೆ. ಅಲ್ಲಿ ಕೋಳಿಗೆ ಬದಲು 'ಬಣ್ಣಬಣ್ಣದ, ಕಣ್ಣುಕಟ್ಟಿನ, ನಿಂತ ಮೀಸೆಯ ನಿಮಿರ್ದ ಕಿವಿಗಳ, ಚಿಲಿದ ಹಲ್ಗಳ ಹೆಬ್ಬುಲಿಯ ಹೆಮ್ಮಂಡೆ'. ಇವನನ್ನು ನೋಡಿ ಅದು ಓಡಿಹೋಗದೆ ಮರಿಗಳಿದ್ದುದರಿಂದ ಅಲ್ಲೇ ನಿಂತು ಗುರ್ರೆನ್ನುತ್ತಿದೆ! ಅತ್ಯಂತ ಅಪಾಯಕಾರೀ ಸಂದರ್ಭ. ಯಾವಾಗ ಅದು ನೆಗೆಯುವಂತೆ ನಟಿಸಿತೋ ಆಗಲೇ ಆಚಾರಿಯೂ ಕೋವಿ ಸಿದ್ಧಮಾಡಿ ನಿಲ್ಲುತ್ತಾನೆ, ಸುಮ್ಮನೆ ಸಾಯುವುದಕ್ಕಿಂತ ಗುಂಡು ತಗುಲಿಸಿಯೇ ಸಾಯುತ್ತೇನೆ ಎನ್ನುತ್ತ.

ಇಬ್ಬರಿಗೂ ಪ್ರಾಣಸಂಕಟ. ಹುಲಿಗೆ ಮರಿಗಳ ಮೇಲೆ ಆಸೆ, ಇವನಿಗೆ ತನ್ನ ಜೀವದಾಸೆ.... ಮೆಲ್ಲಗೆ ಒಂದೊಂದೇ ಹಗುರ ಹೆಜ್ಜೆ ಹಿಂದು ಹಿಂದಕ್ಕೆ ಹಾಕುತ್ತ ನಡೆಯಲು ಆರಂಭಿಸುತ್ತಾನೆ. ಎರಡು ಗಂಟೆ ನಡೆದು ಮರೆಯಾದ ಸ್ಥಳಕ್ಕೆ ಬಂದು ಈಡು ಹಾರಿಸುವ ಯೋಚನೆ ಮಾಡುವುದರೊಳಗೆ ಹುಲಿ ಮರಿಗಳೊಡನೆ ಮಾಯವಾಗಿರುತ್ತದೆ.

ಯಜಮಾನ ಗೌಡರು ಅವನು ಬರಿಗೈಯಲ್ಲಿ ಬಂದುದಕ್ಕೆ ಬಯ್ಯುತ್ತಾರೆ! ಕಥೆಯನ್ನು ಕೇಳಿದ ಇತರರು ಅಸಡ್ಡೆ ಮಾಡುತ್ತಾರೆ. ಸಾವಿನ ದವಡೆಯಿಂದ ಪಾರಾಗಿ ಬಂದದ್ದು ಯಾರಿಗೂ ಬೇಕಿಲ್ಲ. ಅವನು ಹುಲಿಯನ್ನು ಕೊಂದಿದ್ದರೆ ಎಲ್ಲರೂ ಹೊಗಳುತ್ತಿದ್ದರು....

ಮೈ ನವಿರೇಳಿಸುವ ಕಥನಕ್ರಮ. ಮುಗ್ಧ ಹಳ್ಳಿಮುಕ್ಕ ಪುಟ್ಟಚಾರಿಯನ್ನು ಕಂಡರೆ ತಮ್ಮ ಮೂಗಿನ ನೇರಕ್ಕೇ ಸದಾ ನೋಡುವ ಊರಿನ ಜನಕ್ಕೆ ಅಸಡ್ಡೆ.

## ೬. ಮನೆಯ ಶಾಲೆಯ ಐಗಳ ಮಾಲೆ

ಪುಟ್ಟಪ್ಪನವರು ಕುಪ್ಪಳಿಯಲ್ಲಿ ಎಳೆಯ ಹುಡುಗನಾಗಿದ್ದಾಗ ಮನೆಯಲ್ಲಿ ಪಾಠ ಕಲಿಸಲು ಐಗಳನ್ನು ನೇಮಿಸುತ್ತಿದ್ದರು. ಈ ಪ್ರಬಂಧಗಳಲ್ಲಿ ಐಗಳ ಕಿರುಚಿತ್ರಗಳು ಕಾಣುತ್ತವೆ. ಮೊದಲನೆಯವರು ಕನ್ನಡ ಜಿಲ್ಲೆಯಿಂದ ಬಂದವರು. ಅವರು ವಿದ್ಯಾವಂತರಾಗಿದ್ದರಂತೆ. ಆದರೆ ಯಾವಾಗಲೂ ಉಪ್ಪರಿಗೆಯ ಮೇಲಿನ ಮಳಿಗೆಯೊಳಗೆ ಮಲಗಿಯೇ ಇರುತ್ತಿದ್ದರು. ಮಳಿಗೆಯ ಈಚೆಗೆ ಉಪನ್ಯಾಸಮಂದಿರ. ಒಬ್ಬೊಬ್ಬರಿಗೆ ಒಂದು ಕಡೆ ಮರಳಿನ ಸ್ಲೇಟು. ಬೆರಳುಗಳನ್ನು ಮರಳ ಮೇಲಿಟ್ಟು ಅದುಮಿ ತಿಕ್ಕಿ ಕಣ್ಣೀರು ಬರಿಸಿ ಎರಡು ಪೆಟ್ಟು ಕೊಟ್ಟು ಮೇಲೆ ಹೋಗಿ ಮಲಗುತ್ತಿದ್ದರಂತೆ! ಹೀಗೆ ಮುಂದೆ ಹತ್ತು ಹದಿನೈದು ಐಗಳು ಬಂದು ಹೋದರೆಂದು ಬರೆಯುತ್ತಾರೆ. ಐಗಳು ಓಡಿಹೋಗುತ್ತಿದ್ದುದೂ ಮಕ್ಕಳ ತುಂಟಾಟ ತಡೆಯಲಾರದೆ.... ಅಜ್ಜಯ್ಯನ ನಶ್ಯದ ಡಬ್ಬಿ ಎಗರಿಸುವುದು, ಬಾಳೆಗೊನೆ ಲಪಟಾಯಿಸುವುದು, ಹಲಸಿನ ಮರ ಹತ್ತಿ ಬೀಳುವುದು, ಐಗಳು ಸೇದಿ ಬಿಸಾಡಿದ ಬೀಡಿತುಂಡುಗಳನ್ನು ಹೊತ್ತಿಸಿ ಗುಟ್ಟಾಗಿ ಸೇದುವುದು.... ಏನು ಒಂದೇ ಎರಡೇ!

ಕಡೆಗೊಂದು ಬಾರಿ ಮಂಗಳೂರಿನ ಕ್ಯಾಥೊಲಿಕ್ ಪಂಗಡದ ಆನಂದರಾಯರು ಐಗಳಾಗಿ ಬಂದರು. ಅವರು ಇಂಗ್ಲಿಷ್ ಅಕ್ಷರ ಕಲಿಸಿದರು. ಯದ್ವಾತದ್ವಾ ಬೈಯುತ್ತಿರಲಿಲ್ಲ. ಪುಟ್ಟಪ್ಪನವರು ಇವರೇ ವಿದ್ಯಾಭ್ಯಾಸದಲ್ಲಿ ಆದರ ಉತ್ಸಾಹ ಹುಟ್ಟಿಸಿದ ಪ್ರಥಮ ಗುರುಗಳು ಎನ್ನುತ್ತಾರೆ. ಈ ಗುರುಗಳು ಗಣಿತ ಹೇಳಿಕೊಟ್ಟರು, ಯವನ ಯಾಮಿನೀ ಕಥೆಗಳನ್ನು ಓದಿ ಹೇಳಿದರು....

ಕುತೂಹಲ ಕೆರಳಿಸುವ, ಕವಿಯ ಬಾಲಶಿಕ್ಷಣದ ಕಥನ!

## ೭. ತೋಟದಾಚೆಯ ಭೂತ

ಮಲೆನಾಡಿನ ಜನಕ್ಕೆ ಜೀವನದ ಆಸರೆಯಾಗಿ ಒಂದು ಭೂತ ಇರುತ್ತದೆ ಎಂದು ಕುವೆಂಪು ಈ ಪ್ರಬಂಧದಲ್ಲಿ ಹಾಸ್ಯದೊಂದಿಗೆ ತಿಳಿಯಹೇಳುತ್ತಾರೆ. ಆಧುನಿಕರಿಗೇನೋ ಭೂತವೆಂದರೆ ಪರಿಹಾಸ್ಯಮಾಡಿ ನಗಬಹುದಾದ ತೃಣವಿಷಯ. ಆದರೆ ಹಳ್ಳಿಗನ ಜೀವನದಲ್ಲಿ ಅದು ಎಂದೂ ಅಗಲದೆ ಇದ್ದು ನಿತ್ಯವಾಗಿರುವ ಅಂಶ. ಭೂತದ ಮಹಿಮೆಯಲ್ಲಿ ಹಳ್ಳಿಗನಿಗೆ ಸಾವು ಗ್ರಹಿಸಲಸದಳವಾದ ನಂಬಿಕೆ. ಅಲ್ಲದೆ ಆ ನಂಬಿಕೆಯ ಮೇಲೇ ಅವನು ಜೀವಿಸುತ್ತಾನೆ ಎನ್ನುತ್ತಾರೆ. ಇದನ್ನು ಪುಷ್ಟೀಕರಿಸಲು ಒಂದು ಸಂಗತಿ ನಿರೂಪಿಸುತ್ತಾರೆ. ಒಂದು ಸಂಜೆ ಉಪ್ಪರಿಗೆಯಲ್ಲಿ ಕುವೆಂಪು ಓದುತ್ತ ಕುಳಿತಿದ್ದಾಗ ಮನೆಯ ಅಡಿಗೆಯವ - ನಂಜ - ಏದುತ್ತಾ ಓಡಿಬಂದು ಒಂದು ಎಮ್ಮೆಕರು ಸಾಯಲಿಕ್ಕಾಗಿದೆ, ಬಿದ್ದು ಒದ್ದಾಡುತ್ತಿದೆ ಎನ್ನುತ್ತಾನೆ. ಸರಿ, ಎಲ್ಲ ಕೊಟ್ಟಿಗೆಗೆ ಓಡಿದರು. ನೋಡಿದರೆ ಅದರ ಹೊಟ್ಟೆ ಬಾತು ಬಾಯಲ್ಲಿ ನೊರೆಯುತ್ತ ಶೋಚನೀಯ ಸ್ಥಿತಿಯಲ್ಲಿತ್ತು. ಅಲ್ಲಿಗೆ ಬಂದ ದೊಡ್ಡಮ್ಮ 'ಇದೆಲ್ಲ ಭೂತರಾಯನ ಚೇಷ್ಟೆ ಒಂದು ಕಾಯಿ ಸುಳಿದಿಟ್ಟು ಹೇಳಿಕೊಳ್ಳಿ' ಎಂದು ಹೇಳಿದರು. ಆದರೆ ಕುವೆಂಪು ಜತೆಗಾರ ಪುಟ್ಟಣ್ಣ ಕರುವಿನ ಮುಸುಡಿಯನ್ನು ಮೂಸಿ 'ಇದು ಮತ್ತೇನೂ ಅಲ್ಲ, ಬಳ್ಳಿ ಮುಟ್ಟಿದ್ದು' ಎಂದವನೇ ಔಷಧ ತರಲು ಗುಡ್ಡದ ಕಡೆ ಓಡಿದ. ಮಲೆನಾಡಿನಲ್ಲಿ ಬಳ್ಳಿ ಮುಟ್ಟಿತು ಎಂದರೆ ಹಾವು ಕಡಿಯಿತು ಎಂಬ ಅರ್ಥ.

ಪುಟ್ಟಣ್ಣ ಔಷಧ ತರುವಷ್ಟರಲ್ಲಿ ಅಡಿಗೆ ನಂಜ ಒಂದು ಕಾಯಿ ತಂದು ಕರುವಿಗೆ ಪ್ರದಕ್ಷಿಣೆ ಬರಿಸಿ ಭೂತರಾಯ ಏನಿದ್ದರೂ ಇದರ ಮೇಲೆಯೇ ನಿಲ್ಲಲಿ! ಏನು ಮುಟ್ಟು ಚಿಟ್ಟು ಆಗಿದ್ದರೂ ಎಲ್ಲಾ ಹರಕೆಯ ದಿನ ಭಟ್ಟರಿಂದ ಶುದ್ಧಿಮಾಡಿಸುತ್ತೇನೆ ಎಂದು ತೋಟದ ದಿಕ್ಕಿಗೆ ಕೈಮುಗಿದು ಮುಡುಪುಕಟ್ಟಿದ. ಸ್ವಲ್ಪ ಹೊತ್ತಿನಲ್ಲಿ ನಿಂತಿದ್ದವರು 'ಈಗ ಕರು ಒದ್ದಾಟ ಕಮ್ಮಿ ಮಾಡಿತು. ಭೂತರಾಯನ ಚೇಷ್ಟೆಯೇ ಹೌದು' ಎನ್ನುವ ಮೊದಲು ಮಾಡಿದರು.

ಅಷ್ಟರಲ್ಲಿ ಪುಟ್ಟಣ್ಣ ಔಷಧ ತಂದು ಹಾಕುತ್ತಾನೆ. ಕರು ಐದು ನಿಮಿಷದೊಳಗೆ ಎದ್ದು ನಿಲ್ಲುತ್ತದೆ. ಎಲ್ಲರೂ ಭೂತರಾಯನ ಶಕ್ತಿಯನ್ನೇ ಕುರಿತು ಮಾತನಾಡುವವರೇ ಹೊರತು ಪುಟ್ಟಣ್ಣನ ಔಷಧ ಮರೆತೇಬಿಟ್ಟರು.

ಭೂತರಾಯನ ಮಹಿಮೆಯಂತೂ ಎಲ್ಲಕ್ಕೂ ಬೇಕು. ಅವನ ಮಹಿಮೆಯಿಂದ ಕಳ್ಳರು ನಿಷ್ಪಂದವಾಗಿ ನಿಂತಾರು. ವೀಳ್ಯದೆಲೆ ಕದಿಯಲು ಅಡಕೆ ಮರ ಹತ್ತಿದ ಕಳ್ಳ ಭೂತನ ಕಾರಣಕ್ಕೆ ಅಲ್ಲೇ ನಿಂತು ಸಿಕ್ಕಿಕೊಂಡಾನು....

ಹಳ್ಳಿಯಲ್ಲಿ ಕಣ್ಣಿಗೆ ಕಾಣುವಂಥ ಒಂದು ಭೂತದ ಪ್ರತಿಮಾವಿಶೇಷ ಇರುವುದುಂಟು. ತೋಟದಾಚೆಯ ಭೂತದ ಬಗ್ಗೆ ಕುವೆಂಪು ವಿವರ ಕೊಡುತ್ತಾರೆ. ಅದನ್ನು ಕಾಣಲು ಅಡಕೆ ಬಾಳೆತೋಟ ದಾಟಿ ಓರೆಯಾಗಿ ಬೆಟ್ಟವನ್ನಡರಿರುವ ದಟ್ಟಡವಿಯ ಸೆರಗಿಗೆ ಬರಬೇಕು.

ಅಲ್ಲಿನ ಮರಗಳ ಗುಂಪೇ 'ಭೂತರಾಯನ ಬನ'. ಅಲ್ಲಿ ದೊಡ್ಡ ರಂಜದ ಮರದ ಬುಡದಲ್ಲಿ ಒಂದು ಕಾಡುಕಲ್ಲು ಕಾಣಿಸುತ್ತದೆ. ಆ ಮರದ ಬುಡದ ಕಾಡುಕಲ್ಲೇ ಭೂತರಾಯನ ಪ್ರತೀಕ. ಅದಕ್ಕೆ ಪ್ರತಿವರ್ಷವೂ ಹಂದಿ, ಕುರಿ ಕೋಳಿಗಳ ಬಲಿ, ಕಾಯಿ ಮುಡುಪು ಎಲ್ಲ.

ಕುವೆಂಪು ಈ ನಂಬಿಕೆ ಹಳ್ಳಿಗನನ್ನು ಕಾಪಾಡಿದರೆ ಏನು ತಪ್ಪು ಎನ್ನುತ್ತಾರೆ. ಪ್ರಬಂಧದ ಕಡೆಯಲ್ಲಿ 'ಹಳ್ಳಿಗನು ಮೂಢನೆಂದು ತಿರಸ್ಕರಿಸಬೇಡ. ಮುಕ್ಕಾಲು ಪಾಲು ಜಗತ್ತನ್ನು ಮೌಢ್ಯವೇ ಕಾಪಾಡುತ್ತಿರುವುದು. ಮುಕ್ಕಾಲು ಪಾಲು ಜಗತ್ತಿಗೆ ಮೌಢ್ಯವೇ ಆನಂದವಾಗಿರುವುದು.... ಜ್ಞಾನದೇವತೆಯೊಲಿಯದಾತನ ಮಧುರ ಮೌಢ್ಯವೆ ಹರಸಲಿ, ಜ್ಞಾನಕೆಳಸಿ ತ್ರಿಶಂಕುವಾಗುವ ತೆರದೊಳಾತನನಿರಿಸಲಿ!' ಎನ್ನುತ್ತಾರೆ.

## ೮. ಅಣ್ಣಪ್ಪನ ರೇಷ್ಮೆ ಕಾಯಿಲೆ

ಕುವೆಂಪು ಜೀತದಾಳೊಬ್ಬನ ಕಾಯಿಲೆ ಪ್ರಸಂಗವನ್ನು ಮುಂದಿಟ್ಟುಕೊಂಡು ಅದನ್ನು ವಿರಾಟ್ ದೃಷ್ಟಿಯಿಂದ ನೋಡಿದಾಗ ತಮ್ಮಲ್ಲಿ ಉದ್ಭವವಾದ ಅನುಕಂಪ ಮತ್ತು ಸರ್ವಸಮತ್ವದ ಅನುಭವ ಅನಿರ್ವಚನೀಯವಾಗಿತ್ತು ಎಂದು ವರ್ಣಿಸುತ್ತಾರೆ. ಲೋಕರೂಢಿಯಿಂದ ಎಷ್ಟೇ ಅಲ್ಪವಾದುದಾಗಲೀ, ಎಷ್ಟೇ ಮಹತ್ವದ್ದಾಗಲೀ ಪ್ರತಿಯೊಂದು ಪ್ರಸಂಗವನ್ನೂ ಸನ್ನಿವೇಶವನ್ನೂ ವಿರಾಟ್ ದೃಷ್ಟಿಯಿಂದ ನೋಡಲೆಳಸುವುದು ಕವಿಯನ್ನು ಪ್ರೇರೇಪಿಸುವ ವಿಶಿಷ್ಟ ಪ್ರಚೋದನೆ. ಅವರ ವಿಶ್ವಮಾನವತೆಯನ್ನು ಕುರಿತ ಆಲೋಚನೆಗಳೂ ಈ ದೃಷ್ಟಿಯಿಂದಲೇ ಸ್ಫುರಿಸಿದವೆನ್ನಬಹುದು.

ಈ ಪ್ರಸಂಗವನ್ನು ಹೇಳುವಾಗ ಮಲೆನಾಡಿನ ನಡುಹಗಲನ್ನು ವರ್ಣಿಸುವ ಅತ್ಯಂತ ಸುಂದರ ಪ್ರತಿಮೆಯನ್ನು ಚಿತ್ರಿಸುತ್ತಾರೆ. 'ಹೆಗ್ಗೋಡೆಗಳಂತೆ ಸುತ್ತಲೂ ಎತ್ತರವಾಗಿ ಎದ್ದ ಗಿರಿಗಳಿಂದ ಸಂಕುಚಿತವಾದಂತೆ ತೋರುತ್ತಿದ್ದ ತಿಳಿಯಾಳದ ಬಾನಿನಲ್ಲಿ ಬೂರುಗದರಳೆಯಂತಿದ್ದ ತುಂಡುಮೋಡಗಳು ಸೋಮಾರಿಯ ಮೆದುಳಿನಲ್ಲಿ ಅಲೆದಾಡುವ ಕನಸುಗಳಂತೆ ತೇಲುತ್ತಿದ್ದವು' ಬಿಸಿಲುಕಾಲದ ಸೋಮಾರಿ ಹಗಲು. ಇಂಥ ಒಂದು ದಿನ ಮನೆಯ ಮಾಯಣ್ಣ ಓಡುತ್ತ ಬಂದು ತನ್ನ ಅಣ್ಣ ಅಣ್ಣಪ್ಪನಿಗೆ ಕಾಯಿಲೆಯಾಗಿದೆ, ಉಳಿಯುವಂತಿಲ್ಲ – ನಿಮ್ಮನ್ನು ಬರಹೇಳಿದ ಎಂದು ಕರೆಯುತ್ತಾನೆ. ಕುವೆಂಪು ಇನ್ನೊಬ್ಬರನ್ನು ಜತೆಮಾಡಿಕೊಂಡು ಹೊರಡುತ್ತಾರೆ. ಅಣ್ಣಪ್ಪ ಇವರ ಮನೆಯ ಒಕ್ಕಲು. ಸತ್ಯವಂತ, ಪ್ರಾಮಾಣಿಕ. ಹಿರಿಯರ ಕಾಲದಿಂದಲೂ ಗದ್ದೆ ಮಾಡಿಕೊಂಡು ಗುತ್ತಿಗೆ ಸಲ್ಲಿಸುತ್ತ ಯೋಗ್ಯನಾಗಿ ಬದುಕಿದ್ದವನು. ಸಾಮಾನ್ಯವಾಗಿ ಸಾಹುಕಾರರ ಗಾಣಕ್ಕೆ ಸಿಕ್ಕಿಬಿದ್ದಿರುವ ಬಡವರಲ್ಲಿ ಸುಲಭವಾಗಿ ಕಾಣದ ನಗುಮುಖ ಅವನದು. ಮಕ್ಕಳಿಗೆ ಕತೆ ಹೇಳುವನು, ಜನಗಳೊಂದಿಗೆ ನಗುನಗುತ್ತ ಇರುವನು. ಈಗ ಗುಡಿಸಿಲಲ್ಲಿ ಸಾಯುತ್ತ ಬಿದ್ದಿದ್ದಾನೆ.

ಕುವೆಂಪು ಔಷಧ ಏನು ಮಾಡಿದ್ದೀರಿ ಎಂದು ಕೇಳಿದ್ದಕ್ಕೆ ಚೌಡಿಯ ಕಾಟ, ಪಂಜರೊಳ್ಳಿ ದೆವ್ವಕ್ಕೆ ಕೋಳಿ ಕೊಟ್ಟೆವು.... ಭಟ್ಟರು ಭಸ್ಮ ಕೊಡುತ್ತಾರೆ – ಹೀಗೆಲ್ಲ ಉತ್ತರ

ಕೊಟ್ಟಾಗ ಕುವೆಂಪುಗೆ ರೇಗಿಹೋಗುತ್ತದೆ. ಮಲೆನಾಡಿನಲ್ಲಿ ರೋಗಿಯ ಸ್ಥಿತಿ ಚಿಂತಾಜನಕವಾದಾಗ ಮಾತ್ರವೇ ಜನ ಆಸ್ಪತ್ರೆಗೆ ಓಡುತ್ತಾರೆ. 'ಡಾಕ್ಟರು ಏನಾದರೂ ಔಷಧ ಕೊಟ್ಟರೆ ಕುಡಿಸುತ್ತಾ, ತಮಗೆ ತಿಳಿದ ಮದ್ದುಗಳನ್ನು ತಿನ್ನಿಸುತ್ತಾ, ದೆವ್ವಭೂತಗಳಿಗೆ ಹರಕೆ ಒಪ್ಪಿಸುತ್ತಾ ಸಾಕಾದಷ್ಟು ಅಪಥ್ಯ ಮಾಡುತ್ತಾ, ಅದೃಷ್ಟವಶದಿಂದ ರೋಗಿ ಬದುಕಿದರೆ ಅದನ್ನು ಭಟ್ಟರ ಭಸ್ಮಕ್ಕೂ ದೈವಕೃಪೆಗೂ ಆರೋಪಿಸಿ, ರೋಗಿ ಸತ್ತರೆ ಅದನ್ನು ಆಸ್ಪತ್ರೆ ಡಾಕ್ಟರ ಔಷಧಿಗೆ ಆರೋಪಿಸಿ ತಮ್ಮ ಅನುಭವದ ಜ್ಞಾನಭಂಡಾರವನ್ನು ಇತರರಿಗೂ ಹಂಚುತ್ತಾರೆ'.

ಅಷ್ಟರಲ್ಲಿ ಅಣ್ಣಪ್ಪ ಪಾತಾಳಧ್ವನಿಯಿಂದ 'ಅಯ್ಯಾ, ನಾನು ಸಾಯುತ್ತೇನೆ. ನನ್ನ ಸಾಲಕ್ಕೆ ನನ್ನ ಮನೆಯ ದನ ಕರು ಪಾತ್ರೆ ಎಲ್ಲದರ ಪಟ್ಟಿಯನ್ನೂ ತೆಗೆದುಕೊಳ್ಳಿ' ಅಂದ. ಕವಿಗೆ ಎದೆಯಿರಿದಂತಾಯಿತು. ಅವನ ಸಮಾಧಾನಕ್ಕೆ ಪಟ್ಟಿಮಾಡಿದ ನಾಟಕವಾಡಿ ಡಾಕ್ಟರಿಗೊಂದು ವಿಷದವಾದ ಕಾಗದ ಬರೆದು ಔಷಧಿಗೆಂದು ಆಳನ್ನು ಕಳಿಸುತ್ತಾರೆ.

ಸಜ್ಜನಿಕೆಯ ಅಣ್ಣಪ್ಪನದು ದಾರುಣಕತೆ. ಕುವೆಂಪು ಈ ಚಿತ್ರದಲ್ಲಿ ಮಲೆನಾಡಿನಲ್ಲಿ ಮನೆಮಾಡಿಕೊಂಡಿರುವ ಅವಿವೇಕ, ಮೂಢನಂಬಿಕೆಗಳನ್ನು ಕುರಿತು ಮರುಗುತ್ತ ಕತೆಯನ್ನು ಪ್ರಾಮಾಣಿಕವಾಗಿ, ಹೃದಯಂಗಮವಾಗಿ ಹೇಳುತ್ತಾರೆ.

### ೯. ಮಲೆನಾಡಿನ ಗೋಪಾಲಕರು

ಇದು ಮಲೆನಾಡಿನ ದನಕಾಯುವ ಮಂದಿಯ ಚಿತ್ರ. ಈ ಜನ ಕಠಿಣಜೀವಿಗಳು. ಗಿರಿವನಗಳಲ್ಲಿ ಮಳೆಬಿಸಿಲೆನ್ನದೆ ಅಲೆದಲೆದು ಗಟ್ಟಿಮುಟ್ಟಾಗಿರುವವರು. ಅವರ ಉಡುಪೆಂದರೆ ಮೊಣಕಾಲು ಮೀರದ ಕೊಳಕುಪಂಚೆ, ಹರಕಲಂಗಿ, ಮೇಲೊಂದು ಕಂಬಳಿ. ಸೊಂಟಕ್ಕೆ ದಟ್ಟಿ (ಇದಕ್ಕೆ ಒಡ್ಯಾಣವೆಂದು ಹೆಸರು.) ಅದಕ್ಕೊಂದು ಕಬ್ಬಿಣದ ಕೊಂಡಿ, ಅದರಿಂದ ನೇತಾಡುವ ಕೆಲಸದ ಕತ್ತಿ. ಅತ್ಯಾಶೆಯಿಲ್ಲ. ಬೆಳಗ್ಗೆ ಗಂಜಿಯುಂಡು ಹಾಲುಕರೆದಮೇಲೆ ಹಸುಗಳನ್ನು ಹೊಡೆದುಕೊಂಡುಹೋಗಿ ತಂಪಾದಕಡೆ ಮೇಯಲು ಬಿಡುವುದು ಅವರ ಕೆಲಸ. ಕೊಳಲು ಊದುವುದು ಅವರ ವೃತ್ತಿಯ ಸಂಕೇತದಂತೆ.

ಈ ಕಥನದ ದನಗಾಹಿ ಹಿರಗ ಒಳ್ಳೆಯ ಕೊಳಲುವಾದಕ. ಮಕ್ಕಳಿಗಂತೂ ಅವನನ್ನು ಕಂಡರೆ ಪ್ರಾಣ. ಒಂದು ಕಂತ್ರಿನಾಯಿ ಸಾಕಿಕೊಂಡಿದ್ದಾನೆ. ಹಿರಗನ ಜೀವನ ಸದಾ ಸುಖಕರವೇನಲ್ಲ. ತುಂಟದನಗಳು ಹಿಂಡಿನಿಂದ ತಪ್ಪಿಸಿಕೊಂಡುಹೋಗಿ ಯಾರ ಗದ್ದೆತೋಟಗಳಿಗಾದರೂ ನುಗ್ಗಿ ಲೂಟಿ ಮಾಡುವುವು. ಪೋಲಿಜಾನುವಾರುಗಳನ್ನು ಹಿಡಿಯುವುದೂ ಸಾಹಸಕೃತ್ಯ. ಎಷ್ಟೋ ಸಾರಿ ಅಟ್ಟಿ ಅಟ್ಟಿ ಸೋತು ಮಕ್ಕಳಂತೆ ಅಳುವುದುಂಟು. ತುಂಬ ತುಂಟದನವಾದರೆ ಅದರ ಕೊರಳಿಗೂ ಮುಂಗಾಲಿಗೂ ಹಗ್ಗ ಬಿಗಿದು ಕಟ್ಟುವರು. ಕಡಮೆ ತುಂಟತನ ಮಾಡಿದವಕ್ಕೆ ಕೊರಳಿಗೊಂದು ಕುಂಟೆ. ಹಿರಗನ ಪಾಡು ಕಷ್ಟವೇ. ಕಂಬಳಿಕೊಪ್ಪೆ ತಲೆಗೆ ಹಾಕಿಕೊಂಡು ದಿನವೆಲ್ಲ ನೀರಿನಲ್ಲಿ ನಡೆಯಬೇಕು. ಗುಡ್ಡದಿಂದ ಗುಡ್ಡಕ್ಕೆ ಹೋಗಬೇಕು. ಮಧ್ಯೆ ಜಿಗಣೆಗಳ ಕಾಟ. ಬೆಳಗಾದರೆ ಹುಲಿಗಳ

ಹಾವಳಿ. ದನವನ್ನು ಹುಲಿ ಹಿಡಿಯಿತೆಂದು ಒಡೆಯರಿಗೆ ಹೇಳಿದರೆ ಬೈಗುಳದ ಸುರಿಮಳೆ!

ದನಗಾಹಿಗಳಲ್ಲೂ ಠಕ್ಕರು ಇರುವುದುಂಟು. ಒಬ್ಬ ದುಷ್ಟ ದನಗಾಹಿ ದನಗಳನ್ನು ಎಳೆದು ಮುಳ್ಳಿನ ಬೇಲಿಯ ದೊಡ್ಡಿಯೊಳಗೆ ಕೂಡಿ ಸಂಜೆ ಹಸಿದು ಕಂಗೆಟ್ಟ ದನಗಳನ್ನು ಹಿಂತಿರುಗಿಸುತ್ತಿದ್ದನಂತೆ! ಕಂಡುಹಿಡಿದು ಅವನನ್ನು ಬಡಿದು ಆಚೆಗಟ್ಟಿದರಂತೆ.

ಇದೊಂದು ಮಲೆನಾಡಿನ ವಿಶಿಷ್ಟ ಜೀವನಕ್ರಮದ ಚಿತ್ರ.

## ೧೦. ಜೇನು ಬೇಟೆ

ಮಲೆನಾಡಿನ ಕಾಡಲ್ಲಿ ಜೇನು ಸಮೃದ್ಧ. ಅದನ್ನು ಕೀಳಲು ಹೋಗುವುದೇ ಒಂದು ಕ್ರೀಡೆ. ಸಿಕ್ಕಿದರೆ ಸಿಹಿತುಪ್ಪ ಬಹುಮಾನದಂತೆ. ಇದನ್ನು ಈ ಚಿಕ್ಕ ಚಿತ್ರಣದಲ್ಲಿ ಕುವೆಂಪು ಸೊಗಸಾಗಿ ವರ್ಣಿಸುತ್ತಾರೆ.

ಒಂದು ದಿನ ಕುವೆಂಪು ಇನ್ನು ನಾಲ್ವರ ಜತೆ - ಪುಟ್ಟಣ್ಣ, ಹೆಗ್ಗಡೆಯವರು, ಇಬ್ರಾಹಿ, ಹಳೇಪೈಕದ ಪುಟ್ಟ - ಜೇನುಬೇಟೆಗೆ ಕಾಡಿನೊಳಗೆ ಹೋಗುತ್ತಾರೆ. ಇಬ್ರಾಹಿ ಸಾಬರ ಹುಡುಗ - ಅವನ ಕೈಯಲ್ಲೊಂದು ಕೈಗೊಡಲಿ, ಪುಟ್ಟನ ತಲೆಯಮೇಲೆ ಜೇನು ತುಂಬಲು ಬೇಕಾದ ಬೋಗುಣಿ ಹೊರಿಸಿಕೊಂಡು ಎಲ್ಲ ಹೊರಡುತ್ತಾರೆ. ದಾರಿಯುದ್ದಕ್ಕೂ ಹರಟೆ. ಪುಟ್ಟಣ್ಣ ಮಧ್ಯೆ ಮಧ್ಯೆ ಮುಖ್ಯಸ್ಥಳಗಳನ್ನು ಗುರುತಿಸುತ್ತ ನಡೆಯುತ್ತಿದ್ದ - ಇಲ್ಲಿ ಸುಬ್ಬಯ್ಯಗೌಡರು ಹುಲಿ ಬಿಟ್ಟ ಸ್ಥಳ, ಅಲ್ಲಿ ತಾನು ಹಂದಿ ಹೊಡೆದ ಜಾಗ ಹೀಗೆಲ್ಲ....

ಕಡೆಗೂ ಜೇನುಗೂಡೊಂದನ್ನು ತಲುಪುತ್ತಾರೆ. ಜೇನಿನಲ್ಲಿ ಹೆಜ್ಜೇನು, ತುಡುವೆ, ಕೋಲುಜೇನು, ನಸರಿ ಎಂಬ ಪ್ರಭೇದಗಳಿವೆ ಎಂದು ತಿಳಿಸುತ್ತಾರೆ. ಜೇನುಗೂಡಿನ ಜೇನನ್ನು ಕೀಳುವ ಮೊದಲು ಜೇನು ಕಟ್ಟಿರುವ ಕೊಂಬೆಗೆ ನೇರವಾಗಿ ಕೆಳಭಾಗದಲ್ಲಿ ಹಸುರೆಲೆಗೆ ಬೆಂಕಿಯಿಟ್ಟು ಹೊಗೆ ಮಾಡುತ್ತಾರೆ. ಆ ಧೂಮಪಾನ ಸಹಿಸಲಾರದೆ ಜೇನು ಹಾರಿಹೋದಮೇಲೆ ಮರ ಹತ್ತಿ ಹಗ್ಗಕಟ್ಟಿದ ಬೋಗುಣಿಗೆ ಅದನ್ನು ಕೊಯ್ದುಹಾಕಿ ಮೆಲ್ಲಗೆ ಇಳಿಸುತ್ತಾರೆ. ಒಂದು ಸಾರಿ ಇಟ್ಟ ಬೆಂಕಿಯಿಂದ ಜೇನೂ ಒಳಗಿನ ಹಲ್ಲೆಯೂ ಬೂದಿಯಾದದ್ದುಂಟಂತೆ !

ಜೇನುಗೂಡಿನ ಬಳಿ ಬಂದಾಗ ಹಳೇಪೈಕದ ಪುಟ್ಟ ಕಾಡುಮೆಣಸಿನ ಎಲೆ ಜಗಿದು ರಸವನ್ನು ಹುತ್ತದೊಳಕ್ಕೆ ಊದಲು ಹೋದಾಗ (ಇದೂ ಜೇನು ಕೀಳಲು ಒಂದು ಉಪಾಯ) ತುಡುವೆ ಜೇನಿನಿಂದ ಕಚ್ಚಿಸಿಕೊಂಡ. ಹೆಗ್ಗಡೆಯವರೂ ಬೆಳ್ಳುಳ್ಳಿ ರಸ ಉಗಿಯಲುಹೋಗಿ ಕಚ್ಚಿಸಿಕೊಂಡರು....

ಕಡೆಗೆ ಬೆಂಕಿಮಾಡಿ ಹೊಗೆಮಾಡಿದರು. ರಾಶಿರಾಶಿ ಜೇನು ಸಿಕ್ಕಿತು. ತಿನ್ನಲಾರದೆ ತಿನ್ನುತ್ತ ಮನೆಗೆ ಸಾಗಿಸಿದರು.

## ೧೧. ಕತೆಗಾರ ಮಂಜಣ್ಣ

ಕುವೆಂಪು ಈ ಪ್ರಬಂಧದಲ್ಲಿ ತಮ್ಮ ಮನೆಯ ಆಳಿನ ಬಗ್ಗೆ ಬರೆದಿದ್ದಾರೆ. ಆಳು ಮಂಜಣ್ಣ ಅರುವತ್ತು ವಯಸ್ಸಾದವನು. ಮುಖದ ತುಂಬ ಬಿಳಿಯ ಗಡ್ಡ. ಇಲಿ ತರಿದಂತೆ ಹರಕಲಾಗಿತ್ತು. ಕಾರಣವೇನೆಂದರೆ ಮಂಜಣ್ಣ ಗಡ್ಡ ಉದ್ದವಾದಕೂಡಲೆ ಮಸೆದು ಹರಿತಮಾಡಿದ ಕುಡುಗೋಲಿನಿಂದ ಚರಚರನೆ ಕುಯ್ಯುತ್ತಿದ್ದ!

ಅವನ ದಿನದ ಕರ್ಮಾಚರಣೆಗಳೂ ದೀರ್ಘವಾದವು. ಒಂದುಗಂಟೆ ಸ್ನಾನಮಾಡಿದಮೇಲೆ ದೇಹದ ಎಲ್ಲ ಕಡೆಗಳಲ್ಲೂ ನಾಮಗಳನ್ನು ಬಳಿದುಕೊಳ್ಳುವನು. ಮಕ್ಕಳಿಗಂತೂ ಬಹು ಪ್ರಿಯನಾದ ಕತೆಗಾರ. ಬೆಂಕಿ ಕಾಯಿಸುತ್ತ, ಹಲಸಿನಕಾಯಿ ಬಿತ್ತ ಸುಟ್ಟು ತಿನ್ನಲು ಹಂಚುತ್ತ, ಮಂಜಣ್ಣ ಕತೆ ಹೇಳುವನು.

ಅವನ ಕತೆಯೋ! ಒಂದು ಕುಂಬಳದ ಬಳ್ಳಿಯಲ್ಲಿ ಕಾಯಿ ಆಗೀ ಆಗೀ ಆಗೀ ಕಡೆಗೆ ತಿಂದದ್ದು ಕತೆ. ಇನ್ನೊಂದು ಕತೆ: ಒಂದು ಊರಲ್ಲಿ ಒಬ್ಬ ಕಳ್ಳ ಇದ್ದ; ಊಟಕ್ಕೆ ಕೂತಿದ್ದ; ಸ್ವಲ್ಪ ಹೊತ್ತಾದಮೇಲೆ ಊಟ ಆಯ್ತು; ಬಳ್ಳೆ (ಬಾಳೆಲೆ) ಬಿಟ್ಟೆದ್ದ. ಆಮೇಲೆ ನೆಗೆದುಬಿದ್ದ!

ಇನ್ನೇನು ಕತೆ ಆರಂಭಿಸಬೇಕು ಎನ್ನುವಾಗ ಚಿಕ್ಕಮ್ಮ ಬಂದು ಊಟಕ್ಕೆ ಕರೆದುಬಿಡುವರು. ಮಕ್ಕಳಿಗೆ 'ಈ ಹಾಳು ಊಟಕ್ಕೆ ಬೆಂಕಿ ಹಾಕ'.... ಒಳಗೆ ಓಡಿದ್ದೇ ಗಬಗಬನೆ ತಿಂದು ಮಂಜಣ್ಣನ ಮುಂದೆ ಪ್ರತ್ಯಕ್ಷ. ಆಗಲೇ ಮಂಜಣ್ಣನನ್ನು ಊಟಕ್ಕೆ ಕರೆದುಬಿಡುವರು. ಮಕ್ಕಳಿಗೆ ಏಕಿಷ್ಟು ಸಾವಕಾಶ ಎಂದು ಕೋಪ!

ಅಂತೂ ಕತೆ ಆರಂಭವಾಗುವುದು. ಹೊರಗಡೆ ನಿರಂತರವಾದ ಮುಂಗಾರು ಮಳೆ. ಬಾಳೆಯ ಎಲೆಯಮೇಲೆ ಪಟಪಟ ಹನಿಯ ಸದ್ದು. ಮಕ್ಕಳಿಗೆ ಹೊರಗಡೆ ಒಂದು ಲೋಕ ಇದೆ ಎಂಬುದೂ ಅರಿವಿಲ್ಲ. ಕತೆ ನಿಧಾನವಾಗಿ ಸಾಗುವುದು.

ಎಳೆಯ ಮಕ್ಕಳ ಮನಸ್ಸನ್ನು ಹೊಕ್ಕು ಅವರ ಆಕಾಂಕ್ಷೆಗಳನ್ನು ಅತೀವ ಮುಗ್ಧತೆಯಿಂದ ಕವಿ ವರ್ಣಿಸುತ್ತಾರೆ. ಕತೆಗಾರ ಮಂಜಣ್ಣ ಈ ಮಕ್ಕಳನ್ನು ಚೆನ್ನಾಗಿ ಅರ್ಥ ಮಾಡಿಕೊಂಡವನು. ವೃದ್ಧಮೂರ್ತಿ. ಮಸಕಾದ ಬೆಂಕಿಯ ಬೆಳಕಲ್ಲಿ ತಲೆಬಾಲ ಇಲ್ಲದ ಎಂದಿಗೂ ಮುಗಿಯದ ಕತೆಯನ್ನು ಹೇಳುತ್ತಿರುವನು....

## ೧೨. ರಾಮರಾವಣರ ಯುದ್ಧ

ಬೈಗಿನಿಂದ ಬೆಳಗಾಗುವವರೆಗೂ ಆಡಿದ ಮೇಳದ ಭಾಗವತರಾಟ - ರಾಮರಾವಣರ ಯುದ್ಧ ನೋಡಿಬಂದು ಕವಿ ಜತೆಗಾರರು ತಿಮ್ಮು, ಮಾನು, ಓಬು, ಎಂಕ್ಟು, ವಾಸು, ದಾನಿ, ರಾಜಿ-ಎಲ್ಲರೂ ಸೇರಿ ತಾವೂ ಆಡಬೇಕು ಎಂದು ಮಸಲತ್ತು ಮಾಡುವುದು ಈ ಚಿತ್ರದ ವಸ್ತು. ಬೆಳಗ್ಗೆ ಎಳೆಬಿಸಿಲು, ಮರಗಳಲ್ಲಿ ಹಕ್ಕಿಗಳ ಚಿಲಿಪಿಲಿ. ಮರದ ನೆರಳೇ

ಇವರ ರಂಗಸ್ಥಳ. ಬಸಿರಿ ಮರದ ರಂಗಸ್ಥಳ ಸೇರಿದಮೇಲೆ ಪಾತ್ರಗಳ ಹಂಚಿಕೆಯಲ್ಲೇ ಪ್ರಬಲವಾದ ಚರ್ಚೆ. ಚೋಟುದ್ದ ತಿಮ್ಮುಗೆ ರಾಮನ ಪಾತ್ರ ಕೊಡಬಾರದು ಅಂತ ಕಿಲಾಡಿ ಓಬು. ವಾಸು ಲಕ್ಷ್ಮಣನ ಪಾತ್ರ ಕೇಳಿದ್ದಕ್ಕೆ ಇಲ್ಲ ಇಲ್ಲ ಅವನು ಕೋತಿ ಹಾಗಿದಾನೆ ಹನುಮಂತ ಆಗೋಕ್ಕೆ ಸರಿ ಅಂತ. ಮತ್ತೆ ಓಬು? ಯಾವಾಗಲೋ ಭೀಮನ ಪಾತ್ರ ಹಾಕಿದ್ದವನೊಬ್ಬ ಮಂಡಕ್ಕಿ ತಿಂದದ್ದು ನೆನೆಸಿಕೊಂಡು ತನಗೂ ಭೀಮನ ಪಾತ್ರ ಬೇಕು ಅಂತ ವಾಸು! ರಾಮಾಯಣದಲ್ಲಿ ಭೀಮ ಎಲ್ಲಿ ಬಂದ ಅಂತ ಹೇಳಿದರೂ ಕೇಳೋಲ್ಲ.... ಈ ಪಾತ್ರಗಳ ಹಂಚಿಕೆಯಲ್ಲಿ ರಾವಣ ಪಾತ್ರಧಾರಿಯಾದ ಕುವೆಂಪು ಯುದ್ಧದ ಸೀನಿನಲ್ಲಿ ಚೋಟುದ್ದ ಇದ್ದ ರಾಮನನ್ನ ಸೋಲಿಸಿ ಕೆಡವುತ್ತಾರೆ. ಇವರ ಕತೆಯಲ್ಲಿ ರಾಮನೇ ಬಿದ್ದ, ರಾವಣ ಗೆದ್ದ!

ಕವಿ ಶೈಶವನನ್ನು ನೆನೆದು ಉದ್ಗರಿಸುತ್ತಾರೆ :

> ಆ ಕಾಲವೊಂದಿತ್ತು! ದಿವ್ಯ ತಾನಾಗಿತ್ತು! ಬಾಲ್ಯವಾಗಿತ್ತು!
> ಮಣ್ಣು ಹೊನ್ನಾಗಿ, ಕಲ್ಲೆ ಹೂವಾಗಿ, ನೀರಮೃತವಾಗಿ
>
> ಮನೆ ಮೇರುವಾಗಿ, ಕವಿಶೈಲ ತಾನೆ ಕೈಲಾಸವಾಗಿ
> ಕಾಡೆ ನಂದನವಾಗಿ, ನೆಲವೆ ನಾಕವ ನಗುವ ಕಾಲವೊಂದಿತ್ತು
>
> ಆ ಕಾಲವೊಂದಿತ್ತು! ದಿವ್ಯ ತಾನಾಗಿತ್ತು! ಬಾಲ್ಯವಾಗಿತ್ತು!

ಈ ಚಿತ್ರಗಳಲ್ಲಿ ಎದ್ದು ಕಾಣುವುದು ಸ್ಪಷ್ಟವಾದ ವಿಷಯನಿರೂಪಣೆ, ನವುರಾದ ಹಾಸ್ಯ, ಕೃತಕವಲ್ಲದ ಚಮತ್ಕಾರ, ಸಜ್ಜನಿಕೆ, ಮಲೆನಾಡಿನ ವಿವಿಧ ಜೀವನಾನುಭವಗಳ ಪ್ರಾಮಾಣಿಕ ಚಿತ್ರಣ. ಇದು ರುದ್ರಮನೋಹರ ಬೆಟ್ಟಕಾಡುಪ್ರದೇಶದ ವಿಶಿಷ್ಟ ಜೀವನಶೈಲಿಗೆ ಹಿಡಿದ ಕನ್ನಡಿ. ಅಲ್ಲಿಯ ಹಾವು, ನಾಯಿ, ಹುಲಿಗಳು, ಹಂದಿ, ಸಿಂಗಲೀಕಗಳು, ಸಹಸ್ರಾರು ಪಕ್ಷಿಗಳು, ಗಗನ ಮುಟ್ಟುವ ಬೆಟ್ಟಗಳು, ಬಗೆ-ಬಗೆಯ ಹೂವು-ಹಣ್ಣಿನ ಮರಗಳು, ಭಾವುಕ ಕವಿಯ ವರ್ಣನೆಗಳಿಂದ ಜೀವಂತವಾಗಿ ಮೆರೆಯುತ್ತವೆ. ಸ್ಫುಟವಾಗಿ ರಚಿತವಾಗಿರುವ ಎಲ್ಲ ವ್ಯಕ್ತಿಚಿತ್ರಗಳೂ ಮನಸ್ಸಿನಲ್ಲಿ ನಿಲ್ಲುವಂಥವು. ಈ ಲಘುಪ್ರಬಂಧಗಳಲ್ಲಿ ಕೆಲವಾದರೂ ಸಣ್ಣಕಥೆಗಳಂತಿವೆ. ಹೇಗಿದ್ದರೂ, ಎಲ್ಲ ಚಿತ್ರಗಳಲ್ಲೂ ಕುವೆಂಪುರವರ ಸ್ವಂತ ವ್ಯಕ್ತಿತ್ವದ ಮೆರಗು ನಿಖರವಾಗಿ ಪ್ರಕಾಶಿಸುತ್ತದೆ.

●

# ಪುಟ್ಟಪ್ಪ - ಪೂರ್ಣಚಂದ್ರರ ಪರಿಸರ ಪರಂಪರೆ

ವಿಮಲಾ ರಾಜಗೋಪಾಲ್, ಪೆನ್ಸಿಲ್ವೇನಿಯ

ನಾವು ಅಮೆರಿಕಕ್ಕೆ ಬಂದು ೩೮ ವರ್ಷಗಳ ಮೇಲಾಯಿತು. ಇಲ್ಲಿ ಮನೆಯ ಹೊರಜಗತ್ತಿನಲ್ಲಿ ನಾವು ಮಾಡುವ ವ್ಯವಹಾರವೆಲ್ಲ ಬಹುಪಾಲು ಇಂಗ್ಲೀಷಿನಲ್ಲೇ. ಆದರೂ, ನಮ್ಮ ಬಾಳಿನಾಳದ ತಾಯಿಬೇರು ಕನ್ನಡತನದಲ್ಲಿ ಪೂರ್ತಿ ಹುದುಗಿ ಗಟ್ಟಿಯಾಗಿ ನೆಲೆಸಿರುವುದರಿಂದ ಈ ನಮ್ಮ ಬಾಳವೃಕ್ಷದಲ್ಲಿ ಬಿಡುವ ಹೂವು ಹಣ್ಣುಗಳಲ್ಲಿ ಕನ್ನಡದ ಪರಿಮಳ ಸೌರಭ ನವಿರಾಗಿ ತುಂಬಿದೆ. ಕನ್ನಡ ಮನೆಮಾತಾಗಿ, ಬಾಲ್ಯದಿಂದ ಕನ್ನಡ ಸಾಹಿತ್ಯ ಓದಿ, ಕನ್ನಡದ ಬಗ್ಗೆ ಗಾಢವಾದ ಪ್ರೇಮ ಬೆಳೆಸಿಕೊಂಡುಬಂದಿರುವ ನಮಗೆ, ಇಲ್ಲಿನ ನಮ್ಮ ಕನ್ನಡ ಬಾಂಧವರಿಗೆ, ಕನ್ನಡತನ ನಮ್ಮ ಜೀವದುಸಿರಾಗಿದೆ. ನಿತ್ಯಜೀವನದ ತಾಕಲಾಟಗಳಲ್ಲಿ ಬದುಕಿನ ಏರುತಗ್ಗುಗಳ ನಡುವೆ ಆಗಾಗ ಕನ್ನಡ ಸ್ನೇಹಿತರೊಡನೆ ಅಚ್ಚ ಕನ್ನಡದಲ್ಲಿ ಅಪ್ಯಾಯಮಾನವಾಗಿ ಟೆಲಿಫೋನಿನಲ್ಲಿ ಮಾತಾಡಿಕೊಂಡಾಗ ಎದೆ ಹಗುರಾಗುತ್ತದೆ. ''ಕಾಲ ಹಿಮ್ಮೊಗ ಹರಿದು'' ಕನ್ನಡನಾಡೇ ಕಣ್ಣಮುಂದೆ ಬಂದು ನಿಂತು ಸಾಂತ್ವನ ನೀಡುತ್ತದೆ.

ದಿನ ಬೆಳಗಾದಂತೆ ಕೆಲಸಕ್ಕೆ ಹೋಗಿ ದಿನವಿಡೀ ಪರಭಾಷೀಯರೊಂದಿಗೆ ವ್ಯವಹರಿಸುವ ನನಗೆ ಒಮ್ಮೆ ಅಪರೂಪಕ್ಕೆ ಒಂದೆರಡು ವಾರಗಳ ರಜೆ ಒದಗಿಬಂದಿತ್ತು. ಆ ಸಂದರ್ಭದಲ್ಲಿ ಒಂದೆರಡು ದಿನ ಜ್ವರ ಬಂದು ಹಾಸಿಗೆಯಲ್ಲೇ ಕಾಲ ಕಳೆದಾಗ ದಿನನಿತ್ಯದ ಅಭ್ಯಾಸದಂತೆ ರಾತ್ರಿ ಓದಲು ಪುಸ್ತಕದ ಶೆಲ್ಫಿಗೆ ಕೈ ನೀಡಿದಾಗ ಸಿಕ್ಕಿದ್ದು ಪೂರ್ಣಚಂದ್ರ ತೇಜಸ್ವಿಯವರ ''ಪರಿಸರದ ಕತೆ.'' ಮೈಮರೆತು ಓದಿದೆ. ಓದುತ್ತಾ ಓದುತ್ತಾ ಮನಸ್ಸು ಹಕ್ಕಿಯಂತೆ ಹಗುರವಾಯಿತು. ಅದೇ ನಿಟ್ಟಿನಲ್ಲೇ ತೇಜಸ್ವಿಯವರ ಮತ್ತೊಂದು ಕಿರುಕಾದಂಬರಿ ''ಕರ್ವಾಲೋ'' ಓದಿಮುಗಿಸಿದೆ. ಅಪೂರ್ವ ನಿಧಿ ದೊರೆತಂತೆ, ಆ ಪುಸ್ತಕಗಳ ಬೇರೆಬೇರೆ ಘಟನೆಗಳನ್ನು ಮತ್ತೆಮತ್ತೆ ಓದಿ ಆ ಮಲೆನಾಡ ಪರಿಸರದಲ್ಲಿ ಪೂರ್ತಿ ಲೀನಳಾಗಿಹೋದೆ.

ಕಳೆದ ಶತಮಾನದ ಹಿರಿಯ ಸಾಹಿತಿಗಳಾದ ನಮ್ಮ ತಂದೆ ಶ್ರೀ ಎಲ್. ಗುಂಡಪ್ಪನವರು ಬಾಳಿದೂರು ಬೆಂಗಳೂರು. ಅವರ ಹುಟ್ಟೂರು ಬೇಲೂರು ಹಳೇಬೀಡು ಪ್ರಾಂತದ ಮಲೆನಾಡ ಹಳ್ಳಿ ಮತಿಘಟ್ಟ. ಅನುವಂಶೀಯವಾಗಿ ನಮ್ಮ ತಾತ ಮುತ್ತಾತಂದಿರ ನೆಲೆಬೀಡಾಗಿದ್ದ ಮಲೆನಾಡ ಆ ಹಳ್ಳಿಗೆ ನಮ್ಮ ಬಾಲ್ಯದ ದಿನಗಳಲ್ಲಿ ಬೇಸಿಗೆ ರಜಕ್ಕೆ ಹೋಗುತ್ತಿದ್ದೆವು. ಅಲ್ಲೇ ಹತ್ತಿರದಲ್ಲೇ ಪಶ್ಚಿಮ ಘಟ್ಟದ ಸೆರಗಿನಲ್ಲಿದ್ದ ಬೇಲೂರು ಬಳಿಯ ಚೀಕನಹಳ್ಳಿಯಲ್ಲಿ ನನ್ನ ಪ್ರೀತಿಯ ಚಿಕ್ಕಪ್ಪ ಕಾಫಿ ತೋಟದಲ್ಲಿ ರೈಟರ್ ಆಗಿ ಕೆಲಸ

ಮಾಡುತ್ತಿದ್ದರು. ಹಿಂದೆ ಬ್ರಿಟಿಷ್ ಕಾಫಿ ಪ್ಲಾಂಟರನೊಬ್ಬ ಕಟ್ಟಿಸಿದ್ದ ಅಚ್ಚುಕಟ್ಟಾದ ಇಂಗ್ಲಿಷ್ ಬಂಗಲೆಯ ಪಕ್ಕದಲ್ಲೇ ಚಿಕ್ಕಪ್ಪನ ಮನೆ. ಕಾಫೀ ತೋಟದ ಮೇಲ್ವಿಚಾರಣೆ ಪೂರ್ತಿ ಚಿಕ್ಕಪ್ಪನದಾದ್ದರಿಂದ ಆ ಬಂಗಲೆಯ ಮೇಲೆ ಚಿಕ್ಕಪ್ಪನ ಪೂರ್ಣಾಧಿಕಾರವಿತ್ತು. ಮನೆಯ ಮುಂಬಾಗಿಲಿನಿಂದ ನೋಡಿದರೆ ದೂರದಲ್ಲಿ ಮೋಡ ಮುಸುಗಿದ ಬಾಬಾಬುಡನ್ ಗಿರಿ ಬೂದುಬಣ್ಣದ ಶಾಲು ಹೊದೆದು ಮಲಗಿದ ನಮ್ಮ ಅಚ್ಚುಮೆಚ್ಚಿನ ಲಿಂಗಣ್ಣಯ್ಯ ಅಜ್ಜಯ್ಯನಂತೆ ಕಾಣುತ್ತಿತ್ತು.

ಕೊಟ್ಟಿಗೆ ಪಕ್ಕದ ಸ್ನಾನದ ಮನೆಯಲ್ಲಿ ದೊಡ್ಡ ಹಂಡೆ ತುಂಬಾ ಬಿಸಿಬಿಸಿ ನೀರು. ಅಲ್ಲೇ ಪಕ್ಕದಲ್ಲೇ ಪುಟ್ಟ ಕೆಂಡದೊಲೆಯ ಮುಂದೆ ಕುಳಿತು ಚಿಕ್ಕಮ್ಮ ಮಾಡಿಕೊಡುತ್ತಿದ್ದ ಹಾಲುಖೋವ, ಮೈಸೂರುಪಾಕು, ರವೆವುಂಡೆ, ಕಾರದಪುರಿ ಇತ್ಯಾದಿಗಳನ್ನು ಡಬ್ಬದಲ್ಲಿಟ್ಟುಕೊಂಡು ನಾವು ಹುಡುಗರು (ನಾವು ಮತ್ತು ಬೇಲೂರು ಚಿಕ್ಕಮ್ಮನ ಮಕ್ಕಳು) ಬಂಗಲೆ ಮನೆಗೆ ಓಡುತ್ತಿದ್ದೆವು. ಪೂರ್ತಿ ಇಂಗ್ಲಿಷ್ ಬಂಗಲೆಗಳ ಮಾದರಿಯಲ್ಲಿ ಕಟ್ಟಿಸಿದ್ದ ಆ ಭವ್ಯ ಸುಂದರ ಬಂಗಲೆಯಲ್ಲಿ ಅಚ್ಚುಕಟ್ಟಾದ ಲೈಬ್ರರಿ ಇತ್ತು. ಎಲ್.ಎಸ್. ಪರೀಕ್ಷೆ ಮುಗಿಸಿ ಬೇಸಿಗೆ ರಜಕ್ಕೆ ಚಿಕ್ಕಪ್ಪನ ಮನೆಗೆ ಹೋಗಿದ್ದ ಆ ಬೇಸಿಗೆಯನ್ನು ಮರೆಯುವಂತೆಯೇ ಇಲ್ಲ. "ಈ ಹಳ್ಳಿಯ ಕಗ್ಗಾಡಲ್ಲಿ ಕುಳಿತು ನಾವು ಮಾಡುವುದೇನಿದೆ?" ಎಂದು ಗೊಣಗುತ್ತಿದ್ದ ನಮ್ಮನ್ನು ಚಿಕ್ಕಪ್ಪ ಆ ಬಂಗಲೆ ಮನೆಯ ಲೈಬ್ರರಿಗೆ ಕರೆದೊಯ್ದು 'ಕಣ್ಣುಮುಚ್ಚಿಕೋ – ಕೈ ನೀಡು' ಎಂದು ಆಜ್ಞಾಪಿಸಿ ಕೈಯಲ್ಲಿ ಒಂದೆರಡು ಪುಸ್ತಕಗಳನ್ನಿಟ್ಟು 'ಕಣ್ಣು ಬಿಡು' ಎಂದಾಗ ಕೈಯಲ್ಲಿ ಕಣ್ಣಿಗೆ ಕಂಡದ್ದು ಪುಟ್ಟಪ್ಪನವರ 'ಕಾನೂರು ಹೆಗ್ಗಡಿತಿ' ಮತ್ತು ಶಿವರಾಮ ಕಾರಂತರ 'ಬೆಟ್ಟದ ಜೀವ.' ಆ ಚಿಕ್ಕ ವಯಸ್ಸಿನಲ್ಲೆ ಬಿಡುವಿಲ್ಲದೆ ಕನ್ನಡ ಓದುವ ಹವ್ಯಾಸವಿದ್ದ ನಮ್ಮ ಆನಂದಕ್ಕೆ ಪಾರವೇ ಇಲ್ಲ. ಮಲೆನಾಡನ್ನು ಕುರಿತಾದ ಆ ಪುಸ್ತಕಗಳನ್ನು ಮಲೆನಾಡಿನ ಕಾಫೀ ತೋಟ, ಕಾಡುಗಳ ಮಧ್ಯದಲ್ಲೇ ಕುಳಿತು ಓದಿದ್ದು, ಆ ಕಾಫೀ ತೋಟದಲ್ಲಿ, ಅದರ ಸುತ್ತಮುತ್ತಲ ಕಾಡಲ್ಲಿ ಚಿಕ್ಕಪ್ಪನೊಡನೆ, ಜೊತೆ ಮಕ್ಕಳೊಡನೆ ಓಡಾಡಿದ್ದು, ಮಲೆನಾಡ ಕಾಡು ಪ್ರಾಣಿಗಳ, ದೆವ್ವಗಳ, ಕಾಫೀ ತೋಟದ ಭೇರಿಗಳ ವರ್ಣರಂಜಿತ ಕತೆಗಳನ್ನು ಮಬ್ಬುಮಬ್ಬಿನ ಲಾಟೀನು ಬೆಳಕಿನಲ್ಲಿ, ಕಂಬಳಿಯೊಳಗೆ ನಡುನಡುಗುತ್ತಲೇ ಕೇಳಿಸಿಕೊಂಡಿದ್ದು – ಎಲ್ಲಾ ಆ ಬೇಸಿಗೆ ರಜದ ಮರೆಯಲಾಗದ ರೋಮಾಂಚಕಾರೀ ಅನುಭವಗಳಾದುವು.

ಬಾಲ್ಯದ ಆ ಸುಂದರ ದಿನಗಳಿಗೆ ತೇಲಿಹೋಯಿತು ನನ್ನ ಮನಸ್ಸು ತೇಜಸ್ವಿಯವರ ಪುಸ್ತಕಗಳನ್ನೋದಿದಾಗ. ಅವರ ಬರವಣಿಗೆಯ ವಿಶಿಷ್ಟ ಶೈಲಿ ದಿನನಿತ್ಯದ ಕೆಲಸಗಳಿಂದ ಬೆಂಡಾಗಿದ್ದ ಮನಸ್ಸಿಗೆ ಅಪೂರ್ವ ಆಹ್ಲಾದವನ್ನಿತ್ತು ಪುನಶ್ಚೇತನಗೊಳಿಸಿತ್ತು. ಇದಾದ ಮೇಲೆ ಕೆಲವು ವರ್ಷಗಳು ಕಳೆದುವು. ಈ ಮಧ್ಯೆ ತೇಜಸ್ವಿಯವರ ಇತರ ಬರಹಗಳನ್ನು ಆಗಾಗ ಓದಿ ಮೆಲಕು ಹಾಕುತ್ತಿದ್ದೆ. ನಾ ಕಂಡಿರುವಂತೆ ಮಲೆನಾಡ ಜನರ ವ್ಯಕ್ತಿತ್ವದ ವೈಶಿಷ್ಟ್ಯವೆಂದರೆ, ತಮ್ಮ

ಬಾಳೊಂದಿಗೆ ಬೆಸೆದುಹೋಗಿರುವ ನಿಸರ್ಗವನ್ನೂ, ಅದಕ್ಕೆ ಹೊಂದಿಕೊಂಡ ಪರಿಸರವನ್ನೂ ಅವರೆಷ್ಟು ಮಟ್ಟಿಗೆ ಪ್ರೀತಿಸುತ್ತಾರೋ, ಆಸ್ವಾದಿಸುತ್ತಾರೋ, ಅಷ್ಟೇ ಮಟ್ಟಿಗೆ ಅದರ ಸವಿಯನ್ನೂ, ಕಹಿಸಿಹಿಗಳನ್ನೂ ಮಲೆನಾಡ ಹೊರಗಿನವರೊಡನೆ ಹಂಚಿಕೊಂಡು ಸಂಭ್ರಮಿಸುವುದು. ಮಲೆನಾಡ ಜನರ ಈ ವಿಶಿಷ್ಟತೆಯ ಫಲವಾಗಿ ಕನ್ನಡ ಜನತೆಗೆ ಕುವೆಂಪುರವರ 'ಕಾನೂರು ಹೆಗ್ಗಡಿತಿ' ಮತ್ತು ಕಾರಂತರ 'ಬೆಟ್ಟದ ಜೀವ' ಗಳಂಥ ಅಮೋಘ ಕೃತಿಗಳು ದೊರೆತಿವೆ.

ತೇಜಸ್ವಿಯವರ ಪರಿಸರದ ಕತೆ, ಕರ್ವಾಲೋ ಕಿರುಕಾದಂಬರಿ ಓದಿದಾಗ ಮನಸ್ಸನ್ನು ಸೆರೆಹಿಡಿದಿದ್ದ ಪ್ರಾಣಿಗಳು ವ್ಯಕ್ತಿಗಳು ಪುಸ್ತಕವನ್ನು ಮೊಟ್ಟಮೊದಲ ಬಾರಿಗೆ ಓದುತ್ತಿದ್ದಾಗ್ಯೂ ಸಹ ಚಿರಪರಿಚಿತರಂತೆ ನನ್ನ ಮೂಲ ಚೇತನವನ್ನು ಮಿಡಿದು, ನನ್ನ ಜೀವಕ್ಕೆ ಅತಿ ಸಮೀಪದ, ಅತ್ಯಂತ ನಿಕಟ ಬಂಧುಗಳಂತೆ ನನ್ನನ್ನು ಆವರಿಸಿಕೊಂಡುಬಿಟ್ಟರು. ಇವರೆಲ್ಲಾ ನನಗೆ ಮೊದಲಿಂದ ಗೊತ್ತಿದ್ದವರೇ, ಇವರನ್ನು ನಾನು ನನ್ನ ಬಾಲ್ಯದಿಂದಲೂ ಬಲ್ಲೆ, ಇವರೆಲ್ಲಾ ಪೂರ್ತಿ ನನ್ನವರೇ ಎಂದುಕೊಳ್ಳುವಷ್ಟರಮಟ್ಟಿಗೆ ಹತ್ತಿರದವರಾಗಿಬಿಟ್ಟರು.

ಇತ್ತೀಚೆಗೆ ಒಂದೆರಡು ತಿಂಗಳ ಹಿಂದೆ ಕಾನೂರು ಹೆಗ್ಗಡಿತಿಯನ್ನು ಮತ್ತೆ ಓದಿದೆ. ಹಿಂದೆ ಓದಿದ್ದುದು ಬಹುಪಾಲು ಮರೆತಿದ್ದರೂ, ನೆನಪಿನಾಳದಲ್ಲಿ ಮಾತ್ರ ಆ ಪುಸ್ತಕ ಓದಿದಾಗ ಒದಗಿದ್ದ ಅಪೂರ್ವಾನುಭವ ಚಿರನೂತನವಾಗಿ ಉಳಿದಿತ್ತು. ಈಗ ಅದನ್ನು ಮತ್ತೆ ಓದುತ್ತಿದ್ದಂತೆ ಸತ್ಯಾಂಶ ದಿಗ್ಗನೆ ಹೊಳೆಯಿತು: ತೇಜಸ್ವಿಯವರ ಪರಿಸರದ ಕತೆಯಲ್ಲಿ, ಕರ್ವಾಲೋ ಕಾದಂಬರಿಯಲ್ಲಿ ಬರುವ ಬೇಟೆ ನಾಯಿಗಳು, ಕಂತ್ರಿ ನಾಯಿಗಳು, ಪಿಕಳಾರ ಹಕ್ಕಿಗಳು, ಆಕಾಶಬಗರೆ ಹಕ್ಕಿಗಳು, ಕಾಡುಕೋಳಿಗಳು, ಕಾಡುಹಂದಿಗಳು, ಮೀನು, ಆಮೆ, ಕಪ್ಪೆಗಳು ಇವೆಲ್ಲದರ ತಾತ ಮುತ್ತಾತಂದಿರು ಕಾನೂರು ಹೆಗ್ಗಡಿತಿಯ ಪರಿಸರದಲ್ಲಿ ಜೀವಂತವಾಗಿ ನಮ್ಮ ಮುಂದೆ ಕಂಗೊಳಿಸುತ್ತವೆ - ಎಂದು. ಅಷ್ಟೇ ಅಲ್ಲ, ಪುಟ್ಟಪ್ಪನವರ ಕಾದಂಬರಿಯ ಬೇಟೆಗಾರ ಪುಟ್ಟಣ್ಣ, ಅವನ ನಾಯಿ ಟೈಗರು, ಹಳೇಪೈಕದ ತಿಮ್ಮ, ಡೊಳ್ಳುಹೊಟ್ಟೆಯ ಬಾಡುಗಳ್ಳ ಸೋಮ - ಇವರೆಲ್ಲಾ ತೇಜಸ್ವಿಯವರ ಪರಿಸರದ ಕತೆ ಮತ್ತು ಕರ್ವಾಲೊ ಕಾದಂಬರಿಗಳನ್ನು ಮಾರ, ಪ್ಯಾರ, ಎಲ್ಲರ ಪ್ರೀತಿಪಾತ್ರ ನಾಯಿ 'ಕಿವಿ'ಗಳಾಗಿ ಪುನರ್ಜನ್ಮ ತಳೆದು ವಿಭಿನ್ನ ಗುಣಗಳಿಂದ ಮತ್ತೆ ನಮ್ಮ ಹೃದಯಕ್ಕೆ ಹತ್ತಿರದವರಾಗುತ್ತಾರೆ.

ಈ ರೀತಿಯ ಸಾದೃಶ್ಯಕ್ಕೆ ಉದಾಹರಣೆಯಾಗಿ ಕಾನೂರು ಹೆಗ್ಗಡಿತಿಯಲ್ಲಿ ಬೇಟೆಗಾರ ಪುಟ್ಟಣ್ಣ ತನ್ನ ಪ್ರೀತಿಯ ನಾಯಿ ಟೈಗರು ಕಿಲಿಸ್ತರ ಜಾಕಿಯ ಗುಂಡಿನೇಟಿಗೆ ಅನ್ಯಾಯವಾಗಿ ಸಿಕ್ಕಿ ಸತ್ತಾಗ ಅತೀವ ದುಃಖಕ್ಕೆ ಒಳಗಾದದ್ದು, ಕರ್ವಾಲೋ ಕಾದಂಬರಿಯಲ್ಲಿ ಎಲ್ಲರ ಪ್ರೀತಿಯ ನಾಯಿ 'ಕಿವಿ'ಗೆ ಒದಗಿದ ಒಂದು ಕಷ್ಟದ ಸಮಯದಲ್ಲಿ ಅದನ್ನು ಕುರಿತು ಪ್ಯಾರ ಅದು ತನ್ನ ತಮ್ಮನಂತೆ ಎಂದು ಅಂತಃಕರಣದ ಮಾತಾಡಿ ವ್ಯಾಕುಲಗೊಂಡದ್ದನ್ನು ಎತ್ತಿ ಹೇಳಬಹುದು.

ಬೇಟೆಗಾರನಿಗೂ ಅವನ ನಾಯಿಗೂ ಇರುವ ಒಂದು ವಿಶೇಷ ಬಂಧವನ್ನು ಕುರಿತು ಕುವೆಂಪು ಹೀಗೆನ್ನುತ್ತಾರೆ : ''ಬೇಟೆಗಾರನಿಗೆ ನಾಯಿಗಳೆಂದರೆ ಪ್ರಾಣ. ಅದರಲ್ಲೂ ಚೆನ್ನಾಗಿ ಶಿಕಾರಿ ಮಾಡುವ ನಾಯಿಗಳನ್ನು ಬಂಧುಮಮತೆಯಿಂದ ಕಾಣುತ್ತಾನೆ. ಅವುಗಳಿಗೂ ತನ್ನಂತೆಯೇ ವ್ಯಕ್ತಿತ್ವವಿದೆಯೆಂಬುದರಲ್ಲಿ ಅವನಿಗೆ ಸ್ವಲ್ಪವೂ ಸಂದೇಹವಿರುವುದಿಲ್ಲ. ನಾಯಿಗಳಿಗಾಗುವ ಅಪಾಯವೂ ತನ್ನ ಅಂಗಗಳಿಗಾದ ಅಪಾಯದಂತೆ.'' ನಾಯಿ ಮನುಷ್ಯನ ಪರಮಾಪ್ತ ಸ್ನೇಹಿತ (man's best friend) ಎಂಬ ಮಾತನ್ನು ಸರ್ವೇಸಾಮಾನ್ಯವಾಗಿ ಕೇಳುತ್ತೇವೆ, ಆದರೆ ಪ್ಯಾರ ಹೇಳುವಂತೆ ಅದು ನನ್ನ ತಮ್ಮನಂತೆ ಎನ್ನುವುದು ಅಪರೂಪದ ಮಾತು.

ಪರಿಸರ ಪ್ರೇಮ, ಪರಿಸರ ಸಾಹಿತ್ಯ ರಚನಾ ಪರಂಪರೆ ಕುವೆಂಪುರವರಿಂದ ತೇಜಸ್ವಿಯವರಿಗೆ ಮುಂದುವರೆದಿರುವುದು ಗಮನಾರ್ಹ. ಈ ದೃಷ್ಟಿಯಿಂದ ನೋಡಿದರೆ, ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಕುವೆಂಪು ಅವರ ಮತ್ತೊಂದು ಮಹತ್ತರ ಕೊಡುಗೆ ತಂದೆಯಷ್ಟೇ ಕುಶಲ ಕಾದಂಬರಿಕಾರ ಪೂರ್ಣಚಂದ್ರ ತೇಜಸ್ವಿ ಎಂದು ಹೇಳಬಹುದು.

ಈ ರೀತಿಯ ಪರಿಸರ ಪ್ರೇಮ ಪರಂಪರೆಯ ಮತ್ತೊಂದು ಮುಖವನ್ನು ಪರಿಸರ ಸಾಹಿತಿ ಶಿವರಾಮ ಕಾರಂತರ ಮಗ ಉಲ್ಲಾಸರು ಭಾರತದ ಕಾಡುಗಳಲ್ಲಿ ದಿನೇದಿನೇ ನಶಿಸಿ ಹೋಗುತ್ತಿರುವ ಹುಲಿಯ ಸಂರಕ್ಷಣಾ ಕಾರ್ಯದಲ್ಲಿ ಮಾಡುತ್ತಿರುವ ಅಂತರ ರಾಷ್ಟ್ರೀಯ ಮಟ್ಟದ ನಿಯೋಜನೆಗಳಲ್ಲಿ ಕಾಣಬಹುದು. ಪ್ರಕೃತಿ ಪರಿಸರಕ್ಕೆ ಮೀಸಲಾದ National Geographic Magazine ಮಾಸಪತ್ರಿಕೆ ಉಲ್ಲಾಸರು ಮಾಡುತ್ತಿರುವ ಕಾರ್ಯವನ್ನು ಉಲ್ಲೇಖಿಸಿ ಒಂದು ವಿಶೇಷ ಲೇಖನವನ್ನು ಪ್ರಕಟಿಸಿದ್ದು ಕನ್ನಡಿಗರೆಲ್ಲರೂ ಹೆಮ್ಮೆ ಪಡಬೇಕಾದ ವಿಚಾರ.

ಕನ್ನಡ ಓದುಗರಲ್ಲಿ ಮೇಲ್ಮಟ್ಟದ ಸಾಹಿತ್ಯಾರಾಧಕರಿಗೆ ಮಲೆನಾಡಿನ ರಸದೌತಣ ಒದಗಿಸುವ ಮಹಾಕಾದಂಬರಿ 'ಕಾನೂರು ಹೆಗ್ಗಡಿತಿ'. ಕೃತಿರಚನೆಯಂತೆಯೇ ಕೃತಿರಸಾಸ್ವಾದನೆಯೂ ಒಂದು ಸೃಷ್ಟಿಕಾರ್ಯ ಎನ್ನುತ್ತಾರೆ ಕುವೆಂಪು ಕಾನೂರು ಕಾದಂಬರಿಗೆ ಅವರು ಬರೆದ ಅರಿಕೆಯಲ್ಲಿ. ಕಾದಂಬರಿಯನ್ನು ಓದುವವರ ಪ್ರತಿಭೆಯಲ್ಲಿ ಅದು ಮತ್ತೊಮ್ಮೆ ಸೃಷ್ಟಿಯಾಗಬೇಕಾಗುತ್ತದೆ. ಹೊಸದಾಗಿ ಉತ್ತು ಬಿತ್ತಿ ಹೂದೋಟವನ್ನು ಬೆಳೆಯಿಸುವಂತೆ ಅದೊಂದು ಸಜೀವವಾದ ಪ್ರಾಣಪೂರ್ಣವಾದ ಕ್ರೀಡಾಕ್ರಿಯೆ'' ಅನ್ನುತ್ತಾರೆ ಅವರು. ಮುಂದುವರೆಯುತ್ತಾ ಅವರು ಬರೆಯುತ್ತಾರೆ: ''ಈ ನನ್ನ ಪ್ರಥಮ ಕಾದಂಬರಿಯನ್ನು ಓದುವವರಲ್ಲಿ ನನ್ನದೊಂದು ವಿಜ್ಞಾಪನೆ. ಇದನ್ನು ಕಥೆಯ ಕೋಲಾಹಲಕ್ಕಾಗಿ ಓದಬೇಡಿ. ಸಾವಧಾನವಾಗಿ, ಸಚಿತ್ರವಾಗಿ, ಸಜೀವವಾಗಿ ಓದಿ. ಇಲ್ಲಿ ಚಿತ್ರಿತವಾಗಿರುವುದು ಮಲೆನಾಡಿನ ಬಾಳಿನ ಕಡಲಿನಲ್ಲಿ ಒಂದು ಹನಿ. ಅನೇಕರಿಗೆ ಅದು ಸಂಪೂರ್ಣವಾಗಿ ಹೊಸ ಪ್ರಪಂಚವಾಗುತ್ತದೆ. ಹೊಸ ಊರಿಗೆ ಹೋಗುವವನು ಅಲ್ಲಿಯ ಜನ ಮತ್ತು ಜೀವನದ ವಿಚಾರವಾಗಿ ತಟಕ್ಕನೆ ಯಾವ ನಿರ್ಣಯಗಳನ್ನೂ ಮಾಡಿಕೊಳ್ಳದೆ ಸ್ವಲ್ಪ ಕಾಲ

ತಾಳ್ಮೆಯಿಂದಿದ್ದು ಕ್ರಮೇಣ ಬಳಕೆಯಿಂದ ಜನರನ್ನೂ, ಜೀವನವನ್ನೂ ಪರಿಚಯ ಮಾಡಿಕೊಳ್ಳುವಂತೆ ಈ ಕಾದಂಬರಿಯ ಅರಣ್ಯ ಜಗತ್ತನ್ನು ಪ್ರವೇಶಿಸುವ ವಾಚಕರು ವರ್ತಿಸಬೇಕಾಗುತ್ತದೆ....''

ತೇಜಸ್ವಿಯವರು ಪರಿಸರದ ಕತೆಯ ಅರ್ಪಣೆಯಲ್ಲಿ ''ಪ್ರಕೃತಿ ಮತ್ತು ಪರಿಸರದ ಬಗ್ಗೆ ನನಗೆ ಮೊದಲ ಕುತೂಹಲ ಮೂಡಿಸಿದ ನನ್ನ ತಂದೆಯವರಿಗೆ'' ಎಂದು ನುಡಿದಿದ್ದಾರೆ. ತಮ್ಮ ಕರ್ವಾಲೋ ಕಾದಂಬರಿಯಲ್ಲಿ ಬಂದಿರುವ ಕಿವಿ ಎನ್ನುವ ನಾಯಿಯ ಬಗ್ಗೆ ಪರಿಸರದ ಕತೆಯಲ್ಲಿ ಬರೆಯುತ್ತಾ ''ಅದು ಒಂದು ಕಾಲದಲ್ಲಿ ನನ್ನೊಡನೆ ಇದ್ದ ಅಸಾಧಾರಣ ಬುದ್ಧಿಯ ಶಿಕಾರಿ ನಾಯಿ. ಸ್ಪಾನಿಯೆಲ್ ಜಾತಿಯ ನಾಯಿ ಆದ ಕಾರಣ ಅದರ ಕಿವಿ ಸುಮಾರು ಅರ್ಧ ಅಡಿಗಿಂತ ಉದ್ದ ಇದ್ದು ತಲೆಯ ಪಕ್ಕದಲ್ಲಿ ವಿಸ್ತಾರವಾಗಿ ಇಳಿಬಿದ್ದಿತ್ತು. ಅದಕ್ಕಾಗೆ ಅದಕ್ಕೆ ಕಿವಿ ಎನ್ನುವ ಹೆಸರು ಬಂದಿದ್ದು.... ಕೋವಿ ಹೆಗಲ ಮೇಲೆ ಹಾಕಿಕೊಂಡು ದಿನವಿಡೀ ಅದರೊಡನೆ ಕಾಡು ಅಲೆಯುವುದೇ ಕೆಲಸವಾಗಿತ್ತು. ಹೀಗೆ ಓದುವುದು, ಬರೆಯುವುದು ಎಲ್ಲವಕ್ಕೂ ತಿಲಾಂಜಲಿ ಕೊಟ್ಟು ನಿರ್ಜನ ಕಾಡುಗಳಲ್ಲಿ ಗೊತ್ತುಗುರಿ ಇಲ್ಲದೆ ಅಲೆಯುತ್ತಿರುವ ನನ್ನನ್ನು ನೋಡಿ ಇವನು ಸಂಪೂರ್ಣ ಹಾಳಾದನೆಂದು ವ್ಯಸನ ಸೂಚಿಸಿದವರೂ ಅನೇಕರಿದ್ದಾರೆ. ''....ಎಂಥವರಿಗೆ ಎಂಥ ಮಗ ಎಂದು ವಿಷಾದಪಟ್ಟವರೂ ಅನೇಕರಿದ್ದಾರೆ'' ಎಂದು ತಮ್ಮ ಸ್ವಂತ ಅನಿಸಿಕೆಗಳನ್ನು ಓದುಗರೊಡನೆ ಮನಸ್ಸು ಬಿಚ್ಚಿ ಹಂಚಿಕೊಂಡಿದ್ದಾರೆ.

ಮುಂದೆ ಕಾಡು ಪ್ರಾಣಿಗಳ ಬಗ್ಗೆ ಹೀಗೆ ಬರೆಯುತ್ತಾರೆ: ''ನನ್ನ ಕೈಗೆ ಕೋವಿ ಬರುವ ವೇಳೆಗೆ ಕಾಡುಪ್ರಾಣಿಗಳೆಲ್ಲಾ ಅವನತಿಯ ಹಾದಿ ಹಿಡಿದಿದ್ದರೂ ಈಗಿನಂತೆ ನಾಮಾವಶೇಷವಾಗುವ ಸ್ಥಿತಿಗೆ ಇಳಿದಿರಲಿಲ್ಲ. ಕಾಡುಪ್ರಾಣಿಗಳನ್ನು ಜೂಗಳಲ್ಲೂ, ಪುಸ್ತಕದ ಚಿತ್ರಗಳಲ್ಲೂ ಹೆಚ್ಚಾಗಿ ನೋಡಿದ್ದ ನನಗೆ ಮೊದಲ ಬಾರಿಗೆ ಅವು ಕಾಡಿನ ನಿಶ್ಚಲ ಮೌನದಲ್ಲಿ ಕಾಲ ಬಳಿಯ ಪೊದೆಗಳಿಂದಲೇ ಧಿಗ್ಗನೆ ಮಿಂಚಿ ಮಾಯವಾದಾಗ ಆದ ಅನುಭವ ಅಸಾಧಾರಣವಾದುದು. ಅವುಗಳ ಈ ಗೌಪ್ಯತೆಯೇ ನಮಗೆ ಅವುಗಳ ಬಗ್ಗೆ ಅಸಾಧಾರಣ ಕುತೂಹಲ ಹುಟ್ಟಿಸುತ್ತದೆ....

''ಕಿವಿ ಮತ್ತು ನಾನು ಅನೇಕ ಪ್ರಾಣಿಗಳನ್ನು ಶಿಕಾರಿ ಮಾಡಿ ಸ್ವಾಹಾ ಮಾಡಿದ್ದೇವಾದರೂ ಆಗಿದ್ದ ಪ್ರಾಣಿಗಳ ಸಂಖ್ಯೆ ದೃಷ್ಟಿಯಿಂದ ನಮಗೆ ಅವನ್ನು ಶಿಕಾರಿ ಮಾಡಿದೆವಲ್ಲಾ ಎಂದು ಅಷ್ಟೊಂದೇನೂ ಬೇಸರವಾಗುತ್ತಿರಲಿಲ್ಲ. ಇದಕ್ಕೆ ಭಾರತದ ನಶಿಸುತ್ತಿರುವ ವನಸಂಪತ್ತಿನ ಬಗ್ಗೆ ಆಗ ನನಗಿದ್ದ ಅಜ್ಞಾನವೂ ಒಂದು ಕಾರಣವಿರಬಹುದು. ಒಟ್ಟಿನಲ್ಲಿ ಈ ಶಿಕಾರಿಯ ಪಾಪಪುಣ್ಯಗಳೇನೇ ಇರಲಿ, ಇದು ನನಗೆ ಕಾಡಿನ ಬಗ್ಗೆ, ಕಾಡುಪ್ರಾಣಿಗಳ ಬಗ್ಗೆ ನಿಧಾನವಾಗಿ ಆತ್ಮೀಯತೆಯನ್ನು ಬೆಳೆಸಲು ಸಹಾಯವಾಯಿತೆಂದು ಹೇಳಬಹುದು. ಈಗ ಕಾಡುಗಳಿಲ್ಲದ, ಕಾಡುಪ್ರಾಣಿಗಳಿಲ್ಲದ ಪರಿಸರವು ಸ್ಮಶಾನಕ್ಕಿಂತ

ಭೀಕರವಾಗಿ ಕಾಣುತ್ತದೆ. ಕಾಡುಗಳನ್ನೂ, ಕಾಡುಪ್ರಾಣಿಗಳನ್ನೂ ಸಂರಕ್ಷಿಸಬೇಕೆಂದು ನಾನು ಹೇಳಿದರೆ ಅದು ನನ್ನ ತಿಳುವಳಿಕೆಯ ಕಾರಣಗಳಿಗಿಂತಲೂ ಹೆಚ್ಚಾಗಿ ಅವುಗಳೊಂದಿಗೆ ನಾನು ಹೊಂದಿರುವ ವ್ಯಕ್ತಿನಿಷ್ಠ ಸಂಬಂಧವೇ ಆಗಿದೆ. ಕಾಡುಗಳನ್ನು ನಾಶ ಮಾಡಿದಾಗ, ಅಲ್ಲಿರುವ ಪ್ರಾಣಿಗಳನ್ನೂ, ಅವುಗಳ ಪರಿಸರವನ್ನೂ ಧ್ವಂಸ ಮಾಡಿದಾಗ ರಹಸ್ಯ, ಗೌಪ್ಯ, ಅದ್ಭುತಗಳ ನಿರಂತರ ನಿಧಿಯೊಂದನ್ನು ನಮ್ಮ ಕಿರಿಯ ಜನಾಂಗ ಕಳೆದುಕೊಂಡಂತಾಗಿ ಮನಸ್ಸು ಖಿನ್ನವಾಗುತ್ತದೆ. ಈ ದುರಂತದ ದುಃಖವನ್ನು ಅಂಕಿ ಅಂಶಗಳ ಆಧಾರದ ಮೇಲೆ ಸಿದ್ಧಾಂತಗಳ ಮುಖಾಂತರ ವಿಶ್ಲೇಷಿಸಿ, ಪರಿಸರ ಸಂರಕ್ಷಣೆಯ ಬಗ್ಗೆ ಜನರಿಗೆ ಹೇಳಲು ಮನಸ್ಸೇ ಬರುವುದಿಲ್ಲ. ನಾನು ಕಂಡಂತೆ ಕಾಡನ್ನು ಕಂಡಿಲ್ಲದ, ಅನುಭವವಿಲ್ಲದ ಮನಸ್ಸುಗಳಿಗೆ ನನ್ನ ಮನಸ್ಸಿನ ದುಗುಡವನ್ನು ನಿರ್ಜೀವ ಅಂಕಿಸಂಖ್ಯೆಗಳ ವಿಶ್ಲೇಷಣೆ ಮುಖಾಂತರ ಹೇಳಿ ಹೇಗೆ ತಾನೇ ಪ್ರತಿಸ್ಪಂದನ ಉಂಟುಮಾಡಲಿ?....

‘‘ಪ್ರಕೃತಿ ಮತ್ತು ಪರಿಸರದ ಬಗ್ಗೆ ನನಗೆ ಚಿಕ್ಕಂದಿನಿಂದ ಇರುವ ಕುತೂಹಲಕ್ಕೆ ಮುಖ್ಯ ಕಾರಣ ನಮ್ಮ ತಂದೆಯವರೇ. ನಮಗೆ ಕುತೂಹಲ ಹುಟ್ಟಿಸಬೇಕೆಂಬ ಉದ್ದೇಶವೇನೂ ಅವರಿಗೆ ಇದ್ದಂತೆ ಕಾಣಲಿಲ್ಲ. ಅದರಲ್ಲಿ ಅವರಿಗೇ ಇದ್ದ ಆಸಕ್ತಿಯ ಪರಿಣಾಮವಾಗಿಯೇ ನಮಗೂ ಆಸಕ್ತಿ ಉಂಟಾಯಿತು.... ಇವುಗಳೆಲ್ಲದರ ಬಗ್ಗೆ ಅವರು ಹೇಳುತ್ತಿದ್ದ ವ್ಯಾಖ್ಯಾನ, ವಿವರಣೆಗಳು ಇಂದಿಗೂ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದಿವೆ. ಅವರ ತಾರುಣ್ಯದ ಕಾಡಿನ ಮತ್ತು ಬೇಟೆಯ ರೋಮಾಂಚಕ ಅನುಭವಗಳನ್ನು ಕೇಳಿ ಪ್ರಭಾವಿತನಾದ ನಾನು ನಮ್ಮ ತಂದೆ ಏಕಾದರೂ ಮೈಸೂರಿಗೆ ಪಾಠ ಹೇಳಲು ಮಲೆನಾಡನ್ನು ತೊರೆದು ಬಂದರೊ ಎಂದು ವ್ಯಥೆಪಡುತ್ತಿದ್ದೆ.’’

ಪ್ರಕೃತಿ, ಪರಿಸರದ ಬಗ್ಗೆ ಆಸ್ಥೆ, ಕುತೂಹಲಗಳು ಮೂಡಿ ತಾನೊಬ್ಬ ಪರಿಸರವಾದಿಯಾಗಿ ರೂಪುಗೊಂಡ ಹಾದಿ ಇದು ಎಂದು ವಿವರಿಸುತ್ತಾ ತೇಜಸ್ವಿಯವರು, ಪರಿಸರ ಸಂರಕ್ಷಣೆಯ ಬಗ್ಗೆ ವೈಜ್ಞಾನಿಕ ಪಾಠಗಳಷ್ಟೇ ಈ ನಡೆದು ಬಂದ ದಾರಿಯನ್ನೂ ತಿಳಿಯುವುದು ಅಗತ್ಯವೆನ್ನುತ್ತಾರೆ.

ಪರಿಸರದ ಬಗ್ಗೆ ಚಿಕ್ಕ ಚಿಕ್ಕ ಸೋಜಿಗಕಾರಿ ರೋಮಾಂಚಕಾರಿ ಘಟನೆಗಳನ್ನೊಳಗೊಂಡ ತೇಜಸ್ವಿಯವರ ಕತೆಗಳು ಕನ್ನಡ ಸಾಹಿತ್ಯಕ್ಕೆ ಒಂದು ಅಮೂಲ್ಯ ಕಾಣಿಕೆ. ವಿಶಿಷ್ಟ ಶೈಲಿಯಲ್ಲಿ ಪ್ರಕೃತಿಯೊಡನೆ ಅವರು ನಡೆಸುವ ಸುಖದುಃಖದ ಸಂವಾದ ಕನ್ನಡಕ್ಕೆ ಹೊಸದಷ್ಟೇ ಅಲ್ಲ, ಕನ್ನಡದ ಇತರ ಎಲ್ಲಾ ಬರಹಗಳಿಗಿಂತ ಸಂಪೂರ್ಣ ವಿಭಿನ್ನವಾದ ಕೃತಿ.

‘ಎಂಥವರಿಗೆ ಎಂಥ ಮಗ’ ಎಂದು ಯಾರೋ ಅಂದುಕೊಂಡರೇನಂತೆ, ತೇಜಸ್ವಿ ತಂದೆಗೆ ತಕ್ಕ ಮಗ ಎನ್ನುವುದು ನಿರ್ವಿವಾದ.

# ಕುವೆಂಪು ಅವರ ಕೆಲವು ಕಥೆಗಳು

## ವಿಶ್ವನಾಥ್ ಹುಲಿಕಲ್, ಕ್ಯಾಲಿಫೋರ್ನಿಯ

**ಪೀಠಿಕೆ :**

ಕನ್ನಡವು ವಿಶ್ವದ ಇಪ್ಪತ್ತು ಪ್ರಮುಖ ಭಾಷೆಗಳಲ್ಲಿ ಒಂದಾಗಿ ಪರಿಗಣಿಸಲ್ಪಟ್ಟಿದೆ. ಆ ಭಾಷೆ ಇಂಗ್ಲೀಷಿಗಿಂತಲೂ ಪುರಾತನವಾಗಿದ್ದು, ಕನಿಷ್ಠ ೨೦೦೦ ವರ್ಷಗಳಷ್ಟು ಇತಿಹಾಸ ಹೊಂದಿದೆ. ಕನ್ನಡ ಸಾಹಿತ್ಯ ವಿಶ್ವದ ಇತರ ಯಾವುದೇ ಶ್ರೇಷ್ಠ ಸಾಹಿತ್ಯಕ್ಕೆ ಸರಿಸಾಟಿಯಾಗಿ ನಿಲ್ಲಬಲ್ಲಷ್ಟು ಯೋಗ್ಯತೆಯನ್ನು ಸಂಪಾದಿಸಿ, ಸಮೃದ್ಧವಾಗಿದೆ, ಶ್ರೀಮಂತವಾಗಿದೆ. ಉತ್ತಮ ಗುಣಮಟ್ಟ ಹಾಗೂ ಸಂಖ್ಯಾ ಬಾಹುಳ್ಯದ ದೃಷ್ಟಿಯಿಂದಲೂ, ಕನ್ನಡ ಸಾಹಿತ್ಯದ ಕಾವ್ಯ, ನಾಟಕ, ಕಾದಂಬರಿ, ಸಣ್ಣಕಥೆ, ವಿಮರ್ಶೆ ಇತ್ಯಾದಿ ಎಲ್ಲ ಪ್ರಕಾರಗಳಲ್ಲೂ ವಿಪುಲವಾಗಿ ಕೃತಿಗಳ ರಚನೆಯಾಗಿದೆ. ಕನ್ನಡದ ಪ್ರಪ್ರಥಮ ಗ್ರಂಥವೆಂದು ಭಾವಿಸಲಾದ ನೃಪತುಂಗನ 'ಕವಿರಾಜ ಮಾರ್ಗ'ವು ಸುಮಾರು ೧೧೫೦ ವರ್ಷಗಳಷ್ಟು ಹಿಂದಿನದು. ಹತ್ತನೆಯ ಶತಮಾನದ ಆದಿಭಾಗದಲ್ಲಿ ಹಳಗನ್ನಡದಲ್ಲಿ ರಚಿತವಾದ ಶಿವಕೋಟ್ಯಾಚಾರ್ಯರ 'ವಡ್ಡಾರಾಧನೆ' ಎಂಬ ಹತ್ತೊಂಬತ್ತು ಸಣ್ಣಕಥೆಗಳ ಸಂಗ್ರಹವೊಂದಿದೆ. ಅದನ್ನು ಬಿಟ್ಟರೆ ಮತ್ತೆ ಆಧುನಿಕ ಸಾಹಿತ್ಯದಲ್ಲಿ ರಚಿತವಾದ ಸಣ್ಣಕಥಾಪ್ರಕಾರದ ಚರಿತ್ರೆ ನೂರು ವರ್ಷಗಳಷ್ಟು ಹಿಂದಿನದು.

ಅಧ್ಯಯನ ಮತ್ತು ಬೆಳವಣಿಗೆಯ ದೃಷ್ಟಿಯಿಂದ ಆಧುನಿಕ ಕನ್ನಡ ಸಣ್ಣಕಥೆಯ ಪ್ರಕಾರವನ್ನು ಅವಲೋಕಿಸಿದಾಗ, ಅದನ್ನು ಐದು ಹಂತಗಳಲ್ಲಿ ಗುರುತಿಸಬಹುದು. ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ ಮತ್ತು ದಲಿತ - ಇವೇ ಈ ಐದು ಯುಗಗಳು. 'ಸಣ್ಣಕಥೆಗಳ ಜನಕ' ಎಂದೇ ಪರಿಗಣಿಸಲ್ಪಟ್ಟ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರನ್ನು ಆಧುನಿಕ ನವೋದಯ ಮಾರ್ಗದ ಆದ್ಯ ಪ್ರವರ್ತಕರೆಂದು ಗುರುತಿಸುವುದು ವಾಡಿಕೆ. ೧೯೦೦ ರಿಂದ ೧೯೫೦ರವರೆಗೆ ನವೋದಯ ಮಾರ್ಗದಲ್ಲಿ ಕಥೆಗಳನ್ನು ರಚಿಸಿ, ಆ ಮಾರ್ಗವನ್ನು ರೂಢಿಸಿದ ಇತರ ಕೆಲವು ಶ್ರೇಷ್ಠ ಸಾಹಿತಿಗಳೆಂದರೆ ಆನಂದ, ಅಶ್ವತ್ಥ, ಆನಂದಕಂದ, ಗೊರೂರ್ ರಾಮಸ್ವಾಮಿ ಅಯ್ಯಂಗಾರ್, ಎಂ.ವೀ. ಸೀತಾರಾಮಯ್ಯ, ಬಾಗಲೋಡಿ ದೇವರಾಯ, ಭಾರತೀಪ್ರಿಯ, ಎ.ಆರ್. ಕೃಷ್ಣಶಾಸ್ತ್ರಿ ಮತ್ತು ಕುವೆಂಪು.

ನವೋದಯ ಮಾರ್ಗದ ಸಣ್ಣಕಥೆಗಳ ಬಗ್ಗೆ ಕೆಲವು ಲಕ್ಷಣಗಳನ್ನು ಹೇಳುವುದಾದರೆ, ಈ ಕಥೆಗಳಿಗೆ ಒಂದು ತಾರ್ಕಿಕ ಆರಂಭ, ಮಧ್ಯ ಹಾಗೂ ಮುಕ್ತಾಯಗಳಿರುತ್ತವೆ. ಸರಳ

ಮತ್ತು ನೇರವಾದ ಕಾಲಾನುಕ್ರಮದ ನಿರೂಪಣೆ ಈ ಕಥೆಗಳ ಪ್ರಮುಖ ತಂತ್ರವಾದರೂ, ಕೆಲವೊಮ್ಮೆ 'ಫ್ಲಾಶ್‌ಬ್ಯಾಕ್' ತಂತ್ರಗಳು ಉಪಯೋಗಿಸಲ್ಪಟ್ಟಿರುವುದೂ ಉಂಟು. ಪರಂಪರಾಗತ ಮೌಲ್ಯಗಳನ್ನು ಬಿಂಬಿಸುವ, ಪೋಷಿಸುವ ಮತ್ತು ವೃದ್ಧಿಸುವಂತಹ ವಾತಾವರಣದಲ್ಲಿ ಈ ಕಥೆಗಳನ್ನು ಹೆಣೆದಿರುತ್ತಾರೆ. ಆದರೆ, ಬದುಕಿನಲ್ಲಿ ನೋವು, ಅನ್ಯಾಯ, ದುಷ್ಟತನ -ಇವೆಲ್ಲಾ ಅನಿವಾರ್ಯ. ಸಮಾಜದ ಇಂತಹ ನಿಷ್ಠುರ ಮುಖಗಳನ್ನು ಪರಂಪರಾಗತ ಮೌಲ್ಯದ ತಾಳಿಕೆಯ ಗುಣಗಳನ್ನು ಉದ್ದೀಪಿಸಲು ಎಷ್ಟು ಬೇಕೋ, ಅಷ್ಟರಮಟ್ಟಿಗೆ ಉಪಯೋಗಿಸಿಕೊಳ್ಳುತ್ತಾರೆ. ಹೀಗಾಗಿ ತಲತಲಾಂತರಗಳಿಂದ ಬಂದ ಶ್ರದ್ಧೆ, ನಂಬಿಕೆಗಳನ್ನು ಪ್ರಶ್ನಿಸುವಂತಹ ಸನ್ನಿವೇಶ, ಸಂದರ್ಭಗಳು ಎದುರಾದಾಗಲೂ, ಮೌಲ್ಯಗಳ ಚೌಕಟ್ಟಿನಲ್ಲಿಯೇ ಅದಕ್ಕೆ ಪರಿಹಾರವನ್ನು ಸೂಚಿಸುವ ಧೋರಣೆ ಮತ್ತು ಆತ್ಮವಿಶ್ವಾಸ ನವೋದಯ ಕಥೆಗಾರರಲ್ಲಿ ಕಾಣುತ್ತದೆ. ಅಲ್ಲದೆ, ಈ ವರ್ಗದ ಸಾಹಿತಿಗಳು ಜೀವನದಲ್ಲಿ ನೋವುಂಡ ಜೀವಿಗಳ ಬಗ್ಗೆ, ಶೋಷಣೆಗೊಳಗಾದ ಜನಾಂಗದ ಬಗ್ಗೆ ಅನುಕಂಪೆಯನ್ನು ತೋರಿಸುತ್ತಾರೆಯೇ ವಿನಃ, ಈ ಶೋಷಣೆಗೆ ಕಾರಣದ ವ್ಯವಸ್ಥೆಯ ಬಗ್ಗೆ ಆಕ್ರೋಶವನ್ನಾಗಲೀ, ಆರ್ಭಟವನ್ನಾಗಲೀ ಅಥವಾ ಪ್ರತಿಭಟನೆಯನ್ನಾಗಲೀ ವ್ಯಕ್ತಪಡಿಸುವುದಿಲ್ಲ. ಒಂದು ಸಂಕೀರ್ಣವಾದ ಸಾಮಾಜಿಕ ವ್ಯವಸ್ಥೆಯಲ್ಲಿ ಇವೆಲ್ಲಾ ಅನಿವಾರ್ಯ. ಆದರೆ ಇಂತಹ ಅನ್ಯಾಯದ ವಿರುದ್ಧ ಉದ್ವೇಗದಿಂದ ಆಕ್ರೋಶಿಸುವುದರಿಂದಾಗಲೀ, ಬಂಡಾಯವೇಳುವುದರಿಂದಾಗಲೀ, ಬದುಕು ಹಸನಾದೀತೆಂದು ಅವರಿಗೆ ಅನಿಸುವುದಿಲ್ಲ. ಆಕ್ರೋಶ, ಬಂಡಾಯಗಳು ಅಂತಹ ದೊಡ್ಡ ಗುಣಗಳೆಂದೂ ಅವರು ತಿಳಿಯುವುದಿಲ್ಲ, ಬದಲಾಗಿ ಸಂಯಮದಿಂದ, ಅಂತಃಶಕ್ತಿಯಿಂದ ವೈಯಕ್ತಿಕ ನೋವನ್ನು ಗೆಲ್ಲಬಲ್ಲ ಧೀರೋದಾತ್ತತೆ ಅವರಿಗೆ ಹೆಚ್ಚು ದೊಡ್ಡದಾಗಿ ಕಾಣುತ್ತದೆ. ಈ ಧೀರೋದಾತ್ತತೆ ಮಾಸ್ತಿಯವರಲ್ಲಿ ನಿಷ್ಕ್ರಿಯೆಯಿಂದ ಬಂದುದಲ್ಲ, ಬದಲಾಗಿ ಬದುಕಿನ ಆಳವಾದ ತಿಳುವಳಿಕೆಯಿಂದ ಬಂದದ್ದು (೩).

## ಕುವೆಂಪು ಅವರ ಕೆಲವು ಕಥೆಗಳು :

'ಕುವೆಂಪು ಅವರ ಕೆಲವು ಕಥೆಗಳು' (೧) ಎಂಬ ಪುಸ್ತಕವನ್ನು ಪಠ್ಯಪುಸ್ತಕವಾಗಿ ೨೦೦೨ರಲ್ಲಿ ಪ್ರಕಟಿಸಲಾಗಿದೆ. ಆದರೆ, ಈ ಪುಸ್ತಕವನ್ನು ಕುವೆಂಪು ಅವರು ಬರೆದು ಪ್ರಕಟಿಸಿದುದು ೧೯೪೦ರಲ್ಲಿ; ಮೂಲ ಕೃತಿಯ ಹೆಸರು 'ನನ್ನ ದೇವರು ಮತ್ತು ಇತರ ಕಥೆಗಳು'. (ಕುವೆಂಪು ಅವರು ಸುಮಾರು ೬೦ಕ್ಕೂ ಹೆಚ್ಚು ಪುಸ್ತಕಗಳನ್ನು ಬರೆದಿದ್ದರೂ, ಅವರ ಕಥಾಸಂಕಲನಗಳು ಕೇವಲ ಎರಡು.) ಈ ಕಥಾ ಸಂಕಲನದಲ್ಲಿ ಹತ್ತು ಕಥೆಗಳಿವೆ. ಈ ಕಥೆಗಳ ಬಗ್ಗೆ ಒಂದು ಪರಿಚಯಾತ್ಮಕ ವಿಮರ್ಶೆಯನ್ನು ನೀಡುವುದು ಈ ಲೇಖನದ ಆಶಯ.

## ನನ್ನ ದೇವರು :

'ನನ್ನ ದೇವರು' ಕಥೆಯಲ್ಲಿ ಹದಿನೈದು ವರ್ಷದ ಹುಡುಗಿಯೊಬ್ಬಳಿಗೆ ಇಪ್ಪತ್ತನಾಲ್ಕು ವರ್ಷದ ಹುಡುಗನೊಡನೆ ಮದುವೆಯಾಗಿರುತ್ತದೆ. ಅವಿಭಕ್ತ ಕುಟುಂಬ ಒಂದರಲ್ಲಿ ಅವರ ಹೊಸ ವೈವಾಹಿಕ ಜೀವನ ಶುರುವಾಗುತ್ತದೆ. ದುರದೃಷ್ಟವಶಾತ್, ವಿಷಮಶೀತಜ್ವರದಿಂದ ಪತಿ ಹದಿನೈದು ದಿನಗಳೊಳಗಾಗಿ ದುರ್ಮರಣವನ್ನಪ್ಪುತ್ತಾನೆ. ಅಂತಹ ದುಃಖಕಾರಕ ಘಳಿಗೆಯಲ್ಲಿ, ಅವಳ ಭಾವ ಅವಳಿಗೆ ಅಧ್ಯಾತ್ಮದ ತತ್ವಗಳ ಮೂಲಕ ಸಾಂತ್ವನ ನೀಡುತ್ತಾರೆ. ಅವರ ಘನ, ಗಾಂಭೀರ್ಯ ವ್ಯಕ್ತಿತ್ವ ಅವಳಲ್ಲಿ ಮೊದಲು ಗೌರವ, ನಂತರ ಮೆಚ್ಚುಗೆ, ಕ್ರಮೇಣ ಪ್ರೀತಿಯಾಗಿ ಪರಿಣಮಿಸುತ್ತದೆ. ಯೌವನ ಸಹಜವಾದ ಕಾಮನೆಗಳನ್ನು ಗೆಲ್ಲಲಾಗದೆ, ಅವರನ್ನು ಕೂಡಲು ತನ್ನೆಲ್ಲಾ ಧೈರ್ಯವನ್ನು ಒಟ್ಟುಗೂಡಿಸಿಕೊಂಡು ಮಧ್ಯರಾತ್ರಿಯಲ್ಲಿ ಅವರ ಕೋಣೆಗೆ ಹೋಗುತ್ತಾಳೆ. ಆದರೆ ಭಾವನವರು ಕೊಂಚವೂ ವಿಚಲಿತರಾಗದೆ, ಇವಳು ಅವೇಳೆಯಲ್ಲಿ ಬಂದ ಕಾರಣವನ್ನು ಕೇಳುತ್ತಾರೆ. ಆಕೆಗೆ ಭಾವನವರು ಅವಳೆಡೆಗೆ ಬರುತ್ತಿರುವುದು ಅಸ್ಥಿಪಂಜರದಂತೆ ಭಾಸವಾಗಿ, ಪ್ರಜ್ಞೆ ತಪ್ಪಿ ಕೆಳಗುರುಳುತ್ತಾಳೆ.

ಈ ಕಥೆ ಸ್ವಾರಸ್ಯವಾಗಿ, ಸಹಜವಾಗಿ ಓದಿಸಿಕೊಂಡು ಹೋಗುತ್ತದೆ; ಯಾವ ಬಗೆಯ ಧಾವಂತವಿಲ್ಲದೆ ಸಾಗುತ್ತದೆ. ಭಾವನ ವ್ಯಕ್ತಿತ್ವದ ವರ್ಣನೆ ಚೆನ್ನಾಗಿದೆ. ತಾರುಣ್ಯ ಸಹಜವಾದ ಬಯಕೆಗಳು ಕಥಾನಾಯಕಿಯನ್ನು ಕಾಡುತ್ತವೆ; ಇಂತಹ ಕಾಮನೆ ಅದಮ್ಯವಾದುದು. ಅವರೊಡನೆ ಸಮಾಗಮ ಹೊಂದಲು ಮಧ್ಯರಾತ್ರಿ ಹೊರಡುತ್ತಾಳೆ. ಆದರೆ ಪರಂಪರಾಗತ ಮೌಲ್ಯಗಳು ಭಾವ - ನಾದಿನಿಯರನ್ನು ಕೂಡಲು ಹೇಗೆ ಬಿಡುತ್ತವೆ? ಅದಲ್ಲದೆ, ಅದು ಭಾವನವರ ಆದರ್ಶ ವ್ಯಕ್ತಿತ್ವಕ್ಕೆ ಹೊರತಾದುದು. ಹೀಗಾಗಿ ಸಾಂಪ್ರದಾಯಿಕ ಮೌಲ್ಯಗಳು ಗೆಲ್ಲುತ್ತವೆ, ಕ್ಷಣಿಕ ಸುಖಗಳು ಸೋಲುತ್ತವೆ. ಕಥೆ ಹೀಗೆ ನೇರವಾಗಿ ಸರಳವಾಗಿ ವಿವರಿಸುತ್ತ ಮುಂದೆ ಸಾಗುತ್ತದೆ. ಅರ್ಥವಾಗದಂತಹ (ಅಂದರೆ ನವ್ಯರು ಉಪಯೋಗಿಸುವಂತಹ) ಯಾವ ಕ್ಲಿಷ್ಟ ಸಂಕೇತಗಳೂ ಇಲ್ಲ. ಬಹುಮಟ್ಟಿಗೆ ಕಾಲಾನುಕ್ರಮಣ ನಿರೂಪಣೆಯಲ್ಲಿ, ಒಂದು ಕಡೆ ಮಾತ್ರ 'ಫ್ಲಾಶ್-ಬ್ಯಾಕ್' ತಂತ್ರ ಉಪಯೋಗಿಸಲ್ಪಟ್ಟಿದೆ. ಮಹತ್ತರವಾದ ಜೀವನದರ್ಶನವನ್ನು (ಅಂದರೆ ಸಾವು-ಬದುಕು, ಆತ್ಮ-ದೇಹ, ಇತ್ಯಾದಿ) ಸರಳವಾದ ಮಾತುಗಳಲ್ಲಿ ವಿವರಿಸಿದ್ದಾರೆ. ಕುವೆಂಪು ಅವರಿಗೆ ಆಧ್ಯಾತ್ಮ ಮತ್ತು ತತ್ವಶಾಸ್ತ್ರಗಳಲ್ಲಿ ಎಷ್ಟೊಂದು ಆಸಕ್ತಿ ಇತ್ತು ಎಂಬುದಕ್ಕೆ ಈ ಕಥೆ ನಿದರ್ಶನ.

## ಸಾಲದ ಮಗು :

ಸುಬ್ಬ ಎಂಬುವನು ಎಂಟು ಹತ್ತು ವರ್ಷದ ಹುಡುಗ. ಆ ಊರಿನ ದೊಡ್ಡ ಧಣಿಗಳ ಮನೆಯಲ್ಲಿ ಜೀತದಾಳಾಗಿ ಕೆಲಸ ಮಾಡುತ್ತಿರುತ್ತಾನೆ. ಒಮ್ಮೆ ಮಳೆಗಾಲದಲ್ಲಿ ಧಣಿಯವರು -

ಜಾಸ್ತಿ ಮೀನು ಪಡೆಯುವ ಆಸೆಯಿಂದ - ಮಧ್ಯರಾತ್ರಿಯಲ್ಲೇ, ಸುಬ್ಬನನ್ನು ನಿದ್ದೆಯಿಂದ ಎಬ್ಬಿಸಿ, ಕೂಣಿ ನೋಡಿಕೊಂಡು ಬರಲು ತಮ್ಮ ಗದ್ದೆಯ ಬಳಿಗೆ ಕಳಿಸುತ್ತಾರೆ. ಅಘೋರಾತ್ರಿ, ಜಡಿ ಮಳೆ. ಸರಿ, ಸುಬ್ಬ ಕಂದೀಲು ಹಿಡಿದುಕೊಂಡು ಮನಸ್ಸಿಲ್ಲದ ಮನಸ್ಸಿನಿಂದ ಒಡೆಯರ ಮಾತನ್ನು ಪಾಲಿಸುತ್ತಾನೆ. ದಾರಿಯಲ್ಲಿ ಕಂದೀಲು ಒಡೆಯುತ್ತದೆ, ದಾರಿಯಂತೂ ಏನೇನೂ ಕಾಣಿಸುವುದಿಲ್ಲ. ಹೇಗೋ ಗದ್ದೆ ತಲುಪುತ್ತಾನೆ. ಕೂಣಿಯನ್ನು ತೆಗೆದು ಅಂಚಿನ ಮೇಲೆ ಇಟ್ಟು, ಪನ್ನೆಯನ್ನು ಈಚೆಗೆ ತೆಗೆಯುತ್ತಾನೆ. ತತ್‌ಕ್ಷಣವೇ ಮೀನು ತಿನ್ನಲೆಂದು ಬಂದ ಕೃಷ್ಣಸರ್ಪ, ಸುಬ್ಬನನ್ನು ಕಚ್ಚುತ್ತದೆ, ಸುಬ್ಬ ಕ್ಷಣಮಾತ್ರದಲ್ಲಿ ಅಸುನೀಗುತ್ತಾನೆ.

ಈ ಕಥೆಯಲ್ಲಿ ಮಲೆನಾಡಿನ ಕಾಡಿನ ವರ್ಣನೆ ಅತ್ಯಂತ ದಟ್ಟವಾದ ವಿವರಗಳಿಂದ ಕೂಡಿದೆ; ನಾವೇ ಕಾಡಿನಲ್ಲಿದ್ದೇವೇನೋ ಎನ್ನುವಷ್ಟರಮಟ್ಟಿಗೆ ಸಹಜವಾಗಿದೆ. ಊಳಿಗಮಾನ್ಯ ಪದ್ಧತಿಯಲ್ಲಿ ರೈತಾಪಿ ಜನಗಳ ಶೋಷಣೆ ಹೇಗೆ ನಡೆಯುತ್ತದೆಂಬುದು ಮನಮುಟ್ಟುವಂತೆ ಇಲ್ಲಿ ಚಿತ್ರಿತವಾಗಿದೆ. ಚಿಕ್ಕ ಹುಡುಗ, ಮಳೆ ಬರುತ್ತಿರುವ ಕರಾಳ ರಾತ್ರಿಯಲ್ಲಿ ಮೀನು ಹಿಡಿಯಲು ಹೋಗಿ, ತಾನೇ ಸಾವಿಗೆ ವಶವಾಗುವ ವಿಧಿಯ ವಿಪರ್ಯಾಸ ಈ ಕಥೆಯಲ್ಲಿ ಚೆನ್ನಾಗಿ ನಿರೂಪಿತವಾಗಿದೆ; ಹೃದಯವಿದ್ರಾವಕವಾಗಿ ಕಥೆಯನ್ನು ಕುವೆಂಪು ಅವರು ಹೇಳಿರುವ ರೀತಿ, ಎಂತಹ ಕಟುಕರ ಮನಸ್ಸನ್ನೂ ತಟ್ಟಬಲ್ಲದು. ತುಳಿತಕ್ಕೆ ಒಳಗಾದ ಜನಾಂಗದ ಬಗ್ಗೆ ಮರುಕ ಉಂಟಾಗುವಂತೆ ಕಥೆಯನ್ನು ಹೆಣೆಯಲಾಗಿದೆ; ಆದರೆ ಆ ಶೋಷಣೆಗೆ ಕಾರಣವಾದ ವ್ಯವಸ್ಥೆಯ ಬಗ್ಗೆ ಆಕ್ರೋಶವಾಗಲೀ, ಪ್ರತಿಭಟನೆಯಾಗಲೀ ಇಲ್ಲಿ ಕಾಣಸಿಗುವುದಿಲ್ಲ. ಹೀಗಾಗಿ ಈ ಕಥೆ ಪಕ್ಕಾ ನವೋದಯ ಕಥೆಯೇ ಹೊರತು ಪ್ರಗತಿಶೀಲ ಅಲ್ಲ.

### ಆದರ್ಶ ಸಾಧನೆ :

ಈ ಕಥೆಯಲ್ಲಿ, ಸನ್ಯಾಸಿಯಾಗಿ ಲೋಕಸೇವೆಯಲ್ಲಿ ತನ್ನನ್ನು ತೊಡಗಿಸಿಕೊಳ್ಳಲು ಶಪಥ ಮಾಡಿದವನು, ನಂತರ ಸನ್ಯಾಸವನ್ನು ತ್ಯಜಿಸಿ, ಅವಿವಾಹಿತನಾಗಿ ಸಮಾಜಸೇವೆ ಮಾಡುತ್ತೇನೆಂದು ಸಂಕಲ್ಪ ಮಾಡಿ, ನಂತರ ಯೌವನ ಸಹಜವಾದ ಕಾಮನೆಗಳಿಗೆ ಬಲಿಯಾಗಿ, ಮದುವೆಯಾಗುತ್ತಾನೆ. ವಿವಾಹಿತನಾಗಿಯೇ ಲೋಕಸೇವೆಯನ್ನು ಮುಂದುವರೆಸುತ್ತೇನೆಂದು ಪ್ರತಿಜ್ಞೆ ಮಾಡಿ, ನಂತರ ಹೆಂಡತಿ ಸತ್ತಾಗ ಆದರ್ಶಪತಿಯಂತೆ ಏಕಪತ್ನೀವ್ರತಸ್ಥನಾಗಿ ಮುಂದುವರೆಯುವುದಾಗಿ ದೀಕ್ಷೆ ತೆಗೆದುಕೊಂಡು, ಎರಡನೆಯ ಮದುವೆಯ ಪ್ರಸ್ತಾಪವನ್ನು ಸಾರಾಸಗಟಾಗಿ ತಳ್ಳಿಹಾಕುತ್ತಾನೆ. ಮತ್ತೊಮ್ಮೆ ದೈಹಿಕ ಕಾಮನೆಗಳು ಇಂತಹ ಸ್ಥಿತಪ್ರಜ್ಞನ ಮೇಲೆ ವಿಜಯಸಾಧಿಸುತ್ತವೆ. ಕೊನೆಗೆ ಹೆಂಡತಿಯ ತಂಗಿಯನ್ನೇ ಮದುವೆಯಾಗುವುದರಲ್ಲಿ ಕಥೆಯು ಪರ್ಯಾವಸಾನವಾಗುತ್ತದೆ.

ತುಂಬ ಸುಂದರವಾದ, ಮನೋಹರವಾದ, ವಿಡಂಬನಾತ್ಮಕ ಕಥೆ 'ಆದರ್ಶ ಸಾಧನೆ'. ಕುವೆಂಪು ಅವರು ಗದ್ಯದ ಸಾಮರ್ಥ್ಯ ಈ ಕಥೆಯಲ್ಲಿ ಉತ್ತುಂಗ ಶಿಖರಕ್ಕೇರಿದೆ.

ಎಂದರೂ ಅತಿಶಯೋಕ್ತಿಯಾಗಲಾರದು. ಭಾಷೆಯ ಸೌಂದರ್ಯ ಮತ್ತು ಕಥನ ನಿರೂಪಣೆಯ ಲಾಲಿತ್ಯ ಸಾಕಾರವಾಗುವುದು ಈ ಕಥೆಯಲ್ಲಿ. ಒಬ್ಬ ಆದರ್ಶವಾದಿಯು ತನ್ನ ಆದರ್ಶಗಳ ಪಾಲನೆಯಲ್ಲಿ ಹೇಗೆ ಹಂತಹಂತವಾಗಿ ಸೋಲುತ್ತಾ, ನೈತಿಕವಾಗಿ ಅಧಃಪತನಗೊಳ್ಳುತ್ತಾನೆಂಬುದು ಅತ್ಯಂತ ಸುಂದರವಾಗಿ ವಿಡಂಬನಾತ್ಮಕವಾಗಿ ಈ ಕಥೆಯಲ್ಲಿ ಚಿತ್ರಿತವಾಗಿದೆ. ಒಂದೇ ಮಾತಿನಲ್ಲೆ ಹೇಳುವುದಾದರೆ, ಈ ಕಥೆಯ ಸೌಂದರ್ಯವನ್ನು ಆಸ್ವಾದಿಸಲು, ಕಥೆಯನ್ನು ಓದುವುದಕ್ಕಿಂತ ಅನ್ಯಮಾರ್ಗವೇ ಇಲ್ಲ!

### ಔದಾರ್ಯ :

ಈ ಕಥೆಯಲ್ಲಿ ನಿರೂಪಕನಿಗೆ ಮಂಡ್ಯದಿಂದ ತೀರ್ಥಹಳ್ಳಿಗೆ ವರ್ಗವಾಗುತ್ತದೆ. ಸ್ವಭಾವತಃ ಪ್ರಕೃತಿ ಆರಾಧಕನಾದ ಅವನು ಪ್ರತಿದಿನದಂತೆ ಆ ದಿನವೂ ವಾಯುವಿಹಾರಕ್ಕೆ, ತುಂಗಾ ನದಿಯ ತೀರಕ್ಕೆ ತೆರಳುತ್ತಾನೆ. ಅಲ್ಲಿ ಅವನಿಗೆ ಡೇವಿಡ್ ಮಾಸ್ಟರರ ಭೇಟಿಯಾಗುತ್ತದೆ. ಮಾಸ್ಟರರು ತಮ್ಮ ದಾರುಣವಾದ ಕಥೆಯನ್ನು ತನ್ನ ಶಿಷ್ಯನಲ್ಲಿ ತೋಡಿಕೊಳ್ಳುತ್ತಾರೆ: ಅವರಿಗೆ ಪ್ರಥಮ ವಿವಾಹದಿಂದ ಮಗ ಹುಟ್ಟುವುದು, ಪತ್ನಿಯ ಅಕಾಲಿಕ ಮರಣದಿಂದ ಅವರ ಜೀವನದಲ್ಲಿ ಕಾರ್ಮೋಡ ಆವರಿಸುವುದು, ನಂತರ ತನ್ನ ಮಗುವನ್ನು ನೋಡಿಕೊಳ್ಳುತ್ತಿರುವವಳನ್ನೇ ಎರಡನೆಯ ಮದುವೆಯಾಗುವುದು, ಆಕೆ ಮದುವೆಯ ನಂತರ ತನ್ನ ನೈಜ ಬಣ್ಣ ತೋರಿಸಿ ಮಗುವನ್ನು ಮಲತಾಯಿ ಧೋರಣೆಯಿಂದ ಕ್ರೂರವಾಗಿ ನೋಡಿಕೊಳ್ಳುವುದು, ಅಷ್ಟೇ ಅಲ್ಲದೆ ಆಕೆಯು ಶಾಲೆಯ ಸಹೋದ್ಯೋಗಿಯೊಡನೆ ವಿವಾಹ ಬಾಹಿರ ಸಂಬಂಧವನ್ನು ಇಟ್ಟುಕೊಳ್ಳುವುದು, ಕೊನೆಗೆ ತನ್ನ ಅನಾದರದಿಂದ ಮಗುವಿನ ಅಕಾಲಕ ಮರಣಕ್ಕೂ ಕಾರಣವಾಗುವುದು, ಇತ್ಯಾದಿ. ಜೀವನದಿಂದ ಸಂಪೂರ್ಣವಾಗಿ ಬೇಸತ್ತು ತಾನು ಆ ದಿನ ತುಂಗಾಹೊಳೆಯಲ್ಲಿ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನಿಸಿದ್ದನ್ನು ವಿವರಿಸುತ್ತಾರೆ. ಕೊನೆಗೆ ಹೇಗೆ ಬದುಕಿದಿರಿ ಎಂದು ನಿರೂಪಕ ಕೇಳಲಾಗಿ, ಕೂಡಲೇ ಮಾಸ್ಟರರು ಅದೃಶ್ಯರಾಗುತ್ತಾರೆ.

ಇದು ಕುವೆಂಪು ಬರೆದ ಸಾಧಾರಣ ಕಥೆ : ಕಥೆಯಲ್ಲಾಗಲೀ, ಕಥನ ಕ್ರಮದಲ್ಲಾಗಲೀ ಯಾವ ವಿಶೇಷವೂ ಕಾಣಬರುವುದಿಲ್ಲ.

### 'ಗಂಟು' ಅಥವಾ ಗುಪ್ತಧನ :

ಶೀರ್ಷಿಕೆ ನೋಡುವುದರಿಂದಲೇ ಇದೊಂದು ಹಳೆಯ ಕಥೆ ಎನ್ನಬಹುದು. ಏಕೆಂದರೆ, ಆ ಕಾಲದಲ್ಲಿ ನಾಟಕಕ್ಕಾಗಲೀ, ಕಾದಂಬರಿಗಾಗಲೀ ಎರಡೆರಡು ಹೆಸರುಗಳನ್ನು ಸೂಚಿಸುವ ರಿವಾಜು ರೂಢಿಯಲ್ಲಿತ್ತು. ಭೂಮಿಯಲ್ಲಿ ಹುದುಗಿದ ಗುಪ್ತಧನವನ್ನು ಅಗೆದು, ಹುಡುಕಿ ತೆಗೆಯುವ ಪ್ರಕ್ರಿಯೆಗೆ, ಮಲೆನಾಡಿನಲ್ಲಿ 'ಗಂಟು ಕೀಳುವುದು' ಎಂದು ಕರೆಯುತ್ತಿದ್ದರು. ಆಗ ಜನಗಳು ಭೂತ ಮತ್ತು ಬೈರಾಗಿಗಳನ್ನು ನಂಬುತ್ತಿದ್ದ ಕಾಲ.

ಧನದಾಹಿಯಾದ ಮಂಜಣ್ಣ ತನ್ನ ತೋಟದಲ್ಲಿ ಗುಪ್ತಧನವಿದೆಯೆಂದು ನಂಬಿ, ಅದೆಲ್ಲವನ್ನೂ ತಾನೊಬ್ಬನೇ ಕಬಳಿಸಬೇಕೆಂಬ ಲಾಲಸೆಯಿಂದ ಬೈರಾಗಿಯೊಬ್ಬನ ಸಹಾಯವನ್ನು ಯಾಚಿಸುತ್ತಾನೆ. ಆ ಬೈರಾಗಿಯಾದರೋ ಮಹಾ ಕಪಟಿ. ರಾತ್ರಿಯಲ್ಲಿ ಅವನು ಮಂಜಣ್ಣನ ತೋಟದಲ್ಲಿ ಅಗೆಯಲು ಶುರುಮಾಡುತ್ತಾನೆ. ಮಂಜಣ್ಣನಿಗೆ ನಿದ್ದೆ ಬಂದಾಗ, ಗಂಟು ಸಿಕ್ಕಿತೆಂದು ಅವನನ್ನು ನಂಬಿಸಿ, ದೊರಕಿದೆಯೆನ್ನಲಾದ ಗಂಟನ್ನು ಮಂಜಣ್ಣನ ಮನೆಗೆ ತರುತ್ತಾನೆ. ಆ ಗಂಟನ್ನು ಶಾಸ್ತ್ರೋಕ್ತವಾಗಿ ಪಡೆಯಲು, ಮಹಾಪೂಜೆಯನ್ನು ಆಯೋಜಿಸಲು ಆದೇಶ ನೀಡುತ್ತಾನೆ. ಆ ಪೂಜೆಯ ಅಂಗವಾಗಿ, ಮಂಜಣ್ಣನ ಹೆಂಡತಿಯ ಮತ್ತು ನೆರಹೊರೆಯ ಹೆಣ್ಣುಮಕ್ಕಳ ಆಭರಣಗಳನ್ನೆಲ್ಲಾ ಒಟ್ಟುಗೂಡಿಸಿ ಮಧ್ಯರಾತ್ರಿಯಲ್ಲಿ ವಿಧ್ಯುಕ್ತವಾಗಿ ಪೂಜೆ ಮಾಡುತ್ತಾನೆ. ಹೀಗೆ ಆರಾಧನೆ ಹದಿನೈದು ದಿನಗಳ ಕಾಲ ರಾತ್ರಿಯಲ್ಲಿ ಅವ್ಯಾಹತವಾಗಿ ನಡೆಯುತ್ತದೆ. ಕೊನೆಗೊಂದು ದಿನ, ಬೈರಾಗಿಯು ಬೆಳಗಿನ ಝಾವದಲ್ಲಿ, ಎಲ್ಲಾ ಒಡವೆಗಳೊಂದಿಗೆ ಪರಾರಿಯಾಗುತ್ತಾನೆ.

ಈ ಕಥೆ, ಆ ಕಾಲದ ಆಚಾರ-ವಿಚಾರಗಳು, ಕಂದಾಚಾರಗಳು, ಮೂಢ ನಂಬಿಕೆಗಳು, ಜನರ ಅಂಧಶ್ರದ್ಧೆ, ಇತ್ಯಾದಿ ವಿಷಯಗಳ ಮೇಲೆ ಬೆಳಕು ಚೆಲ್ಲುತ್ತದೆ. ಕಪಟ, ಶೋಷಣೆ ಸದಾಕಾಲದಲ್ಲಿಯೂ ನಾಗರೀಕ ಸಮಾಜಕ್ಕೆ ಅಂಟಿಕೊಂಡು ಬಂದ ವ್ಯಾಧಿ ಎಂಬುದನ್ನು ಹೃದಯಂಗಮವಾಗಿ ಚಿತ್ರಿಸುತ್ತದೆ. ಧರ್ಮದ ಹೆಸರಿನಲ್ಲೇ ಆಗುವ ಅನೇಕಾನೇಕ ಮೋಸಗಳ ಬಗ್ಗೆ ಈ ಕಥೆ ನಮ್ಮ ಕಣ್ಣು ತೆರೆಯಿಸುತ್ತದೆ. ಯಾವುದೇ ನೀತಿಪಾಠ ಹೇಳುವ ಧೋರಣೆಯನ್ನು ಬಿಟ್ಟು, ನಿರುದ್ವಿಗ್ನವಾಗಿ ಕಥೆಯನ್ನು ಹೇಳುತ್ತಲೇ, ಸಮಾಜದಲ್ಲಿ ನಡೆಯುವ ಅನ್ಯಾಯಗಳನ್ನು ಬಯಲುಗೊಳಿಸುವ ರೀತಿ ನಿಜಕ್ಕೂ ವಿಶಿಷ್ಟವಾಗಿದೆ.

## ಮೀನಾಕ್ಷಿಯ ಮನೆಮೇಷ್ಟರು :

ಈ ಕಥೆ ನವೋದಯ ಮಾರ್ಗದ ಕಥೆಗೊಂದು ಉತ್ತಮ ಉದಾಹರಣೆ. ಮನೆಪಾಠ ಹೇಳಿಕೊಡಲು ಮೀನಾಕ್ಷಿಯ ಮನೆಗೆ ಬರುವ ಮೇಷ್ಟರಿನ್ನೂ ತರುಣ. ಆಕೆಯನ್ನು ನೋಡುವ ಚಪಲದಿಂದ ನಿಗದಿತ ವೇಳೆಗಿಂತಲೂ ಬಹು ಮುಂಚೆಯೇ ಅವರ ಮನೆಗೆ ಹೋಗುತ್ತಿರುತ್ತಾರೆ. ಕ್ರಮೇಣ ಆಕೆಯಲ್ಲಿ ಅನುರಕ್ತರಾಗುತ್ತಾರೆ. ಇವರ ಬಯಕೆಯ ಕಣ್ಣುಗಳ ನೋಟದಿಂದ ಮೀನಾಕ್ಷಿ ಉತ್ತೇಜಿತಳಾಗಿ ಚೆನ್ನಾಗಿ ಅಲಂಕಾರ ಮಾಡಿಕೊಳ್ಳುತ್ತಿದ್ದರೂ, ಆಕೆಗೇನೂ ಇವರ ಬಗ್ಗೆ ಪ್ರೇಮವಿರುವುದಿಲ್ಲ. ಚಿಕ್ಕ ವಯಸ್ಸಿನಲ್ಲಿಯೇ ಅವಳ ವಿವಾಹ ನಿಶ್ಚಯ ಮಾಡಿ, ಅವಳಪ್ಪ ಇವರನ್ನು ಮನೆಪಾಠಕ್ಕೆ ಇನ್ನುಮುಂದೆ ಬರುವ ಅಗತ್ಯವಿಲ್ಲವೆಂದು ತಿಳಿಸಿದಾಗ, ಮೇಷ್ಟರಿಗೆ ಆಘಾತವಾಗುತ್ತದೆ. ಪ್ರಥಮ ಪ್ರೇಮ ಪ್ರಕರಣದಲ್ಲೇ ನಿರಾಶರಾದ ಮೇಷ್ಟರು ಆಕೆಯನ್ನು ಮದುವೆಯಾದವನ ಮೇಲೆ ಸೇಡು ತೀರಿಸಿಕೊಳ್ಳಲು ಷಡ್ಯಂತ್ರವನ್ನು ರೂಪಿಸುತ್ತಾರೆ. ದುರುದ್ದೇಶದಿಂದ ಅವರು, ಹೇಗೋ ಅವರ ಮನೆ ಪತ್ತೆಮಾಡಿ, ಹರಿತವಾದ ಚಾಕುವೊಂದನ್ನು ತಮ್ಮ ಕೋಟಿನ ಜೇಬಿನೊಳಗೆ ಮುಚ್ಚಿಟ್ಟುಕೊಂಡು ಅವರ

ಮನೆಗೇ ಹೋಗುತ್ತಾರೆ. ಅವರ ಮನೆಯ ಉತ್ತಮ ಸಾಂಸ್ಕೃತಿಕ ವಾತಾವರಣ, ಅವರ ಘನ, ಗಾಂಭೀರ್ಯ ಮತ್ತು ಸಜ್ಜನಿಕೆಗೆ ಮಾರುಹೋಗುತ್ತಾರೆ. ಮೇಷ್ಟರ ದುರ್ಬುದ್ಧಿಯೆಲ್ಲಾ ಮಾಯವಾಗುತ್ತದೆ. ತೆಗೆದುಕೊಂಡು ಹೋದ ಚಾಕುವನ್ನೇ ಅವರಿಗೆ ಉಡುಗೊರೆಯಾಗಿ ನೀಡಿ, ಅವರ ಆತಿಥ್ಯವನ್ನು ಸ್ವೀಕರಿಸಿ ತಮ್ಮ ಮನೆಗೆ ಮರಳುತ್ತಾರೆ.

ದುರುದ್ದೇಶದಿಂದ ಹೋಗಿದ್ದರೂ, ಕೆಟ್ಟ ಕೆಲಸ ಮಾಡದೆ, ಮೇಸ್ಟರ ಮನಃಪರಿವರ್ತನೆಯಾಗಿ ಒಳ್ಳೆಯ ರೀತಿಯಲ್ಲಿ ಕಥೆ ಪರ್ಯಾವಸಾನವಾಗುತ್ತದೆ. ಸಾಂಪ್ರದಾಯಿಕ ಮೌಲ್ಯಗಳನ್ನು ಎತ್ತಿ ಹಿಡಿಯುವ ಈ ಕಥೆ ನವೋದಯ ಮಾರ್ಗಕ್ಕೆ ನಿಸ್ಸಂಶಯವಾಗಿ ಸೇರುತ್ತದೆ. ಈ ಕಥೆಯು ನವೋದಯ ಮಾರ್ಗದ ಒಳ್ಳೆಯ ನಡತೆ, ಸುಸಂಸ್ಕಾರ, ಸಜ್ಜನಿಕೆಗಳನ್ನು ಪೋಷಿಸಿ, ವೃದ್ಧಿಸುವಂತಹ ವಾತಾವರಣವನ್ನು ಕಟ್ಟಿಕೊಡುತ್ತದೆ.

## ಧನ್ವಂತರಿಯ ಚಿಕಿತ್ಸೆ :

ಇದು ಪ್ರಸಕ್ತ ಆಧುನಿಕತೆಯ ಬಗ್ಗೆ ನಡೆಯುವ ಒಂದು ವಿಡಂಬನಾತ್ಮಕ ಕಥೆ. ವಿಶ್ವಾಮಿತ್ರನು ಒಂದು ಆರ್ತನಾದವನ್ನನುಸರಿಸಿಕೊಂಡು, ಅದರ ಮೂಲವನ್ನು ಪತ್ತೆಹಚ್ಚಲು ಭೂಲೋಕಕ್ಕೆ ಬರುತ್ತಾನೆ. ಆ ಹೃದಯವಿದ್ರಾವಕ ಅಳು ನಗರ ಪ್ರದೇಶದಲ್ಲಿ ಕೇಳಬರುವುದಿಲ್ಲ. ಆದರೆ, ಗ್ರಾಮ ಪ್ರದೇಶದಲ್ಲಿ ಸ್ಪಷ್ಟವಾಗಿ ಕೇಳಿಸುತ್ತದೆ. ಅದನ್ನು ಹುಡುಕಿಕೊಂಡು ಹೋಗಲಾಗಿ, ಅದು ಒಂದು ಗುಡಿಸಿಲೊಂದರಿಂದ ಕೇಳಬರುತ್ತದೆ. ನರಳುತ್ತಿರುವ ರೈತನ ಆರ್ತನಾದವೇ ಅದು! ಆದರೆ, ರೈತನ ನರಳಿಕೆಗೆ ಕಾರಣ ಹುಡುಕುವುದು ಮಾತ್ರ ಬಹಳ ಕಷ್ಟವಾಗುತ್ತದೆ. ಆಧುನಿಕ ವೈದ್ಯ, ಮಹಾ ಋಷಿಗಳು, ಕೊನೆಗೆ ದೇವತೆಗಳ ವೈದ್ಯ ಶಿರೋಮಣಿ ಧನ್ವಂತರಿಗೂ ರೈತನೇಕೆ ನರಳುತ್ತಿದ್ದಾನೆಂಬುದು ಗೊತ್ತಾಗುವುದಿಲ್ಲ. ಕೊನೆಗೆ, ಧನ್ವಂತರಿಯ ವಿಶೇಷ ಯಂತ್ರದಿಂದ ನೋಡಲಾಗಿ, ಪಟ್ಟಣದವರು ಹಳ್ಳಿಯವರ ಮೇಲೆ ಮಾಡುತ್ತಿರುವ ಶೋಷಣೆಯೇ ರೈತನ ನರಳಿಕೆಗೆ ಕಾರಣ ಎಂದು ತಿಳಿಯುತ್ತದೆ.

ಕುವೆಂಪು ಅವರ ಒಲವು ಗ್ರಾಮೀಣ ಬಡಜನತೆಯ ಕಡೆ ಇದ್ದಿತೆಂಬುದು ಈ ಕಥೆಯಿಂದ ಸ್ಪಷ್ಟವಾಗುತ್ತದೆ. ಕಥನ ಶೈಲಿ ಸುಂದರವಾಗಿದೆ. ಪೌರಾಣಿಕ ಮತ್ತು ಆಧುನಿಕ ಸಮಾಜಗಳನ್ನು ಮೇಳವಿಸಿ, ಪ್ರಚಲಿತ ಸಮಸ್ಯೆಯೊಂದನ್ನು, ಕುವೆಂಪು ಪ್ರತಿಪಾದಿಸುವ ರೀತಿ ಕಲಾತ್ಮಕವಾಗಿದೆ.

## ಯಾರೂ ಅರಿಯದ ವೀರ :

'ಯಾರೂ ಅರಿಯದ ವೀರ' ಎಂಬ ಕಥೆಯಲ್ಲಿ ಆಳೊಬ್ಬನು, ಯಾವುದೇ ಪ್ರತಿಫಲಾಪೇಕ್ಷೆ ಮತ್ತು ಕೀರ್ತಿಯ ಕಾಮನೆಗಳಿಲ್ಲದೆ ತನ್ನ ಸ್ವಾಮಿಯ ಮತ್ತು ಅವರ ಕುಟುಂಬವನ್ನು ಕಾಪಾಡಲು ಹೇಗೆ ತನ್ನ ಜೀವವನ್ನೇ ಮುಡುಪಾಗಿಟ್ಟ ಎಂಬುದು ಮನ

ಮುಟ್ಟುವಂತೆ ಪರಿಣಾಮಕಾರಿಯಾಗಿ ನಿರೂಪಿಸಲ್ಪಟ್ಟಿದೆ. ತನ್ನ ಕಷ್ಟ ಕಾಲದಲ್ಲಿ - ಸಮಾಜದಲ್ಲಿ ಯಾರೂ ತನಗೆ ಆಶ್ರಯ ಕೊಡದಿದ್ದ ಕಾಲದಲ್ಲಿ - ತನ್ನ ಧಣಿ ತನಗೆ ಆಶ್ರಯ ಕೊಟ್ಟು ಸಲಹಿದ ಎಂಬುದನ್ನು ಈ ಆಳು ಕೃತಜ್ಞತೆಯಿಂದ ಸ್ಮರಿಸುತ್ತಾನೆ. ಧಣಿಯ ಸಂಸಾರವನ್ನು ಒಂದು ಚಿಕ್ಕ ದೋಣಿಯಲ್ಲಿ ಸಾಗಿಸುತ್ತಿರುವಾಗ, ಹೊಳೆ ಉಕ್ಕಿ ಬಂದು, ದೋಣಿ ಮುಳುಗಲಾರಂಭಿಸಿದಾಗ, ತಾನೇ ಹೊಳೆಗೆ ಹಾರಿ ಧಣಿಯ ಸಂಸಾರವನ್ನು ಕಾಪಾಡಿದ ಘಟನೆ ಹೃದಯಂಗಮವಾಗಿ ಚಿತ್ರಿತವಾಗಿದೆ. ಎಂತಹ ಸಾಮಾನ್ಯನಲ್ಲಿಯೂ ಪ್ರಕಟವಾಗಬಹುದಾದ ಅಸಾಮಾನ್ಯ ಕೃತಜ್ಞತಾಭಾವ ಮತ್ತು ತ್ಯಾಗವು ಈ ಕಥೆಯಲ್ಲಿ ನಿರೂಪಿತವಾಗಿದೆ. ಭಾವಾತಿರೇಕಕ್ಕೆ ಒಳಗಾಗದೆ, ಕಥೆಗಾರ ನಿರುದ್ವಿಗ್ನವಾಗಿ ಕಥೆಯನ್ನು ನಿರೂಪಿಸುತ್ತಲೇ ಕಥೆಯ ಆಶಯವನ್ನು ಉತ್ಕಟವಾಗಿ ಮುಟ್ಟಿಸುವಲ್ಲಿ ಕಥೆಯ ಯಶಸ್ಸಿದೆ. ''ಈ ಕಥೆಯಲ್ಲಿ ಕುವೆಂಪು ಕಥೆಗಾರಿಕೆಯ ಕೊನೆಯ ಹಂತವನ್ನು ಮುಟ್ಟಿದರು'' ಎಂಬ ಕೀರ್ತಿನಾಥ ಕುರ್ತಕೋಟಿಯವರ ಅಭಿಪ್ರಾಯ ('ಯುಗಧರ್ಮ ಮತ್ತು ಸಾಹಿತ್ಯ ದರ್ಶನ') - ಕುವೆಂಪು ಅವರ ಕಥೆಗಳ ಮಟ್ಟಿಗೆ ಅನ್ವಯಿಸುವಂತಹ ಮಾತಾಗಿದ್ದರೆ - ಒಪ್ಪುವಂತಿದೆ (೨).

## ದೆವ್ವದ ಕಾಟ :

'ದೆವ್ವದ ಕಾಟ' ಒಂದು ಕುತೂಹಲಕಾರಿಯಾದ ಕಥೆ: ಒಂದು ಪತ್ತೇದಾರಿ ಬಗೆಯ ಕಥೆ ಎಂದೂ ಹೇಳಬಹುದು. ದೆವ್ವದ ಬಗ್ಗೆ ನಂಬಿಕೆ ಇರುವಂತಹ ಭೂಮಿಕೆಯಲ್ಲಿ ಈ ಕಥೆ ನಡೆಯುತ್ತದೆ: ನವಿಲೂರಿನ ರಂಗರಾಯರು ಆಗರ್ಭ ಶ್ರೀಮಂತರು. ಅವರ ಅಲ್ಲಿನ ಹೊಲ ಗದ್ದೆಗಳನ್ನೆಲ್ಲಾ ನೋಡಿಕೊಳ್ಳುತ್ತಿರುವವನು ಅವನ ನೆಚ್ಚಿನ ನಂಬುಗೆಯ ಭಂಟ ಮುತ್ತಣ್ಣ. ತೀರ್ಥಹಳ್ಳಿಯಲ್ಲಿನ ರಂಗರಾಯರ ಮನೆ ಪ್ರವಾಹದಿಂದ ಮುಳುಗಿದ ಮೇಲೆ ಅವರು ನವಿಲೂರಿನ ತಮ್ಮ ಮನೆಗೇ ಬಂದು ವಾಸಿಸಲಾರಂಭಿಸುತ್ತಾರೆ. ಆದರೆ ದುರದೃಷ್ಟವಶಾತ್, ಪ್ರತಿ ರಾತ್ರಿ ಅವರ ಮನೆಗೆ ಕಲ್ಲು ಬೀಳುತ್ತಿರುವುದು ಮನೆಯಲ್ಲಿ ಎಲ್ಲರ ಆತಂಕಕ್ಕೆ ಕಾರಣವಾಗುತ್ತದೆ. ಮೊದಮೊದಲು ಇದು ದೆವ್ವದ ಕಾಟವೆಂದು ಭಾವಿಸಿದರೂ, ನಂತರ ಕಲ್ಲು ಹಾಕುತ್ತಿರುವವರು ಯಾರು ಎಂಬುದನ್ನು ಪತ್ತೆ ಹಚ್ಚಲು ಧಣಿಗಳು ಉದ್ಯುಕ್ತರಾಗುತ್ತಾರೆ. ಪೋಲೀಸರ, ಜೋಯಿಸರ, ಮಾಂತ್ರಿಕರ ಸಹಕಾರ ತೆಗೆದುಕೊಂಡರೂ, ಕಳ್ಳರನ್ನು ಪತ್ತೆಹಚ್ಚಲು ಸಾಧ್ಯವಾಗುವುದಿಲ್ಲ. ಕೊನೆಗೆ ತೀರ್ಥಹಳ್ಳಿಯ ಪೋಲೀಸ್ ಇನ್ಸ್‌ಪೆಕ್ಟರ್ ತಮ್ಮ ಪತ್ತೆದಾರಿಕೆಯ ಚಾಣಾಕ್ಷತನದಿಂದ ಕಲ್ಲು ಹಾಕುತ್ತಿದ್ದವನನ್ನು ಹಿಡಿಯುತ್ತಾರೆ: ಅವನು ಮುತ್ತಣ್ಣನಲ್ಲದೆ ಬೇರಾರೂ ಅಲ್ಲ!

ಕುತೂಹಲದಿಂದ ಓದಿಸಿಕೊಂಡು ಹೋಗಿ, ಕೊನೆಯವರೆವಿಗೂ ತನ್ನ ಗುಟ್ಟನ್ನು ಬಿಡದೆ, ಅಂತ್ಯದಲ್ಲಿ ತಪ್ಪಿತಸ್ಥನನ್ನು ತೋರಿಸಿಕೊಡುವ ಕಥನಕ್ರಮ ತುಂಬ ಚೆನ್ನಾಗಿ ಮೂಡಿಬಂದಿದೆ, ಹಾಗೆಯೇ ಈ ಕಥೆಯಲ್ಲಿ ದೆವ್ವಗಳ ಇರುವಿಕೆಯ ಬಗ್ಗೆ ಇದ್ದ ನಂಬಿಕೆಯನ್ನು ಬಂಡವಾಳವನ್ನಾಗಿ ಉಪಯೋಗಿಸಿಕೊಂಡು, ಪಟ್ಟಭದ್ರ ಹಿತಾಸಕ್ತಿಗಳು ಹೇಗೆ ತಮ್ಮ

ಬೇಳೆಯನ್ನು ಬೇಯಿಸಿಕೊಳ್ಳುತ್ತವೆ ಎಂಬುದನ್ನು ಸಹಜವಾಗಿ, ಕುತೂಹಲಕಾರಿಯಾಗಿ ಮತ್ತು ಸ್ವಾರಸ್ಯವಾಗಿ ನಿರೂಪಿಸಲಾಗಿದೆ.

**ಪುಟ್ಟಾಚಾರಿಯ ಕಾಡುಕೋಳಿ :**

ಇದೊಂದು ಸುಂದರ, ಆಕರ್ಷಕ ಕಥೆ. ಇದರಲ್ಲಿ ಮಲೆನಾಡಿನ ಕಾಡಿನ ವಿವರಗಳು ದಟ್ಟವಾಗಿ ಮೂಡಿಬಂದಿವೆ. ಅಲ್ಲಲ್ಲಿ ಜೀವನದರ್ಶನದ ಹೊಳಹು ಮೂಡಿಸುವಂತಹ ಉಕ್ತಿಗಳಿವೆ. ಉದಾಹರಣೆಗೆ, ''ನನಗೆ ಒಂದೊಂದು ಸಾರಿ, ಮನುಷ್ಯ ಮನುಷ್ಯನಿಗೆ ಮಾಡುವ ಅನ್ಯಾಯವನ್ನು ಯೋಚಿಸಿಕೊಂಡರೆ, ಕೋಪ, ಕಣ್ಣೀರು ಎಲ್ಲಾ ಒಟ್ಟಿಗೆ ಬರುತ್ತವೆ'', ''ಇಂಥದನ್ನೆಲ್ಲಾ ಮನಸ್ಸಿಗೆ ಬಹಳವಾಗಿ ಹಚ್ಚಿಕೊಂಡರೆ, ಬದುಕುವುದು ಹೇಗೆ? ಮರೆಯಬೇಕು ಸ್ವಾಮಿ, ಮರೆಯಬೇಕು. ಮರೆಯುವುದೇ ಮಾನವನಿಗೆ ಮದ್ದು!'', ಇತ್ಯಾದಿ.

ಮಲೆನಾಡಿನ ಒಂದು ಊರಿನಲ್ಲಿ ಬದುಕುತ್ತಿರುವ ಓರ್ವ ಶ್ರೀಸಾಮಾನ್ಯನ ಕಥೆ ಇದು. ಅವನು ಅಸಾಧಾರಣ ಬೇಟೆಗಾರನಾಗಿರುತ್ತಾನೆ. ಒಮ್ಮೆ ದಣಿಯವರ ಮನೋಭೀಷ್ಟದ ಮೇರೆಗೆ, ಕಾಡಿಗೆ ಬೇಟೆಯಾಡಲು ಹೋಗುತ್ತಾನೆ. ಎಲ್ಲಿಯೂ ಬೇಟೆ ಸಿಗುವುದಿಲ್ಲ. ಕೊನೆಗೆ, ಇಳಿಜಾರಾದ ಬೆಟ್ಟದ ಮೇಲೆ ಹುಷಾರಾಗಿ ಹತ್ತುತ್ತಾನೆ. ಬೆಟ್ಟದ ಮೇಲೆ ಹುಲ್ಲುಗಳ ಮಧ್ಯದಲ್ಲಿ ಕಾದುಕೋಳಿಯ ಬಾಲದಂತಹುದು ಕಾಣುತ್ತದೆ. ಅದನ್ನಾದರೂ ಹೊಡೆಯೋಣವೆಂದುಕೊಂಡು ಮೇಲೆ ಮೇಲೆ ಹತ್ತುತ್ತಾನೆ. ತೀರ ಹತ್ತಿರ ಹೋಗಿ ನೋಡಲಾಗಿ, ಅಲ್ಲಿ ಹುಲಿ ತನ್ನ ಮರಿಗಳೊಡನೆ ಆಡುತ್ತಿರುವುದು ಕಾಣುತ್ತದೆ! ಗುರಿ ಇಟ್ಟು ಹೊಡೆಯಲು ಪುಟ್ಟಾಚಾರಿ ಸಿದ್ಧನಾಗುತ್ತಾನೆ. ಇವನ ಮೇಲೆ ಎಗರಿ ಸಾಯಿಸಲು ಹುಲಿ ತಯಾರಾಗುತ್ತದೆ. ಇಬ್ಬರಿಗೂ ಭಯ. ಯಾರೂ ಮುಂದುವರೆಯುವುದಿಲ್ಲ. ಜೀವಭಯ ಪುಟ್ಟಾಚಾರಿಯನ್ನು ಕಾಡತೊಡಗುತ್ತದೆ. ಕೊಂಚ ಕೊಂಚವೇ ಹಿಮ್ಮುಖನಾಗಿ ಬೆಟ್ಟ ಇಳಿಯಲು ಶುರು ಮಾಡುತಾನೆ. ಹುಲಿಗೂ ತನ್ನ ಮರಿಗಳ ಬಗ್ಗೆ ಯೋಚನೆ, ಹೀಗಾಗಿ ಅದೂ ಇವನ ಮೇಲೆ ಆಕ್ರಮಣ ಮಾಡುವುದಿಲ್ಲ. ಕೊನೆಗೆ, ಪುಟ್ಟಾಚಾರಿ ಬದುಕಿ ಮನೆಗೆ ಮರಳುತ್ತಾನೆ.

ಕ್ಷಣ ಕ್ಷಣಕ್ಕೂ, ಎದೆ ಬಡಿತ ಹೆಚ್ಚಿಸುವಂಥ ರೋಚಕ ಕಥೆ ಇದು. ಕುವೆಂಪು ಅವರಿಗೆ ಜನ ಸಾಮಾನ್ಯರ ಬಗ್ಗೆ ತುಂಬಾ ಆಸ್ಥೆ, ಆಸಕ್ತಿ, ಅಕ್ಕರೆ, ಆದರ ಇದ್ದಿತೆಂದು ತೋರುತ್ತದೆ. ಯಾರು ಸಾಮಾನ್ಯ ಜನರಾಗಿದ್ದುಕೊಂಡೇ ಅಸಾಮಾನ್ಯವಾದ ಮಹತ್ತರ ಗುಣಗಳನ್ನು ಹೊಂದಿರುತ್ತಾರೋ ಅಂತಹವರ ಬಗ್ಗೆ ವಿಶೇಷ ಮಮತೆ. ಹಾಗೆಯೇ ಕುವೆಂಪುಅವರಿಗೆ ಪ್ರಚಾರ ಪ್ರಿಯತೆ ಇಷ್ಟವಾಗುತ್ತಿರಲಿಲ್ಲ ಎಂದೆನಿಸುತ್ತದೆ. ನಿದರ್ಶನಕ್ಕೆ, ಈ ವಾಕ್ಯಗಳನ್ನು ಓದಿ: ''ಮಹಾತ್ಮರಲ್ಲಿಯೂ ಇರುವ ಯಶೋಭಿಲಾಷೆ ಎಂಬ ಕಟ್ಟಕಡೆಯ ದೌರ್ಬಲ್ಯ ಪಿಶಾಚ ಅವನಿಗೆ ಹಿಡಿಯಲಿಲ್ಲ. ಯಾರೂ ಅರಿಯದ ವೀರರ ಗುಂಪಿಗೆ ಸೇರಿದವನವನು. ಮೌನವಾಗಿ ಬಂದು, ಮೌನವಾಗಿ ಹೋಗುವವನು.''

## ಕುವೆಂಪು ಅವರ ವ್ಯಕ್ತಿತ್ವ:

ಕುವೆಂಪುಅವರ ಕಥೆಗಳನ್ನೋದಿದಾಗ, ಅವರ ವ್ಯಕ್ತಿತ್ವದ ಬಗ್ಗೆ, ಈ ಬಗೆಯ ಅಭಿಪ್ರಾಯ ಮೂಡುತ್ತದೆ. ಅವರದು ಘನ, ಗಾಂಭೀರ್ಯ, ವಿದ್ವತ್ಪೂರ್ಣವಾದ, ಆಧ್ಯಾತ್ಮಿಕ ನಂಬಿಕೆಗಳನ್ನು ರೂಢಿಸಿಕೊಂಡು ಅದರಿಂದ ಅಗಾಧವಾಗಿ ಪ್ರಭಾವಿತವಾದ ವ್ಯಕ್ತಿತ್ವ. ಜನಸಾಮಾನ್ಯರಲ್ಲಿ ತುಂಬ ಪ್ರೀತಿ, ಕಳಕಳಿಯನ್ನು ಇಟ್ಟುಕೊಂಡಂತಹ ವ್ಯಕ್ತಿ ಅವರು. ಪರಂಪರಾಗತ, ಮೌಲ್ಯಗಳನ್ನು ನಂಬಿಕೊಂಡು, ಅಂತಹ ನಂಬಿಕೆಗಳನ್ನೇ ಸ್ಫುರಿಸುವಂತಹ ಕಥೆಗಳನ್ನು ಬರೆದು, ಸಾಹಿತ್ಯದಲ್ಲಿ ಕಿಂಚಿತ್ ಅಶ್ಲೀಲತೆಯನ್ನೂ ತರದೆ, ಶುದ್ಧ ಸಾಹಿತ್ಯ ಕೃತಿ ರಚನೆ ಮಾಡಿದ ಸಮೃದ್ಧ ಬರಹಗಾರರು ಅವರು. ಔದಾರ್ಯ, ಉದಾರ ಬುದ್ಧಿ, ಸಹಜೀವಿಯೊಡನೆ ಅಪೂರ್ವ ಅನುಕಂಪೆ ಹಾಗೂ ಅಸಾಧಾರಣ ಹೃದಯ ವೈಶಾಲ್ಯ ಹೊಂದಿದವರು ಕುವೆಂಪು ಅವರಾಗಿದ್ದರು ಎನಿಸುತ್ತದೆ.

## ಕುವೆಂಪು ಅವರ ಕಥೆಗಳ ಬಗ್ಗೆ ಸಮಗ್ರ ವಿಮರ್ಶೆ :

ಕುವೆಂಪುರವರ ಭಾಷೆ ಪ್ರಬುದ್ಧವಾಗಿದೆ, ಗದ್ಯ ಸಹಜ ಲಯಗತಿಯಿಂದ ಕೂಡಿದೆ. ಅವರಿಗೆ ಆಕರ್ಷಕವಾಗಿ ಕಥೆ ಹೇಳುವ ಕಲೆ ಸಿದ್ಧಿಸಿದೆ. ಅವರು ಅನೇಕ ಬಗೆಯ ಕಥೆಗಳನ್ನು ಸ್ವಾರಸ್ಯವಾಗಿ ಹೇಳಿದ್ದಾರೆ. ಪರಂಪರಾಗತ ಮಾನವೀಯ ಮೌಲ್ಯಗಳನ್ನು ಬಿಂಬಿಸಿ, ಪೋಷಿಸಿ, ವೃದ್ಧಿಸುವಂತಹ ಕಥೆಗಳನ್ನು ಬರೆದು, ನವೋದಯ ಮಾರ್ಗದ ಪ್ರಮುಖ ಲೇಖಕರಲ್ಲಿ ಕುವೆಂಪುರವರು ಒಬ್ಬರಾಗಿದ್ದಾರೆ. ಅತಿ ಮಡಿವಂತಿಕೆಯಿಂದ ಕಥೆಗಳನ್ನು ಚಿತ್ರಿಸಿಲ್ಲ; ಹಾಗೆಯೇ, ಅಶ್ಲೀಲತೆಯ ಸೋಂಕಿಲ್ಲದ, ಶುದ್ಧವಾದ ಕಥೆಗಳನ್ನು ನಿರೂಪಿಸಿದ್ದಾರೆ. ಸ್ವಾತಂತ್ರಪೂರ್ವ ಕರ್ನಾಟಕದ, ಅದರಲ್ಲೂ ವಿಶೇಷವಾಗಿ ಮಲೆನಾಡಿನ, ಸಾಮಾಜಿಕ ಜೀವನ ಚಿತ್ರಣ ಕೆಲವು ಕಥೆಗಳಲ್ಲಿ ಸೊಗಸಾಗಿ ಮೂಡಿಬಂದಿದೆ. ಯಾವುದೇ ಬಗೆಯ ಉದ್ವಿಗ್ನತೆಗೆ ಒಳಗಾಗದೆ, ನಿರ್ಲಿಪ್ತವಾಗಿ ಕಥೆಯನ್ನು ಹೇಳಿಕೊಂಡು ಹೋಗಿರುವ ರೀತಿ ಅನನ್ಯವಾಗಿದೆ. ಗಾಢವಾದ ಆಧ್ಯಾತ್ಮಿಕ ಪ್ರಭಾವಕ್ಕೆ ಒಳಗಾದ ಕುವೆಂಪುಅವರು ಅನೇಕ ಕಡೆ, ವಿಶಿಷ್ಟವಾಗಿ ಜೀವನ ದರ್ಶನವನ್ನು ಅನಾವರಣಗೊಳಿಸಿದ್ದಾರೆ. ಸಂಸ್ಕೃತ ಭೂಯಿಷ್ಠವಾದ ಭಾಷೆಯಲ್ಲಿ, ಕುವೆಂಪು ಅವರ ಪದ-ವ್ಯಾಮೋಹ ಕೆಲವು ಕಡೆ ಗೋಚರವಾಗುತ್ತದೆ. ಒಟ್ಟಿನಲ್ಲಿ ಹೇಳುವುದಾದರೆ, ಅನವಶ್ಯಕ ವಿವರಣೆಗಳಿಲ್ಲದೆ ಕಥೆಯನ್ನು ಹೆಣೆದಿರುವುದು, ಪಾತ್ರಚಿತ್ರಣ, ಸಂಭಾಷಣೆ, ಘಟನೆಗಳನ್ನು ಕಥೆಯ ಸಾವಯವ ಅಂಗವಾಗಿ ಮಾಡಿಕೊಂಡಂತಹ ಕಲಾವಿನ್ಯಾಸ, ಅಲ್ಲಲ್ಲಿ ಮಿಂಚುವ ಜೀವನ ದರ್ಶನ ಮತ್ತು ಆಧ್ಯಾತ್ಮಿಕ ತತ್ವ- ಹೀಗೆ ಎಲ್ಲದರ ನಿರೂಪಣೆಯಲ್ಲೂ ಅವರು ಅಸಾಧಾರಣ ಸಂಯಮವನ್ನು ಮೆರೆದು, ನವೋದಯ ಮಾರ್ಗದ ಕೆಲವು ಉತ್ತಮ ಪ್ರಾತಿನಿಧಿಕ ಕಥೆಗಳನ್ನು ನೀಡಿದ್ದಾರೆ.

ಕುವೆಂಪು ಅವರ ಸಮಗ್ರ ಸಣ್ಣ ಕಥೆಗಳ ಬಗ್ಗೆ ವಿಮರ್ಶೆ ಮಾಡುತ್ತಾ, ಜಿ.ಎಚ್. ನಾಯಕರು ಹೀಗೆ ಅಭಿಪ್ರಾಯ ಪಡುತ್ತಾರೆ (೨) : ಕೆ.ವಿ. ಪುಟ್ಟಪ್ಪ (ಕುವೆಂಪು) ಅವರು

ಕಾವ್ಯ, ನಾಟಕ, ಕಾದಂಬರಿ ಪ್ರಕಾರಗಳಷ್ಟು ಗಂಭೀರವಾಗಿ ಸಣ್ಣ ಕಥೆಯ ಪ್ರಕಾರವನ್ನು ತಮ್ಮ ಸೃಜನಶೀಲ ಚೈತನ್ಯದ ಅಭಿವ್ಯಕ್ತಿಗೆ ಮಾಧ್ಯಮವನ್ನಾಗಿ ಮಾಡಿಕೊಂಡವರಲ್ಲ. ಆದರ್ಶ - ಅದರ ಅಣಕ, ಹಾಸ್ಯ - ದುರಂತ, ಬೇಸ್ತುಬೀಳಿಸುವ - ಪರಸ್ಪರ ಬೇಸ್ತುಬೀಳಿಸುವ, ದೆವ್ವದ ಭ್ರಾಂತಿಯನ್ನುಂಟುಮಾಡುವ ಮನುಷ್ಯ - ಮನುಷ್ಯರೆಂದು ಭ್ರಾಂತಿ ಹುಟ್ಟಿಸುವ ದೆವ್ವಗಳ, ಪುರಾಣದ ವ್ಯಕ್ತಿಗಳನ್ನು ಭಾರತ ದೇಶದಲ್ಲಿ ಅಲೆಸುವ, ಹೆಂಡತಿ ಗಂಡು ವೇಷದಲ್ಲಿ ಬಂದು ಆರು ತಿಂಗಳುಗಳ ಕಾಲ ಗಂಡನ ಗೆಳೆತನ ಬೆಳೆಸಿಯೂ ಪತ್ತೆಯಾಗದಂತೆ ಇರುವ - ಹೀಗೆ ಬೇರೆ ಬೇರೆ ಬಗೆಯ ವಸ್ತು ವಿವರಗಳಿಂದ ಕೂಡಿರುವ ಕಥೆಗಳನ್ನು ನಿರುದ್ದಿಶ್ಯವೆಂಬಂತೆ ಕುವೆಂಪು ಬರೆದಿದ್ದಾರೆ. ಹೀಗಾಗಿ ಅವರ ಕಥೆಗಳ ಒಟ್ಟೂ ಸಂದರ್ಭದಲ್ಲಿ ಒಂದು ಗಟ್ಟಿಯಾದ ಜೀವನದೃಷ್ಟಿ ಧ್ವನಿಪಡೆಯುವುದಿಲ್ಲ. ಬಿಡಿಬಿಡಿಯಾಗಿಯೇ ನೋಡಿದಾಗ, ಬಹುಪಾಲು ಕಥೆಗಳಲ್ಲಿ ಪ್ರಕಟವಾಗುವ, ಸಂಗತಿಗಳ ವಸ್ತುನಿಷ್ಠ ನಿರೂಪಣಾ ರೀತಿ ಮತ್ತು ಅವರ ಕಾವ್ಯ ನಾಟಕಗಳಲ್ಲಿ ಅಪರೂಪವಾದ ರೀತಿಯ ಭಾಷೆಯ ಸಹಜ ಲಯಗತಿ, ಒಟ್ಟಿನಲ್ಲಿ ಫಲಿಸುವ ಕಲೆಗಾರಿಕೆ - ನವೋದಯ ಕಾಲದ ಕಥೆಗಳ ಸಂದರ್ಭದಲ್ಲಿ ಮಹತ್ವದ್ದಾಗಿ ಕಾಣಿಸುತ್ತವೆ. ಎರಡು ಕಥಾಸಂಕಲನಗಳನ್ನು ಪ್ರಕಟಿಸಿರುವ ಕುವೆಂಪು ೧೯೪೦ರ ನಂತರ ಕಥೆಗಳನ್ನು ಬರೆದಂತಿಲ್ಲ(೪). ಕುವೆಂಪು ಅವರಂತೆಯೇ ಬೇರೆ ಬೇರೆ ಸಾಹಿತ್ಯ ಪ್ರಕಾರಗಳಲ್ಲಿ ಪ್ರಖ್ಯಾತರಾಗಿರುವ ನವೋದಯ ತಲೆಮಾರಿನ ದ.ರಾ. ಬೇಂದ್ರೆ, ಶಿವರಾಮ ಕಾರಂತ, ಪು.ತಿ. ನರಸಿಂಹಾಚಾರ್ ಮುಂತಾದ ಸಾಹಿತಿಗಳು ಸಣ್ಣಕಥೆಗಳನ್ನು ಬರೆದಿರುವರಾದರೂ, ಆ ಪ್ರಕಾರ ಅವರಿಗೆಲ್ಲ ಏಕೆ ಕೊನೆಯವರೆಗೆ ಒಗ್ಗಿರಲಿಲ್ಲ ಎನ್ನುವುದು ಕುತೂಹಲದ ಸಂಗತಿಯಾಗಿಯೇ ಉಳಿಯುವಂತಾಗಿದೆ.

ಗ್ರಂಥಋಣ :


(೧) 'ಕುವೆಂಪು ಅವರ ಕೆಲವು ಕಥೆಗಳು' - ಕುವೆಂಪು, ಉದಯರವಿ ಪ್ರಕಾಶನ, ಮೈಸೂರು, ೨೦೦೨.

(೨) 'ಕನ್ನಡ ಸಣ್ಣಕಥೆಗಳು' - ಜಿ.ಎಚ್. ನಾಯಕ, ನ್ಯಾಷನಲ್ ಬುಕ್ ಟ್ರಸ್ಟ್, ಹೊಸ ದೆಹಲಿ, ೧೯೭೮.

(೩) 'ಸಮಗ್ರ ವಿಮರ್ಶೆ' - ಡಾ॥ ಗಿರಡ್ಡಿ ಗೋವಿಂದರಾಜ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೧.

(೪) 'ನನ್ನ ದೇವರು ಮತ್ತು ಇತರ ಕಥೆಗಳು' - ಕುವೆಂಪು, ಉದಯರವಿ ಪ್ರಕಾಶನ, ಮೈಸೂರು, ೧೯೪೦.

# 'ಕರ್ಮವಾರಾಧನೆ, ಸೇವೆಯೇ ಪೂಜೆ' ಎಂದು ಸಾರುವ ಜಲಗಾರ

ಶಶಿಕಲಾ ಕುಲಕರ್ಣಿ, ಮೆರಿಲ್ಯಾಂಡ್

'ರಸಋಷಿ' ಎಂದೇ ಹೆಸರುವಾಸಿಯಾದ ಕುವೆಂಪು, ಈಗ ನಮ್ಮನ್ನಗಲಿದರೂ, ಎಲ್ಲ ಕನ್ನಡಿಗರ ಹೃದಯದಲ್ಲೂ, ತಮ್ಮ ಕೃತಿಗಳ ಮೂಲಕ ಜೀವಂತವಾಗಿದ್ದಾರೆ. ಭಾರತೀಯ ಹಾಗೂ ಪಾಶ್ಚಾತ್ಯ ಸಾಹಿತ್ಯ ಮತ್ತು ವಿಮರ್ಶೆ ಇವುಗಳ ಅಧ್ಯಯನ ಮಾಡಿದ ಕುವೆಂಪುರವರು ಬುದ್ಧ, ಬಸವಮ್ಮ, ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ ಮಹಾತ್ಮ ಗಾಂಧಿ, ಅರವಿಂದ, ಮುಂತಾದವರ ತತ್ವ ಮತ್ತು ವಿಚಾರಗಳಿಂದ ಪ್ರಭಾವಿತರಾಗಿದ್ದಾರೆ. ತಮ್ಮ ಕೃತಿಗಳಲ್ಲಿ ದಲಿತೋದ್ಧಾರ ಮತ್ತು ಸಮಾನತೆಗಳನ್ನು ಎತ್ತಿ ಹಿಡಿದಿದ್ದಾರೆ. ಮತ, ಮೌಢ್ಯ, ಅನ್ಯಾಯ, ಅಧರ್ಮ, ಅನೀತಿ, ಅಂಧಶ್ರದ್ಧೆ, ಹಾಗೂ ಕಂದಾಚಾರಗಳನ್ನು ವಿಮರ್ಶೆಗೊಳಪಡಿಸಿ, ನಿರಾಕರಿಸಿದ್ದಾರೆ. ಮತ ಮನುಜಮತವಾಗಬೇಕು; ಪಥ ವಿಶ್ವಪಥವಾಗಬೇಕು; ಮಾನವ ವಿಶ್ವಮಾನವನಾಗಬೇಕು - ಎಂಬುದು ಅವರ ದೃಢ ನಂಬಿಕೆ.

ಕುವೆಂಪುರವರು ಮಲೆನಾಡಿನಲ್ಲಿ ಹುಟ್ಟಿಬೆಳೆದವರು. ಅಲ್ಲಿನ ದಟ್ಟಕಾಡು, ಸಹ್ಯಾದ್ರಿ ಪರ್ವತಗಳ ಪಂಕ್ತಿ, ಋತುಮಾನಗಳ ಬದಲಾವಣೆ, ಹಕ್ಕಿಗಳ ಇಂಚರ, ಕಾಡುಪ್ರಾಣಿಗಳ ಘರ್ಜನೆ, ಸೂರ್ಯೋದಯ, ಚಂದ್ರೋದಯ, ಹೂ ಹಣ್ಣು ಬಣ್ಣಗಳ ಬೆಡಗುಗಳು, ಇವರ ಮೇಲೆ ಮಹತ್ವ ಪರಿಣಾಮವನ್ನುಂಟುಮಾಡಿದೆ. ಹಾಗೆಂದೇ, ಇವರ ಎಲ್ಲ ಕಾವ್ಯ ಕಥನಗಳಲ್ಲಿಯೂ ಪ್ರಕೃತಿಗೆ ಪ್ರಾಧಾನ್ಯತೆಯನ್ನು ಕೊಟ್ಟಿರುತ್ತಾರೆ. ನಿಸರ್ಗವನ್ನು ಕಾಣಲು ಮೂರನೆ ಕಣ್ಣು ಅಗತ್ಯ; ಅದೇ ಆಂತರ್ಯದ ಕಣ್ಣು - ಎಂದು ಅವರು ಹೇಳುತ್ತಾರೆ. ನಿಸರ್ಗವನ್ನು ಕೇವಲ ಸೌಂದರ್ಯ ದೃಷ್ಟಿಯಿಂದ ನೋಡುವುದಲ್ಲದೆ, ನಿಸರ್ಗದ ಕಾಡಿನ ಅಳಿವು-ಉಳಿವಿನಲ್ಲಿ ಮಾನವನ ಸಂಸ್ಕೃತಿ ನಾಗರಿಕತೆಗಳ ಪ್ರಶ್ನೆಯೂ ಇದೆ ಎಂದು ನಂಬಿದವರು.

'ಜಲಗಾರ' ಅವರು ಬರೆದ ನಾಟಕಗಳಲ್ಲಿ ಒಂದು ಉತ್ತಮ ಕೃತಿ. ಈ ನಾಟಕ ಮೊದಲಿಗೆ ಪ್ರಕಟವಾದುದು ೧೯೨೮ರಲ್ಲಿ. ಆಗಿನ್ನೂ ಅವರಿಗೆ ೨೫ ವರ್ಷವೂ ತುಂಬಿರಲಿಲ್ಲ. ಆಗಲೇ ಅವರ ಪ್ರಗತಿಪರ ಮನಸ್ಸು ಸಮಾಜದಲ್ಲಿನ ಲೋಪ-ದೋಷಗಳನ್ನು ಎತ್ತಿ ತೋರಿಸುವಂತಹ ಕೃತಿಗಳನ್ನು ಬರೆಯಲು ಪಕ್ವವಾಗಿತ್ತು. ಗೀತನಾಟಕದ ರೂಪಕದಲ್ಲಿ ಬರೆದ ಈ ನಾಟಕದಲ್ಲಿನ ವಿಷಯ, ಅದರಲ್ಲಿ ಬರುವ ಪಾತ್ರಗಳ ವಿಶಿಷ್ಟತೆ ಮತ್ತು ಅದು

ಸಮಾಜದ ಮೇಲೆ ಉಂಟುಮಾಡುವ ಪರಿಣಾಮಗಳನ್ನು ವಿಶ್ಲೇಷಿಸುವ ಪ್ರಯತ್ನ, ಪ್ರಸ್ತುತ ಲೇಖನದ ಗುರಿ.

ಈ ನಾಟಕದ ಶಿರೋನಾಮೆ ಹೇಳುವಂತೆ ಜಲಗಾರ ಎಂದರೆ ಸಾಕು ಯಾರೂ ಅವನನ್ನು ಮುಟ್ಟಿಸಿಕೊಳ್ಳುತ್ತಿರಲಿಲ್ಲ. ಮೈಲಿಗೆಯಾಗುತ್ತದೆ ಎಂಬ ನಂಬಿಕೆ ಸಮಾಜದಲ್ಲಿ ಬೆಳೆದು ಬಂದಿತ್ತು. ಇವನ ಕೆಲಸ ಬೀದಿ ಗುಡಿಸುವುದು. ಕೆಲವೊಂದು ಹಳ್ಳಿಗಳಲ್ಲಿ ಈ ಪರಿಪಾಠ ಈಗಲೂ ರೂಢಿಯಲ್ಲಿದೆ. ಅದಕ್ಕಾಗಿಯೇ ಗಾಂಧೀಜಿಯವರು ಜಲಗಾರರಿಗೆ ಕಿರುಕುಳ ಕೊಡುತ್ತಿರುವುದನ್ನು ಸರಿಪಡಿಸಲು ಮತ್ತು ಈ ಮೂಢನಂಬಿಕೆಯನ್ನು ಕಿತ್ತೊಗೆಯಲು ಅಂಥವರನ್ನು 'ಹರಿಜನ'ರೆಂದು ಕರೆಯಲು ಪ್ರಾರಂಭಿಸಿದರು. ಹರಿಗೆ ಪ್ರಿಯರಾದವರೇ ಈ ದಲಿತ ವರ್ಗದವರು ಎಂದು ಪ್ರಚಾರ ಮಾಡಲು ಪ್ರಾರಂಭಿಸಿದರು. ಮೇಲು ಕೀಳು ಎಂಬ ಜಾತಿಭೇದಗಳ ಭಾವನೆಗಳು ನಮ್ಮ ದೃಷ್ಟಿಯನ್ನವಲಂಬಿಸಿದೆ ಎಂದು ಬಸವಣ್ಣನವರೂ ಹೇಳಿರುತ್ತಾರಲ್ಲದೆ, ಈ ಮನೋಧರ್ಮದ ವಿರುದ್ಧವಾಗಿಯೂ ಹೋರಾಡಿದರು.

ಕೊಲುವವನೇ ಮಾದಿಗ ಹೊಲಸು ತಿಂಬುವವನೆ ಹೊಲೆಯ
ಕುಲವೇನೊ ಆವಂದಿರ ಕುಲವೇನೋ
ನಮ್ಮ ಕೂಡಲ ಸಂಗನ ಶರಣರೆ ಕುಲಜರು

ಎಂಬ ಅವರ ಮಾತುಗಳು ಮಹತ್ವದ್ದಾಗಿವೆ. ಕೊಲುವವನು ಹಿಂಸಾಧರ್ಮದವನು; ಹೊಲಸು ಎಂದರೆ ಸಹಜ ಆರೋಗ್ಯಕ್ಕೆ ವಿರೋಧವಾದುದು. ಇತರರಿಂದ ಅಪಹರಿಸಿದ ಅನ್ನ, ಸಂಪತ್ತು ಎಲ್ಲವೂ ಹೊಲಸು. ಮಾದಿಗ (ಹೊಲೆಯ) ಎಂದರೆ ದ್ವೇಷ, ಅಸೂಯೆ, ಅಸಹನೆ, ಹಿಂಸೆ ಮುಂತಾದ ಕಲ್ಮಷಗಳಿಂದ ಕೂಡಿದ ಮನಸ್ಸಿನವನು ಎಂದು ಬಸವಣ್ಣನವರು ಸಾರಿದರು. ದಾಸರು ಕೂಡ 'ಕುಲ ಕುಲವೆಂದು ಹೊಡೆದಾಡದಿರಿ, ಕುಲದ ನೆಲೆಯನೇನಾದರೂ ಬಲ್ಲಿರಾ' -ಎಂದು ಜನರ ಮೌಢ್ಯವನ್ನು ಹೋಗಲಾಡಿಸಲು ಶ್ರಮಪಟ್ಟಿದ್ದರು. ಹಾಗೆಯೇ, ಕುವೆಂಪುರವರು ಜಾತಿ ಮತಗಳ ಘರ್ಷಣೆಯನ್ನು ಕಂಡು ಕುದಿದೆದ್ದಿದ್ದರು. ಈ ಮೂಢನಂಬಿಕೆಗಳ ಅರಿವು ಮಾಡಿಕೊಡಲೆಂದೇ ಈ 'ಜಲಗಾರ' ನಾಟಕವನ್ನು ಅವರು ಬರೆದಂತಿದೆ.

'ಜಲಗಾರ' ನಾಟಕ ಪರಿಚಯ:

ಊರಲ್ಲಿ ಅಂದು ಶಿವನ ಜಾತ್ರೆ. ಗುಡಿಗೆ ಹೋಗಿ 'ಪೂಜೆ' ಸಲ್ಲಿಸಲು ಆ ಊರಿನವರಿಗೆಲ್ಲ ಸಂಭ್ರಮವೋ ಸಂಭ್ರಮ! ರೈತರು, ತರುಣರು, ಪಾರ್ವರು, ಎಲ್ಲರೂ ಹಬ್ಬಕ್ಕೆ ತಕ್ಕ ಉಡಿಗೆತೊಟ್ಟು ಗುಡಿಯ ಕಡೆ ಹೊರಟಿದ್ದಾರೆ. ಆದರೆ, ಅಸ್ಪೃಶ್ಯ ಜಲಗಾರ ಬೀದಿಗುಡಿಸುವ ತನ್ನ ಕೆಲಸದಲ್ಲಿ ನಿರತನಾಗಿದ್ದಾನೆ. ಅವನಿಗೆ ಗುಡಿಯ ಬಳಿ ಹೋಗಲು,

ಅವನು ದಲಿತನಾದುದರಿಂದ ಸಾಧ್ಯವಾಗದ ಮಾತು! ಆದರೆ, ಸೃಷ್ಟಿಯೇ ದೇವರು, ನಿಷ್ಠೆಯೇ ಶಿವನು ಎಂದು ನಂಬಿದ ಅವನಿಗೆ ಕೊನೆಯಲ್ಲಿ ಶಿವನೇ ಪ್ರತ್ಯಕ್ಷನಾಗುತ್ತಾನೆ.

ಇದಿಷ್ಟು ನಾಟಕದ ಸ್ಥೂಲ ಸಾರಾಂಶ. ಆದರೆ, ಅದು ಸಾರುವ ಸಂದೇಶ ಮಾತ್ರ ಪ್ರಪಂಚದಲ್ಲಿ ಅನುಸರಿಸಿಕೊಂಡು ಬಂದಿರುವ ಗೊಡ್ಡಾಚಾರದ ಸಂಪ್ರದಾಯ, ಮೂಢನಂಬಿಕೆ, ಅವುಗಳ ಫಲವಾಗಿ ನಡೆಯುವ ಅತ್ಯಾಚಾರಗಳ ಮೇಲೆ ಬೆಳಕು ಚೆಲ್ಲುತ್ತದೆ. ಅವನ್ನು ನಿವಾರಿಸಲೆಂದೆ ಕುವೆಂಪು ಈ ನಾಟಕ ಬರೆದಿದ್ದಾರೆ. ಇಲ್ಲಿ, ಜಲಗಾರನಿಗೆ ಶಿವನು ಜಲಗಾರ ವೇಷದಲ್ಲೇ ಮೈದೋರಿದುದು ಗಮನಾರ್ಹ. 'ಊರ ತೋಟಿಯು ನೀನು ಜಗದ ತೋಟಿಯು ನಾನು' ಎಂದು ಹೇಳಿ, ಜನರ ನಂಬಿಕೆಗೆ ಭಿನ್ನವಾಗಿ ಶಿವನೇ ಜಲಗಾರನ ಮಟ್ಟಕ್ಕೆ ಇಳಿಯುತ್ತಾನೆ. ಇಲ್ಲಿ, 'ಇಳಿಯುತ್ತಾನೆ' ಎಂಬ ಶಬ್ದಪ್ರಯೋಗ ಸಮಾಜದಲ್ಲಿನ ನಂಬಿಕೆಯ ಆಧಾರದ ಮೇಲೆ. ನಿಜಕ್ಕೂ, ಜಲಗಾರನನ್ನು ತನ್ನ ಮಟ್ಟದಲ್ಲಿ ಗುರುತಿಸುತ್ತಾನೆ, ಶಿವ. ತನಗೂ, ತನ್ನ ಕೆಲಸವನ್ನು ನಿಷ್ಠೆಯಿಂದ ಮಾಡುತ್ತಿರುವ ಜಲಗಾರನಿಗೂ, ಯಾವ ರೀತಿಯ ಭೇದವೂ ಇಲ್ಲ - ಎಂಬ ಸಂದೇಶ ಸಾರಿದಂತಿದೆ, ಇಲ್ಲಿ.

ಈ ನಾಟಕದಲ್ಲಿ ಬರುವ ಮುಖ್ಯ ಪಾತ್ರವೇ ಜಲಗಾರ ಮತ್ತು ಜಲಗಾರನ ರೂಪದ ಶಿವನದು. ರೈತ, ಭೂದೇವಿ, ತಿರುಕ, ಯುವಕ, ಭಟ್ಟ ಬಾಲಕರು, ಹಳ್ಳಿಯ ಹುಡುಗಿ, ಪಾರ್ವರು, ತರುಣರು - ಇವರೆಲ್ಲ ಜಲಗಾರನ ಪಾತ್ರಕ್ಕೆ ಪೂರಕವಾಗಿರುವವರು. ಇಲ್ಲಿ ಕುವೆಂಪುರವರು ಆಯಾ ಪಾತ್ರಗಳ ಸೂತ್ರಧಾರಿಗಳಾಗಿ ಹೇಗೆ ಅವರ ಭಾವನೆಗಳನ್ನು ಅಭಿವ್ಯಕ್ತಿಸಿದ್ದಾರೆ ಎಂಬುದು ವ್ಯಕ್ತವಾಗುತ್ತದೆ.

ಮೊದಲು ನಾಟಕದ ಪ್ರಾರಂಭದಲ್ಲಿ ಭೂದೇವಿಯು ತನ್ನ ಸಖಿಯಾದ ಉಷೆಯನ್ನು ಆಹ್ವಾನಿಸುವ ರೀತಿ ಎಂತಹವರ ಮನಸ್ಸಿನಲ್ಲೂ ನಿಸರ್ಗೋಪಾಸನೆಯ ಭಾವನೆಯನ್ನು ಕೆರಳಿಸುವಂತಹುದೇ!

ಮಬ್ಬಿನ ಮಂಜಿನ ಮುಸುಕನೆ ಎತ್ತಿ
ಬಾ ಉದಯಾಚಲವನು ಹತ್ತಿ.
ಹಸುರಿನ ಬನಗಳ ಮುದ್ದಿಸಿ ಬಾರ;
ಗಿರಿಶೃಂಗಗಳಾಲಿಂಗಿಸಿ ಬಾರ;
ಮಲಗಿಹ ಖಗಗಳ ಕರೆಯುತ ಬಾರ;
ಮಂದಾನಿಲನ ಎಬ್ಬಿಸಿ ಬಾರ;

ಎಂದು ಇಲ್ಲಿ ಕುವೆಂಪುರವರು ಬೆಳಗಾಗುವಾಗ ನಿಸರ್ಗದಲ್ಲಾಗುವ ಬದಲಾವಣೆಯನ್ನು ವರ್ಣಿಸುತ್ತಾ ನಿಸರ್ಗವನ್ನು ಸೌಂದರ್ಯದ ಜೊತೆ ಸಮ್ಮಿಳಿತಗೊಳಿಸಿದ್ದಾರೆ:

ಹೂಗಳ ಕೆಂಪಿನ ಕುಂಕುಮವಿಟ್ಟು
ತಳಿರಿನ ಸೊಬಗಿನ ಸೀರೆಯನುಟ್ಟು

ಪೈರಿನ ರಮಣೀಯತೆಯನು ತೊಟ್ಟು,
ಮುಗಿಲಿನ ಕುರುಳನು ತೇಲಲು ಬಿಟ್ಟು;

ಹೀಗೆ ಭೂಮಿಯಮೇಲೆ ಬೆಳಕು ಆವರಿಸುತ್ತಿರುವಾಗ ಜಲಗಾರ ತನ್ನ ಕಸಬರಿಕೆ ಮತ್ತು ಬುಟ್ಟಿಯೊಂದಿಗೆ ಬಂದು, ಬೆಳಗಾಗುವ ಮುಂಚೆಯೇ ಕೆಲಸಕ್ಕೆ ತೊಡಗಿದ್ದಾನೆ. ಬಹುಶಃ ಸೂರ್ಯೋದಯದ ಸೌಂದರ್ಯವನ್ನು ಹೀರಲೆಂದೇ ಅಷ್ಟು ಮುಂಚೆ ಅವನು ಕೆಲಸಕ್ಕೆ ಹೊರಟಿರಬೇಕು. ಮಂಜಿನ್ನೂ ಮುಸುಕಿದೆ; ದಾರಿಯೂ ಕಾಣಿಸದು; ಒಂದು ಕಡೆ ಕುಳಿತು, ಬೆಟ್ಟಗಳ ಹಿಂದೆ ಅವಿತು ಕುಲಿತಿದ್ದ ರವಿಯನ್ನು ಕರೆಯುತ್ತ ಹಾಡೊಂದನ್ನು ಹಾಡಲು ಪ್ರಾರಂಭಿಸುತ್ತಾನೆ:

ಮೂಡಿ ಬಾ ಮೂಡಿ ಬಾ
ಬೇಗ ಬಾ ಬಾ ಬಾ!
ತೊಳಗಿ ಬಾ, ಬೆಳಗಿ ಬಾ,
ಜಗದ ಕಣ್ಣೆ, ಬಾ, ಬಾ!

ಅವನ ಹಾಡಿಗೆ ಮರುದನಿ ಕೊಡುವಂತೆ ಮೆಲುನಡೆಯನಿಡುತ ಅರುಣೋದಯವಾಗುತ್ತದೆ ಮೂಡಣದ ದಿಗಂತದಲ್ಲಿ. ಕೆಂಪು ವರ್ಣದ ಓಕುಳಿಯನ್ನು ಚೆಲ್ಲುತ್ತ ದಿನಕರನು ಮೆಲ್ಲ ಮೆಲ್ಲನೆ ಮೇಲಕ್ಕೆ ಬರುತ್ತಾನೆ. ಆ ಸೊಬಗಿನ ವೈಭವದಲ್ಲಿ ಜಲಗಾರ ಮೈಮರೆತು ತಲ್ಲೀನನಾಗುತ್ತಾನೆ. ಇದು, ಅವನಲ್ಲಿ ಆಳವಾಗಿ ಹುದುಗಿದ್ದ ನಿಸರ್ಗದ ಮೇಲಿನ ಪ್ರೀತಿಯನ್ನು ವ್ಯಕ್ತಪಡಿಸುತ್ತದೆ.

ಸೃಷ್ಟಿಕರ್ತನನೆಮಗೆ ಸಾಧಿಸಲು, ತೋರಿಸಲು,
ಸೃಷ್ಟಿಯಿದು ಸಾಲದೆ? ಸೃಷ್ಟಿಸೌಂದರ್ಯಮಿದು
ಸಾಲದೇ? ಪಳವಾತದೇಕೆ?.....

ಎಂದು ತನ್ನೊಳಗೇ ಸಂತೋಷಪಡುತ್ತಾನೆ. ಇದು ಕವಿವಾಣಿಯೂ ಹೌದು.

ಇಲ್ಲಿ ಭೂದೇವಿಯ ಪಾತ್ರವನ್ನು ಒಂದು ಮುಖ್ಯ ಉದ್ದೇಶದಿಂದ ಸೃಷ್ಟಿಸಿದ್ದಾರೆ, ಕುವೆಂಪು. 'ನಿಸರ್ಗ ಕವಿ' ಎಂದೇ ಹೆಸರುಗಳಿಸಿರುವ ಅವರು ತಮ್ಮ ಎಲ್ಲ ಕೃತಿಗಳಲ್ಲೂ ನಿಸರ್ಗಕ್ಕೆ ಮಹತ್ವದ ಪಾತ್ರ ಕೊಟ್ಟಿದ್ದಾರೆ. ಅವರ 'ಆನಂದಮಯ ಈ ಜಗಹೃದಯ' ಎಂಬ ಕವನದಲ್ಲಿ,

ರವಿವದನವೆ ಶಿವಸದನವೊ:
ಬರಿ ಕಣ್ಣದು ಮಣ್ಣೊ!
ಶಿವನಿಲ್ಲದೆ ಸೌಂದರ್ಯವೆ?
ಶವಮುಖದಾ ಕಣ್ಣೊ!

ಎಂದು ಹೇಳಿದುದು ಅರ್ಥಗರ್ಭಿತವಾಗಿದೆ. ನಿಸರ್ಗದಲ್ಲಿ ಸೌಂದರ್ಯವನ್ನು ಕಾಣುವ ಸೌಂದರ್ಯೋಪಾಸನೆಯೇ ಶಿವನ ಪೂಜೆ ಎಂಬ ನಿಶ್ಚಲ ನಂಬಿಕೆ ಅವರದು! ಸೃಷ್ಟಿ ಸೌಂದರ್ಯವನ್ನು ಅನುಭವಿಸದ ಕಣ್ಣು 'ಶವಮುಖದಾ ಕಣ್ಣು'. ಅಲ್ಲದೆ, ಸೂರ್ಯೋದಯವನ್ನು ಇಲ್ಲಿ ವರ್ಣಿಸಿದುದಕ್ಕೆ ಬೇರೊಂದು ಉದ್ದೇಶವೂ ಇದ್ದಿರಬಹುದು. ಜಗದ ಕತ್ತಲನ್ನು ಸೂರ್ಯ ಹೋಗಲಾಡಿಸಿದಂತೆ, ಜನರಲ್ಲಿ ಹುದುಗಿ ಕುಳಿತಿರುವ ಮೂಢನಂಬಿಕೆ, ಅತ್ಯಾಚಾರ ಎಂಬ ಕತ್ತಲನ್ನು ಮನಸ್ಸಿನಿಂದ ಹೋಗಲಾಡಿಸಲು ಮುನ್ನುಡಿ ಬರೆದಂತಿದೆ ಸೂರ್ಯೋದಯದ ವರ್ಣನೆಯ ಮೂಲಕ.

ಊರೆಲ್ಲ ಜಾತ್ರೆಗಾಗಿ ಸಂಭ್ರಮದಲ್ಲಿ ಮೆರೆಯುತ್ತಿದ್ದರೆ, ಜಲಗಾರ ಮಾತ್ರ ತನ್ನ ಕೆಲಸದಲ್ಲೆ ನಿರತನಾಗಿದ್ದಾನೆ. ಜಾತ್ರೆಯಿರಲಿ, ಇಲ್ಲದಿರಲಿ, ಊರನ್ನು ದಿನವೂ ಸ್ವಚ್ಛ ಮಾಡಲೇಬೇಕಲ್ಲವೆ! ಅಲ್ಲದೆ, ಅವನಿಗೆ ಗುಡಿಯ ಬಳಿ ಸುಳಿಯಲೂ ಅವಕಾಶವಿಲ್ಲ, ದಲಿತನಾದುದರಿಂದ. ಆದರೆ, 'ಪುಣ್ಯ' ಪಡೆಯುವುದಕ್ಕಾಗಿ ಗುಡಿಗೆ ಹೊರಟ ಹಲವರನ್ನು ಅವನು ಸಂದರ್ಶಿಸುತ್ತಾನೆ.

ಮೊದಲಿಗೆ ರೈತನ ಪ್ರವೇಶವಾಗುತ್ತದೆ. ಅವನು 'ನೇಗಿಲಯೋಗಿ'ಯಾಗಿದ್ದಾನೆ:

ನೇಗಿಲ ಯೋಗಿಯು ನಾನು;
ಮಣ್ಣಿನ ಭೋಗಿಯು ನಾನು!
ಕೆರೆಗಳತೊರೆಗಳ ಗೆಳೆಯನೆ ನಾನು,
ಹೊಲಗಳ ಬನಗಳ ದೊರೆ ನಾನು.
........

ನೇಗಿಲ ಗೆರೆಯೆ ತೋರುವುದೆನಗೆ
ಮುಕ್ತಿಯ ಹಾದಿಯನು;
ವೇದಗಳೆಲ್ಲ ನೆಗೆ ನೆಗೆನೆಗೆದರಿಯದ
ಅಂತ್ಯದ ಹಾದಿಯನು;
........ರೈತರೇ
ಭೂಮಿಗಿಳಿದಿಹ ಕಾಮಧೇನುಗಳು; ರೈತರೇ
ಧರೆಯೊಳಿಹ ಜಂಗಮ ಕಲ್ಪವೃಕ್ಷಗಳು.

ಎಂದು ಹಾಡುತ್ತ ಬರುತ್ತಾನೆ ರೈತ. ರೈತರೆ ಸಮಾಜದ ಬೆನ್ನುಮೂಳೆ; ಸಮಾಜದ ಶಕ್ತಿ; ಅವನು ಬಿತ್ತಿ ಬೆಳೆದು ಎಲ್ಲರಿಗೂ ಆಹಾರ ಒದಗಿಸಿಕೊಡುತ್ತಾನೆ. 'ವೇದಗಳೆಲ್ಲ ನೆಗೆ ನೆಗೆದರಿಯದ ಅಂತ್ಯದ ಹಾದಿ'ಯನ್ನು ಅವನು ತನ್ನ ನೇಗಿಲ ಗೆರೆಯಲ್ಲಿ ಕಾಣುತ್ತಾನೆ. ಅವನು ಹಬ್ಬದ ಗುಡಿಗೆ ಹೊರಟವನು. ಜಲಗಾರನನ್ನು ಕುರಿತು ಶಿವನಗುಡಿಯಲ್ಲಿ ತೇರೆಳೆಯುವುದನ್ನು ನೋಡಲು ಬಾ ಎಂದು ಆಹ್ವಾನಿಸಿದಾಗ, ಜಲಗಾರ ಹೇಳಿದ ಮಾತು

ಅರ್ಥಗರ್ಭಿತವಾಗಿದೆ: 'ಹೇ ರೈತನೆ, ನಿನ್ನ ನೇಗಿಲ ಗೆರೆಯ ದಿವ್ಯದೇವಾಲಯದಿ ಶಿವನ ಕಾಣೆಯಾ?' ಜಲಗಾರ ನಿರಕ್ಷರನಿರಬಹುದು; ವೇದ ಪಾರಾಯಣಗಳ ಅನುಭವವಿಲ್ಲದವನಿರಬಹುದು; ಆದರೆ, ಅವನು ಅವಿದ್ಯಾವಂತನಂತೂ ಅಲ್ಲ ಎಂಬುದು ಅವನ ಈ ಮಾತಿನಿಂದ ಅರ್ಥವಾಗುತ್ತದೆ. ರೈತ ಹಿಂದಿನಿಂದ ನಡೆದುಬಂದ ಆಚಾರದಲ್ಲಿ ಅನನ್ಯ ನಂಬಿಕೆ ಇಟ್ಟವನು. ಅವುಗಳನ್ನು ಪ್ರಶ್ನಿಸುವ ಗೋಜಿಗೆ ಅವನು ಹೋಗಲಾರ; ಅಷ್ಟರಮಟ್ಟಿಗೆ ಅವನ ಬುದ್ಧಿ ಮಂಕಾಗಿ ಹೋಗಿದೆ. ಮೂಢನಂಬಿಕೆ ಸಮಾಜದ ಮೇಲೆ ಮಾಡಿದ ಪರಿಣಾಮವಿದು! ಸುಸಂಸ್ಕೃತರೆಂದು ಕರೆದುಕೊಳ್ಳುತ್ತ ಗೊಡ್ಡಾಚಾರಗಳಿಗೆ ಮಾರುಹೋಗಿದೆ ಸಮಾಜ! ದೇವರ ಬಗ್ಗೆ ಜಲಗಾರನಿಗಿರುವ ಜಡತ್ವಕ್ಕೆ ಮರುಗುತ್ತ ರೈತನು ಗುಡಿಯ ಕಡೆ ಹೋಗುತ್ತಾನೆ.

ಜಲಗಾರ ಇದೇ ರೀತಿ ಜಾತ್ರೆಗೆ ಹೋಗುವ ಹಲವರನ್ನು ಸಂದರ್ಶಿಸುತ್ತಾನೆ. ಕೆಲವರು ಅವನ ಪಾಡನ್ನು ನೋಡಿ ಮರುಗಿದರೆ, ಕೆಲವರು ಅವನನ್ನು ಗೇಲಿ ಮಾಡುತ್ತಾರೆ - ಅವನು ಏನೂ ತಿಳಿಯದವನೆಂದು. ಆದರೆ ಜಲಗಾರನಿಗೆ ತನ್ನ ಕರ್ತವ್ಯ ನಿಷ್ಠೆಯ ಅರಿವಿದೆ.

ಜಗದ ದೇಗುಲದಲ್ಲಿ ಜಗದುದಯ ಕಾರಣನ
ಕಾಣದವನೆಂತು ಕಾಣ್ಬನು ಶಿವನ, ಗುಡಿಯಲ್ಲಿ?

ನಿಸರ್ಗದಲ್ಲಿ, ನಿಷ್ಠೆಯಲ್ಲಿ ಶಿವನನ್ನು ಕಾಣಲಾರದೆ ಗುಡಿಯಲ್ಲಿ ಅವನನ್ನು ಅರಸುವ ಜನರ ಮೂಢತೆಗೆ ಅವನು ಮರುಗುತ್ತ ಹಾಡುತ್ತಿರುತ್ತಾನೆ. ಅದನ್ನು ಕೇಳಿದ ಕೆಲವು ಪಾರ್ವರು ಬಹಳ ಅಚ್ಚರಿಪಡುತ್ತಾರೆ. ಆ ಹಾಡನ್ನು ಹಾಡಿದವರು ಯಾರೆಂಬುದು ಅವರಿಗೆ ತಕ್ಷಣ ತಿಳಿಯದೆ, ಅದನ್ನು ಗುಡಿಯ ಬಳಿಯಲ್ಲಾದರೂ ಹಾಡಿದರೆ ಎಷ್ಟು ಚೆನ್ನ - ಎಂದು ತಮ್ಮ-ತಮ್ಮಲ್ಲೆ ಮಾತಾಡಿಕೊಳ್ಳುತ್ತಾರೆ. ಅವರ ನಿರ್ಣಯದ ಪ್ರಕಾರ ಆ ಹಾಡು ಶೂದ್ರರ ಬಾಯಿಂದ ಬರಲು ಸಾಧ್ಯವಿಲ್ಲ. ಯಾಕೆಂದರೆ, 'ಶೂದ್ರರೊಳ್ ಕವಿವರ್ಯರುದಿಸುವರೆ? ಹುಟ್ಟುವರೆ ಪಂಡಿತರ್? ಜನಿಸುವರೆ ಶಿಲ್ಪಿಗಳ್?' ಈ ನಿರ್ಣಯ ಸಮಾಜ ಶೂದ್ರರನ್ನು ನೋಡುವ ದೃಷ್ಟಿಯ ಮೇಲೆ ಬೆಳಕು ಚೆಲ್ಲುತ್ತದೆ. ಇನ್ನು ಮುಂದೆ ಬರುವ ಪಾತ್ರಗಳೆಲ್ಲ ಒಂದಲ್ಲ ಒಂದು ರೀತಿಯಲ್ಲಿ ಸಮಾಜದ ಕೊರತೆಯನ್ನು ವಿವರಿಸುತ್ತದೆ.

ಬಡವರನ್ನು ಅರ್ಥಮಾಡಿಕೊಳ್ಳುವುದು ಬಡವನೇ ಹೊರತು, ಶ್ರೀಮಂತನಲ್ಲ ಎಂಬುದನ್ನು ಜಲಗಾರ ಮನಗಾಣುತ್ತಾನೆ. ಇಬ್ಬರು ತರುರು ಒಬ್ಬ ಕಣ್ಣಿಲ್ಲದ ತಿರುಕನನ್ನು, ತಾನು ಕುರುಡನೆಂದು ಸುಳ್ಳು ಹೇಳಿಕೊಂಡು ಬೇಡುತ್ತಿದ್ದಾನೆ ಎಂದು ಹಿಂಸಿಸುತ್ತಿರುವಾಗ, ಜಲಗಾರ ಆ ತಿರುಕನ ಸಹಾಯಕ್ಕೆ ಹೋಗಿ, ಹೇಳುವ ಮಾತು ಹೀಗಿದೆ:

ಲೋಕದಲಿ ಕಂಬನಿಯನೊಂದನೊರಸಿದ ನರನೆ
ಧನ್ಯ! ನಿಟ್ಟುಸುರನೊಂದ ಸಂತೈಸುವನೆ
ಮಾನ್ಯ! ಹಸಿದ ಹೊಟ್ಟೆಗೆ ಮರುಗಿ ತುತ್ತೊಂದ
ನೀಡುವನೆ ಶಿವನಿಗೆಣೆ!....

ಹೀಗೆ ಹೇಳಿ, ತನ್ನಲ್ಲಿರುವ ಮುಷ್ಟಿ ಆಹಾರವನ್ನು ಆ ತಿರುಕನನೊಡನೆ ಹಂಚಿಕೊಳ್ಳುತ್ತಾನೆ. ಇದು ಆ ತಿರುಕನಿಗೆ ಜೇಬಿನಲ್ಲಿ ಕಾಸಿದ್ದರೂ ಕೊಡದೆ ಅಲ್ಲಿಂದ ತೆರಳಿದ್ದ ತರುಣನೋರ್ವನ ವರ್ತನೆಗೆ ತೀರ ವ್ಯತಿರಿಕ್ತವಾಗಿದೆ.

ಜಾತ್ರೆಯಿಂದ ಮರಳಿ ಬಂದ ಹಳ್ಳಿಗರನ್ನು ಜಲಗಾರ ಕೇಳಿದ 'ಗುಡಿಯಿಂದ ಏನನ್ನು ತಂದಿರಿ?' ಎಂಬ ಪ್ರಶ್ನೆಗೆ ಯಾರಿಂದಲೂ ಸಮರ್ಪಕವಾದ ಉತ್ತರ ಅವನಿಗೆ ದೊರಕುವುದಿಲ್ಲ. ಪೂಜೆ-ಪುನಸ್ಕಾರ, ಗುಡಿಯಲ್ಲಿರುವ ದೇವರ ಮೂರ್ತಿಯ ದರ್ಶನವೇ ತಮ್ಮ ಸುಕೃತಿಗೆ ದಾರಿ ಎಂದು ತಿಳಿದ ಅವರು, ಜಲಗಾರನಿಗೆ ಏನೆಂದು ಉತ್ತರ ಕೊಟ್ಟಾರು? ದೇವರ ಹೆಸರಿನಲ್ಲಿ, ಭಕ್ತರನ್ನು ಸುಲಿದು ಹಣ ಗಳಿಸಿದ ಪೂಜಾರಿಗಳನ್ನೂ, ತೀರ್ಥ-ಪ್ರಸಾದಗಳನ್ನು ಹಂಚಿ ಹಣ ಗಳಿಸಿದ ಪಾರ್ವರನ್ನೂ ನೋಡಿ ಅವನು ಮರಗುತ್ತಾನೆ. ಇದೇ ಪೂಜಾರಿಗಳು ಜಲಗಾರನ ಸುತ್ತ ಸುಳಿಯುವ ಗಾಳಿಯೇ ಅವರನ್ನು ಮೈಲಿಗೆ ಮಾಡಿ, ಶಿವನ ಪೂಜೆಗೆ ಅಪವಿತ್ರವಾಗುವುದೆಂದು ಹೇಳಿದ್ದರು. ಜಲಗಾರ ಒಬ್ಬನೆ ಕುಳಿತು, 'ಪುರಾಣ, ವೇದ, ಯಾಗ ಯಾವುದೂ ತಿಳಿದಿಲ್ಲ; ಗಂಗೆ, ಪುರಿ, ಕಾಶಿಯಾತ್ರೆ ನಾನರಿಯೆ; ಅಂತರಂಗದಲಿ ನಿನ್ನ ಕರೆಯುವೆ, ದೇವರೆ ಕರುಣಿಸು' ಎಂದು ಪ್ರಾರ್ಥಿಸುತ್ತಾನೆ. ಶಿವನು ಆಗ ಜಲಗಾರನ ನಿಷ್ಠೆಯನ್ನು ಮೆಚ್ಚಿ, ಜಲಗಾರನ ವೇಷದಲ್ಲೇ ಅವನಿಗೆ ಪ್ರತ್ಯಕ್ಷನಾಗುತ್ತಾನೆ. 'ಬೀದಿಯಲಿ ಗುಡಿಸುವವನೆದೆಯಲ್ಲಿ ಇರುವೆನು; ಭೂಮಿಯಲಿ ಕೆಲಸ ಮಾಡುತ್ತಿರುವ ಒಕ್ಕಲಿಗನಲ್ಲಿರುವೆ; ಎಲ್ಲಿ ಹೊಲೆಯನು ತನ್ನ ಕೆಲಸದಲ್ಲಿರುವನೊ ಅಲ್ಲಿರುವೆ; ಕುರುಡರು, ದೀನರು, ಅನಾಥರನು ಕೈ ಹಿಡಿದು ಪೊರೆವೆ; ಜಲಗಾರ, ನೀನೆ ನಿಜವಾದ ಭಕ್ತ!' ಎಂದು ಹೇಳಿ ಅವನಲ್ಲಿ ಪ್ರಸನ್ನನಾಗುತ್ತಾನೆ. ಸಮಾಜ ಶಿವನನ್ನು ರೂಪಿಸಿಕೊಂಡ ರೂಪಕ್ಕೆ ಬದಲಾಗಿ, ಸಾಮಾನ್ಯನ ರೂಪದಲ್ಲಿ ಪ್ರತ್ಯಕ್ಷನಾದ ಶಿವನನ್ನು ನೋಡಿ ಜಲಗಾರ ಆಶ್ಚರ್ಯಪಟ್ಟಾಗ, ಶಿವನು:

ಚಂದ್ರನಂ ಬಿಸುಟಿಹೆನು ಗಗನಕ್ಕೆ!
ಗಂಗೆಯನ್ನೆಸೆದಿಹೆನು ಹಿಮಗಿರಿಗೆ! ಹಾವುಗಳ
ಪಾತಾಳಕ್ಕಟ್ಟಿಹೆನು! ಹಣೆಗಣ್ಣ ಹಂಚಿರುವೆನು
ನೇಸರ್ ಅರಿಲ್ಗಳಿಗೆ!........
ಪೊರಕೆಯಂದದ ಶೂಲ ಗುಡಿಸುತಿದೆ ಬ್ರಹ್ಮಗಳ
ಬೀದಿಯನು!........

ಎಂದು ಹೇಳಿ, 'ಊರ ತೋಟಿಯು ನೀನು; ಜಗದ ತೋಟಿಯು ನಾನು!', 'ಕಲ್ಪನೆಯ ಕವಚವನು ತೆಗೆದೊಗೆದು ಬಂದಿಹೆನು.' ಎನ್ನುತ್ತ ಜಲಗಾರನನ್ನು ಅಪ್ಪಿಕೊಳ್ಳುತ್ತಾನೆ. ಜಲಗಾರ ಊರನ್ನು ಸ್ವಚ್ಛಗೊಳಿಸಿದಂತೆ ತನ್ನ ಆತ್ಮವನ್ನೂ ಶುದ್ಧಿ ಮಾಡಿಕೊಂಡಿದ್ದಾನೆ. ಅಂತಃಶುದ್ಧಿ, ಬಹಿರ್‌ಶುದ್ಧಿ ಎರಡೂ ಅವನದು! ಇಲ್ಲಿ ಜಲಗಾರನೇ 'ಶಿವ'ನಾಗುತ್ತಾನೆ.

ಇವಿಷ್ಟು ನಾಟಕದ ಸಂಕ್ಷೇಪ ಸನ್ನಿವೇಶಗಳು. ಇಲ್ಲಿ ಹಲವು ಪಾತ್ರಗಳನ್ನು ಸೃಷ್ಟಿಸಿದುದು ಒಂದು ಮುಖ್ಯ ಉದ್ದೇಶದಿಂದ. 'ಶ್ರೀ ಸಾಮಾನ್ಯ'ನೆಂಬ ಹೆಸರನ್ನು ಕುವೆಂಪುರವರು ಮೊದಲಿಗೆ ಉಪಯೋಗಿಸಿದವರು. ಅಂತಹ ಶ್ರೀ ಸಾಮಾನ್ಯರಲ್ಲಿ ಒಳ್ಳೆಯ ನಡತೆಯನ್ನು ಗುರುತಿಸಿ, ಅದನ್ನೆ ತಮ್ಮ ಹಲವಾರು, ಕವನ, ಕಥನ, ನಾಟಕ, ಕಾದಂಬರಿಗಳಲ್ಲಿ ಸ್ವಾರಸ್ಯವಾಗಿ ವರ್ಣಿಸಿದ್ದಾರೆ. ರೈತನ್ನು 'ನೇಗಿಲಯೋಗಿ' ಎಂದು ಕರೆದ ಹಿನ್ನೆಲೆಯೂ ಇದೇ! ಅಂಥವರ ಜೀವನದಲ್ಲಿನ ಸೌಂದರ್ಯವನ್ನು ಬಣ್ಣಿಸುವುದರ ಜೊತೆಗೆ ಪುರೋಹಿತಶಾಹಿಗಳು ಜನರಲ್ಲಿ ಮೂಡಿಸಿದ ಮೌಢ್ಯತೆಯನ್ನು ಖಂಡಿಸುವುದೂ ಈ ನಾಟಕದ ಉದ್ದೇಶಗಳಲ್ಲೊಂದು.

ವಿವಿಧ ರೀತಿಯಲ್ಲಿ ಜನರು ದೇವರ ಕೃಪೆಗೆ ಪಾತ್ರರಾಗಲು ಬಯಸುವರು. ಕೆಲವರು ಹಣ್ಣು ಕಾಯಿಗಳಿಂದ ದೇವರನ್ನು ಒಲಿಸಿಕೊಳ್ಳಲು ಪ್ರಯತ್ನಿಸಿದರೆ, ಕೆಲವರು ಹರಕೆ ಕಾಣಿಕೆಗಳಿಂದ, ಎಣ್ಣೆ ಬೆಣ್ಣೆಗಳಿಂದ, ಬೆಲೆಬಾಳುವ ನೈವೇದ್ಯಗಳಿಂದ ಶಿವನನ್ನು ಒಲಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಆದರೆ, ಇವ್ಯಾವುದರಿಂದಲೂ ಶಿವನೊಲಿಯಲಾರ! ಇವೆಲ್ಲವೂ ಆಡಂಬರದ ಪೂಜೆಗಳು. ಶ್ರದ್ಧೆಯಿಂದ ಕೆಲಸ ಮಾಡುವ ಭಕ್ತರ ಬಳಿಯಲ್ಲೆ ಶಿವನು ವಾಸವಾಗಿರುತ್ತಾನೆ. ದಾಸರು ಸಹ ಇದನ್ನೇ ಹಾಡಿದ್ದಾರೆ: 'ಉದರ ವೈರಾಗ್ಯವಿದು ಪದುಮನಾಭನಲಿ ಲೇಶ ಭಕುತಿ ಇಲ್ಲ' ಎಂದು. ನಿಜಭಕ್ತಿಯಿಲ್ಲದ ತೋರಿಕೆಯ ವೈರಾಗ್ಯ ವ್ಯಕ್ತಪಡಿಸಿ ದೇವರನ್ನು ಒಲಿಸಿಕೊಳ್ಳಲು ಸಾಧ್ಯವೇ? ಬಸವಣ್ಣನವರು 'ಕಾಯಕವೆ ಕೈಲಾಸ' ಅನ್ನುವಂತೆ ಕುವೆಂಪುರವರು ಕರ್ಮಾರಾಧನೆಯೆ ಪೂಜೆ ಎಂದು ಹೇಳುತ್ತಿದ್ದಾರೆ. ಅವರು ಮೂರ್ತಿಪೂಜೆ, ಗುಡಿ ಗುಂಡಾರಗಳಲ್ಲಿ ದೇವರ ಅಸ್ತಿತ್ವ ಕಾಣದೆ ನಿಸರ್ಗದಲ್ಲಿ ದೇವರಿದ್ದಾನೆಂದು ದೃಢವಾಗಿ ನಂಬಿರುತ್ತಾರೆ. ಈ ನಾಟಕದಲ್ಲಿ ಜಲಗಾರನು ಶ್ರದ್ಧೆಯಿಂದ ಕೆಲಸ ಮಾಡುವವ; ಕೆಲಸವೆ ದೇವರು ಎಂದು ನಂಬಿದವ. ಬಡವರ ಬಗೆಗೆ ಕಳಕಳಿ ಇರುವವನು; ನಿಸರ್ಗದ ಚೆಲುವಿನಲ್ಲಿ ಭಗವಂತನ ಬೆಳಕನ್ನು ಹಾಗೂ ಅಸ್ತಿತ್ವವನ್ನು ಕಾಣುವವನು. ಕುವೆಂಪುರವರು ನಿಸರ್ಗದಲ್ಲಿ 'ಸಕಲಾರಾಧನ ಸಾಧನ ಬೋಧನದನುಭವ'ವೆಂಬ ರಸವನ್ನು ಅನುಭವಿಸಿದ್ದಾರೆ. ಸಮಾಜ ತಮ್ಮ ಯಾವುದೋ ಅನುಕೂಲಕ್ಕಾಗಿ ನಿರ್ಮಿಸಿಕೊಂಡ ಗುಡಿಗಳನ್ನು ಅವರು ಮನಸಾರೆ ನಿರಾಕರಿಸಿದ್ದಾರೆ; ಮಾತ್ರವಲ್ಲ ಅವುಗಳನ್ನು ಧಿಕ್ಕರಿಸಲು ತಮ್ಮದೇ ಚಳುವಳಿಯನ್ನು ನಡೆಸಿದ್ದಾರೆ. 'ಯಾವ ಗುಡಿಮಿಗಿಲು ಈ ಭುವನ ದೇವಾಲಯಕೆ' ಎಂಬ ಪ್ರಜ್ಞೆ ಅವರದು. ಇದೇ ಸಂದೇಶ 'ಜಲಗಾರ' ನಾಟಕದಲ್ಲಿ ಮೂಡಿಬಂದಿದೆ.

'ಜಲಗಾರ' ನಾಟಕವು ಒಂದು ಆದರ್ಶವನ್ನು ಸಾರುತ್ತದೆ. ಆದರೆ, ಆದರ್ಶ ಸ್ವಲ್ಪ ಅತಿಯಾಯಿತೋ ಎಂಬ ಅನುಮಾನ ಕೆಲವೊಮ್ಮೆ ಬಂದರೆ, ಅದು ನಿಜವಾಗಿರಬಾರದಿತ್ತೇ? - ಎನ್ನುವ ಭಾವನೆಯೂ ಓದುಗರಲ್ಲಿ ಮೂಡಿಬರಬಹುದು. ತಮ್ಮ ಎಳೆ ವಯಸ್ಸಿನಲ್ಲಿ

ಮೈಸೂರಿನ ರಾಮಕೃಷ್ಣ ಮಠದಲ್ಲಿ ಸಾಕಷ್ಟು ಕಾಲ ಕಳೆದುದರ ಪರಿಣಾಮವಾಗಿ, ಕುವೆಂಪು ಇಂತಹ ಆದರ್ಶ ನಿಲುವನ್ನು ತಳೆದಿದ್ದಾರೆಂದು ಹೇಳಬಹುದು.

ಈ ನಾಟಕವನ್ನು ರಂಗಭೂಮಿಯಲ್ಲಿ ಯಶಸ್ವಿಯಾಗಿ ಪ್ರದರ್ಶಿಸುವ ಪ್ರಯತ್ನಗಳೂ ನಡೆದಿವೆ. ಹಲವು ರಂಗಭೂಮಿತಜ್ಞರು ಕುವೆಂಪುರವರ ನಾಟಕಗಳ ಬಗ್ಗೆ ಕೆಲವು ಟೀಕೆಗಳನ್ನು ವ್ಯಕ್ತಪಡಿಸುತ್ತ, ಅವನ್ನು ರಂಗಭೂಮಿಗೆ ಅಳವಡಿಸಿಕೊಳ್ಳಲು ಸಾಕಷ್ಟು ಕಷ್ಟವೆಂದು ಅಭಿಪ್ರಾಯ ಪಟ್ಟಿದ್ದಾರೆ. ಆದರೆ, ಓದುಗನಿಗೆ ಅಂತಹ ಅಭ್ಯಂತರವೇನೂ ಕಾಣಿಸಲಾರದು. ಗೀತನಾಟಕದ ರೂಪಕದಲ್ಲಿ ಬರೆದ ಈ ನಾಟಕ ಸಾಹಿತ್ಯ ದೃಷ್ಟಿಯಿಂದ ಶ್ರೇಷ್ಠವಾಗಿರುತ್ತದೆ. ಭೂದೇವಿಯ ಪಾತ್ರ, ಜಲಗಾರ ಸೂರ್ಯೋದಯವನ್ನು ಸ್ವಾಗತಿಸುತ್ತ ನಿಸರ್ಗದಲ್ಲಿ ತಲ್ಲೀನನಾದ ಸನ್ನಿವೇಶಗಳಂತೂ ಮನೋರಂಜಕವಾಗಿದೆ. ಜಲಗಾರ ಮತ್ತು ಜಲಗಾರನ ವೇಷದಲ್ಲಿ ಬಂದ ಶಿವ ಇವರಿಬ್ಬರೊಳಗಿನ ಅಲೌಕಿಕ ಮಾತುಗಳಂತೂ ಓದುಗರ ಪ್ರಜ್ಞೆ ಕೆರಳಿಸುವುದರಲ್ಲಿ ಸಂದೇಹವಿಲ್ಲ. ಈ ದೃಷ್ಟಿಯಿಂದ 'ಜಲಗಾರ' ಪರಿಣಾಮಕಾರಿಯಾಗಿ ಸಫಲತೆ ಪಡೆದಿದೆಯೆಂದು ನಿಸ್ಸಂಕೋಚವಾಗಿ ಹೇಳಬಹುದು. ಒಟ್ಟಿನಲ್ಲಿ, ಈ ನಾಟಕವು ಸಾರುವ ಮಹತ್ವದ ಸಂದೇಶವೆಂದರೆ: ನಿಸರ್ಗದಲ್ಲಿಯೂ, ಕಾರ್ಯನಿಷ್ಠೆಯಲ್ಲೂ ಶಿವನನ್ನು ಕಾಣಬಹುದೆಂಬುದು!

ಕುವೆಂಪು ಅವರ ಜನ್ಮ ಶತಾಬ್ದಿಯನ್ನು ಆಚರಿಸುತ್ತಿರುವಾಗ, ಅವರು ಈ ನಾಟಕದಲ್ಲಿ ಸಾರಿದ ಸಂದೇಶವನ್ನು ಕಾರ್ಯಗತ ಮಾಡುವ ಪ್ರಯತ್ನ ಮಾಡುವುದು ಪ್ರತಿಯೊಬ್ಬ ಕನ್ನಡಿಗನ ಕರ್ತವ್ಯ! ಅದೇ ಅವರಿಗೆ ನೀಡುವ ನಿಜವಾದ 'ಶ್ರದ್ಧಾಂಜಲಿ'!

●

# “Kanooru” and “Zhivago” - A Layman's Perspective

Gundushankar, Freehold, New Jersey

Times of great social and political change create the climate for writers to create great works. "It was the best of times, it was the worst of times" - the beginning of the Dickens novel "A Tale of Two Cities" clearly sets the stage for the writer to create a masterpiece - times of such change give the creative writer the broad canvas on which to paint a picture of changing history both at the level of the individual and at the level of society.

In many ways, the twentieth century has arguably been one where the histories of many nations have been dramatically changed. The twentieth century has seen two agents of broad, deep and irreversible change. On the one hand, the real impact of industrialization dramatically altered the way most societies worked and functioned. On the other hand, political change also irreversibly altered the course of the world. We are still facing the impact of the clash of capitalism and communism, and that clash defined the course of the world in the last century.

In the early to mid-twentieth century, India experienced tumultuous change due to the freedom struggle, while also undergoing great impact from the increasing availability of education and technology to the common man. The country was aflame with the passion of the freedom struggle and in many ways, India experienced a renaissance - social, political and technological. India went on to achieve independence, established itself as a world citizen and India's experiment with democracy continues to this day.

At the same time, many other countries were under going changes of equal impact. Russia started its experiment with Communism, and that experiment continued till 1989. In the early part of the century, the revolution created great hopes and aspirations for the proletariat. Great dreams lead to great deeds of courage - Russia saw the emergence of a new social and political order. These changes had very deep impact on all the citizens. Over the course of the next fifty years, Russia saw the rise and rule of Stalin, the excesses of communism, and the gradual disintegration of the Soviet Empire.

From these two countries, came the two novels that are discussed here. "Kanooru Heggaditi" by Kuvempu and "Doctor Zhivago" by Boris Pasternak are the works of two writers - contemporaries, both primarily poets, both very concerned with the impact of broad societal changes on the individual. Both writers are concerned with human endeavor, and the higher goals of man. One writer lived in India, grew up in a very rural area of Karnataka. Malenadu was agrarian - many villages were little more than a large manor occupied by the family of the landlord, with little daily contact with the outside world. On the other hand, Pasternak lived in Moscow, a throbbing world of literature, music, philosophy and politics. From two such very diverse worlds came two great works of literature. It is indeed truly amazing to me that these two completely different worlds produced works that are so similar, as we shall see.

Pasternak was already an established writer when he started writing "Zhivago". Kuvempu had also established his reputation as a writer at the time of the publication of "Kanooru". Pasternak went on to win the Nobel Prize for Literature in 1958, two years before his death. (Kruschev's policies did not allow Pasternak to receive the Prize.) Kuvempu went on to write for more than fifty years after "Kanooru", and today, he is considered one of India's pre-eminent writers. I am not so much concerned about the relative merits of the two writers as I am with the

many similarities in the broad thrust of the works.

This review is based on the readings of both novels in English. "Kanooru" has been translated into English by Ramachandra and Padma Sharma and the translation of "Zhivago" is by Max Hayward and Manya Harari. The translation of "Kanooru" is a remarkable one - the translators have made a difficult job look easy, and as a speaker of Kannada, I do not believe that much has been missed in the translation.

* * * *

## First, to "Kanooru"

At first reading, the reader is entirely unprepared for the scope of the story - it is truly epic in its reach. Malenadu starts as a staid, traditional region with all its drawbacks. By the end of the story, Malenadu has irrevocably changed, traditional caste and social lines are redrawn - Malenadu has grown and matured, and the cost of change is indeed very high.

"Kanooru" functions at three main levels. First, it attempts to depict the rich ecological and sociological environment of Malenadu. Second, it explores the personality of Hoovayya, the protagonist, the central consciousness of the novel, and his struggles with with his religion, his people and his own beliefs. At the third, and highest level, it tries to understand and depict the spiritual and intellectual evolution of man.

The first level is very richly explored in the novel. From an ecological perspective, even animals have personalities in the novel. Various trees and animals of many types are described in great detail. It has been said that over forty types of bird are described here - I have not kept count, but I would agree!

The novel really succeeds at the sociological level. The village (and thus Malenadu) changes before our eyes. The old caste system slowly breaks down, and the village becomes more egalitarian. People slowly give up superstition, and 'noble rites" of true religion are practiced. People do not "live in tents

like pigs in a sty" but live in small and well-planned houses. People go to the doctor now and not the Joisa for remedies. Even the children of the servants are getting educated, learning to read and write. Social awareness is spreading - people read newspapers - there is discussion of world events among more and more people. The toddy shop, one of the nerve centers of Malenadu, slowly drifts into ruin. (The message on the ill effects on liquor is a little contrived but the point is relevant.)

Technology has also arrived in Malenadu. In the beginning, technology arrives in the shape of the cyclist and his Swan pen. It is treated with gentle humor - the BSA cycle can go at twenty-five to thirty-five miles per hour but comes crashing down in the potholes of the village roads! The hurrying cyclist loses his Swan pen in the process. Not an auspicious beginning for technology to arrive in the village! Things change, and by the end of the novel, motor cars are plying the roads of Malenadu. The reader is left with the distinct impression that Kuvempu does view technology somewhat skeptically, although he does see its benefits.

The second level of the novel is where I have the most problems with the novel. Hoovayya is the central character of the novel. The exploration of the character and his moral dilemmas, his aesthetic aspirations, his philosophical views and his conflicts with society are depicted in great detail. The novelist does not succeed in creating a personality that can bear the weight of the novel. Hoovayya ends up becoming too emotional, lacking in initiative and finally withdraws from direct, real engagement with the real world, his problems and his responsibilities - especially to the people close to him, mainly his mother and Seethe.

In the beginning, Hoovayya is very engaged with the world. Education has enlightened him - he is excited about the possibilities, and is eager to go back to Mysore after his holidays to continue his studies. Circumstances dictate otherwise

- he has to make do with whatever education he has received so far, and the books he has accumulated. He is faced with problems with his uncle that results in hardship for his mother as well. He is in love with Seethe, who reciprocates. This love is unrequited - he gradually withdraws - to such an extent that he is ineffectual in dealing with her wishes and desires as much as his own. He becomes a hermit and he has achieved "Sadhu" or "Rishi" status at the end of the novel. His disengagement from the practical world makes him a very weak and ineffectual man. Arguably, this may be a depletion of Kuvempu's own need to escape from a limiting and claustrophobic world, but it still leaves the reader unsatisfied with this facet of the novel.

The third level of the novel is on the relationship between nature and spiritual and intellectual growth. Hoovayya gradually accomplishes the transition from being a mere human being to a thinker and intellectual through education, reading, self-exploration and self-discipline, almost self-sacrifice. The descriptions of Hoovayya lost in meditation, the almost mystical experiences of those who are with him or near him are examples of this evolution of Hoovayya. The Vedas, the Ramayana, Mahabharata (and specifically the Gita) and life and teachings of the Buddha are all depicted as pivotal in his intellectual growth. The forbidden love between Seethe and Hoovayya becomes purely Platonic - an absolution and sublimation of all that is merely human. And Seethe benefits from this. With constant discussion and education from Hoovayya, she is able to vaguely discern refinement through the fog of her own limited childhood and education.

The under-explored dimension of the novel is the impact of changes happening in urban India, far from Malenadu. The freedom struggle has started, and khadi has already become the symbol of the freedom struggle. At the start of the novel, Hoovayya and Ramayya have already experienced the exhilaration of the passion of the Gandhian struggle. By the end of the novel,

Hoovayya and Seethe wear only khadi and more and more people are coming to Malenadu to deliver lectures on the freedom struggle. The novel does not go much beyond these mere symbols. To be fair to the writer, at the time of publication (1936), freedom was still a long way off and the freedom struggle was still not in full force. Perhaps, it is again a reflection of Kuvempu's personal preferences. Still, it leaves the reader with the impression that the writer missed a creative opportunity.

****

## And now, to "Zhivago".

Pasternak published Zhivago in 1957. He had laid out the main theme of the book in 1945 - 1946 (about ten years after "Kanooru" was published). It took him many years to write - and more years to find a publisher. It was offered for publication in 1954 and was finally first published in Italian in 1957. He was always obsessed with creating a work of prose - as he told a very close friend, "All my life I wanted to write prose - poetry is much easier". Pasternak himself described the novel as one about a "thinking man in search of truth, with a creative and artistic bent of mind".

The novel is set in times of tremendous, violent change in Russia. It starts with events in 1903 and goes on to the protagonist's death in 1929. The Russian revolution itself takes place in 1917, towards the end of World War 1. After the revolution, Russia degenerates into a period of chaos, violence and traumatic change. Things settle down after a few years, but the new order is plagued with problems. Pasternak chooses this time period to tell us about Dr. Yuri Zhivago, born and living in Moscow, of aristocratic parents and a life of entitlement in the old order. Zhivago is a thinking man in search of truth - he is trained in modern science, and also in philosophy, religion and literature. The similarities between Zhivago and Pasternak are too many to mention.

"Zhivago" was published to much public acclaim. It has been called a modern "War and Peace", by a writer whose father's house was visited on many occasions by Leo Tolstoy. Thematically, this book also operates at three levels. The first level is that of social change. The second level is the role of the individual in the middle of massive change. The next level is the role of religion and morals in a person's life, and at this highest level, the book deals with a thinking man's search for his place in life.

On the first level, there is great social and political change going on in Russia. Zhivago is swept up into the change - he has to be part of many battles that are taking place, he is eyewitness to many central events of the revolution. He is initially excited by the idea of this revolution - "He was a pygmy before the monstrous machine of the future, but was excited by it". Even the violence that is perpetrated in the name of the revolution is justified - Zhivago feels that this violence, this destruction of the old order is needed to rebuild society from the ground up. But later events convince him otherwise. This book is actually an indictment of the means used to justify the end of the revolution. In fact, Pasternak carried on a "silent war with Stalin", who only allowed Pasternak to survive because of his great fame as a writer and poet.

Pasternak also casts a very skeptical eye on technology. Zhivago is a doctor, who masters science and mathematics and finally turns to medicine to live, as he says, " a socially useful life". He sees the impact of technology on man. At first hand, he sees the use of modern weapons in the wars. He has to treat people who have suffered great mutilation and pain due to the use of this technology. We do not leave the novel feeling that science has much to offer to man, and we see that he looks at science with mistrust.

At the second level, there is Zhivago, the central character. Zhivago becomes a doctor in order to do something socially

useful, although writing remains his enduring passion. He marries traditionally and settles down to a "normal" life. Events put him in prolonged contact with Lara, a tortured woman with a dubious past, at the battlefront. He has already had some contact with her before he meets her at the battlefront. He tries valiantly to maintain his love and fidelity for his wife, but finally succumbs to Lara. He continues writing poetry in the time he is separated from his family. He does not find true love with his wife, but with Lara, there is great love that lasts over twenty years. Events make him compromise himself morally - he even is made to steal firewood to provide heat to the family in Russia's severe winters.

During his period of creativity, Zhivago is able to rise to the sublime - there are many moving descriptions of the creative process. I will quote just one here - "at such times, [Zhivago] felt that work was not being done by him, but a superior power which was above him and directed him- namely, the movement of universal thought and poetry in its present historical stage and the one to come." He is concerned with "society's incessant transformations " and that "History is being made and change waits for nobody". The role of the writer is to create this "concentrated spiritual experience of this nation". This view of literature, as a creation of man's thoughts and evolution, is truly grand in its scope and its vision. I daresay that all nations view their literature as such - even today in India, we periodically go back to our own epics and classics.

Zhivago dies in 1929 - he has experienced the worst of human suffering, but has also experienced the great mystical moments that bring man closer to the purpose of creation. After his death, Zhivago leaves behind a collection of poems - "Poems from a Novel of Prose". Pasternak could not keep himself away from poetry even when writing prose!

At the third level, "Zhivago" is also about nature and refinement. Man's struggle to make sense of life on Earth, his

attempts to better his own life, through revolution and through religion are the central theme of the book. Most critics agree that at its core the book is religious.

Pasternak started the earlier years of the revolution with great hopes for true change in Russia. He had hoped to see a more equitable Russia, driven by the class struggle. The people were the great moral authority in this view - there was no need for God, and people managed their own emancipation. Hitler and Stalin showed how this class struggle could be used to justify the most inhuman injustice to man. Over the course of the revolution, Pasternak lost all belief in man as the ultimate moral authority. The poet now stressed the role of the individual's freedom and independence. The Christian concept of non-resistance lost meaning to Pasternak ("offer the left cheek in addition to the right"). Pasternak's interpretation of Christ as an active fighter now becomes the symbol of hope and vision for man. The moral authority of the church becomes the only alternative to the oppressive political atmosphere.

* * * *

So what do we make of the two writers and their works?

The two works have much in common. The writers were contemporaries - Kuvempu lived from 1904 till 1994, Pasternak from 1890 till 1960 and their creative lives overlapped over a significant period of time. Both were mainly poets, both were schooled in philosophy, who chose to write a few works of prose. Both works are partly autobiographical - we can discern obvious elements from their personal lives in the novels. The novels are ambitious in scope and reach. Both novels have central characters placed in times of tremendous personal struggle, and both characters are concerned with similar themes - the role of the individual in society, and the evolution and refinement of man.

(As an interesting aside, both novels were made into movies. David Lean made "Doctor Zhivago" in to a great

commercial and artistic success, and cast India-born Julie Christie in the central role of Lara. GirishKamad made "Kanooru" into a Kannada movie. It may be safe to say that more Indians are aware of the Lean movie than the Karnad movie.)

The choice made by the individual in the two cases, when faced with moral dilemmas is, however, very different. Hoovayya chooses to retreat from the real world - he has nearly become a "sanyasi" by the end of he book. His retreat is a moral one, but does not in any way lessen the pain to all those around him. The world around him changes, and he is detached, almost disinterested. He has achieved some sort of self-realization, and we leave him living in complete harmony with himself at the end of the book. I see this as more of a Hindu / Buddhist view of how to live in this world - the real salvation is true detachment and withdrawal from emotional involvement in the world.

In the case of Zhivago, he remains actively engaged in his larger social life. Zhivago has grown immensely as an individual, and he has also achieved a sort of self-realization through both his work and creativity. He remains actively engaged with the real world for the larger part of the book. He writes, medically treats people, finds true love and experiences a lot of adventures. He only loses himself after he loses Lara, his true love. He then becomes insane and lives out the remainder of his life in a small dingy room, dependent on the goodness of others for his care. This central theme of love is autobiographical in Pasternak, and perhaps reflects the writer's own dreams and wishes. (Pasternak himself had a long-lasting love affair with another woman, Olga Ivinskaia while married to his first wife, Evgenaia). In "Zhivago", the individual has many roles to play, and Zhivago plays them with utmost involvement and engagement.

Both books are crowded with people of unforgettable impact. In "Kanooru", we even find many animals that have a deep

impact on us. Animals are purer than people in many cases! The descriptive power ofKuvempu is just as powerful as Pasternak's. The two writers use a similar narrative style - alternating chapters that show us the lives of the people that criss-cross each other. Interwoven stories and episodes keep us engaged and the books move along at a fast pace, keeping us completely absorbed.

What strikes one more than anything else is the broad thematic and story-telling similarities between the two books, conceived in two separate countries, both great stories bound in the story-telling traditions of their countries. It does seem to me that "Zhivago" succeeds at all levels - the character of Zhivago holds the story gloriously together while the underdeveloped role of Hoovayya does not provide the fabric to make "Kanooru" into a truly great novel.

* * * *

The two writers are obviously celebrated for their works. Pasternak walked the world stage as a Nobel Prize winner, while Kuvempu went on to receive many awards for his works, including the Bharatiya Jnanapith in 1967.

Pasternak won the Nobel Prize for Literature for his works, and "Zhivago" received special mention. It did not hurt Pasternak's cause that it was written at the peak of the cold war. Freedom of publication was very restricted in Russia, and Pasternak had to undergo many difficulties to have the book published. A story, religious at its core, by a Jewish writer, written at the height of the cold war, made it a good choice for the Nobel Prize. Interestingly, it was first published in translation in Italy - it was to be many more years before it was published in Russian. Many worthy writers have not been awarded the Prize and, and on the other hand, there have been some unexpected winners -Bertrand Russell (mathematician and philosopher) and Winston Churchill (statesman).

To this day, Indian writers have a tremendous disadvantage in getting exposure in other countries. Indian writers do not get the easy access to the western media, and are unrecognized. Whether a writer like Kuvempu would have even been considered for the Nobel Prize is beside the point - the Indian writer has very little chance of getting the exposure needed. In addition, the Prize itself has become more of a political instrument in more recent years.

Most winners of the Prize are from the US and Western Europe. The few exceptions are from Latin America, Japan, China, Nigeria and South Africa. India has had one winner, and we can claim V S Naipaul as of Indian origin. Naipaul was also very accessible to the Western world because he writes in English. The only other Indian writer to be even considered was R K Narayan - he had champions in the English literary world and he wrote in English.

Pasternak himself benefited from translation - his novel was available to the non-Russian world even before it was available to the Russian-speaking world. Pasternak, in fact, was making his livelihood by translating Shakespeare into Russian while he was writing "Zhivago". The art of translation helped him in more than one way.

Here, we have seen how one writer gained worldwide fame based on several factors - his own sacrifices, his life's work, and the political environment that he worked in. The other writer is still relatively unknown due to the lack of access to the literary world stage. More and more Indian writers, especially those writing in English, are making a deep impression in the western world. I am hopeful that Indian literature will eventually find its true place in the world.

* * * *

In summary, we have seen just one case of two writers, worlds apart, dealing with eternal struggles and eternal truths.

The similarities in approach, narrative style and thematic content are striking. Two different countries, embarked on apparently different journeys produced these two novels. All stories, in their true essence, are fundamentally the human story - every story has something for us to learn from, to see ourselves in them and to empathize with the joys and misfortunes of its characters.

●

# ಭಾಗ ೪

# ಶ್ರೀ ರಾಮಾಯಣ ದರ್ಶನಂ

''ಕನ್ನಡದಿ ಬೇರೆ ಕಥೆಯೆಂಬಂತೆ ....ಮರವುಟ್ಟುವಡೆದಂತೆ''
ಮೂಡಿದುದೀ ಕಾವ್ಯಂ

# ‘ಮಂಥರೆಯ ಮೋಹಪಾಶದಲ್ಲಿ’

ಎನ್. ಲಕ್ಷ್ಮೀಪತಿ, ನ್ಯೂ ಜರ್ಸಿ

‘ಮಂಥರೆ’ಯೆಂದೊಡನೆ ನಮ್ಮೆಲ್ಲರ ಮನಸ್ಸಿನಲ್ಲಿ ಮೂಡುವುದು, ‘ಅವಳೊಬ್ಬ ದುರಾಲೋಚನೆಯ ಪ್ರತಿಬಿಂಬ’ ಎಂದು. ಜೊತೆಯಲ್ಲೆ, ಗೂನುಬೆನ್ನಿನ ಅವಳ ವಕ್ರ ಮತ್ತು ಕುರೂಪ ಕಾಯವೂ ನಮ್ಮ ಮುಂದೆ ನಿಲ್ಲುತ್ತದೆ. ಶ್ರೀರಾಮನು ಕಾಡಿಗೆ ಹೋಗಲು ಕಾರಣಳಾದ ಅವಳನ್ನು ಕುವೆಂಪು ವರ್ಣಿಸಿದ ಪರಿ ಬಹಳ ವಿಶೇಷವಾದುದು. ಅವರು ಅವಳಲ್ಲಿ ಅನುಕಂಪ ತೋರಿಸಿ, ಅವಳ ದುಷ್ಟ ನಡತೆಗೆ ವೈಜ್ಞಾನಿಕ ಕಾರಣವನ್ನೂ ಒದಗಿಸಿದ್ದಾರೆ, ತಮ್ಮ ‘ಶ್ರೀ ರಾಮಾಯಣ ದರ್ಶನಂ’ ಮಹಾಕಾವ್ಯದಲ್ಲಿ. ಮೂಲ ವಾಲ್ಮೀಕಿ ರಾಮಾಯಣದಲ್ಲಿರದ ಹಲವು ಸನ್ನಿವೇಶಗಳನ್ನು ತಮ್ಮ ಕಾವ್ಯದಲ್ಲಿ ನಿರ್ಮಿಸಿ, ಕುವೆಂಪು ಅವಳ ಪಾತ್ರವನ್ನು ಬೇರೆ ರೀತಿಯಲ್ಲೇ ಚಿತ್ರಿಸಿದ್ದಾರೆ.

ವಾಲ್ಮೀಕಿ ರಾಮಾಯಣದಲ್ಲಿ ಈ ‘ಮಂಥರೆ’ಯೆಂಬ ಪಾತ್ರ ಎಲ್ಲಿಂದ ಬಂತು ಎಂಬ ಸುಳಿವೇ ಇಲ್ಲ. ಶ್ರೀ ರಾಮಪಟ್ಟಾಭಿಷೇಕದ ಸಮಯದಲ್ಲಿ, ಒಬ್ಬ ಕುರೂಪಿ, ಗೂನಿ ದಾಸಿ, ಕೈಕೆಯಿಗೆ ಸಲ್ಲದ ಬೋಧನೆ ಮಾಡಿ, ಶ್ರೀರಾಮನನ್ನು ಕಾಡಿಗೆ ಅಟ್ಟಲು ಕಾರಣಳು ಎಂಬುದು ಮಾತ್ರ ನಮಗೆಲ್ಲ ತಿಳಿದ ವಿಚಾರ. ಆದರೆ, ಕುವೆಂಪು ಅವಳ ಹಿನ್ನೆಲೆಯನ್ನು ಸೃಷ್ಟಿಸಿದ್ದಾರೆ. ಕೈಕೆಯ ತಂದೆ, ಕೇಕಯ ಮಹಾರಾಜನು, ಒಮ್ಮೆ ಬೇಟೆ ಮುಗಿಸಿ, ವಾಪಸು ಬರುತ್ತಿರುವಾಗ ಒಂದು ಮಗುವಿನ ಆರ್ತನಾದವು ಅವನ ಗಮನ ಸೆಳೆಯಿತು. ಮಗುವಿನ ಬಳಿಗೆ ಬಂದು ನೋಡಿದಾಗ ಅಲ್ಲಿ ಕಂಡದ್ದೇನು? ‘ವಿಕೃತಿ ವಕ್ರತೆ ರೂಹುಗೊಂಡಂತೆ’ ಇರುವ ಒಬ್ಬ ‘ದುಷ್ಯಶಿಶು’ವನ್ನು, ಕೇಕಯನು ಕನಿಕರಗೊಂಡು ಆ ಕುರೂಪಿ ಮಗುವನ್ನು ತನ್ನ ಅರಮನೆಗೆ ತಂದು ಸಾಕುತ್ತಾನೆ. ಆಗ ಕವಿ ಹೇಳುವ ಮಾತಿದು:

ತಂದನೂರಿಗವಳಂ
ದಾರಿಯ ನಡೆವ ಮಾರಿಯಂ ಮನೆಗೆ ತರುವಂತೆ,
ಮುಂದಣ ಮಹಾದುಃಖ ದಾವಾನಳಕೆ ತನ್ನ
ಕಿರುಗಜ್ಜದಾ ಒಂದೆ ಕಿಡಿಯ ಮುನ್ನುಡಿಯಿಡುವ
ವಿಧಿವಿಲಾಸದಲಿ!........

ಹೀಗೆ ಮುಂದಾಗುವ ದುರಂತಕ್ಕೆ ಕಾರಣಳಾಗುವ ಮಂಥರೆಯನ್ನು ಕೇಕಯ ಮಹಾರಾಜನು ಬೀದಿಯ ಮಾರಿಯನ್ನು ಮನೆಗೆ ತಂದಂತೆ ತಂದು ಸಾಕುತ್ತಾನೆ. ದಯಾಮಯನಾದ ಅವನು ಅವಳನ್ನು ಪ್ರೀತಿಯಿಂದ ಸಾಕಿದರೂ, ಊರಿನವರೂ, ಅರಮನೆಯ ಕೆಲಸದಾಳುಗಳೂ ‘ಛಿ

ಎಂದು, ತೊಲಗೆಂದು, ಥೂ ಎಂದು, ಸಾಯೆಂದು, ನಾಯ್ಮರಿಗೆ ಕಡೆಯಾಗಿ ಭಾವಿಸಿ', 'ಕುಳ್ಳಾಗಿ, ಗೂನಾಗಿ, ತೊತ್ತಾಗಿ, ಕರ್‍ರಗೆ' ಇರುವ ಅವಳನ್ನು ಅಸಹ್ಯ ದೃಷ್ಟಿಯಿಂದ ನೋಡುತ್ತಾರೆ. ಅವಳಿಗೆ 'ಮಂಥರೆ' ಎಂಬ ನಾಮಕರಣವೂ ಆಯ್ತು!

ಇಷ್ಟು ಹಿನ್ನೆಲೆಯನ್ನು ನಿರ್ಮಿಸಿದ ಕುವೆಂಪುರವರ ಉದ್ದೇಶ ಹೀಗಿರಬಹುದು. ಕೇಕಯ ಮಹಾರಾಜನು ಅವಳ ಮೇಲೆ ತೋರಿದ ಪ್ರೀತಿ ಅವಳ ಹೃದಯದಲ್ಲಿ ಎಲ್ಲೋ ಹುದುಗಿ ಮನೆಮಾಡಿತ್ತು. ಆದರೆ, ಜನರೆಲ್ಲ ತೋರಿದ ಕ್ರೂರ ದೃಷ್ಟಿಯೂ ಅವಳ ಮೇಲೆ ಅಗಾಧ ಪರಿಣಾಮ ಮಾಡಿತ್ತು. ಈ ಎರಡು ವಿರುದ್ಧ ಸ್ವಭಾವಗಳೂ ಅವಳ ಮುಂದಿನ ಬಾಳಿನಲ್ಲಿ ಹೇಗೆ ಮೂಡಿ ಬಂದು ಪರಿಣಾಮ ಬೀರಿದೆ ಎಂಬುದನ್ನು ನಾವು ಕುವೆಂಪುರವರ 'ಶ್ರೀ ರಾಮಾಯಣ ದರ್ಶನಂ'ದಲ್ಲಿ ಅರಿಯಬಹುದು.

ಹೀಗೆ, ಮಂಥರೆ ಅತಿ ತಾತ್ಸಾರ ವಾತಾವರಣದಲ್ಲಿ ಬೆಳೆಯುತ್ತಿದ್ದಂತೆ, ಕೇಕಯ ಮಹಾರಾಜನಿಗೆ ಪುತ್ರಿ ಹುಟ್ಟುತ್ತಾಳೆ.

ಚೈತ್ರನಾಗಮನವಾಯ್ತು ಮಂಥರೆಯ ಶಿಶಿರಕ್ಕೆ,
ಮಂಥರೆಯ ಬಾಳ್‌ನಿಶೆಗೆ ಶಶಿಯುದಿಸಿದಂತಾಯ್ತು,
ಮಂಥರೆಯ ಮೃತ್ಯುವಿಗೆ ತಾನಾಮೃತ ಸೇಚನೆಯಾಯ್ತು;
ಬದುಕು ಸಾರ್ಥಕ ಮಧುರಮಾಯ್ತು ಶಿಶುಸನ್ನಿಧಿಯ
ಪ್ರೇಮಸೌಂದರ್ಯ ಮಹಿಮೆಯಲಿ........

ಈ ಸಾಲುಗಳು ಅವಳು ಅನುಭವಿಸುತ್ತಿರುವ 'ಕೀಳು' ಜೀವನವನ್ನು ಪರಿಣಾಮಕಾರಿಯಾಗಿ ವಿವರಿಸುತ್ತದೆ. ಅವಳ ಬಾಳು ಸಾರ್ಥಕವಾಗಲು, ಮೃತ್ಯುವಿಗೆ ಅಮೃತ ಸೇಚನೆಯಾದಂತಾಗಲು, ಪಾಪ ಅವಳೆಷ್ಟು ನೊಂದು ಜೀವಿಸುತ್ತಿದ್ದಳೋ ಏನೋ! ಕೈಕೆಯಿಯ ಜನನದಿಂದ ಅವಳಿಗೆ ತನ್ನಲ್ಲಡಗಿದ್ದ 'ಪ್ರೇಮ'ವನ್ನು ವ್ಯಕ್ತಪಡಿಸಲು ದಾರಿ ಕೊಟ್ಟಂತಾಯ್ತು. ಕೇಕಯ ಮಹಾರಾಜನು ಮಂಥರೆಯನ್ನು, ಪುತ್ರಿ ಕೈಕೇಯಿಯ ಆರೈಕೆಗೆ ನೇಮಿಸಿದಾಗಲಂತೂ 'ಬಾಹ್ಯ ವಿಕೃತಿಯ ಮಧ್ಯೆ ಮಂಥರೆಯ ಹೃದಯದಲಿ ಸುಪ್ತವಾಗಿದ್ದ ರತಿ, ಚೆಲುವೊಲವುಗಳ ಚಿಲುಮೆ ಕಣ್ದೆರೆದುದು' ಎಂದು ಕವಿ ಹೇಳುತ್ತಾರೆ. 'ಪೊರಮೆಯ್ ಪೆರ್ಚಿ! ತನು ವಿಕಾರಂ ಪೆರ್ಚಿದಂತೆ ಮನಸಿನ ಮಮತೆ ನೂರ್ಮಡಿಸಿತ್ತು ಕೈಕೆಯ ಮೇಲೆ'.

ಮುಂದೆ, ಕೈಕೆಯನ್ನು ದಶರಥ ಮಹಾರಾಜನು ಮದುವೆಯಾದಾಗ, ಅವಳ ಜೊತೆಗೆ ದಾಸಿಯಾಗಿ ಮಂಥರೆಯೂ ಕೋಸಲವನ್ನು ಸೇರುತ್ತಾಳೆ. ಅಲ್ಲಿಯೂ ಜನರೆಲ್ಲ ಅವಳನ್ನು ಕೀಳು ಭಾವನೆಯಿಂದ ಕಂಡು ದೂರ ಮಾಡುತ್ತಾರೆ: 'ಸನಿಹಕ್ಕೆ ಬರಗೊಡದರ್, ಗಾಳಿ ಸೋಂಕುವುದೆಂದು ಮೈಲಿಗೆಗೆ ಪೇಸಿ'. ದಶರಥನ ಇನ್ನಿಬ್ಬರು ರಾಣಿಯರು – ಕೌಸಲ್ಯೆ ಮತ್ತು ಸುಮಿತ್ರೆ – ಕೂಡ ಅವಳನ್ನು ಕಡೆಗಣಿಸುತ್ತಾರೆ.

ಹೀಗಿರುತ್ತ, ಕೈಕೆಯು ಗರ್ಭಿಣಿಯಾದುದು ಮಂಥರೆಗೆ ಮೂರನೆಯ ಕಣ್ಣು

ಬಂದಂತಾಯ್ತು. ಭರತನ ಜನನವು ಮಂಥರೆಗೆ ತನ್ನೆಲ್ಲ ಪ್ರೀತಿಯನ್ನು ವ್ಯಕ್ತಪಡಿಸುವುದಕ್ಕೆ ಎಡೆಮಾಡಿಕೊಟ್ಟಿತು. ಅಂತೆಯೇ, 'ಮಂಥರೆಯ ಮೋಹಸರಸಿಯೊಳಿಂತು ತಾವರೆಯ ತೆರದಿ' ಭರತನು ಬೆಳೆಯುತ್ತ ಬಂದನು.

. ನರರನ್ಯಾರಿಲ್ಲಾಯಿತ್ತು ಮಂಥರೆಯ
ಲೋಕಕ್ಕೆ ಕೈಕೆ ಭರತರ್ ವಿನಾ. ದಶರಥಂ
ಕೈಕೆ ಭರತರಿಗಾಗಿ; ಕೈಕೆ ಭರತರಿಗಾಗಿ ಏ
ಕೋಸಲಮಯೋಧ್ಯೆಗಳ್. ಶಶಿ ಸೂರ್ಯ ತಾರಾಳಿಗಳ್
ಕೈಕೆ ಭರತರಿಗಾಗಿ; ಭರತನಾಳ್ವಿಕೆಗಾಗಿ ಈ
ಪೃಥಿವಿ! ಹಾ, ಮಂಥರೆಯ ಈ ಮಮತೆಯಾವರ್ತದೊಳ್
ಸುಟ್ಟುರೆಗೆ ಧೂಳಿ ತರಗೆಲೆ ತಿರ್‍ರನೆಯೆ ಸುತ್ತುವೋಲ್
ಸಿಲ್ಕಿ ಘೂರ್ಣಿಸದಿಹುದೆ ಪೇಳ್ ತ್ರೇತಾ ಮಹಾಯುಗಂ

ಅವಳ ಈ ಮಮತೆಯೆಂಬ ಸುಳಿಯಲ್ಲಿ ತ್ರೇತಾಯುಗವೇ ತಿರ್‍ರನೆ ತಿರುಗುವಂತಾಯ್ತು ಎಂದು ಮುಂದಾಗುವ ಘಟನೆಗೆ ಮುನ್ನುಡಿ ಬರೆಯುತ್ತಾರೆ ಕುವೆಂಪು, ಇಲ್ಲಿ.

ದಶರಥನ ನಾಲ್ಕು ಮಕ್ಕಳು, ರಾಮ ಲಕ್ಷ್ಮಣ, ಭರತ, ಶತ್ರುಘ್ನರು ಸಂತೋಷದಲ್ಲಿ ಬೆಳೆಯುತ್ತಿದ್ದರು. ಒಮ್ಮೆ ಬಾಲ ರಾಮನು, ಹುಣ್ಣಿಮೆಯ ರಾತ್ರಿ ಆಕಾಶದಲ್ಲಿ ಮೆರೆಯುತ್ತಿದ್ದ ಚಂದ್ರನನ್ನು ನೋಡಿ, ತನಗೆ ಚಂದ್ರನನ್ನು ತಂದುಕೊಡಿರೆಂದು ಹಟ ಹಿಡಿದನು. ಯಾರಿಂದಲೂ, ಯಾವ ವಿಧದಿಂದಲೂ ಅವನನ್ನು ಸಮಾಧಾನಗೊಳಿಸಲಾಗದೇ ಹೋಯ್ತು. ಆಗ, 'ಬಂದಳ್ ಮುದುಕಿಯೋರ್ವಳಾ ತಾಣಕ್ಕೆ ಕಿಶೋರ ಭರತನನಾಂತು ಕೌಂಕುಳಲಿ'. ಆ ಮುದುಕಿ ಇನ್ಯಾರೂ ಅಲ್ಲ, ಮಂಥರೆ. ಇಲ್ಲಿ, ಈ ಹೊಸ ಕಥೆಯನ್ನು ಕುವೆಂಪುರವರು ತಮ್ಮ ಕಾವ್ಯದಲ್ಲಿ ಅಳವಡಿಸಿಕೊಂಡಿದ್ದಾರೆ. ಈ ಕಥೆಯು ವಾಲ್ಮೀಕಿ ರಾಮಾಯಣದಲ್ಲಿ ಉಲ್ಲೇಖವಾಗಿಲ್ಲ. ಕುವೆಂಪು ಇದನ್ನು ಒಂದು ವಿಶೇಷ ಉದ್ದೇಶದಿಂದ ಉಪಯೋಗಿಸಿಕೊಂಡಂತಿದೆ. ಆ ವಿಚಾರ ಸ್ವಲ್ಪ ಮುಂದೆ ಹೇಳುತ್ತೇನೆ. ಯಾರಿಗೂ ಶಮನ ಮಾಡಲಾಗಿದ್ದುದನ್ನು ಆ ಮುದುಕಿ ಮಂಥರೆ ಸಾಧಿಸುತ್ತಾಳೆ. ತನ್ನ ಮಡಿಲಲ್ಲಿರುವ 'ಮುಕುರಮಂ ಪೊರತೆಗೆದು ನೀಡಿದಳ್', ರಾಮನಿಗೆ. ಆ ಕನ್ನಡಿಯಲ್ಲಿ ಪ್ರತಿಬಿಂಬಿತವಾದ ಚಂದ್ರನನ್ನು ನೋಡಿ ತಾನು ನಿಜಕ್ಕೂ ಚಂದ್ರನನ್ನೇ ಕೈಯಲ್ಲಿ ಹಿಡಿದಿರುವೆನೆಂದು ಭ್ರಮಿಸಿ, ರಾಮನು ಅಳು ನಿಲ್ಲಿಸಿ ಸಂತೋಷಗೊಂಡನು. ಇದರಿಂದ ಖುಷಿಗೊಂಡ ಮಂಥರೆ ರಾಮನನ್ನು ಮುದ್ದಿಡಲು ಪ್ರೀತಿಯಿಂದ ಕೈಚಾಚಿದಾಗ ಕೌಸಲ್ಯೆ 'ಕಂದಂಮಂಗಳಂ, ಮುಟ್ಟದಿರ್' ಎಂದು ಅವಳನ್ನು ಅವಮಾನಗೊಳಿಸುತ್ತಾಳೆ. ಆಗ, ಮಂಥರೆ 'ಭರತನಂ ಬಿಗಿದಪ್ಪಿ, ತುಳಿದ ಸರ್ಪಿಣಿಯಂತೆ ಮುಳಿಸಿನುರಿಯಿಂ ಪೊಗೆದು, ಸುಯ್ದು ಹೆಡೆಯೆತ್ತಿ' ಅಲ್ಲಿಂದ ಹೊರಟುಹೋಗುತ್ತಾಳೆ.

ಈ ಮೇಲಿನ ಕಥೆ ರಾಮಾಯಣಕ್ಕೆ ಒಂದು ವಿಶೇಷ ರೀತಿಯ ಅರ್ಥ ಕೊಡುತ್ತದೆ. ಮಂಥರೆಗೆ ಅಸೂಯೆ ಹುಟ್ಟಲು ಇದು ದಾರಿ ಮಾಡಿಕೊಟ್ಟಿತು. ಅವಳಿಗೆ ಅಂತಹ ಅವಮಾನ ನಡೆಯದಿದ್ದಲ್ಲಿ ಶ್ರೀರಾಮ ಕಾಡಿಗೆ ಹೋಗುವ ಕಾರಣವಿರುತ್ತಿರಲಿಲ್ಲ; ರಾಮಾಯಣ ಕಥೆಯು ನಾವು ಕೇಳಿದಂತೆ ಮುಂದುವರಿಯುತ್ತಲೂ ಇದ್ದಿಲ್ಲ - ಎಂಬ ಅನುಮಾನ ಬರುವುದು ಸಹಜವೇ! ಹೀಗೆ, ಮಂಥರೆಯು ಶ್ರೀರಾಮನ 'ಅವತಾರ' ಪರಿಪೂರ್ಣತೆಗೆ ಕಾರಣಳಾದಳು.

ಇಲ್ಲಿ, ರಾಮನು ಚಂದ್ರನನ್ನು ಬೇಡಿದ ಪ್ರಸಂಗವೂ ತಾತ್ವಿಕವಾಗಿ ಒಂದು ವಿಶೇಷ ಅರ್ಥ ಕೊಡುತ್ತದೆ. (ಅವನನ್ನು ಅದಕ್ಕೇ 'ರಾಮಚಂದ್ರ' ಎಂದು ಕರೆಯಲು ಪ್ರಾರಂಭಿಸಿದರೋ ಏನೋ!) ದೂರದ ಆಕಾಶದಲ್ಲಿ ಮೆರೆಯುತ್ತಿರುವ ಚಂದ್ರನು, ಶ್ರೀರಾಮನ ಅವತಾರ ಪರಿಪೂರ್ಣತೆಯ ಪ್ರತೀಕ! ಮಂಥರೆಯು ಆ ಪೂರ್ಣತೆಯನ್ನು ಸಾಧಿಸಲು ಸಹಾಯ ಮಾಡುತ್ತಾಳೆ. ಅವಳ ಉದ್ದೇಶವೇನೆ ಇರಲಿ, ಅವಳಿಗೆ ಅರಿವಿಲ್ಲದೇ, ಮಂಥರೆಯ ಪಾತ್ರ ರಾಮಾಯಣದಲ್ಲಿ ಒಂದು ವಿಶಿಷ್ಟತೆಯನ್ನು ಪಡೆದಿದೆ. ಕನ್ನಡಿಯಲ್ಲಿ ಕಾಣಿಸಿ, ಮುಂದೆ ನಡೆಯುವ ಘಟನೆಯನ್ನು, ಭವಿಷ್ಯವನ್ನು, ಎಲ್ಲರ ಮನಸ್ಸಿನಲ್ಲಿ ಮೂಡುವಂತೆ ಮಾಡಿದೆ ಈ ಸಂಗತಿ.

ಇನ್ನು ಮುಂದೆ ನಡೆದ ಕಥೆ ಮೂಲ ವಾಲ್ಮೀಕಿ ರಾಮಾಯಣದಿಂದ ಎಲ್ಲರಿಗೂ ತಿಳಿದುದೇ! ಮೂಲ ಕಥೆಯನ್ನು ಬಳಸಿಕೊಂಡೇ ಕುವೆಂಪುರವರು ಈ ಕಥೆಯನ್ನು ವಿಶಿಷ್ಟ ರೀತಿಯಲ್ಲಿ ಮುಂದುವರಿಸುತ್ತಾರೆ. ಶ್ರೀರಾಮ - ಸೀತೆಯರ ಪ್ರೇಮ ಜೀವನವನ್ನು ವಿವರಿಸುತ್ತ 'ಸೊಗದ ಪಾಲ್ಜೇನಿನೊಳ್ ತೇಲ್ದ ಬಾಳ್‌ದೋಣಿಯಂ, ಭೋಂಕನೆಯೆ ಮಂಥರೆಯ ಮಮತೆಯ ಸುಳಿಗೆ ಸಿಲ್ಕಿ ರಸದೋಡಮಳ್ದುದಯ್', ಎಂದು ಹೇಳುತ್ತಾರೆ. ಮಂಥರೆಯ, ಭರತ - ಕೈಕೆಯರ ಮೇಲಿನ ಮಮತೆಯ ಸೆಳೆತವೇ ರಾಮ - ಸೀತೆಯರ ಸುಖನೌಕೆ 'ಸುಟ್ಟುರೆಯಾಗಿ ತಿರ್ರನೆ ತಿರುಪಿ ಬಾನ್ಗೆ ಬೀಸಿದುದು ಸುಖಿಗಳಂ'.

ಒಂದು ಕನಸನ್ನು ಬಳಸಿ, ರಾಮನು ಕಾಡಿಗೆ ಹೋಗುವ ಕಾರಣವನ್ನು ಕುವೆಂಪುರವರು ಚಮತ್ಕಾರವಾಗಿ ತಿಳಿಸುತ್ತಾರೆ, ತಮ್ಮ 'ಶ್ರೀ ರಾಮಾಯಣ ದರ್ಶನಂ' ಕಾವ್ಯದಲ್ಲಿ. ದಶರಥ ಮಹಾರಾಜನ ಇಷ್ಟದಂತೆ, ಶ್ರೀರಾಮನ ಪಟ್ಟಾಭಿಷೇಕಕ್ಕೆ ಸಂಭ್ರಮದ ಅಣಿಯಾಗುತ್ತಿತ್ತು ಅಯೋಧ್ಯೆಯಲ್ಲಿ. ಕೈಕೆ, ಕೌಸಲ್ಯೆಯರಾದಿಯಾಗಿ ಎಲ್ಲರೂ ಉತ್ಸವದಲ್ಲಿ ಭಾಗಿಯಾಗಲು ಸಿದ್ಧತೆ ನಡೆಸುತ್ತಿದ್ದರು. ಇಷ್ಟೆಲ್ಲ ನಡೆಯುತ್ತಿರುವಾಗ, ಏನೂ ತಿಳಿಯದಿರುವ ಮಂಥರೆ ನಿದ್ರಿಸುತ್ತಿದ್ದಳು. ಆಗ, ಅವಳಿಗೊಂದು ಕನಸು ಬಿತ್ತಂತೆ. ಆ ಕನಸಿನ ವಿವರ ಹೀಗಿದೆ: ಕೈಕೆಯು ಮುದುಕಿಯಾಗಿ ವಿಧವೆಯಂತೆ, ಭರತನ ಕೈಹಿಡಿದು, ಅನಾಥೆಯಾಗಿ ಮರುಭೂಮಿಯೊಂದರಲ್ಲಿ ಅಲೆಯುತ್ತಿದ್ದಾಳೆ; ಮಂಥರೆ ಅವಳನ್ನು ಕೂಗಿ ಕರೆದರೂ, ಕೇಳಿಸಿಕೊಳ್ಳದೆ ಅವಳು ಒಂದೇ ಸಮನೆ ಅಲೆಯುತ್ತಿದ್ದಾಳೆ. ಮಂಥರೆಯೋ, ಅವಳನ್ನು

ಕರೆಯುತ್ತ ಓಡಿ, ಓಡಿ, ದಣಿದು, ಮರುಭೂಮಿಯಲ್ಲಿ ಉರುಳುತ್ತಾಳೆ; ಹಾಗೆ ಉರುಳಿ ಬೀಳುತ್ತಿರುವಾಗ ಅವಳು ಕರೆಯುತ್ತಿದ್ದುದು ಶ್ರೀರಾಮನನ್ನು. ಇದನ್ನು ಉದ್ದೇಶಪೂರ್ವಕವಾಗಿ ಕುವೆಂಪು ಇಲ್ಲಿ ಚಿತ್ರಿಸಿದ್ದಾರೆ. ಯಾಕೆಂದರೆ, ಮುಂದೆ ಅವಳು ಅಗ್ನಿಪ್ರವೇಶ ಮಾಡುವಾಗಲೂ ಶ್ರೀರಾಮನನ್ನೇ ಕೂಗುತ್ತಾಳೆ. ಆ ವಿಚಾರ ಮುಂದೆ ಬರಲಿದೆ. ಆ ಕನಸಿನಿಂದಾಗಿ, 'ಜೇಡನ ಪೀಡನೆಗೆ ಸಿಲ್ಕಿ ನಡುನಡುಗುತೊದ್ದಾಡಿದತ್ತು ಮಂಥರೆಯೊಡಲ್ ಬಲೆಗೆ ಬಿಳ್ದೊಂದು ಪುಳುವಂತೆ'. ಹೀಗೆ ಮಂಥರೆಯ ಮೇಲೆ ಆ ಕನಸು ಪರಿಣಾಮ ಮೂಡುತ್ತದೆ. ಮಂಥರೆಯ ಮನಸ್ಸಿನ ವಿಕಾರವನ್ನು ಕನಸಿನ ಮೂಲಕ ವಿವರಿಸಿದ ಕವಿಯ ಚಮತ್ಕಾರಕ್ಕೆ ತಲೆದೂಗಲೇಬೇಕು!

ದುಸ್ವಪ್ನದಿಂದ ಎಚ್ಚೆತ್ತ ಮಂಥರೆ ಓಡಿ ಕೈಕೆಯ ಬಳಿಗೆ ಬರುತ್ತಾಳೆ. ಹಾಗೆ ಬರುತ್ತಿರುವಾಗಲೇ ಅವಳಿಗೆ ಶ್ರೀರಾಮ ಪಟ್ಟಾಭಿಷೇಕದ ವಿಚಾರ ತಿಳಿಯಿತು. ಭರತನ ಮೇಲಿದ್ದ ಅವಳ ಮಮತೆ ಈಗ ಹೊಡೆದೆಬ್ಬಿಸಿದಂತೆ ಸ್ಫುಟವಾಯಿತು. ಉತ್ಸವದಲ್ಲಿ ಸಂತೋಷದಿಂದ ಭಾಗವಹಿಸುತ್ತಿದ್ದ ಕೈಕೆಯಿಯನ್ನು ಕುರಿತು ಹೀಗೆ ಹೇಳುತ್ತಾಳೆ :

ಓ ಕೈಕೆ<br>
ಮತಿಗೇಡಿ, ನಿರ್ಭಾಗ್ಯೆ, ಇನ್ನುಮೇನೀ ನಿದ್ದೆ<br>
ನಿನಗೆ? ಮೇಲೇಳ್ ಏಳ್: ಕೆಡೆದು ಬಿದ್ದಿದೆ ನಿನ್ನ<br>
ಸಿರಿಗುಡಿಯ ಗೋಪುರಂ!...............<br>
................................ ಕೆಟ್ಟೆ ನೀಂ!<br>
ಕೆಟ್ಟೆ ನಾಂ! ಹಾ ಭರತ! ಭರತ! ಹಾ!.......

ಎಂದು ಚೀರುತ್ತಾಳೆ. ಇಲ್ಲಿ ಅವಳು ಉಪಯೋಗಿಸಿದ 'ಕೆಟ್ಟೆ ನೀಂ, ಕೆಟ್ಟೆ ನಾಂ, ಹಾ ಭರತ....' ಎಂಬ ಶಬ್ದಗಳು ಮಹತ್ವಪೂರ್ಣವಾದವು. ಅದು ಅವಳ ಸೀಮಿತ ಮಮತೆಯನ್ನು ವ್ಯಕ್ತಪಡಿಸುತ್ತದೆ. ಆ ಮಮತೆಯ ಎಲ್ಲೆ ಕೈಕೆಯಿ - ಭರತರನ್ನು ದಾಟಿ ಹೋಗುವುದಿಲ್ಲ. ಅವಳ ಏಳ್ಗೆಯೇ ತನ್ನದೆಂಬ ನಂಬಿಕೆ ಅವಳದು. ಆದರೆ ಮೊದಮೊದಲು ಕೈಕೆಯಿ ಅವಳ ವಿಷವೃತ್ತದೊಳಗೆ ಬೀಳದೇ, 'ರಾಮನೇಂ? ಭರತನೇಂ? ಮಕ್ಕಳಿರ್ವರುಮೆನ್ನವರ್!' ಎಂದು ಮಂಥರೆಗೆ ಹೇಳುತ್ತಾಳೆ. ಆದರೆ, ಮಂಥರೆ ಬಿಡುವವಳೇ? 'ಅಯ್ಯೊ, ವಂಚಕರ ಸಂಚಿನಿಂದೆಮ್ಮ ಭರತಂಗೀ ಪಳುವಾಯ್ತೆ? ನಾವಿರ್ವರಿದ್ದುಮೇಂ? ಪೇಳ್, ಮುಗ್ಧೆ!' ಎಂದು ಅವಳ ತಲೆಯಲ್ಲಿ 'ವಂಚನೆ'ಯೆಂಬ ವಿಷಬೀಜವನ್ನು ಬಿತ್ತುತ್ತಾಳೆ. ಭರತ ತನ್ನ ಸೋದರ ಮಾವನ ಮನೆಗೆ ಹೋಗಿದ್ದುದು ವಂಚಕಾರರ ಸಂಚು ಎಂಬುದು ಅವಳ ನಂಬಿಕೆ. 'ರಾಮಾಭಿಷೇಕಂ ನಿನಗೆ ಪ್ರಿಯವಾರ್ತೆಯೇಂ?'; 'ನಿನಗಾಯ್ತು ಸೊನ್ನೆ ಬಳುವಳಿ. ತೊಳ್ತು ನೀನಪ್ಪೆಯಿನ್ ಮುಂದೆ ರಾಮನಾಳ್ವಿಕೆಲ್ಲಿ. ಕೌಸಲೆಯ ಕಾಲ್ದೆಸೆಯ ಧೂಳಿಯೊಳ್' ಎಂಬೆಲ್ಲ ಅವಳ ಸತತ ಬೋಧನೆಗೆ ಕೈಕೆಯಿಯು ಮಣಿಯಲೇ ಬೇಕಾಗುತ್ತದೆ. ಈ ಎಲ್ಲ ಮಾತುಗಳಿಂದ ಕೈಕೆಯ

ಮನಸ್ಸು ಕದಡಿ, ಅವಳ ಮಾತನ್ನು ಒಪ್ಪಿ 'ಮುಳುಗುವಾತಂ ಪ್ರಾಣರಕ್ಷಣೆಗೆ ತಬ್ಬುವ್ರೋಲಂತೆ' ವಕ್ರೆ ಗೂನಿ, ಮಂಥರೆಯನ್ನು ತಬ್ಬಿಕೊಳ್ಳುತ್ತಾಳೆ. 'ಕಂಗೆಟ್ಟೆನಗೆ ದಾರಿ ತೋರ್ದೆಯೌ, ನೀನೆನ್ನ ತಾಯಿ!' ಎಂದು ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸುತ್ತಾಳೆ. ಮಂಥರೆಯ ದುರಾಲೋಚನೆ ಅಲ್ಲಿಗೇ ನಿಲ್ಲುವುದಿಲ್ಲ. ಹಿಂದೆ, ದಶರಥನು ಕೈಕೆಯಿಗೆ ಕೊಟ್ಟ ವರಗಳನ್ನು ನೆರವೇರಿಸಿಕೊಡಲು, ರಾಮನನ್ನು ಹದಿನಾಲ್ಕು ವರ್ಷ ಕಾಡಿಗೆ ಅಟ್ಟಿ ಭರತನಿಗೆ ಪಟ್ಟಾಭಿಷೇಕ ಮಾಡುವಂತೆ ದಶರಥನನ್ನು ಕೇಳುವ ಧೂರ್ತ ಸಲಹೆಯನ್ನು ಮಾಡುತ್ತಾಳೆ. ಕೈಕೆಯಿ ಮಂಥರೆಯಲ್ಲಿ ಸೌಂದರ್ಯವನ್ನು ಕಾಣುತ್ತಾಳೆ:

> ಇಂದಿನಿತು ಚಾರುರೂಪಿಣಿಯಾಗಿ ತೋರುತಿಹೆ
> ನೀನೆನಗೆ! ಲೋಕದೊಳ್ ಹೊರಮೆಯ್ಯನೀಕ್ಷಿಸುತೆ
> ಸೊಬಗನಾರೈವವರ್ ಬರಿಯ ಬೆಪ್ಪುಗಳಲ್ತೆ?
> ನಿಜಮಪ್ಪ ಸೌಂದರ್ಯಮಾತ್ಮಕ್ಕೆ ಸೇರ್ದುದೆನೆ
> ನಿನಗಿನೇಂ ಸುಂದರಿಯರೊಳರೆ? ಗೂನಿರ್ದರೇಂ ?
> ಚಂದನದ ಕೊರಡು ಮುರುಟಿರ್ದರೇನೂನಾಯ್ತೆ
> ಗಂಧಕ್ಕೆ? ..................

ಗಂಧದ ಕೊರಡು ವಕ್ರವಾಗಿದ್ದರೇನು? ಅಂತೆಯೇ ವಕ್ರಕಾಯದ ಮಂಥರೆಯ ಪಕ್ಷಪಾತ ಪ್ರೇಮದಲ್ಲಿ ಗಂಧದ ಸುವಾಸನೆಯನ್ನು ಮೂಸಿದಳು ಕೈಕೆಯಿ! ಮಂಥರೆಯ ಕೈವಾಡದಿಂದ ಪ್ರೇರಿತರಾಗಿ, ಕೈಕೆ, ದಶರಥರೂ ರಾಮನು ಕಾಡಿಗೆ ಹೋಗಲು ಕಾರಣರಾಗುತ್ತಾರೆ. ಆದರೆ, ಮುಂದೆ ವಿಧಿಯೇ ರಾಮನ 'ಅವತಾರ' ಪರಿಪೂರ್ಣತೆಯನ್ನೂ, ಜೊತೆಯಲ್ಲಿ ರಾಮನ ಆತ್ಮವಿಕಾಸವನ್ನೂ, ಕಬಂಧ-ಶಬರಿಯರ ಮುಕ್ತಿಯನ್ನೂ, ವಾಲಿ-ರಾವಣರ ಸಂಹಾರವನ್ನು ಸಾಧಿಸುತ್ತದೆ! ಮಂಥರೆಯು ನಿಮಿತ್ತ ಮಾತ್ರ!

ವಾಲ್ಮೀಕಿ ರಾಮಾಯಣದಲ್ಲಿ ಮಂಥರೆಯ ಪಾತ್ರ ಇಷ್ಟೇ! ರಾಮನು ಕಾಡಿಗೆ ಹೋದಮೇಲೆ ಅವಳ ಸುದ್ದಿಯೇ ಇಲ್ಲ, ಅಲ್ಲಿ. ಆದರೆ, ಕುವೆಂಪುರವರು ತಮ್ಮ 'ಶ್ರೀ ರಾಮಾಯಣ ದರ್ಶನಂ'ದಲ್ಲಿ ಅವಳ ಪಾತ್ರವನ್ನು 'ಅಗ್ನಿಯಾತ್ರೆ' ಎಂಬ ಅಧ್ಯಾಯದಲ್ಲಿ ಬೇರೆಯೇ ದೃಷ್ಟಿಕೋನದಿಂದ ನೋಡಿ, ಬಹಳ ಸ್ವಾರಸ್ಯವಾಗಿ ವಿವರಿಸಿದ್ದಾರೆ. ಈ ಅಧ್ಯಾಯದಲ್ಲಿ ಬರುವ ಮಂಥರೆಯ ಅಗ್ನಿಪ್ರವೇಶ, ಕುವೆಂಪುರವರ ಪರಿಣಾಮಕಾರಿ ಕಲ್ಪನೆಯ ಫಲಿತಾಂಶ.

ರಾಮನು ಕಾಡಿಗೆ ಹೋದಮೇಲೆ ದಶರಥನು ದುಃಖಸಾಗರದಲ್ಲಿ ಮುಳುಗಿ, ಕೊನೆಗೆ ಸಾವನ್ನಪುತ್ತಾನೆ. ತಂದೆಯ ಸಾವಿನ ವಾರ್ತೆಯನ್ನು ಕೇಳಿ ಅವನ ಉತ್ತರಕ್ರಿಯೆಯಲ್ಲಿ ಭಾಗವಹಿಸಲೆಂದು ಭರತ-ಶತ್ರುಘ್ನರು ಅಯೋಧ್ಯೆಗೆ ಮರಳಿ ಬರುತ್ತಾರೆ. ತಂದೆಯ ಸಾವಿಗೂ, ರಾಮ-ಲಕ್ಷ್ಮಣ-ಸೀತೆಯರ ವನವಾಸಕ್ಕೂ ಕಾರಣಳಾದ ಮಂಥರೆಯ ಮೇಲೆ ಶತ್ರುಘ್ನನು ಉರಿದೇಳುತ್ತಾನೆ.

....ರಾಮನೆಲ್ಲಿದನೆಲ್ಲಿ
ಲಕ್ಷ್ಮಣಂ? ಮತ್ತೆ ಪೇಳೆಲ್ಲಿಗಟ್ಟಿದೆ ದೇವಿ
ಸೀತೆಯಂ ? ನೀಚೆ, ಪೇಳೇಕಯ್ಯನಂ ಕೊನ್ದೆ
ಪೇಳ್ ಪೇಳ್,..................

ಎಂದು, ಅವಳನ್ನು 'ಮೃತ್ಯಸ್ವರೂಪಿ', 'ಶುನಕಿ', 'ಪಾತಕಿ' ಎಂಬೆಲ್ಲ ಅವಾಚ್ಯ ಶಬ್ದಗಳನ್ನುಪಯೋಗಿಸಿ, ಅವನು ಶಿಕ್ಷಿಸಲು ಮುಂದಾಗುತ್ತಾನೆ. ಆಗ ಮಂಥರೆ, 'ಅಯ್ಯೋ ದಮ್ಮಯ್ಯ, ಬಾರಣ್ಣಯ್ಯ, ರಕ್ಷಿಸೋ!' ಎಂದು ಭರತನ ಮೊರೆ ಹೋಗುತ್ತಾಳೆ. ತಾನೇ ಸಾಕಿ, ತನ್ನೆಲ್ಲ ಪ್ರೀತಿಯನ್ನು ಅವನಿಗಾಗಿ ಎರೆದು ಬೆಳೆಸಿದ ಭರತನು ತನ್ನನ್ನು ರಕ್ಷಿಸುತ್ತಾನೆಂದು ಅವಳ ನಿರೀಕ್ಷೆ. ಅಲ್ಲದೆ ಅಷ್ಟೆಲ್ಲ ಮಾಡಿದ್ದುದೂ ಭರತನ ಏಳ್ಗೆಗಾಗಿ ಅಲ್ಲವೇ! ಭರತನಿಗೆ, ಕ್ಷಣಮಾತ್ರ ಅವಳು ತನ್ನ ಮೇಲಿಟ್ಟಿರುವ ಮಮತೆಯ ನೆನಪಾಗಿರಲೂ ಬಹುದು. ಆದರೆ, ಅವನ ಮುಂದಿನ ಮಾತು ಮಂಥರೆಯ ನಿರೀಕ್ಷೆಯನ್ನು ನುಚ್ಚುನೂರು ಮಾಡಿತು:

ತೊಲಗೆಲೆ ಕುರೂಪಿ, ಓ, ತೊಲಗು ಕಣ್ಬೊಲದಿಂದೆ
ತೊಲಗಾಚೆ, ಪಾಪಿ! ಬಳಿಸಾರದಿರ್, ನಿಲ್ಲದಿರ್!
.........................................
ನಿನ್ನೊಳಿಂದಿನವರೆಗೆ
ವಿಕೃತಿಯಂ ಕಂಡೆನಿಲ್ಲಿಂದೇಕೆ ಪಲ್ಗಿರಿದು
ನಿಂದವೋಲಿದೆ ಕುರೂಪತೆಯ ಪೈಶಾಚಿಕತೆ
ಕರ್ಕಶಮೆನಲ್? ದಿಟಂ, ಮನಸಿಗಲ್ಲದೆ ವಿಕೃತಿ
ಬಾಹ್ಯಪ್ರಕೃತಿಗುಂಟೆ? ಪೆತ್ತವಳನಳುಪುವೊಲ್
ಕಾಣಿಸುತ್ತಳಿಗೆಯ್ತಕದ್ದಿದ ತನ್ನ ಕಣ್ಗಳನೆ
ಕೀಳ್ತೆಸೆವನಂತೆ ನಾಂ, ಮಂಥರೆ ಬಿಸುಟ್ಟೆನಿದೊ
ನಿನ್ನನೆಂದಿಂದಿಗುಂ.........................
.............................................
ರಾಮನಂ ಬಿಸುಟೆರ್ದಗೆ
ಭರತನಹಿತಂ.............................

ಎಂದು ಅವಳನ್ನು ಶಪಿಸುತ್ತಾನೆ. ಅಲ್ಲಿಯವರೆಗೂ ಅವಳ ಕುರೂಪವನ್ನು ಗಮನಿಸದ ಅವನು ಅಂದು ಅವಳ ವಿಕೃತ ದೇಹ ಮತ್ತು ಮನಸ್ಸಿಗೆ ಅಸಹ್ಯಪಡುತ್ತಾನೆ. ಈ ಮಾತು ಭರತನ ಬಾಯಿಂದ ಬಂದುದನ್ನು ಕೇಳಿ ಮಂಥರೆ,

ರವಿಯಾಕರ್ಷಣೆಯನುಳಿಯೆ
ನಿಚ್ಚನೇಮಂಗೆಟ್ಟು, ಬಟ್ಟೆ ನಿಟ್ಟಗೆ ತಪ್ಪಿ
ತತ್ತರಿಸಿ, ನೀಲ ಶೂನ್ಯಕ್ಕುರುಳುರುಳುವಿಳೆಯಂತೆ,

ಭರತನಳ್ಕರೆಯೊಂದೆ ಪಿರಿಯ ನೆಮ್ಮಾಗಿರ್ದ
ಕುಬ್ಜೆಯಾತ್ಮಂ ತಳಂಗೆಟ್ಟುರುಳ್ದುದು;....

ಸೂರ್ಯನ ಆಕರ್ಷಣೆ ತಪ್ಪಿದಾಗ ಭೂಮಿ ಶೂನ್ಯಕ್ಕೆ ಉರುಳಿ ಬೀಳುವಂತೆ, ಮಂಥರೆಯ ಆತ್ಮ ತಳತಪ್ಪಿ ಉರುಳಿತು. ಕವಿ ಇದನ್ನು ಈ ಮಾತುಗಳಿಂದ ವಿಶ್ಲೇಷಿಸುತ್ತಾರೆ:

ಮತ್ತೆ
ಪುಡಿಪುಡಿಯಾಯ್ತು, ಬೂದಿಯಾಯ್ತುಳ್ಕೆಯೋಲುರಿದುರಿದು
ಭರತನಾಗ್ರಹ ಗ್ರಹದ ಘಾತಕ್ಕೆ!

ಭರತನ ಆಗ್ರಹವೆಂಬ ಗ್ರಹದ ಘಾತಕ್ಕೆ ಸಿಕ್ಕಿ ಉಲ್ಕೆಯಂತೆ ಮಂಥರೆಯ ಮನಸ್ಸು ಬೂದಿಯಾಯ್ತು. ಇಲ್ಲಿ ಗ್ರಹಗತಿ, ಉಲ್ಕೆಯ ಉಪಮೆ ಕೊಟ್ಟುದು ಕುವೆಂಪುರವರ ವೈಜ್ಞಾನಿಕ ಪ್ರಜ್ಞೆಯನ್ನು ವ್ಯಕ್ತಪಡಿಸುತ್ತದೆ.

ಮಂಥರೆ ಎಸಗಿದ ಕಾರ್ಯಕ್ಕೆ ಯಾರೂ ಅನುಕಂಪ ತೋರಿಸಲಾರರು. ಪ್ರೀತಿಯಿಂದ ಸಾಕಿದ ಭರತನೇ ಅವಳಲ್ಲಿ ಅನುಕಂಪ ತೋರಲಿಲ್ಲ. ಆದರೆ, ಕವಿ ಅವಳಲ್ಲಿ ಅನುಕಂಪ ತೋರಿಸುತ್ತ ಹೀಗೆ ಹೇಳುತ್ತಾರೆ:

ಓ ಪತಿತೆ,
ಓ ಕುಬ್ಜೆ, ಓ ಮಂಥರೆಯೆ, ಮರುಗುವೆನ್ ನಿನಗೆ
ಕವಿ ಸಹಜ ಕರುಣೆಯಿಂ. ಲೋಕಕ್ರೋಧ ಮದಹಸ್ತಿ
ಪದದಲನ ರೋಷದಾವಾಗ್ನಿಗಾಹುತಿಯಾಗಿ
ಬೀಳ್ದ ನಿನ್ನಾ ಭಸ್ಮರಾಶಿಯಂ ತೊಳೆವುದಿದೊ
ಕಣ್ಣಿಂಗೆ ಕಾವ್ಯಮಹಿಮಾ ಸಿಂಧುತೀರ್ಥಕ್ಕೆ!

ಕವಿ ಸಹಜವಾದ ಕರುಣೆ ತೋರಿಸುತ್ತ, ಅವಳ ಪಾಡಿಗೆ ಮರುಗುತ್ತ, ಲೋಕದ ಕ್ರೋಧದಿಂದಾಗಿ, ಆನೆಯ ತುಳಿತವೆಂಬ ಕಿಚ್ಚಿಗೆ ತುತ್ತಾಗಿ ಭಸ್ಮವಾಗಿ ಬಿದ್ದ ಆ ಮಂಥರೆಯನ್ನು ಕವಿ ತನ್ನ ಕಣ್ಣೀರಿಂದ ತೊಳೆದು, ಅವಳನ್ನು ಕಾವ್ಯಮಹಿಮೆಯೆಂಬ ಸಾಗರತೀರ್ಥಕ್ಕೆ ಸಾಗಿಸುತ್ತಾರೆ. ಕವಿಯ ದೃಷ್ಟಿಯಲ್ಲಿ, ಅವಳು ಅಷ್ಟಕ್ಕೆ ಅರ್ಹಳು. ಈ ಮಾತುಗಳಿಂದ ಕುವೆಂಪು, ನಮ್ಮ ಹೃದಯದಲ್ಲೆಲ್ಲೋ ಹುದುಗಿ ಕುಳಿತಿದ್ದ ಅನುಕಂಪವನ್ನು ಜಾಗೃತಗೊಳಿಸಿ, ಅವಳನ್ನು ಕೊಂಚವಾದರೂ ಕರುಣೆಯ ದೃಷ್ಟಿಯಿಂದ ನೋಡುವಹಾಗೆ ಮಾಡುತ್ತಾರೆ.

ಮೂರ್ಛೆತಪ್ಪಿ ಬಿದ್ದಿದ್ದ ಮಂಥರೆಯ ಪಾಡನ್ನು ಕವಿ ಇನ್ನೂ ಮುಂದುವರಿಸುತ್ತಾರೆ:

ಓ ಕುಬ್ಜೆ, ಮಂಥರೆಯೆ, ಓ ಪ್ರೇಮ ಭೈರವಿಯೆ,
..........................................
ನಿರ್ಭಾಗ್ಯೆ, ಮೇಲೆ ನೀನೇನಾದೆ ? ಅಲ್ಲಿಂದೆ
ನೀನೆತ್ತವೋದೆ? ತಿರೆ ನುಂಗಿದುದೊ? ಕರಗಿದೆಯೊ

ನೋವಿನುರಿವೊಯ್ಲಿಂದೆ? ತಿಂದುದೊ ನಿರಾಶೆ? ಮೇಣ್
ಮಾಯವಾದೆಯೊ, ಮಾಯೆ, ಪೇಳ್?

ವಾಲ್ಮೀಕಿ ರಾಮಾಯಣದಲ್ಲಿಲ್ಲದ ಅವಳ ಮುಂದಿನ ಸ್ಥಿತಿಯನ್ನು ವಿವರಿಸಲು ಈ ತಳಹದಿ ಹಾಕಿದ್ದಾರೆ, ಇಲ್ಲಿ ಕುವೆಂಪು. ಮುಂದೆ ಅವಳೇನಾದಳೆಂದು ವಿವರಿಸಲು ತೊಡಗುತ್ತಾರೆ:

ಮುಯ್ಗೆ ಮುಯ್ಯಾಗಿ ಕೊಲೆಯಾದವನ ಮೆಯ್ಯಿಂದೆ
ಪಸಿಯ ಗಾಯಂಗಳಿಂ ಬಿಸಿಯಾರ್ದ ನೆತ್ತರಂ
ಸೋರಿ ಭೀಕರಮಾಗಿ ಹೂಳಿನಿಂದೇಳುವಾ
ಪ್ರೇತಪ್ರತೀಕಾರ ಭೀಷಣಾಕೃತಿಯಂತೆ
ಸುಯ್ದಳಾ ಗೂನಿ.................

ಇಲ್ಲಿ ಹಲವಾರು ಉಪಮೆಗಳ ವಿವರವಿದೆ. ಇಲ್ಲಿ ನಾನು ಅವೆಲ್ಲವುಗಳ ವಿವರಣೆ ಮಾಡಲು ಹೊರಟಿಲ್ಲ. ಆದರೆ, ಇಷ್ಟನ್ನು ಹೇಳಬಹುದು: ಘಾಸಿಗೊಂಡ ಗಾಯದಿಂದ ಸುರಿಯುತ್ತಿದ್ದ ರಕ್ತವನ್ನು ನೆಕ್ಕುತ್ತಳೇಳುವವರಂತೆ ಮೇಲೇಳುತ್ತಾಳೆ. (ನನಗಂತೂ, ಇಲ್ಲಿ ಇಷ್ಟೇ ವರ್ಣನೆ ಸಾಕೆನಿಸುತ್ತದೆ.) ಹೀಗೆ, ನಿಶ್ಶಬ್ದತೆಯ ಶವದಂತೆ ಮೇಲೆದ್ದ ಆ ಗೂನಿ, 'ದೃಢಮನದ ಹೆಡೆಯೆತ್ತಿ ತನ್ನ ನಂಜಂ ತಾನೆ ಹೀರಲೆಳಸುವ ಕಾಳ ಸರ್ಪಿಣಿಯ'ಯಂತಾದಳು. ಬಹುಶಃ ಸ್ವಲ್ಪ ವಿವೇಕ ಆ ಕ್ಷಣದಲ್ಲಿ ಅವಳಿಗೆ ಬಂದಿರಬೇಕು. ತಾನು ಮಾಡಿದ ಕಾರ್ಯವನ್ನು ವಿಮರ್ಶೆ ಮಾಡತೊಡಗಿದಳು, ಆಕೆ. ಭರತನು ಸಿಟ್ಟಿಗೆದ್ದಿದ್ದಾನೆ.

ತನ್ನ ಜೀವಾನಂದ ಸಾಗರ ಸುಧಾಂಶುವಿಗೆ
ಭರತದೇವಗೆ ನೆಲದ ಸಿರಿಯಕ್ಕೆ, ಸೊಗಮಕ್ಕೆ
ಮುಡಿಯ ನೇಸರ ಬಳಿಯ ಮುಕುಟಮಕ್ಕೆಂದಲ್ತೆ
ರಾಮನಡವಿಗಟ್ಟಿದೆನ್?................

ಭರತನ ಏಳಿಗೆಗಾಗಿ ಮಾಡಿದ ಕೆಲಸದಲ್ಲಿ ತಪ್ಪೇನೆಂದು ಒಮ್ಮೆ ಎಣಿಸಿದರೂ, ರಾಮನನ್ನು ಅಡವಿಗೆ ಅಟ್ಟಿದುದು ತಪ್ಪಾಗಿರಬಹುದೇ? ಎಂಬ ಅನುಮಾನವೂ ಅವಳನ್ನು ಬಾಧಿಸಿದಂತಿದೆ. ಹಾಗಾದರೆ, 'ಮತ್ತೆ ರಾಮನಂ ಮನೆಗೆ ಕರೆತಂದನಾದೊಡೆ ಕಂದ ಭರತಂಗೆ ಮುದವಪ್ಪುದಪ್ಪುದಂತೆಯೆ ಕೈಕೆಗುತ್ಸವಂ' ಎಂದು ಯೋಚಿಸುತ್ತಾಳೆ. ಹಾಗೆಂದು ನಿಶ್ಚಯಿಸಿ, ರಾಮನನ್ನು ತಿರುಗಿ ಮನೆಗೆ ಕರೆತಂದು, ಭರತನ ಪ್ರೀತಿಯನ್ನು ತಿರುಗಿ ಸಂಪಾದಿಸಲೆಂದು, 'ಪುಣ್ಯದನ್ವೇಷಣೆಗೆ ಪೋಪ ಪಾಪದ ತೆರದಿ' ರಾಮನ ಅನ್ವೇಷಣೆಗೆ ಹೊರಟಳು. ಅಯೋಧ್ಯೆಯನ್ನು ಹಾದುಹೋಗುತ್ತಿದ್ದಂತೆ, ದಾರಿಯಲ್ಲಿ ಜನರ ದ್ವೇಷಕ್ಕೆ, ಹಿಂಸೆಗೆ ಇನ್ನಷ್ಟು ಬಲಿಯಾದಳು, ಆ ಗೂನಿ. ಈ ದ್ವೇಷ, ನಿಷ್ಠೂರ, ವೈರ, ಕಷ್ಟಗಳೆಲ್ಲವಕ್ಕೂ ಪ್ರೇಮವೇ ಕಾರಣವಲ್ಲವೇ?

ಸುಧಾಸುಖಕೆ
ಕಡಲ ಕಡೆದ ದೇವ ದೈತ್ಯರಿಂದಾಯ್ತಲ್ತೆ
ಹಾಲಾಹಾಲದ ಸೃಷ್ಟಿಯಂ!

ಅಮೃತ ಪಡೆಯಲು ದೇವತೆಗಳೂ, ರಾಕ್ಷಸರೂ ಸಮುದ್ರಮಥನ ಮಾಡಿದಾಗ ಹಾಲಾಹಲವೂ ಉತ್ಪತ್ತಿಯಾಯಿತಲ್ಲವೇ? - ಎಂದು ಕವಿ ಕಾರಣ ಕೊಡುತ್ತಾರೆ.

ರಾಮನ ಅನ್ವೇಷಣೆಗೆ ಹೊರಟ ಮಂಥರೆಯ ಹೃದಯದಲ್ಲಿ ರಘುರಾಮಚಂದ್ರನೇ ಉದಯವಾಗಿರುತ್ತಾನೆ. ಬಹುಶಃ ರಾಮಚಂದ್ರನ ಎಣಿಕೆಯಿಂದ ತನ್ನ ಪಾಪಪ್ರಜ್ಞೆ ಎಲ್ಲ ಪರಿಹಾರವಾಗುತ್ತದೆಂಬ ನಂಬಿಕೆ ಅವಳದ್ದಾಗಿರಬೇಕು. ನಿದ್ರೆ ಇಲ್ಲದೆ, ಆಹಾರವಿಲ್ಲದೆ, ಹುಚ್ಚಿಯಂತೆ, 'ಓ ನನ್ನ ಭರತನಣ್ಣಯ್ಯ....' ಎಂದು ಪದೇ ಪದೇ ಕರೆಯುತ್ತ ಗೊತ್ತುಗುರಿ ಇಲ್ಲದೆ ಅಲೆಯುತ್ತಿರುತ್ತಾಳೆ. ಅವಳ ಮನಸ್ಸಿನ ಬದಲಾವಣೆಗೆ ಕಣ್ಣಿನಂತೆ ಸಹಸ್ರಾರು ನಕ್ಷತ್ರಗಳನ್ನು ಕೂಡಿದ ಆಕಾಶವೇ ರೋಮಾಂಚನಗೊಂಡು ನೋಡುತ್ತಿತ್ತಂತೆ!

ಭ್ರಮಿಸಿ ಸುತ್ತುತ್ತಿದ್ದ ಮಂಥರೆಗೆ ದೂರದಲ್ಲಿ ಜ್ಯೋತಿಯೊಂದು ಕಾಣಿಸಿತಂತೆ. ಆ ಜ್ಯೋತಿಯೇ ರಾಮನೆಂದು ಭ್ರಮಿಸಿ ಅದರ ಕಡೆಗೆ ಮಂಥರೆ ಧಾವಿಸುತ್ತಾಳೆ. ಇಲ್ಲಿ ಕುವೆಂಪು ಅತ್ಯಂತ ಪರಿಣಾಮಕಾರಿಯಾಗಿ ಮಂಥರೆಯ ನಿರ್ಗಮನವನ್ನು ವರ್ಣಿಸಿದ್ದಾರೆ. ಅವಳು ಭ್ರಮಿಸಿದ ಜ್ಯೋತಿಯು ನಿಜಕ್ಕೂ ಕಾಡ್ಗಿಚ್ಚಾಗಿತ್ತು. 'ವಿದ್ಯುತ್ಪ್ರವಾಹ ದೈತ್ಯಾಕೃತಿಯವೊಲ್ ಕೆರಳಿದುದು' ಆ ಕಾಡ್ಗಿಚ್ಚು. ಅದು:

ಕಾಡೆಲ್ಲಮಂ
ನುಂಗಿ ನೊಣೆಯುತ್ತೆ, ನಾಡೆಲ್ಲಮಂ ನೆಕ್ಕುತ್ತೆ
ನಗಜಗದ ಖಗಮೃಗದ ಬನಸೊಗದ ಜೀವಮಂ
ಪಾರಿಸುತೆ, ಚೀರಿಸುತೆ, ಕೊಲ್ಲುತ್ತೆ, ಮೆಲ್ಲುತ್ತೆ
.........................................
ಬಂದಪ್ಪಳಿಸಿದಗ್ನಿಗಾ ಮಂಥರೆಯ ಮೂರ್ತಿ ಹಾ
ಸುಟ್ಟು ಸೀದುದೊ ಚಿಟ್ಟೆ ಸೀವಂತೆ!

ಆ ಬೆಂಕಿಯ ಶಾಖಕ್ಕೆ ಅವಳ ದೇಹವು ಚಿಟ್ಟೆ ಸೀದು ಹೋದಂತೆ ಉರಿದು ಹೋಗುತ್ತದೆ. ಅವಳು ಮಾಡಿದ ತಪ್ಪನ್ನೆಲ್ಲ ಆ ಅಗ್ನಿ ನುಂಗಿ, ಅವಳಿಗೆ ಮೋಕ್ಷ ಕೊಟ್ಟಂತಿದೆ ಈ ಅಂತ್ಯ!

ರಕ್ಷತಾ
ವಿಕೃತಿಯಿಂ ಗುಜ್ಜುಮೆಯ್ಯಿಂ ಕುರೂಪಂಬೆತ್ತ
ಶ್ರೀಗಂಧ ಕಾಷ್ಠ ವಕ್ರತೆಗಗ್ನಿಲಗ್ನದಿಂ, ಕೇಳ್,
ರೂಪಶೂನ್ಯತೆಯೊದಗಲೇಂ ವಿಶ್ವದೇಶಮಂ
ಪರಿಮಳದ ಪುಣ್ಯಪವನಂ ಪಸರಿಪೋಲಂತೆ,

ತುಂಬದೇನಿರ್ದಪಳೆ, ಪೇಳ್, ಲೋಕಲೋಕಂಗಳೊಳ್
ದೇವಿ ಮಂಥರೆಯಂತರಾತ್ಮದ ದಯಾಲಕ್ಷ್ಮಿ ತಾಂ
ತನ್ನ ಕೀರ್ತಿಯ ಸಯ್ಪಿನಮೃತಮಯ ಸೌಂದರ್ಯಮಂ?

ವಕ್ರಕಾಯದ, ಕುರೂಪಿ, ಗೂನಿ ಮಂಥರೆಯನ್ನು ಅಂಕುಡೊಂಕಾದ ಶ್ರೀಗಂಧದ ಕೊರಡಿಗೆ ಹೋಲಿಸಿದ್ದಾರೆ ಕವಿ, ಇಲ್ಲಿ. ಶ್ರೀಗಂಧ ಉರಿದಾಗ ವಾತಾವರಣವೆಲ್ಲ ಸುಗಂಧ ಪುಣ್ಯಮಯ ಗಾಳಿಯಿಂದ ತುಂಬುವ ಹಾಗೆಯೇ, ದೇವಿ ಮಂಥರೆಯ ಆತ್ಮವೂ ದಯಾಪೂರ್ಣತೆಯಿಂದ ದಿವ್ಯಾನಂದ ಸೌಂದರ್ಯವನ್ನು ಪಡೆಯಿತು ಎಂದು ಈ ಅಧ್ಯಾಯವನ್ನು ಮುಗಿಸುತ್ತಾರೆ, ಕುವೆಂಪು.

ಮೇಲಿನ ಸನ್ನಿವೇಶವು ಒಂದು ವಿಶಿಷ್ಟ ಪ್ರಜ್ಞೆಯನ್ನು ನಮ್ಮಲ್ಲಿ ಮೂಡಿಸುತ್ತದೆ. ಎಲ್ಲರ ಮನಸ್ಸಿನಲ್ಲೂ ಒಳ್ಳೆಯ ಮತ್ತು ಕೆಟ್ಟ ಭಾವನೆಗಳು ತುಂಬಿರುತ್ತವೆ. ಕೆಲವರಲ್ಲಿ ಕೆಟ್ಟ ನಡತೆಯ ಪ್ರಮಾಣ ಜಾಸ್ತಿ ಇರಬಹುದು. ಆದರೂ, ಅವರಲ್ಲಿ ಒಳ್ಳೆಯ ಭಾವನೆಯೂ ಗುಪ್ತವಾಗಿ ಅಡಗಿರುತ್ತದೆ. ಮಂಥರೆ ಈ ಜಾತಿಗೆ ಸೇರಿದವಳಿರಬೇಕು. ಜನಸಾಮಾನ್ಯರ ದೃಷ್ಟಿಯಲ್ಲಿ ಆಕೆ ದುಷ್ಟೆ, ನಡತೆ ಕೆಟ್ಟವಳು. ಆದರೆ, ಕವಿ ಅವಳಲ್ಲಿರುವ ಮಮತೆಯನ್ನು ಗುರುತಿಸಿ, ಅವಳ ಬದುಕನ್ನು ಎಲ್ಲ ಪಾಪಕಾರ್ಯಗಳಿಂದಲೂ ಹೋಗಲಾಡಿಸಿ, ಪಾವನಗೊಳಿಸಿ, ಮುಕ್ತಿಪಡೆಯುವಂತೆ ಮಾಡಿದ್ದಾರೆ.

ಮಂಥರೆಯು ಶ್ರೀರಾಮನ ಸ್ತುತಿ ಮಾಡುತ್ತ ಅಗ್ನಿಪ್ರವೇಶ ಮಾಡಿದುದು ಗಮನಾರ್ಹವಾದುದು. ಅವಳ ಹೃದಯದಲ್ಲೆಲ್ಲೋ ರಾಮಭಕ್ತಿಯು ಮನೆಮಾಡಿಕೊಂಡಿರಬೇಕು. ಅಗ್ನಿಯಲ್ಲಿ ಐಕ್ಯವಾಗಿ, ಅವಳು ದೇವರಲ್ಲಿ ಐಕ್ಯವಾದಳೆಂದು ಇಲ್ಲಿ ಊಹಿಸಿಕೊಳ್ಳಬಹುದು. 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿ ಶ್ರೀರಾಮನು, ಹೀಗೆ ಹಲವರಿಗೆ ಮುಕ್ತಿ ಸಂಪಾದಿಸಿ ಕೊಟ್ಟಿದ್ದಾನೆ. ಇಲ್ಲಿ 'ಮುಕ್ತಿ' ಎಂಬ ಪದಕ್ಕೆ ವಿಶೇಷ ಅರ್ಥವಿದೆ. ರಾವಣ, ಕಬಂಧ, ವಾಲಿ, ಮುಂತಾದವರ ಸಂಹಾರವೂ ಕುವೆಂಪು ಕಾವ್ಯದೃಷ್ಟಿಯಲ್ಲಿ ಮುಕ್ತಿಯೇ! ಮಂಥರೆ ಇಲ್ಲದಿರುತ್ತಿದ್ದರೆ ರಾಮಾಯಣವೇ ಜರುಗುತ್ತಿರಲಿಲ್ಲ! ಕುವೆಂಪು, ಜನರ ನಂಬಿಕೆಗೆ ಬದಲಾಗಿ, ಅವಳು ಪುಣ್ಯ ಪಡೆಯುವಂತೆ ಮಾಡಿದ್ದಾರೆ; ಅವಳನ್ನು ದೇವಿಯನ್ನಾಗಿ ನೋಡಿದ್ದಾರೆ; ಅವಳು ದಯಾಮಯಿ ಎಂದು ಹೇಳಿದ್ದಾರೆ; ಅವಳನ್ನು ಒಂದು ದಿವ್ಯ ಸ್ಥಾನಕ್ಕೆ ಏರಿಸಿದ್ದಾರೆ.

●

# ‘ಶ್ರೀ ರಾಮಾಯಣ ದರ್ಶನಂ’ ಮಹಾಕಾವ್ಯದಲ್ಲಿ ಶಬರಿ

ಆಹಿತಾನಲ, ಕ್ಯಾಲಿಫೋರ್ನಿಯ

## ಮೊದಲ ಮಾತು

ಕನ್ನಡ ಸಾರಸ್ವತ ಲೋಕಕ್ಕೆ ಕುವೆಂಪುರವರ ‘ಶ್ರೀ ರಾಮಾಯಣ ದರ್ಶನಂ’ ಒಂದು ವಿಶಿಷ್ಟ ಕೊಡುಗೆ. ಜ್ಞಾನಪೀಠ ಪುರಸ್ಕೃತ, ಈ ಮಹಾಕಾವ್ಯವನ್ನು ಪಾಶ್ಚಾತ್ಯ ಭಾಷೆಯ ಹಲವು ಮಹಾಕಾವ್ಯ - ಹೋಮರನ ಇಲಿಯಡ್, ಮಿಲ್ಟನ್‌ನ ಪ್ಯಾರಡೈಸ್ ಲಾಸ್ಟ್, ಪ್ಯಾರಡೈಸ್ ರಿಗೈಂಡ್, ಇತ್ಯಾದಿ -ಗಳೊಂದಿಗೆ ಹೋಲಿಸಿದಾಗ, ಕುವೆಂಪುರವರ ಕೃತಿ ಯಾವ ವಿಧದಲ್ಲೂ ಅಂಥವರ ಕಾವ್ಯಕ್ಕೇನೂ ಕಡಿಮೆ ಇಲ್ಲವೆಂಬ ಹೆಮ್ಮೆ ಕನ್ನಡಿಗರಲ್ಲಿ ಮೂಡಿ ಬರುವುದು ವಿಶೇಷವೇನಲ್ಲ!

ಮಹಾ ಛಂದಸ್ಸಿನ ‘ಶ್ರೀ ರಾಮಾಯಣ ದರ್ಶನಂ’ನ ಮೊದಲ ಮಹಾ ಸಂಪುಟ ಪ್ರಕಟವಾದುದು ೧೯೪೯ರಲ್ಲಿ. ೧೯೫೭ರಲ್ಲಿ ಅವರು ‘ಶ್ರೀ ರಾಮಾಯಣ ದರ್ಶನಂ’ ಎಂಬ ಒಂದು ಪುಟ್ಟ ಕವನವನ್ನು ಬರೆದಿದ್ದು, ಅದರಲ್ಲಿ, ಪಂಪ, ರನ್ನ, ನಾಗವರ್ಮ, ರಾಘವಾಂಕ, ನಾರಣಪ್ಪ ಲಕ್ಷ್ಮೀಶ, ರತ್ನಾಕರ, ಇವರೇ ಮುಂತಾದ ಕನ್ನಡ ಸಾಹಿತ್ಯದ ದಿಗ್ಗಜರನ್ನು ನೆನೆದು, ‘ಸಕಲ ಛಂದಸ್ ಸರ್ವ ಮಾರ್ಗ ಶೈಲಿಗಳಮರ ಐಶ್ವರ್ಯ ಸರ್ವವೂ ಸಂಗಮಿಸಿದೀ ‘‘ದರ್ಶನಂ’’ ತಾನಕ್ಕೆ ಕೃತಿಗಳಾಚಾರ್ಯ’ ಎಂದು ಹೇಳಿದ್ದಾರೆ. ಈ ಮಹಾಕೃತಿಯನ್ನು ತಮ್ಮ ಪರಮಗುರು, ಟಿ.ಎಸ್. ವೆಂಕಣ್ಣಯ್ಯನವರಿಗೆ ಅರ್ಪಿಸುತ್ತ

‘ಇದೊ ಬಂದಿರುವೆನಿಂದು
ಮುಗಿಸಿ ತಂದಿಹೆನಾ ಮಹಾಗಾನಮಂ ಪಿಂತೆ
ವಾಲ್ಮೀಕಿಯುಲಿದ ಕಥೆಯಾದೊಡಂ, ಕನ್ನಡದಿ
ಬೇರೆ ಕಥೆಯೆಂಬಂತೆ, ಬೇರೆ ಮೈಯಾಂತಂತೆ,
ಮರುವುಟ್ಟುವಡೆವಂತೆ ಮೂಡಿದೀ ಕಾವ್ಯಮಂ
ವಿಶ್ವವಾಣಿಗೆ ಮುಡಿಯ ಮಣಿ ಮಾಡಿಹೆನ್ ನಿಮ್ಮ
ಕೃಪೆಯಿಂದೆ..............................’

ಎಂದು ತಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸಿದ್ದಾರೆ. ಹತ್ತು ವರ್ಷಗಳ ‘ತಪಸ್ಸಿ’ನ ಫಲವಾದ ಈ ಕೃತಿಯ ರಚನೆ ಸಂಪೂರ್ಣವಾಗುವ ಮೊದಲೇ ವೆಂಕಣ್ಣಯ್ಯನವರು ಸ್ವರ್ಗಸ್ಥರಾದರು. ಅದನ್ನು ನೆನೆಸಿಕೊಂಡು ಕುವೆಂಪು ಹೀಗೆ ಬರೆದಿದ್ದಾರೆ:

'ಇದೊ ಮುಗಿಸಿ ತಂದಿಹೆನ್ ಈ ಬೃಹದ್‌ಗಾನಮಂ
ನಿಮ್ಮ ಸಿರಿಯುಡಿಗೊಪ್ಪಿಸಲ್ಕೆ, ಓ ಪ್ರಿಯ ಗುರುವೆ.
ಕರುಣಿಸಿಂ ನಿಮ್ಮ ಹರಕೆಯ ಬಲದ ಶಿಷ್ಯನಂ,
ಕಾವ್ಯಮಂ ಕೇಳ್ವೊಂದು ಕೃಪೆಗೆ ಕೃತಕೃತ್ಯನಂ
ಧನ್ಯನಂ ಮಾಡಿ. .....................'

ಇದು ಅವರ ಅಪಾರ ಗುರುಭಕ್ತಿಯನ್ನು ವ್ಯಕ್ತಪಡಿಸುತ್ತದೆ.

'ಶ್ರೀ ರಾಮಾಯಣ ದರ್ಶನಂ' ಬಗ್ಗೆ ಒಂದು ಕುತೂಹಲಕಾರಿ ವಿಷಯವನ್ನು ಶ್ರೀ ದೇಜಗೌ ರು, ಕುವೆಂಪುರವರ 'ಸಮುದ್ರ ಲಂಘನ'ವೆಂಬ ಕಿರುಕಾವ್ಯಕ್ಕೆ ಪೀಠಿಕೆ ಬರೆಯುತ್ತ ವಿವರಿಸಿರುತ್ತಾರೆ. 'ಸಮುದ್ರ ಲಂಘನ' ಪ್ರಕಟವಾದುದು ೧೯೮೧ರಲ್ಲೆಂದು ಅವರ 'ಸಮಗ್ರ ಕಾವ್ಯ'ದಲ್ಲಿ ಉಲ್ಲೇಖವಾಗಿದೆ. ಆದರೆ, ಅದರ ರಚನೆ ೧೯೩೦ರಲ್ಲೆಂದು ಕುವೆಂಪುರವರೇ ತಿಳಿಸಿರುವುದು ದೇಜಗೌ ರ ಪೀಠಿಕೆಯಿಂದ ತಿಳಿದುಬರುತ್ತದೆ. ಈಗ ಪ್ರಚಲಿತವಾಗಿರದ 'ಅರ್ಥಸಾಧಕ' ಎಂಬ ಪತ್ರಿಕೆಯಲ್ಲಿ ಈ ಕಿರುಕಾವ್ಯ ಪ್ರಕಟವಾಗಿತ್ತಂತೆ! ಈ ಕಿರುಕಾವ್ಯವೇ 'ಶ್ರೀ ರಾಮಾಯಣ ದರ್ಶನಂ'ಗೆ ನಾಂದಿಯೆಂಬುದನ್ನು ಕುವೆಂಪುರವರೇ ವ್ಯಕ್ತಪಡಿಸಿದ್ದರಂತೆ!

'ಶಬರಿ' ಎಂದೆಣಿಸಿದಾಗಲೆಲ್ಲ ನನ್ನ ಮನಸ್ಸಿಗೆ ತಕ್ಷಣವೇ ಬರುವುದು ವಿ. ಸೀತಾರಾಮಯ್ಯನವರು ಬರೆದ 'ಶಬರಿ' ಎಂಬ ಕವನ. ಅದರ ಪ್ರಾರಂಭ ಹೀಗಿದೆ :

ಕಾದಿರುವಳು ಶಬರಿ
ರಾಮ ಬರುವನೆಂದು
ತನ್ನ ಪೂಜೆ ಕೊಳುವನೆಂದು
ವನವನವ ಸುತ್ತಿ ತುಳಿದು
ತರುತರುವನಲೆದು ತಿರಿದು
ಬಿರಿ ಹೂಗಳಾಯ್ದು ತಂದು
ತನಿವಣ್ಗಳಾಯ್ದು ತಂದು

ನನ್ನ ಎಳೆವಯಸ್ಸಿನಲ್ಲಿ, ಈ ಹಾಡನ್ನು ಕೇಳಿದಾಗಲೆಲ್ಲ ಇಳಿವಯಸ್ಸಿನ ಮುದುಕಿ ಶಬರಿಯೇ ನನ್ನ ಕಣ್ಣ ಮುಂದೆ ಕಟ್ಟಿದಂತಾಗುತ್ತಿತ್ತು. ಇಂತಹದೇ ಅನುಭವ ಕುವೆಂಪುರವರ ಮಹಾ ಕಾವ್ಯವನ್ನು ಓದಿದಾಗಲೂ ಆಗುತ್ತಿದೆ. ಆ ಬಗ್ಗೆ ಮುಂದೆ ವಿವರಿಸುವವನಿದ್ದೇನೆ.

'ಶ್ರೀ ರಾಮಾಯಣ ದರ್ಶನಂ' ಕಾವ್ಯದಲ್ಲಿ ವಿವರಿಸಿದ ಶಬರಿಯ ಪಾತ್ರದ ಬಗ್ಗೆ ನನ್ನ ಅನಿಸಿಕೆಗಳನ್ನು ವ್ಯಕ್ತಪಡಿಸುವುದು ಈ ಲೇಖನದ ಮುಖ್ಯ ಉದ್ದೇಶ. ಈ ಸಂದರ್ಭದಲ್ಲಿ, ಕನ್ನಡ ಸಾಹಿತ್ಯದಲ್ಲಿನ ಇನ್ನೊಬ್ಬ ದಿಗ್ಗಜ, ಪು.ತಿ.ನ.ರವರು ಬರೆದ ಕಾವ್ಯನಾಟಕ, 'ಶಬರಿ' ನನ್ನ ಗಮನವನ್ನು ಸೆಳೆದಿತ್ತು. ಇವೆರಡನ್ನೂ ಓದಿದಾಗ, ಒಂದೇ ವ್ಯಕ್ತಿತ್ವವು ಸಾಹಿತಿಗಳ ದೃಷ್ಟಿಯಲ್ಲಿ ಹೇಗೆ ಬೇರೆ ಬೇರೆ ರೀತಿಯಲ್ಲಿ ವ್ಯಕ್ತವಾಗಿದೆ ಎಂಬುದು ತಿಳಿದು ಬರುತ್ತದೆ. ಈ ಎರಡು ಕಾವ್ಯಗಳಲ್ಲೂ ಶಬರಿಯದೇ ಮುಖ್ಯ ಪಾತ್ರ. ಆದರೆ, ಅವರಿಬ್ಬರೂ ಚಿತ್ರಿಸಿದ ಶಬರಿ ಸ್ವಲ್ಪ

ಭಿನ್ನವಾಗಿ ಕಾಣಿಸುತ್ತಾಳೆ. ಪು.ತಿ.ನ.ರು ತಮ್ಮ ಮುನ್ನುಡಿಯಲ್ಲಿ 'ರಾಮಾಯಣದಲ್ಲಿ ಮೂಡಿ ಬರುವ ಶಬರಿಯ ಚಿತ್ರಕ್ಕೂ, ನಮ್ಮಲ್ಲಿ ರೂಢವಾಗಿರುವ ಆಕೆಯ ಚಿತ್ರಕ್ಕೂ ವ್ಯತ್ಯಾಸವಿದೆ. .... ನನಗೆ ಈ ಪಾತ್ರದಲ್ಲಿ ರುಚಿಸಿದ ವಿಶೇಷವೆಂದರೆ ಶಬರಿ ತನ್ನ ಸಮ್ಮುದ ತೀರಿ ಕರುಕಾಗುವ ಮೊದಲೇ, ಅದು ಇನ್ನೂ ತೇಜೋವಂತವಾಗಿರುವಾಗಲೇ, ದೇಹತ್ಯಾಗ ಮಾಡಿದುದು. ಅದನ್ನು ಯಥಾಮತಿ ಚಿತ್ರಿಸಿದ್ದೇನೆ' ಎಂದು ಬರೆದಿದ್ದಾರೆ. ಪು.ತಿ.ನ.ರವರು ಚಿತ್ರಿಸಿದ ಶಬರಿ, 'ಯಥಾಮತಿ' ವಾಲ್ಮೀಕಿ ಚಿತ್ರಿಸಿದ ಶಬರಿಯನ್ನು ಹೋಲುತ್ತದೆ. ಅಲ್ಲಿ ಶಬರಿ, ತನ್ನ ಗುರು ಮತಂಗ ಮುನಿಗಳ ಆದೇಶವನ್ನು ಪೂರೈಸುವ ಮುಖ್ಯ ಉದ್ದೇಶದಿಂದ, ಶ್ರೀ ರಾಮ ದರ್ಶನ ಪಡೆದು, ಅದರಿಂದ ಅಪಾರ ತೃಪ್ತಿ ಪಡೆದು, ಅಗ್ನಿಪ್ರವೇಶ ಮಾಡಿ, ಮುಕ್ತಿ ಪಡೆಯುತ್ತಾಳೆ. ಆದರೆ ಕುವೆಂಪು ವರ್ಣಿಸಿದ ಶಬರಿಯು ನಮಗೆ ಬೇರೆಯಾಗಿ ಕಾಣುತ್ತಾಳೆ. ಶಬರಿ ದೇಹತ್ಯಾಗ ಮಾಡಿದ ವಿಷಯ ಮೂಲ ವಸ್ತುವಾಗಿದ್ದರೂ, ಅವಳು ದೇಹತ್ಯಾಗ ಮಾಡಿದ ವಿವರವನ್ನು ಈ ಇಬ್ಬರು ಸಾಹಿತಿಗಳು ಭಿನ್ನವಾಗಿ ಚಿತ್ರಿಸಿದ್ದಾರೆ. ಪು.ತಿ.ನ.ರವರು ವರ್ಣಿಸಿದ ಶಬರಿಯ ಮುಖ್ಯ ಗುರಿ (ಇದು ವಾಲ್ಮೀಕಿಯ ಗುರಿಯೂ ಇರಬಹುದು) ತನ್ನ ಗುರುವನ್ನು ಕೂಡುವುದು. ಹಾಗಾಗಿ, ಅವಳು ಇಹಲೋಕದ ವ್ಯವಹಾರಗಳಲ್ಲಿ ಹೆಚ್ಚು ಆಸಕ್ತಳಾಗಿರುವುದಿಲ್ಲ. ಅವಳಿಗೆ, ರಾಮಸೇವೆಗಿಂತಲೂ, ಗುರುವಾಕ್ಯ ಪರಿಪಾಲಿಸುವುದು ಮುಖ್ಯವಿರಬಹುದೇ ಎಂಬ ಅನುಮಾನವೂ ಬರುವುದು. ಆದರೆ, ಕುವೆಂಪುರವರು, ಅವಳನ್ನು ಭಕ್ತೆಯಾಗಿ ಚಿತ್ರಿಸುವುದರ ಜೊತೆಗೆ ತಾಯಿಯಾಗಿ, ಮಮತೆಯ ಪ್ರತೀಕವೆಂಬಂತೆ ಚಿತ್ರಿಸಿದ್ದಾರೆ. ನನಗಂತೂ, ಕುವೆಂಪುರವರು, ಅವಳ 'ಗುರುಭಕ್ತಿ'ಯ ಜೊತೆಯಲ್ಲೇ, ಮಮತೆಗೇ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟಿದ್ದಾರೆಂಬ ಭಾವನೆಯಿದೆ. ಅಲ್ಲದೆ, ಶ್ರೀ ರಾಮನನ್ನೂ ಅವರು, ನಮ್ಮೆಲ್ಲರಂತೆ, 'ನರ'ನನ್ನಾಗಿ ಮಾಡಿ, ಚಿತ್ರಿಸಿದ್ದಾರೆ. ವಾಲ್ಮೀಕಿ ರಾಮಾಯಣದಲ್ಲಾದರೋ, (ಪು.ತಿ.ನ.ರವರ 'ಶಬರಿ'ಯಲ್ಲೂ ಕೂಡ) ರಾಮನು ಒಬ್ಬ ರಾಜ, ಒಬ್ಬ ದೇವಪುರುಷ. ನಮ್ಮಂತವರ ಮಟ್ಟಕ್ಕಿಂತ ಎತ್ತರವಾಗಿದ್ದು, ಅದೇ ರೀತಿಯಲ್ಲಿ ಶಬರಿಯೊಡನೆ ವರ್ತಿಸುತ್ತಾನೆ. ಹಾಗೆ ಹೇಳಹೋದಲ್ಲಿ, ಪುರಾಣದಲ್ಲಿನ ವ್ಯಕ್ತಿತ್ವಗಳನ್ನು ಬೇರೆ ಬೇರೆ ಸಾಹಿತಿಗಳು ಭಿನ್ನ ರೀತಿಯಲ್ಲಿ ಕಾಣುವುದೇನೂ ಹೊಸತಲ್ಲ! ರಾಮಾಯಣವನ್ನೇ ಹಲವರು ಬೇರೆ ಬೇರೆ ದೃಷ್ಟಿಕೋನದಿಂದ ವರ್ಣಿಸಿದ್ದಾರೆ. ಅದಕ್ಕೆಂದೇ, ಕುವೆಂಪುರವರು, 'ಪಿಂತೆ ವಾಲ್ಮೀಕಿಯುಲಿದ ಕಥೆಯಾದೊಡಂ, ಕನ್ನಡದಿ ಬೇರೆ ಕಥೆಯೆಂಬಂತೆ....' ಎಂದು ಹೇಳಿಕೊಂಡಿರುವುದು! ಕುವೆಂಪುರವರ ಈ ಶೈಲಿಯನ್ನು ಪೂಜ್ಯ ವೆಂಕಣ್ಣಯ್ಯನವರು ಮೊದಲೇ ಗುರುತಿಸಿದ್ದರು. 'ಬಿರುಗಾಳಿ' ಎಂಬ ನಾಟಕ ಗ್ರಂಥಕ್ಕೆ ಮುನ್ನುಡಿಯನ್ನು ಬರೆಯುತ್ತ 'ಮೂಲಗ್ರಂಥವನ್ನು ಓದಿ, ಅದನ್ನು ಓದಿದ್ದರಿಂದ, ತಮ್ಮ ಮನಸ್ಸಿನಲ್ಲಿ ಉಂಟಾದ ಮುಖ್ಯಮುಖ್ಯವಾದ ಚಿತ್ರಗಳನ್ನು, ಭಾಗಗಳನ್ನು ಆಧಾರವಾಗಿಟ್ಟುಕೊಂಡು ಒಂದು ಹೊಸ ನಾಟಕವನ್ನು ನಿರ್ಮಿಸಿರುತ್ತಾರೆ' ಎಂದಿದ್ದಾರೆ. 'ಶ್ರೀ ರಾಮಾಯಣ ದರ್ಶನಂ'ದಲ್ಲಿ ಇದು ಸ್ಪಷ್ಟವಾಗಿ ಕಾಣಿಸುತ್ತಿದೆ.

ಪ್ರಸ್ತುತ ಈ ಲೇಖನದಲ್ಲಿ, ಅಲ್ಲಲ್ಲಿ ಸಂದರ್ಭ ಬಂದಾಗಲೆಲ್ಲ, ಮುಖ್ಯವಾಗಿ, ಪು.ತಿ.ನ. ಮತ್ತು ಕುವೆಂಪು ಚಿತ್ರಿಸಿದ ಶಬರಿಯ ಪಾತ್ರವನ್ನು ನನ್ನ ದೃಷ್ಟಿಯಲ್ಲಿ ನೋಡಿದಾಗ, ನನ್ನಲ್ಲಿ ಹೊಳೆಯುವ ಕೆಲವು ಅನಿಸಿಕೆಗಳನ್ನು ವಿವರಿಸುವುದಕ್ಕೆ ಪ್ರಯತ್ನಿಸುತ್ತಿದ್ದೇನೆ. ಅಲ್ಲದೆ, ನಾನು ಹಿಂದೆ ಓದಿದ ಟೆನಿಸನ್ ಮಹಾಕವಿಯ 'Passing of Arthur' ಎಂಬ ಕವನದಲ್ಲಿ ಬರುವ ಕೆಲವು ಸಂದರ್ಭಗಳಿಗೂ, ಕುವೆಂಪುರವರ 'ಶಬರಿಗಾದನು ಅತಿಥಿ ದಾಶರಥಿ'ಯಲ್ಲಿ ವಿವರಿಸಿದ ಸನ್ನಿವೇಶಗಳಿಗೂ ಹೋಲಿಕೆಗಳು ಕಂಡುಬಂದುದರಿಂದ, ಆ ಬಗ್ಗೆ ನನ್ನ ಅನಿಸಿಕೆಗಳನ್ನು ವ್ಯಕ್ತಪಡಿಸಲೂ ಯತ್ನಿಸಿದ್ದೇನೆ. ಈ ಮಧ್ಯೆ, ಮೇಲೆ ತಿಳಿಸಿದ ದಿಗ್ಗಜರಿಗೆ ಗೌರವ ಸಲ್ಲಿಸುತ್ತಲೇ, ನನ್ನ ಒಂದು ಕವನದ ತುಣುಕಿನ ಪ್ರಸ್ತಾಪವನ್ನೂ ಮಾಡಿರುತ್ತೇನೆ. ಅವೆಲ್ಲವೂ, ಇಲ್ಲಿ ಸೂಕ್ತವೆಂಬುದು ನನ್ನ ನಂಬಿಕೆ.

ನಮ್ಮ ಆದಿಕಾವ್ಯವಾದ ವಾಲ್ಮೀಕಿ ರಾಮಾಯಣದಲ್ಲಿ, ಶ್ರೀ ರಾಮನ ದರ್ಶನ ಪಡೆದು ಹಲವು ಭಕ್ತರು ಮುಕ್ತರಾಗುತ್ತಾರೆ ಎಂಬುದನ್ನು ಓದಿರುತ್ತೇವೆ. ಸೀತಾಪಹರಣದ ಪರಿಣಾಮವಾಗಿ, ಅವಳನ್ನು ಹುಡುಕುತ್ತ ಶ್ರೀರಾಮನು ಊರು-ಕಾಡೆಂದು ಅಲೆದು ಬರುತ್ತ ದಾರಿಯುದ್ದಕ್ಕೂ ಅನೇಕ ಸಾಧ್ವಿಯರನ್ನು ಪಾವನಗೊಳಿಸುತ್ತಾನೆ. ಗಂಡನ ಶಾಪಕ್ಕೆ ಬಲಿಯಾಗಿ ಬಂಡೆಯಾಗಿದ್ದ ಅಹಲ್ಯೆ, ಮತಂಗ ಮುನಿಗಳ ಆದೇಶದಿಂದಾಗಿ ಕಾದು ಕುಳಿತಿದ್ದ ಶಬರಿ, ಇಂಥ ಸಾಧ್ವಿಯರಲ್ಲಿ ಕೆಲವರು. ಬಹುಕಾಲ ನಿರೀಕ್ಷೆಯ 'ನೋಂಪಿ'ಯಿಂದ ಕೃಶಳಾದ, ಇಳಿವಯಸ್ಸಿನಲ್ಲೂ ಸಾಕಷ್ಟು ಸಂತೃಪ್ತ ಜೀವನ ನಡೆಸುತ್ತಿರುವ ಶಬರಿಯು, ಶ್ರೀರಾಮನಿಗೆ ಆತಿಥ್ಯ ನೀಡುವ ಅತ್ಯಾಸೆ ಇಟ್ಟುಕೊಂಡಿರುವಳು. ಶಬರಿ ಜಾತಿಯಲ್ಲಿ ಬೇಡಿತಿ; ಆದರೆ, ಶ್ರದ್ಧೆಯಲ್ಲೂ, ನಡತೆಯಲ್ಲೂ ಅನನ್ಯ ಯೋಗಿನಿ. ಮತಂಗ ಮುನಿವರ್ಯರು ಅವಳನ್ನು ಶ್ರೀರಾಮನ ನಿರೀಕ್ಷೆಯಲ್ಲಿರಲು ಹೇಳಿ, ಅವನನ್ನು ಉಪಚರಿಸಿ 'ಮುಕ್ತಿ' ಪಡೆಯುವಂತಹ ವರ ನೀಡಿದ್ದರು. ಅದರಂತೆ, ಶಬರಜ್ಜಿ ಕಾದು ಕಾದು ಸೋತಿದ್ದಳು. ಆದರೂ, ಮುಕ್ತಿ ಪಡೆಯುವವರೆಗೂ ಸಾವನ್ನೂ ಧಿಕ್ಕರಿಸಿ, ಜೀವ ಹಿಡಿದು ರಾಮನ ಬರವನ್ನೇ ನೋಡುತ್ತಿದ್ದಳು. ಕುವೆಂಪುರವರು ಈ ಶಬರಜ್ಜಿಯ ಕಥೆಯನ್ನು ಬಲು ಸ್ವಾರಸ್ಯವಾಗಿ, ವಿಶಿಷ್ಟ ರೀತಿಯಲ್ಲಿ ಬರೆದಿದ್ದಾರೆ, 'ಶ್ರೀ ರಾಮಾಯಣ ದರ್ಶನಂ'ದಲ್ಲಿ. ಮೂಲ ರಾಮಾಯಣದಲ್ಲಿ ವಾಲ್ಮೀಕಿ ಕೆಲವೇ ಶ್ಲೋಕಗಳಲ್ಲಿ ಶಬರಿಯ ಕಥೆಯನ್ನು ಮುಗಿಸಿದ್ದಾರೆ. ಆದರೆ ಕುವೆಂಪುರವರು, ಶಬರಿಗೊಂದು ವಿಶಿಷ್ಟ ಸ್ಥಾನವನ್ನು ಕೊಟ್ಟು, ಅವಳ ಕಥೆಯನ್ನು ಹೃದಯಸ್ಪರ್ಶಿಯಾಗಿ ವಿವರಿಸಿದ್ದಾರೆ. ಶಬರಿಯ ಕಥೆಯನ್ನು ನಿವೇದಿಸುವ ಭಾಗದ ಶೀರ್ಷಿಕೆಯೂ ಬಹಳ ಆಕರ್ಷಕವಾಗಿದೆ - 'ಶಬರಿಗಾದನು ಅತಿಥಿ ದಾಶರಥಿ'. ಇಲ್ಲಿ ಹೆಣೆದಿರುವ ಶಬ್ದ ಜೋಡಣೆ, ಕುವೆಂಪುರವರ ಬರಹದ ಶೈಲಿ, ಭಾಷಾಪ್ರಭುತ್ವವನ್ನು ವ್ಯಕ್ತಪಡಿಸುತ್ತದೆ.

### ಶಬರಿಯ ವರ್ಣನೆ

ಶಬರಿಯ ಕಥೆ ಎಲ್ಲರಿಗೂ ತಿಳಿದುದೇ! ಮಡದಿ, ಸೀತೆಯನ್ನು ರಾವಣನು ಅಪಹರಿಸಿಕೊಂಡು ಹೋದ ಪರಿಣಾಮವಾಗಿ ದುಃಖದಲ್ಲಿ ಮುಳುಗಿದ ಶ್ರೀರಾಮನು, ಅವಳ ಅನ್ವೇಷಣೆಗಾಗಿ ದಕ್ಷಿಣದ ಕಡೆ ಸುತ್ತಿ-ಸುತ್ತಿ ಬರುತ್ತ ಪಂಪಾ ತೀರದ ಕಡೆಗೆ ಬರುತ್ತಾನೆ. ಅಲ್ಲಿ ಶಬರಿಯೂ ಅವನ ಆಗಮನವನ್ನೇ ಬಯಸುತ್ತ ಕಾಯುತ್ತಿದ್ದಳು. ಬಹು ಕಾಲ ಶ್ರೀರಾಮನ ನಿರೀಕ್ಷೆಯಲ್ಲಿರುವ ಅವಳಿಗೆ ಸದಾ ಅವನದೇ ಕನಸು; ಅವನದೇ ಕನವರಿಕೆ! ಅದನ್ನು ವರ್ಣಿಸುತ್ತ ಕವಿ ಈ ರೀತಿ ಹೇಳುತ್ತಾರೆ:

ಆ ಬೆಳ್ದಿಂಗಳಿರುಳಿನೊಳ್
ಮುಪ್ಪು ಜೌವನಗನಸು ಕಾಣ್ಬೊಂದು ಮಾಳ್ಕೆಯಿಂ
ಮುದುಕೆ ಕಂಡಳ್ ಕನಸನಾ ಶಬರಿ. ನಡುರಾತ್ರಿ
ಮುಗುಳುನಗುತೆದ್ದು ಕುಳಿತಳ್ ತನ್ನ ಮಲಗಿದ್ದ
ಪುಲ್ಲಾಸಗೆಯ ಮೇಲೆ. ಗಗನ ನೀಲಾಭನಂ
ಮರಳಿ ಚಿತ್ರಿಸಿಕೊಂಡಳಾ ಸ್ವಪ್ನದರ್ಶನದ
ಶ್ರೀಮೂರ್ತಿಯಂ........................

ಇಲ್ಲಿ ಬೆಳದಿಂಗಳ ರಾತ್ರಿ ವಿಶೇಷ ಕಲ್ಪನೆಯನ್ನು ನಮ್ಮಲ್ಲಿ ಮೂಡಿಸುತ್ತದೆ. ಆಶ್ರಮವಾಸಿಯೂ, ಯೋಗಿನಿಯೂ ಆದ ಅವಳ ಸರಳ ಮತ್ತು ಸಂಯಮದಿಂದ ಕೂಡಿದ ಜೀವನವು 'ಪುಲ್ಲಾಸಿಗೆ' ಎಂಬಲ್ಲಿ ಸ್ಪಷ್ಟವಾಗುತ್ತದೆ.

ಆ ಮುದುಕಿಯನ್ನು ವಿವರಿಸುವಾಗ ಕುವೆಂಪುರವರು ಅವಳ ನಿಲುವನ್ನೇ ನಮ್ಮ ಮುಂದೆ ನಿಲ್ಲಿಸುತ್ತಾರೆ.

ಹರಿಸವುಕ್ಕುವ ಮೊಗಕೆ ಸುಕ್ಕು ತೆರೆತೆರೆಯಾಗೆ
ಪುಂಡಿನಾರಿನತೆರನ ಬೆಳ್ನರೆ ನವಿರ್ದಲೆಯ,
ಬಚ್ಚು ಪಲ್ಲಿಲಿವಾಯ, ಕುಡುಬೆನ್ನ ಹಣ್ಮುದುಕಿ
ಶಬರಜ್ಜಿ ನಡುಗಿ ನಡೆದಳ್;.................

ಸುಕ್ಕುಗಟ್ಟಿದ ಆ ಮುದುಕಿಯ ಮುಖಕ್ಕೆ ಸುಕ್ಕುಗಳೇ ತೆರೆಯಾಗಿ ಮೂಡಿ ಬಂದು, ಹರ್ಷದಲೆಗಳಾಗಿ ಮಾರ್ಪಟ್ಟಿವೆ. ಹಲ್ಲಿಲ್ಲದ ಬಚ್ಚು ಬಾಯಿಯಿಂದ ಅರಳುವ ನಗು ಅವಳ ಮುಖದ ಮೇಲೆ ಎಲ್ಲಿಲ್ಲದ ಹರ್ಷವನ್ನು ಹರಡುತ್ತಿದೆ. ಆ 'ಹರಿಸವುಕ್ಕುವ' ನಗು ಸುಕ್ಕುಗಟ್ಟಿದ ಮೊಗದಿಂದ ಅಲೆಯಲೆಯಾಗಿ ಹರಿದುಬಂದು, ಓದುಗರ ಹೃದಯವನ್ನು ಮೃದುವಾಗಿ ಸ್ಪರ್ಶಿಸಿದಲ್ಲಿ ಆಶ್ಚರ್ಯವಿಲ್ಲ! ವಯಸ್ಸಾಗಿದ್ದರಿಂದ ಬೆನ್ನು ಗೂನಾಗಿದೆ. ಆದರೂ ನಡುಗಿ ನಡೆಯುತ್ತಲೇ ಕ್ಷಣ-ಕ್ಷಣಕ್ಕೂ ರಾಮನ ಆಗಮನವನ್ನೇ ನಿರೀಕ್ಷಿಸುತಿದ್ದಾಳೆ. ಅಂದು ಚಂದ್ರಕಾಂತಿ ಎಲ್ಲೆಲ್ಲೂ ಹರಡಿದೆ. ಶಬರಜ್ಜಿ ಮಾತ್ರ ಕಾತರದಿಂದ ಚಡಪಡಿಸುತ್ತಿದ್ದಾಳೆ:

ಗುಡಿಯ ಬಾಗಿಲಂ
ತೆರೆದು ನೋಡಿದಳು: ಆ ಚಂದ್ರಸುಂದರ ರಾತ್ರಿ
ಮುದುಕಿಯಂ ಕಂಡು ಕನಿಕರದಿಂದೆ ಕರಗಿತೆನೆ
ತಿಂಗಳ್ ಬೆಳಕು ಚೆಲ್ಲಿ, ಶಬರಿಯ ಕುಟೀರಮಂ
ಸುತ್ತಲೆತ್ತೆತ್ತಲುಂ ಹಸರಿ ಹಬ್ಬಿದ ಹಸಲೆ
ರಾಜಿಸಿತು...............................

ಚಂದ್ರನೂ ಆ ಮುದುಕಿಯ ಕಾತರತೆಗೆ ಕನಿಕರಪಡುತ್ತಲೇ ಸುತ್ತೆಲ್ಲ ತನ್ನ ಪ್ರಕಾಶವನ್ನು ಹರಡಿ, ಅವಳ ಕುಟೀರವನ್ನೂ ಬೆಳಗುತ್ತಾನೆ; ಜೊತೆಯಲ್ಲಿ ಅವಳ ಮುಗ್ಧ ಮನಸ್ಸನ್ನೂ, ಶ್ರೀ ರಾಮ ದರ್ಶನಕ್ಕಾಗಿ ಹಾತೊರೆಯುತ್ತಿರುವ ಅವಳ ಆಸೆಯನ್ನೂ, ಬೆಳಗುತ್ತಾನೆ.

## ಶಬರಿಯ ಶ್ರೀ ರಾಮನಿರೀಕ್ಷಣೆ ಮತ್ತು ಕಳವಳ

ಬಹು ಕಾಲ ರಾಮನ ನಿರೀಕ್ಷೆಯಲ್ಲಿದ್ದು, ಅವನಿನ್ನೂ ಬಾರದಿದ್ದುದು ಅವಳ ಕಾತರತೆಗೆ ಕಾರಣವಾಗುತ್ತದೆ. ಅವಳು:

ತೃಷಿತ ದೃಷ್ಟಿಯನಟ್ಟಿ, ನಿಸ್ಸೀಮ
ಘಾಸ ಸೀಮಾರ್ಣವದ ವಿಸ್ತೀರ್ಣದೊಳ್ ಮನಂ
ಲಯಮಾಗೆ ನೋಡಿ, ನಿಡುಸುಯ್ದು, ತನ್ನೊಳಗೆ ತಾಂ
ಶಬರಿ : ''ನೀನೆಂದಿಗೆ ಬರುವೆವಯ್ಯ, ಓ ನನ್ನಯ್ಯ,
ಕಂದಯ್ಯ, ರಾಮಚಂದ್ರಯ್ಯ?........

ಕ್ಷಣ-ಕ್ಷಣಕ್ಕೂ ಹೊರಗೆ ಬಂದು, ತನ್ನ ಗುಡಿಸಲ ಮುಂದೆ ಹರಡಿರುವ ಹಸಿರು ಹುಲ್ಲುಗಾವಲನ್ನು ಪದೇ-ಪದೇ ದಿಟ್ಟಿಸಿ ನೋಡುತ್ತಾಳೆ; ಮತ್ತೆ ನಿಟ್ಟುಸಿರು ಬಿಡುತ್ತಾಳೆ, ಅಲ್ಲಿ ರಾಮನನ್ನು ಕಾಣದೆ. ಶಬರಿಗೆ ಶ್ರೀರಾಮನು ಬರಿಯ ರಾಮಚಂದ್ರಯ್ಯನೊಂದೆ ಅಲ್ಲ; 'ಅಯ್ಯ' ಅಂದರೆ ಒಡೆಯ, ದೇವರೂ ಹೌದು; ಕಂದಯ್ಯನೂ ಹೌದು. ಅವಳು ಆ ರೀತಿ ರಾಮನನ್ನು ಸಂಬೋಧಿಸಿದ್ದುದು ಅವಳ ಪ್ರೀತಿ, ಗೌರವಗಳನ್ನು ವ್ಯಕ್ತಪಡಿಸುತ್ತದೆ. ಇದು ಅವಳ ರಾಮಭಕ್ತಿಯ ಹಲವು ಮುಖಗಳನ್ನು ತೋರಿಸುತ್ತದೆ. ಈ ಸಂದರ್ಭದಲ್ಲಿ ಭಕ್ತೆ ಮೀರಾಳು ಕೃಷ್ಣನನ್ನು 'ಪ್ರಿಯ'ನನ್ನಾಗಿ ಪೂಜಿಸುವುದನ್ನು ನೆನೆಸಿಕೊಳ್ಳಬಹುದು. ಭಕ್ತರು ವ್ಯಕ್ತಪಡಿಸುವ ಭಕ್ತಿ ಬೇರೆ ಬೇರೆ ರೂಪಗಳನ್ನು ತಾಳಬಹುದು. ತನಗಿಂತಲೂ ಎತ್ತರ ಮಟ್ಟದಲ್ಲಿ ಅವನನ್ನು ಕಂಡು, ಸಂಪೂರ್ಣ ಶರಣಾಗತನಾ(ಳಾ)ಗಿ ಬೇಡಬಹುದು. ಸರಿಸಮಾನತೆಯಿಂದ ಅವನನ್ನು ಕಂಡು, ಗೆಳೆತನದಲ್ಲಿ ಅವನನ್ನು ಸಂಬೋಧಿಸುತ್ತ, ಅವನನ್ನು ನಿಂದೆ ಮಾಡಲೂಬಹುದು. ಮೀರಳಂತೆ ದೇವರಲ್ಲಿ ಅನುರಾಗವನ್ನು ವ್ಯಕ್ತಪಡಿಸುತ್ತ ಸ್ತುತಿಸಬಹುದು. ದಾಸಕೀರ್ತನೆಯಲ್ಲೂ ಇಂತಹ ಉದಾಹರಣೆಗಳನ್ನು ಗಮನಿಸಬಹುದು. 'ನೀನ್ಯಾಕೊ ನಿನ್ನ ಹಂಗ್ಯಾಕೊ ರಂಗ....', 'ಇನ್ನೂ ದಯೆಬಾರದೆ ದಾಸನ ಮೇಲೆ....',

'ಕರುಣಾಕರ ನಿನ್ನನೆಂಬುವದ್ಯಾತಕೊ, ಭರವಸೆ ಇಲ್ಲೆನಗೆ....', ಇತ್ಯಾದಿ, ಇತ್ಯಾದಿ. ಇಲ್ಲಿ, ಶಬರಜ್ಜಿ ರಾಮನನ್ನು ಹಲವು ದೃಷ್ಟಿಯಿಂದ ನೋಡುವುದನ್ನು ಗಮನಿಸಬಹುದೇನೊ!

ಪು.ತಿ.ನ. ಅವರು ವರ್ಣಿಸಿದ ಶಬರಿ, ಶ್ರೀ ರಾಮನನ್ನು ನಿರೀಕ್ಷಿಸುವ ವರ್ಣನೆ ಹೀಗಿದೆ:

ನಿಂತಲ್ಲಿಯೆ ನಾ ನಿಂತಿರುವೆ
ರಾಮ ನೀನೆಂದೈತರುವೆ
.....................
ನನ್ನ ಮನದಿ ಸಂತರಿಟ್ಟ ಕನಸೇ
ನನ್ನ ನೇಹವುಂಡು ಬೆಳೆದ ಬೆಳಸೇ
ಏಸು ದಿನಂಗಳ ದೂರವಿರುವುದೋ
ನಿನ್ನ ಕಾಣೆ-ಎನ್ನಾಸೆ ಕಾಣದೋ

ಇಲ್ಲಿ, ಮತಂಗ ಮುನಿವರ್ಯರು ಕೊಟ್ಟ ಆದೇಶವೇ ಶಬರಿಗೆ ಕನಸಾಗಿದೆ. ಅದು ನೆನಸಾಗುವುದನ್ನೇ ಎಣಿಸುತ್ತ ಅವಳು ಕಾತರಿಸುತ್ತಿದ್ದಾಳೆ.

ಕುವೆಂಪುರವರ ಮಹಾಕಾವ್ಯದಲ್ಲಿ ಶಬರಜ್ಜಿಯು, 'ನೀನೆಂದಿಗೆ ಬರುವೆಯಯ್ಯ, ಓ ನನ್ನಯ್ಯ, ಕಂದಯ್ಯ, ರಾಮಚಂದ್ರಯ್ಯ....-' ಎನ್ನುತ್ತ

'ನನ್ನ ಓ ಇಷ್ಟಮೂರ್ತಿ, ನೀಂ ಬರ್ಪ ಮುನ್ನಮೆಯೆ
ಕಾಯವಳಿವಳ್ಕಿಂದೆ, ಹಣ್ಣು ಹಣ್ಣಾದ ಈ
ಮುಪ್ಪಿನೊಡಲಿನ್ನೆನಿತು ತಾಳುವುದೊ? ಬಾಳುವುದೊ?
ಬಾಳ್ದೊಡೇನೀ ಒಡಲ್? ಕಣ್ಣಾಗಳೆಯೆ ಮಬ್ಬಾಗಿ,
ಮಂಜಾಗಿ, ಹಿಂಜರಿಯುತಿದೆ ದಿಟ್ಟಿ! ಕಣ್ಣಳಿದ
ಮೇಲೆ ನೀ ಬಂದರಯ್ಯಯ್ಯೊ, ಕಣ್ಣಾರ್ವಿನಂ
ನಿನ್ನನೆಂತಯ್ ನೋಳ್ಪೆ?.....................'

ತನ್ನ ಕಳವಳವನ್ನು ತೋಡಿಕೊಳ್ಳುತ್ತಾಳೆ.

'ಬಾರ ಓ ಕಂದಯ್ಯ,
ಕಣ್ಕೆಡುವ ಮೊದಲೆ; ಬಾರಯ್ಯ, ಈ ಬಾಳ್ಕೆಡುವ
ಮುನ್ನಮೆನ್ನೆರ್ದೆಗೆ ತಾರಯ್ಯ, ನಿನ್ನಾ ಶಾಂತಿಯಂ'

ಎಂದು ಮನಸ್ಸಿನಲ್ಲೆ ಬಹು ಕಾಲದಿಂದ ಕಾದು ಬಯಸಿದ, ಶ್ರೀರಾಮ ದರ್ಶನದ ಫಲವಾಗಿ ದೊರೆಯುವಂತಹ ಶಾಂತಿಗಾಗಿ ಪ್ರಾರ್ಥನೆ ಮಾಡುತ್ತಿರುತ್ತಾಳೆ, ಆ ಶಬರಜ್ಜಿ. ಅವಳ ಆ ಕಾತರತೆಯನ್ನು ಕುವೆಂಪುರವರು ಮುಂದುವರಿಸುತ್ತ

ಮುದುಕಿಗೇಂ ಕಳವಳಂ? ಏಕೆ ತಲ್ಲಣಮೇಕೆ
ಉಲ್ಲಸಂ? ಒಳವೋಗುವಳೆಲೆವನೆಗೆ. ಒಯ್ಯನೆಯೆ

ಹೊರಚಿಮ್ಮಿ ನಿಂತು ನೋಡುವಳೆನಿತೊ ಕಾಲಮಾ
ಬುವಿಯ ಬಯ್ತಲೆಯಂತೆ ಬಯಲ ನಡು ನಿಡುಪರಿದು
ಸಮೆದ ಕಾಲ್ದಾರಿ ಕೀಳ್ವಟ್ಟೆಯಂ. ತನ್ನೊಳಗೆ
ಗೊಣಗುವಳ್, ಗುಣಿಸುವಳ್, ಮತ್ತೆ ಮತ್ತೊಳವೊಕ್ಕು
ತೆಂಗಿನ ಗರಿಯ ಪೊರಕೆಯಂ ತಂದು, ಮನೆ ಮುಂದೆ
ಗೋಮಯಂ ಬಳಿದ ಜಗುಲಿಯ ತರಗು ಸದೆ ಗುಡಿಸಿ
ಸೊಂಟಗೈಯಾಗಿ ನಿಲ್ವಳ್.....................

ಒಂದು ಕಡೆ, ತಲ್ಲಣ; ಆದರೆ, ಮರುಕ್ಷಣವೇ ಶ್ರೀ ರಾಮನನ್ನು ನೋಡುವೆನೆಂಬ ಕಾತರ ಕೂಡಿದ ಉಲ್ಲಾಸ! ಹೀಗಿದೆ ಅವಳ ಮನಸ್ಥಿತಿ. ಇಲ್ಲಿ ಓದುಗರೂ ಅವಳ ತವಕದಲ್ಲಿ ಭಾಗಿಗಳಾಗುವಂತೆ ಮಾಡುತ್ತಾರೆ ಕುವೆಂಪು. ಕಾತರತೆ ಜಾಸ್ತಿಯಾದಂತೆ ಒಳಗೂ ಹೊರಗೂ, ಹಿಂದಕ್ಕೂ ಮುಂದಕ್ಕೂ ತಿರುಗುತ್ತಿರುವುದೂ, ಮಾಡಿದ ಕೆಲಸವನ್ನೇ ಮರಳಿ ಮರಳಿ ಮಾಡುತ್ತಿರುವುದೂ ಸಾಮಾನ್ಯವಲ್ಲವೇ? ಯಾರನ್ನಾದರೂ ನಿರೀಕ್ಷಿಸುತ್ತಿದ್ದರೆ ಅವರು ಬರುವ ದಾರಿಯನ್ನೇ ದಿಟ್ಟಿಸಿ ನೋಡುವುದೂ ಸ್ವಾಭಾವಿಕ. ಇವೆಲ್ಲವೂ ಸಾಮಾನ್ಯವಾಗಿ ಎಲ್ಲರ ದಿನ ನಿತ್ಯ ಜೀವನದಲ್ಲಿ ಸಂಭವಿಸುವ ಸಂದರ್ಭಗಳೇ! ಅಂತೆಯೇ, ಶಬರಜ್ಜಿ ಒಳಗೂ ಹೊರಗೂ ತಿರುಗುತ್ತ ದೂರದಲ್ಲಿ, ನಡೆದು ನಡೆದು ಸವೆದು ಸೃಷ್ಟಿಯಾದ ಹುಲ್ಲುಗಾವಲಿನ ಮಧ್ಯದ ಕಿರುದಾರಿಯನ್ನು ಮತ್ತೆ ಮತ್ತೆ ನೋಡುತ್ತಿದ್ದಾಳೆ. ಇಲ್ಲಿ ಆ ಕಿರು ಕಾಲುದಾರಿಯನ್ನು ಹೆಂಗಸರ ಬಯ್ತಲೆಗೆ ಹೋಲಿಸಿದ ಉಪಮಾನ ಸರಳತೆಯ ಸೌಂದರ್ಯದಿಂದ ಕೂಡಿದೆ. ಸೊಂಟಕ್ಕೆ ಕೈಕೊಟ್ಟು ನಿಲ್ಲುವ ಶಬರಜ್ಜಿಯ ಒಣ ಕಾಯದ ನಿಲುವನ್ನು ವರ್ಣಿಸಿದಾಗಲಂತೂ, ನಮ್ಮೆಲ್ಲರ ಅಜ್ಜಿಯರನ್ನು ಜ್ಞಾಪಿಸುತ್ತಿದ್ದಾರೆ ಕುವೆಂಪು.

ಮತ್ತೆ ನಿಡುನಟ್ಟು
ನಿಟ್ಟಿಪಳ್ ದೂರ ವನ ಸೀಮಾನ್ತ ಸೀಮಂತ
ರೇಖೆಯೆನಲೊಪ್ಪುವಾ ಬಟ್ಟ ಬಯಲ್ವಟ್ಟೆಯಂ

ಈ ವರ್ಣನೆ ಓದುಗರ ಮನಸ್ಸನ್ನು ಆಕರ್ಷಿಸುವುದರಲ್ಲಿ ಸಂಶಯವಿಲ್ಲ! 'ವನ ಸೀಮಾನ್ತ ಸೀಮಂತ ರೇಖೆ' - ಎಂತಹ ಶಬ್ದ ಜೋಡಣೆ! ನಮ್ಮ ಊಹೆಯನ್ನೂ ಪರಿಣಾಮಕಾರಿಯಾಗಿ ಕೆರಳಿಸುವಂತಹ ವರ್ಣನೆ! ಹೆಂಗಸರ ಬಯ್ತಲೆಯ ರೇಖೆ (ಸೀಮಂತ) ಯಂತೆ ಆ ಬಯಲುದಾರಿ (ಬಯಲ್ವಟ್ಟೆ), ವನ ಸೀಮೆಯ ಅಂತ್ಯದವರೆಗೂ (ವನ ಸೀಮಾನ್ತ) ಹರಡಿದ್ದು, ಎಲ್ಲೊ ಅನಂತದಲ್ಲಿ ಮಾಯವಾಗುವುದೆಂದೇ? ಅಂದರೆ, ಶಬರಿಯ ಮನಸ್ಸಿನ ದೃಷ್ಟಿಯೂ ಅನಂತದವರೆಗೂ ಹರಡಿದೆ ಎಂಬಂತಿದೆ. ಶಬರಿಯ ದೃಷ್ಟಿ ಮಂದವಾಗಿರಬಹುದು; ಆದರೆ, ಅವಳ ಒಳಗಿನ ದೃಷ್ಟಿ ಎಲ್ಲ ಎಲ್ಲೆಯನ್ನೂ ಮೀರಿದಂತಿದೆ.

ಇದನ್ನು ಓದಿದಾಗ, ನಾನು ಹಿಂದೆ ಹವ್ಯಾಸಕ್ಕೆಂದು ಬರೆದ ಕವನದ ತುಣುಕೊಂದು ನೆನಪಿಗೆ ಬರುತ್ತಿದೆ. ದೂರದಲ್ಲೊಂದು ಹಾಯಿ ದೋಣಿ ಸಾಗುತ್ತ, ಸಾಗುತ್ತ

....................ದೃಷ್ಟಿಗೆ
ಕ್ಷಣ-ಕ್ಷಣಕು ಕ್ಷೀಣವಾಗುತಿದೆ
ಕಡೆಗೊಮ್ಮೆ
ಅದು ಕಡಲ ತಳವ ಕೂಡಿತೊ
ಬಾನಿನಂತರವ ಸೇರಿತೋ

ಅಥವಾ

ಸಾಗರ ಬಾನುಗಳ
ಮಿಲನದಂಚಿನ ಗೆರೆಯಲಿ
ಐಕ್ಯವಾಯ್ತೋ, ನಾ ಕಾಣೆ.........

ಕಡಲು-ಬಾನು, ಇವೆರಡೂ ಸೇರುವುದು ಒಂದು ಕಾಲ್ಪನಿಕ ರೇಖೆಯಾಗಿ. ಆ ಹಾಯಿ ದೋಣಿ ಆ ರೇಖೆಯಲ್ಲಿ ಐಕ್ಯವಾಯ್ತು, ಅನಂತದಲ್ಲಿ ಸೇರಿತು ಎಂಬರ್ಥ. ಆ ದೋಣಿಯನ್ನು ಬಾಳಿಗೆ ಹೋಲಿಸಿದಾಗ, ಆತ್ಮವೂ ಅನಂತವನ್ನು ಸೇರುವುದು ಎಂಬರ್ಥ ಬರುವುದಲ್ಲವೇ? ಸಾಗರ ಮತ್ತು ಬಾನುಗಳೆರಡೂ ನಮ್ಮ ಊಹೆಗೂ ಮೀರಿದವು; ಅನಂತವಾದವು! ಇಲ್ಲಿ, ಈ ಅನಂತಗಳ 'ಲೀನತೆ' ನಡೆದಿದೆ! ಇದು, ಉಪನಿಷತ್ತಿನ 'ಪೂರ್ಣಮಿದಂ ಪೂರ್ಣಮದಃ....' ಎಂಬ ಪ್ರಾರ್ಥನೆಯ ನೆನಪನ್ನು ತರುತ್ತಿದೆ. ಬೇಂದ್ರೆಯವರ 'ತುಂಬಿ' ಎಂಬ ಕವನದಲ್ಲಿ ಇಂತಹದೇ ಅರ್ಥ ಬರುವ,

ಈ ಇದೂ ತುಂಬಿ ಆ ಅದೂ ತುಂಬಿ ಯಾವುದೂ ತುಂಬಿ ಇರದೇ
ತುಂಬಿ ಕಳೆದರೂ ತುಂಬಿ ಉಳಿದರೂ ತುಂಬಿ ತುಂಬಿ ಬರದೇ....

ಎಂಬ ಸಾಲಿನ ಜ್ಞಾಪಕವೂ ನನಗೆ ಬರುತ್ತಿದೆ ಇಲ್ಲಿ.

### ಟೆನಿಸನ್‌ನ 'Passing of Arthur'ನೊಡನೆ ಹೋಲಿಕೆ

ನನಗೆ ಮೇಲಿನ ಕವನವನ್ನು ಬರೆಯಲು ಟೆನಿಸನ್ ಬರೆದ 'Passing of Arthur' ಎಂಬ ಕಾವ್ಯವು ಪ್ರೇರಣೆ ಕೊಟ್ಟಿದ್ದು. ಇಲ್ಲಿ ಟೆನಿಸನ್ ವಿವರಿಸಿದ ಸನ್ನಿವೇಶವನ್ನು ಸ್ವಲ್ಪ ವಿವರಿಸಿದರೆ ಹೆಚ್ಚಾಗಲಾರದೆಂದು ಭಾವಿಸುತ್ತೇನೆ.

King Arthur, ತನ್ನ Round Table ನ್ನು ಬರ್ಕಾಸ್ತು ಮಾಡಿ, ತನ್ನ ಬಳಿಯಲ್ಲಿರುವ, ರತ್ನ ಖಚಿತ ಖಡ್ಗ, Eccalibreನ್ನು ಕಡಲಿಗೆ ಎಸೆದು ಬರಲು, ಆತ್ಮೀಯ ಗೆಳೆಯನೂ, ನಂಬಿಗಸ್ಥ ಸೇವಕನೂ ಆದ, Bedivereನ ಸಹಾಯ ಕೋರುತ್ತಾನೆ. ಅವನನ್ನು ಹೊತ್ತು ಹೋಗುತ್ತಿರುವಾಗ, King Arthur ಚಡಪಡಿಸುತ್ತ, ಬೆಡಿವರನ ಕಿವಿಯಲ್ಲಿ ಗೊಣಗುತ್ತಿರುವ

So sighed the King
Muttering and murmuring in his ears, 'Quick, Quick!
I fear it is too late, and I shall die'

ಎಂಬ ಸಾಲುಗಳನ್ನು ಶಬರಜ್ಜಿಯ ಚಡಪಡಿಕೆ ಮತ್ತು ಗೊಣಗುವಿಕೆಯೊಡನೆ ಹೋಲಿಸಬಹುದು. ಇಬ್ಬರೂ 'ಮೋಕ್ಷ'ದ ದಾರಿಯಲ್ಲಿದ್ದಾರೆ. ಸಮಯ ಜಾರುತ್ತಿದೆಯೆಂದು ಇಬ್ಬರಿಗೂ ಕಾತರ. ಇರಲಿ. ಅಲ್ಲಿ ಬೆಡಿವರನು, King Arthurನ ಕ್ಷೀಣ ದೇಹವನ್ನು, ಅವನ ಆಜ್ಞಾಪನೆಯಂತೆ, ಕಡಲ ಅಪ್ಸರೆಯರು ತಂದಿದ್ದ ಒಂದು 'ತೆಪ್ಪೆ ದೋಣಿ' (barge) ಮೇಲಿಡುತ್ತಾನೆ. ಅವನನ್ನೇ ನಿರೀಕ್ಷಿಸುತ್ತ ಆ ದೋಣಿಯಲ್ಲಿ ಕುಳಿತಿದ್ದ ಅಪ್ಸರೆಯರು ಅವನನ್ನು ಕೊಂಡುಯ್ಯುತ್ತಾರೆ. ತನ್ನ ನೆಚ್ಚಿನ 'ಒಡೆಯ'ನನ್ನು ಹೊತ್ತ ಆ ದೋಣಿ, ದೂರ ದೂರ ಸರಿಯುತ್ತ ಕಣ್ಮರೆಯಾಗುತ್ತಿರುವದನ್ನು ಟೆನಿಸನ್ ಈ ರೀತಿ ವರ್ಣಿಸುತ್ತಾನೆ:

Long stood Sir Bedivere
Revolving many memories, till the hull
Looked one black dot against the verge of dawn
And on the mere the wailing died away

ಇದು 'ಸಾಗರ ಬಾನುಗಳ ಮಿಲನದಂಚಿನ ಗೆರೆಯಲಿ ಐಕ್ಯವಾಯ್ತೋ' ಎಂಬುದನ್ನು ನೆನಪಿಗೆ ತರುತ್ತದೆ. ಮುಂದುವರಿಯುತ್ತ ಟೆನಿಸನ್ ಹೇಳುತ್ತಾನೆ:

Thereat once more he moved about, and clomb

Even to the highest he could climb and saw,
straining his eyes beneath the arch of his hand
Or thought he saw, the speck that bear the King
Down that long water opening on the deep
Somewhere far off, pass on and on and go
From less to less and vanish into the light
And the new sun rose bringing the new year

ಇಲ್ಲಿ, ಟೆನಿಸನ್ ಎಂತಹ ದುಃಖದ ಸನ್ನಿವೇಶದಲ್ಲೂ ಭವಿಷ್ಯವನ್ನು ಆಶಾದಾಯಕವಾಗಿ ಕಾಣುವ ('And the new sun rose bringing the new year') ನಿಲುವು! ಬೆಡಿವರ ಕಷ್ಟಪಟ್ಟು, ತನ್ನ 'ಒಡೆಯ'ನನ್ನು ಕೊನೆಯವರೆಗೂ ನೋಡುವ ಪ್ರಯತ್ನ ಶಬರಜ್ಜಿ ಶ್ರೀರಾಮನನ್ನು ನಿರೀಕ್ಷಿಸುತ್ತ, ಕೈಯನ್ನು ಸೊಂಟದ ಮೇಲಿಟ್ಟು, ಹಣೆಯ ಮೇಲೆ ಕೈಯಿಟ್ಟು ನೋಡುತ್ತಿರುವ 'ವನ ಸೀಮಾನ್ತ ಸೀಮಂತ ರೇಖೆ' ಎಂಬ ಕುವೆಂಪುರವರ ವರ್ಣನೆಯನ್ನು ನೆನಪಿಗೆ ತರುವುದು. ಆದರೆ, ಇವೆರಡರಲ್ಲಿ ವ್ಯತ್ಯಾಸವೆಂದರೆ, ಬೆಡಿವರ, ತೆಪ್ಪೆ ದೋಣಿ ದೂರ ಸರಿಯುತ್ತಿರುವುದನ್ನು ಪ್ರಯತ್ನಪಟ್ಟು ನೋಡುತ್ತಿದ್ದರೆ, ಶಬರಿ ರಾಮನ ಬರವನ್ನು ನಿರೀಕ್ಷಿಸುತ್ತ ಕಷ್ಟಪಟ್ಟು ನೋಡುತ್ತಿದ್ದಾಳೆ. ಇಷ್ಟೆಲ್ಲ ಯಾಕೆ ಹೇಳಿದೆನೆಂದರೆ, Tennysonನ

............. pass on and on and go
From less to less and vanish into light

ಎಂಬಲ್ಲೂ, ಕುವೆಂಪುರವರ

'ವನ ಸೀಮಾನ್ತ ಸೀಮಂತ ರೇಖೆಯನೊಪ್ಪುವಾ ಬಟ್ಟ ಬಯಲ್ವಟ್ಟೆ'

ಎಂಬಲ್ಲಿಗೂ ಒಂದು ರೀತಿಯ ಸಮಾನಾಂತರ ಕಾಣುವುದೆಂಬುದನ್ನು ವಿವರಿಸಲು. ಭಾವನೆಗಳು ಹೇಗೆ ಭಾಷೆಯ ಎಲ್ಲೆಯನ್ನೂ ಮೀರುವುದೆಂಬುದಕ್ಕೆ ಇದೊಂದು ನಿದರ್ಶನ!

ಶಬರಿಯ ಭ್ರಾಂತಿ

ಈಗ ಶಬರಜ್ಜಿಯ ಕಥೆಗೆ ಮರಳಿ ಬರೋಣ. ಶ್ರೀರಾಮನ ನಿರೀಕ್ಷೆಯಲ್ಲಿದ್ದು ಶಬರಿಯು ಮತ್ತೆ ಮತ್ತೆ ಗುಡಿಸಲ ಒಳಗೂ ಹೊರಗೂ ತಿರುಗುತ್ತ, ಹೊರಗೆ ಬಂದು ನೋಡಿದಾಗ ಆಕೆಗೆ

ಪುಲ್ಗಾವಲಿನ ನಡುವೆ ಮುದುಕಿಯ ಕಣ್ಣಿಗಾರೋ
ಬರ್ಪವೊಲ್ ಭ್ರಾಂತಿ........

ಯಾರೋ ಬಂದ ಹಾಗೆ ಇದೆ; ಆದರೆ ಅದು ತನ್ನ ಭ್ರಾಂತಿಯೇ ಎಂಬ ಶಂಕೆ ಆ ಮುದುಕಿಗೆ. ಇಲ್ಲಿ, Tennyson ಹೇಳಿದ 'Or thought he saw----' ಎಂಬ ಮಾತಿನ ಜೊತೆಗೆ, ಈ ಭ್ರಾಂತಿಯನ್ನು ಹೋಲಿಸಬಹುದು. ಇದು ಭ್ರಾಂತಿಯೇ ಅಥವಾ ನಿಜವೇ ಎಂಬುದನ್ನು ನಿಷ್ಕರ್ಷಿಸಲು

ನಿಂತಳ್ ಶಬರಿ ಡೊಂಕಾಗಿ!
ಕಟಿಗೊಂದು ಕೈಯಾಗೆ, ಪಣೆಗೊಂದು ಕೈಯೆತ್ತಿ,
..................................................
ನೋಡಿದಳ್.... ನೋಡಿದಳ್.... ಕಣ್ಮೊಳೆಯ ಕೀಲ್ಮಾಡಿ

ಅವಳು ನಿಂತ ಭಂಗಿ – ಗೂನು ಬೆನ್ನಿನಿಂದ ದೇಹ ಡೊಂಕಾಗಿ, ಸೊಂಟಕ್ಕೊಂದು ಕೈಗೊಟ್ಟು ಹಣೆಯ ಮೇಲೆ ಕೈ ಎತ್ತಿ ಕಷ್ಟಪಟ್ಟು ನೋಡುತ್ತಿರುವ ಆ ನಿಲುವು – ಶಬರಜ್ಜಿಯನ್ನೇ ನಮ್ಮ ಕಣ್ಮುಂದೆ ನಿಲ್ಲಿಸುತ್ತದೆ. 'ನೋಡಿದಳ್.... ನೋಡಿದಳ್.... ಕಣ್ಮೊಳೆಯ ಕೀಲ್ಮಾಡಿ' ಎಂಬ ಸಾಲು, ಮುದುಕಿಯ ದೃಷ್ಟಿದೋಷವನ್ನು ಪರಿಣಾಮಕಾರಿಯಾಗಿ ವರ್ಣಿಸುತ್ತದೆ. ಅಲ್ಲದೆ ಇದು, Tennysonನ '....starining his eyes beneath the arch of his hand....' ಎಂಬ ಮಾತನ್ನೂ ಜ್ಞಾಪಕಕ್ಕೆ ತರುವುದಲ್ಲವೇ? ಇದನ್ನು ವಿ.ಸೀ.ಯವರ ಕವನದ

ದೂರಕ್ಕೆ ನೋಳ್ಪೆನೆಂದು
ಮರವೇರಿ ದಿಟ್ಟಿಸುವಳು
ಗಿರಿ ಮೇಲಕೈದು ಕೈಯ
ಮರೆ ಮಾಡಿ ನೋಡುತಿಹಳು

ಎಂಬ ಸಾಲುಗಳಿಗೂ ಹೋಲಿಸಬಹುದು.

## 'ದರಿದ್ರನಾರಾಯಣ' ದರ್ಶನ?

ದೂರದಲ್ಲಿ ಬರುತ್ತಿರುವ ರಾಮ-ಲಕ್ಷ್ಮಣರನ್ನು ಗುರುತಿಸಲಾರದೇ ಹೋದಳು ಆ ಮುದುಕಿ! ಪಾಪ! ಹಣ್ಣು ಮುದುಕಿಯ ದೃಷ್ಟಿ ಮಂಜಾಗಿದೆಯಲ್ಲವೇ? ತನ್ನ ಕುಟೀರದ ಕಡೆಗೆ ಬರುವ ಅವರನ್ನು ಯಾರೋ ಬೇಡರೆಂದೇ ತಿಳಿದಳು ಅವಳು. ಕವಿಯು ಈ ಸಂದರ್ಭದಲ್ಲಿ

'ಭಗವದಾಗಮನಮೇಂ
ಭಕ್ತನ ನಿರೀಕ್ಷಿಸಿದ ರೂಪದಿಂ ಬಂದಪುದೇ?'

ಎಂದು ಕೇಳುತ್ತಾರೆ. ಶಬರಿ ನಿರೀಕ್ಷಿಸಿದ ರಾಮನ ರೂಪದ ಕಲ್ಪನೆಯೇ ಬೇರೆ. ಇಲ್ಲಿ ಅವಳಿಗೆ ಕಾಣಿಸುತ್ತಿರುವ ರೂಪವೇ ಬೇರೆ! ಅಲ್ಲದೆ, ಅವಳು ಸೀತಾ ಸಮೇತ ರಾಮನನ್ನು ನಿರೀಕ್ಷಿಸುತ್ತಿದ್ದಳು. ಆದರೆ, ಅಲ್ಲಿ ಅವಳು ಸೀತೆಯನ್ನು ಕಾಣುತ್ತಿಲ್ಲ; ಬದಲು, ಇಬ್ಬರು ಬೇಡರು ಮಾತ್ರ ಬರುತ್ತಿದ್ದಾರೆ. ಲಕ್ಷ್ಮಣನೊಡನೆ ಬರುತ್ತಿರುವ ಶ್ರೀರಾಮನ ಆ ಆಗಮನವನ್ನು ವಿವರಿಸುತ್ತಿರುವ ಕವಿಯ ವ್ಯಾಖ್ಯಾನ ನೋಡಿ:

'ಸುಖದವೋಲಾಶಿಸಲ್ ದುಃಖದೊಲ್ ಮೈದೋರಿ,
ಭಕ್ತನನಿತಂ ಸುಲಿದು ನೈವೇದ್ಯಮಂ ಕೊಳದೆ
ಪೇಳ್ ಅಹಂಕಾರಮಂ ದಿವ್ಯಶೂನ್ಯತೆಗೆದ್ದುವೊರ್
ಸಂಪೂರ್ಣತಾ ಸಿದ್ಧಿಯೋಲ್!........'

ಭಕ್ತರು ನಿರೀಕ್ಷಿಸಿದ ರೂಪದಲ್ಲಿಯೇ ಭಗವಂತನ ದರ್ಶನವಾಗಬೇಕೆಂದೇನಿಲ್ಲ! ನಾವು ಶ್ರೀಮನ್ನಾರಾಯಣನನ್ನು ನಿರೀಕ್ಷಿಸಿದಾಗ, ದೇವನು 'ದರಿದ್ರನಾರಾಯಣ'ನಾಗಿ ಬಂದು, ಭಕ್ತಾದಿಗಳನ್ನು ನಾನಾರೀತಿಯಿಂದ ಸುಲಿದು, ಅವರ ಸರ್ವಸ್ವವನ್ನೂ, ಅಹಂಕಾರವನ್ನೂ ನೈವೇದ್ಯವಾಗಿ ಸ್ವೀಕರಿಸಿಯೇ ಆತ ತೃಪ್ತನಾಗುತ್ತಾನೆ.

'ಭಗವದಾಗಮನಮೇಂ....' ಎಂಬಲ್ಲಿಂದ ಪ್ರಾರಂಭವಾದ ಮುಂದಿನ ಆರು ಸಾಲುಗಳ ಬಗ್ಗೆ ಕುವೆಂಪುರವರ ಪಟ್ಟದ ಶಿಷ್ಯರಾದ ಶ್ರೀ ಪ್ರಭುಶಂಕರ ಅವರು ಒಂದು ಕುತೂಹಲಕರ ವಿಷಯವನ್ನು ಹೇಳುತ್ತಾರೆ, ಅವರ 'ಶ್ರೀ ಸಾಮಾನ್ಯರ ಶ್ರೀ ರಾಮಾಯಣ ದರ್ಶನಂ' ಎಂಬ ಗ್ರಂಥದಲ್ಲಿ. 'ಶ್ರೀ ರಾಮಾಯಣ ದರ್ಶನಂ' ಕಾವ್ಯದ ಮೊದಲ ಆವೃತ್ತಿ (೧೯೪೯)ಯಲ್ಲಿ ಈ ಆರು ಸಾಲುಗಳು ಇದ್ದಿರಲಿಲ್ಲವಂತೆ! ಅವನ್ನು ಮುಂದಿನ ಆವೃತ್ತಿಯಲ್ಲಿ ಸೇರಿಸಿದ್ದಂತೆ! ಭಗವಂತನೇ ಬಂದಾಗ, ಶಬರಜ್ಜಿ ಅವನನ್ನು ಗುರುತಿಸಲಾಗದೇ ಹೋದುದಕ್ಕೆ ಈ ಸಾಲುಗಳು ಪರಿಣಾಮಕಾರಿಯಾದ ವಿವರಣೆಯನ್ನು ಒದಗಿಸುತ್ತವೆ. ಕುವೆಂಪುರವರೇ ಹೇಳಿದ್ದರಂತೆ: 'ಪ್ರಭುಶಂಕರ್, ಮೊದಲ ಆವೃತ್ತಿ ಪ್ರಕಟವಾದಾಗ ನೀವು ''ರಾಮ ಹೀಗೆ ಶಬರಿಯ ಮುಂದೆ ಅವಳು ತನ್ನನ್ನು ಗುರುತಿಸಲಾರದ ರೀತಿಯಲ್ಲಿ ಏಕೆ ಕಾಣಿಸಿಕೊಂಡ?' ಎಂದು ಕೇಳಿದಿರಿ. ನಿಮಗೂ, ಮುಂದೆ, ಸಹಜವಾಗಿ ಇಂಥ ಪ್ರಶ್ನೆ ಕೇಳುವವರಿಗೂ ಉತ್ತರವಾಗಿ, ಸ್ಪಷ್ಟೀಕರಣಕ್ಕೆಂದು ಈ ಪಂಕ್ತಿಗಳನ್ನು ಸೇರಿಸಿದ್ದೇನೆ', ಎಂದು.

ಇಲ್ಲಿ ಶ್ರೀರಾಮನು 'ದುಃಖದೊಲ್ ಮೈದೋರು'ತ್ತಾನೆ, ಶಬರಜ್ಜಿಯ ನಿರೀಕ್ಷೆಗೆ ಬದಲಾಗಿ. ಹಾಗೆ ಬಂದ ರಾಮ-ಲಕ್ಷ್ಮಣರನ್ನು ಕಂಡು ಆ ಬೇಡತಿಗೆ, 'ಕೋಗಿಲೆಯ ಮರಿಯೆಂದು ತುಡುಕಿದರೆ ಕಾಗೆಮರಿ ಕೂಗಿದವೋಲಾಯ್ತೆಂದು', ಅವಳ 'ಬಗೆಯುಲ್ಲಸಂ ಕುಗ್ಗಿ' ಹೋಗುತ್ತದೆ. ಹೊಲಸು ಬಟ್ಟೆ, ಕೆದರಿದ ಕೂದಲು, ನಾರುತ್ತಿರುವ ಮೈಯ ಬೇಡರ ರೂಪದ ಲಕ್ಷ್ಮಣನು ಶಬರಜ್ಜಿಯನ್ನು ಬೇಡುತ್ತಾನೆ:

'ದಣಿದು ಬಂದಿಹೆವಜ್ಜಿ;
ಬಿಸಿಲಳುರುತಿದೆ; ಗುಡಿಸಲೊಳಗಿನಿತು ತಾವಿತ್ತು
ತಿನಲಿತ್ತು ಕರುಣಿಸೈ ನಿನ್ನ ಈ ಪರದೇಶಿ
ಕಂದರಂ ಚಿರಋಣಿಗಳಂ!'

ಆದರೆ, ಪು.ತಿ.ನ. ಅವರ ಕಾವ್ಯದಲ್ಲಿ, ಶ್ರೀ ರಾಮನೇ ಶಬರಿಯನ್ನು, 'ತಾಯಿ, ದಾರಿಗರಿಗೆ ಬೀಡಿಲ್ಲಿ ದೊರೆವುದೇ?' ಎಂದು ಕೇಳುತ್ತಾನೆ. ತಕ್ಷಣವೇ ಶಬರಿ ರಾಮನನ್ನು ಗುರುತಿಸಿ, 'ನೀ ರಾಮನೇ, ಮಹಾಪುರುಷ!' ಎಂದು ಕೇಳುತ್ತಾಳೆ. ಇದು ಕುವೆಂಪುರವರು ವಿವರಿಸಿದ ಸಂದರ್ಭಕ್ಕಿಂತ ಬದಲಾಗಿದೆ. ಅವರು ವರ್ಣಿಸಿದ ಶಬರಜ್ಜಿ, ರಾಮನನ್ನು ಗುರುತಿಸಲಾರದೇ ಹೋಗುತ್ತಾಳೆ. ಕೊಂಚ ನಿರಾಶೆಯಾದರೂ, ಆ ಮುದುಕಿ 'ಬಂದತಿಥಿ ಮಕ್ಕಳಂ' ಆದರದಿಂದ ಬರಮಾಡಿಕೊಳ್ಳುತ್ತಾಳೆ. ಲಕ್ಷ್ಮಣ 'ಮೀಹಕೇಂ ಕೊಳಮಿಹುದೆ ಇಲ್ಲಿಯಾದೊಡಂ ತಾಯಿ?' ಎಂದು ಕೇಳಿದಾಗ, ಮುದುಕಿ 'ಬೇಡರಿಗ್ಯಾಕೊ ಮಜ್ಜನಂ' ಎಂದು ಆಶ್ಚರ್ಯ ಪಡುತ್ತಾ ಅವರಿಗೆ ಪೇರಳೆ ಮರದಡಿಯಲ್ಲಿರುವ ಕೊಳವೊಂದನ್ನು ತೋರಿಸುತ್ತಾಳೆ.

## ಆರ ಸಂಪದಮಾರ್ಗೋ

ಆದರೆ, ಶಬರಜ್ಜಿಗೆ ಬಂದ ಅತಿಥಿಗಳು ಒಮ್ಮೆ ಬೇಡರೆಂಬ ಎಣಿಕೆ ಬಂದರೂ, ಮತ್ತೊಮ್ಮೆ ಬೇಡರಲ್ಲದಿರಬಹುದೆಂಬ ಸಂಶಯವೂ ಬರುತ್ತದೆ. ಮಿಂದು ಬಂದ ಆ 'ಬೇಡ'ರ ಮುಖದಲ್ಲಿ ಹೊಳೆಯುತ್ತಿರುವ ತೇಜಸ್ಸು ಅವಳನ್ನು ಆಶ್ಚರ್ಯಪಡಿಸುತ್ತದೆ. ಆದರೆ, ಬೇಡರೆಂದೆಣಿಸಲು, 'ಸೀತೆಯನುಳಿದು ಬಂದೀತನಂ ರಾಮನಲ್ಲೆಂದು' ಎಂಬುದು ಕಾರಣವಾಗುತ್ತದೆ. ಆದರೂ, ಮಿಂದು ಬಂದ ಅತಿಥಿಗಳಿಗೆ ಅವಳು ಊಟೋಪಚಾರಗಳನ್ನು ಮಾಡುತ್ತಾಳೆ. ಅದನ್ನು ಬಹಳ ವಿಸ್ತಾರವಾಗಿ ನಿರೂಪಿಸಿದ್ದಾರೆ ಕುವೆಂಪು, ಇಲ್ಲಿ:

ನಳನಳಿಪ ಸುಳಿದಳಿರ ಕುಡಿವಾಳೆಯಂ ಪಾಸಿ;
ಗೀಕುಚಾಪೆಯ ಮಣೆಗಳಂ ಕುಳಿತುಕೊಳಲಿಕ್ಕಿ;
ಪಸರ್ದೊನ್ನೆಗಳಲಿ ತಿಳಿನೀರ್ಗಳಂ, ಸಸಿಯಡಕೆ
ಹೊಂಬಾಳೆಗಳಲಿ ಕೆನೆವಾಳ್ಗಳಂ ಜೇನುತುಪ್ಪಮಂ

ತಂದಿಟ್ಟು: ನೂಲೆಗೆಣಸಂ, ಬಾಳೆವಣ್ಗಳಂ,
ಕಂದಮೂಲಂಗಳಂ, ಹಣ್ಣುಹಂಪಲ್ಗಳಂ,
ಸೌತೆ ಪಚ್ಚಡಿಗಳಂ, ಮಣೆಹೆಂಬೆಯಂ, ಮತ್ತೆ
ಹಚ್ಚನಕ್ಕಿಯ ಬೆಚ್ಚನನ್ನಮಂ ಮೊಸರುಮಂ
ಬೆಲ್ಲಮಂ ಬೆಣ್ಣೆಯಂ ಬಡಿಸಿ, ಸವಿನುಡಿ ನುಡಿಸಿ,
ಮುಗುಳುನಗುತೆ.....................

ನಾವು ಹಿಂದೆ ಕೇಳಿದ್ದೆವು, ಶಬರಿ ಶ್ರೀರಾಮನಿಗೆ ಹಣ್ಣುಗಳನ್ನು ಕೊಟ್ಟು ಉಪಚರಿಸಿದ್ದಳೆಂದು. ಅದೂ, ಪ್ರತಿ ಹಣ್ಣನ್ನೂ ತಾನು ತಿಂದು, ಕಳಿತ ಹಣ್ಣುಗಳನ್ನು ಮಾತ್ರ ಅವನಿಗೆ ನೀಡುತ್ತಿದ್ದಳು. ಹೀಗೆ ರಾಮನಿಗೆ ಅವನ ಭಕ್ತೆ ಶಬರಿಯ ಎಂಜಲೂ ಅಪ್ಯಾಯಮಾನವಾಗಿತ್ತು. ಆದರೆ, ಕುವೆಂಪು ನಿರೂಪಿಸುವ ಆಹಾರಗಳೆಲ್ಲವೂ ಕಾಡಿನಲ್ಲೇ ಸಿಗುವಂತಹುದಾದರೂ, ಆ ಊಟೋಪಚಾರವು ಬಹಳ ವಿಸ್ತಾರವಾಗಿರುವುದನ್ನು ನಾವು ಗಮನಿಸಬಹುದು. ಸುಳಿಬಾಳೆಯ ಎಲೆ ಹಾಕಿ, 'ಗೀಕು ಚಾಪೆ' ಹಾಸಿ, ಅದರ ಮೇಲೆ ಬಂದ ಅತಿಥಿಗಳನ್ನು ಕೂರಿಸುತ್ತಾಳೆ. ದೊನ್ನೆಯಲ್ಲಿ ನೀರು ಬಡಿಸುತ್ತಾಳೆ. ಶಬರಜ್ಜಿಯ ಈ ಊಟೋಪಚಾರದಲ್ಲಿ, ಕೆನೆ ಹಾಲಿದೆ, ಜೇನು ತುಪ್ಪವಿದೆ, ಬಗೆಬಗೆಯ ಹಣ್ಣು ಗಡ್ಡೆ-ಗೆಣಸುಗಳಿವೆ, ಸೌತೆ ಕಾಯಿ ಪಚ್ಚಡಿ ಇದೆ, ಮೇಲಾಗಿ, ಹೊಸ ಅಕ್ಕಿಯ ಬಿಸಿ ಬಿಸಿ ಅನ್ನವಿದೆ. ಅದಕ್ಕೆ, ಮೊಸರು, ಜೊತೆಗೆ ಬೆಣ್ಣೆ, ಬೆಲ್ಲವೂ ಇದೆ. ಇವೆಲ್ಲವೂ ಸಾಲದೆಂಬಂತೆ, ಬಡಿಸುವಾಗ ನಗು-ನಗುತ ಆ ಬಚ್ಚು ಬಾಯಿಂದ ಹೊರಬಂದ ಅವಳ ಸವಿ ನುಡಿಗಳು ಊಟೋಪಚಾರಕ್ಕೆ ಇನ್ನಷ್ಟು ರುಚಿ ಸೇರಿಸುತ್ತದೆ.

ಹೀಗೆ ಉಪಚರಿಸುತ್ತ ಆ ಮುದುಕಿ ಹೇಳುತ್ತಾಳೆ: 'ಆರ ಸಂಪದಮಾರ್ಗೊ' ಎಂದು. ಶ್ರೀರಾಮ-ಸೀತೆಯರಿಗೆಂದು ಕಾದಿರಿಸಿಟ್ಟ ಊಟವನ್ನು ಬಂದ ಬೇಡ-ಅತಿಥಿಗಳಿಗೆ ನೀಡುತ್ತಿರುವೆನೆಂದು ಒಮ್ಮೆ ನಿರಾಶೆ ಪಟ್ಟರೂ, ಆಕೆ, 'ತಣೆಯುಂಡು ತಣೆಯಿರಯ್ ಮಗುಗಳಿರ, ಬಂದತಿಥಿ ಯಾರಾದರೇನಂತೆ?' ಎಂದು ತೃಪ್ತಿ ಪಡುತ್ತಾಳೆ. 'ಆರ ಸಂಪದಮಾರ್ಗೊ' ಎಂದು ಹೇಳಿದ ಮಾತು ರಾಮ-ಲಕ್ಷ್ಮಣರನ್ನು ಅಚ್ಚರಿಗೊಳಿಸುತ್ತದೆ. ಆ ಮಾತಿನ ಅರ್ಥವೇನೆಂದು ಅವಳನ್ನು ಕೇಳಿದಾಗ, ತಾನು ದಶರಥ ಕುಮಾರ, ಲಕ್ಷ್ಮಣಾಗ್ರಜನನನ್ನು ನಿರೀಕ್ಷಿಸುತ್ತಿರುವುದಾಗಿ ಹೇಳುತ್ತಾಳೆ. ಇದು ರಾಮ-ಲಕ್ಷ್ಮಣರನ್ನು ಆಶ್ಚರ್ಯಗೊಳಿಸುತ್ತದೆ. ಮುಂದುವರಿಯುತ್ತ

'ಕಾಯುತಿಹೆನೀರೈದು ವತ್ಸರಗಳಿಂ, ಕಂದರಿರ,
ರಾಮಲಕ್ಷ್ಮಣ ಸೀತೆಯರಿಗಾಗಿ, ನಿಚ್ಚಮುಂ
ನಿಮಗಿಕ್ಕಿದುಣಿಸನಣಿಮಾಡಿ....–'

ಎಂದು ಹೇಳುತ್ತಾಳೆ. ಅಷ್ಟೇ ಅಲ್ಲ,

'ನೀವಾರೊ
ಬಡಗರಂದದಿ ತೋರುತಿರುವಿರಿ, ಕುಮಾರರಿರ;

ಕಂಡಿರೇ, ಕೇಳಿರೇ, ರಾಮನೆಲ್ಲಿದನೆಂದು
ಎಂದಿಗೈತಹನೆಂದು?.....................'

ಎಂದು ಅವರನ್ನೇ ಕೇಳಿದುದು ರಾಮ-ಲಕ್ಷ್ಮಣರನ್ನು ಆಶ್ಚರ್ಯಪಡಿಸುವುದರ ಜೊತೆಗೆ ನಮ್ಮನ್ನೂ ಆಶ್ಚರ್ಯಗೊಳಿಸುತ್ತದೆ. ಮತಂಗ ಮುನಿವರ್ಯರು ಕೊಟ್ಟಿರುವ ಮಾತು ಸುಳ್ಳಾಗದಿರದು ಎಂಬ ಆಶಾವಾದವನ್ನು ತೋಡಿಕೊಳ್ಳುತ್ತ, ಆ ಮುನಿವರ್ಯನ ವಾಣಿಯಂತೆ ತಾನು 'ಶಾಂತಿ ನಿಧಿಯಾತನಂ ಕಾಣ್ಬುದೆ ಪರಮ ಶಾಂತಿ' ಎನ್ನುವ ತನ್ನ ನಿಶ್ಚಲ ನಂಬಿಕೆಯನ್ನು ವ್ಯಕ್ತಪಡಿಸುತ್ತಾಳೆ. ಆದರೆ, ಶಬರಜ್ಜಿ ವರ್ಣಿಸಿದ ಆ ಶಾಂತಿನಿಧಿಯಾತನೇ ಸೀತೆಯನ್ನು ಕಳೆದುಕೊಂಡು ತೀರ ಅಶಾಂತನಾಗಿರುತ್ತಾನೆ. ಶ್ರೀ ರಾಮನು,

'ಮನೆಗೆಟ್ಟು
ಹೇರಡವಿ ಮನೆಯಾದನಂ ಶಾಂತಿನಿಧಿಯೆಂದು
ಬರಿದೆ ಬಣ್ಣಿಪೆಯೇಕೆ, ತಾಯಿ? ಸಾಮಾನ್ಯನಂ
ದೇವಮಾನ್ಯಂಗೆತ್ತುದಜ್ಜಿ, ನಿನ್ನಕ್ಕರೂಹೆ!'

ಎಂದಾಗ, ಶಬರಜ್ಜಿ ಹೇಳುವ ಮಾತೂ, ಅದಕ್ಕೆ ಶ್ರೀರಾಮನ ಪ್ರತಿಕ್ರಿಯೆಯೂ ಬಹಳ ಸ್ವಾರಸ್ಯವಾಗಿದೆ. ಮುದುಕಿ ರಾಮನನ್ನು ಗದರಿಸುತ್ತ, 'ತೆಗೆ ತೆಗೆ! ಮಹಾತ್ಮನಂ ತೆಗಳದಿರ್!' ಎಂದಾಗ, ರಾಮನು ಹೇಳುತ್ತಾನೆ, 'ಬಲ್ಲೆನಾಂ ರಾಮನಂ!' ಎಂದು. ಪಾಪ! ಆ ಮುದುಕಿ ಅವನನ್ನು ಬೇಡನೆಂದೇ ತಿಳಿದು, 'ನೀನರಿಯೆಯಾತನಂ!' ಎಂದು ಅವನನ್ನು ಸುಮ್ಮನಿರಲು ಯತ್ನಿಸುತ್ತಾಳೆ. ಆಗ ರಾಮ, 'ನಾನರಿಯೆನೇಂ? ನನ್ನನಾರಿಯೆನೆಂದಾಡುತಿಹೆ!' ಎಂದು ಹೇಳುವ ಮಾತಲ್ಲಿ ಅವನು ತನ್ನ ಗುರುತನ್ನು ಮುದುಕಿಗೆ ಹೇಳುವ ಪ್ರಯತ್ನ ಮಾಡುತ್ತಿದ್ದನೇ - ಎಂಬ ಅನುಮಾನ ಬರುತ್ತದಲ್ಲವೇ? ಆ ಮಾತು ಆ ಮುದುಕಿಯನ್ನೂ ಆಶ್ಚರ್ಯಗೊಳಿಸಿರಬೇಕು! ಅವಳು 'ಬೆರಗುಹೊಡೆದಂತೆ, ರಾಮನ ಕಣ್ಗೆ ಕಣ್ಣಿಟ್ಟು ನೋಡಿದಳ್'. ಆದರೆ. ಏನನ್ನಿಸಿತೋ! ಅದು ತನ್ನ ಕಲ್ಪನೆಯೆಂದೇ ತಿಳಿದಳೋ ಏನೋ! ಕುತೂಹಲವೆಂಬಂತೆ, ಅವರಿಬ್ಬರೊಳಗಿನ ಸಂಭಾಷಣೆ ಅಲ್ಲಿಗೇ ಮುಗಿದುದು ನಮ್ಮ ಕುತೂಹಲ ಕೆರಳಿಸಿದಂತೆ, ಆ ಮುದುಕಿಯ ಮನಸ್ಸಿನಲ್ಲೂ ಅದೇನೋ ಅನುಮಾನವನ್ನೂ ಹುಟ್ಟಿಸಿರಬೇಕು!

## ಮುದುಕಿ ರಾಮನ ಗುರುತು ಹಿಡಿದಳು

ಊಟವಾದ ಬಳಿಕ, ಶ್ರೀರಾಮನು, ಪ್ರಯಾಣದ ಮತ್ತು ಮಾನಸಿಕ ದಣಿವನ್ನಾರಿಸಿಕೊಳ್ಳಲೆಂದು, ವಿಶ್ರಮಿಸುತ್ತಾನೆ. ನಿದ್ರೆ ಬಂದಾಗ,

'ಸೀತೆ, ಬಾ ಇಲ್ಲಿ; ಬಾ, ಪ್ರಿಯೇ ಜನಕಜಾತೆ'

ಎಂದು ಕನವರಿಸಿದುದನ್ನು ಕೇಳಿ ಒಳಗಿದ್ದ ಶಬರಜ್ಜಿ ಓಡಿಬಂದು, ಕನವರಿಸುತ್ತಿರುವ ಶ್ರೀ

ರಾಮನನ್ನು ನೋಡಿ, ಅವಳು 'ತನ್ನಾ ಸೌಮ್ಯನಂ ಕಂಡರಿತಳಾ ಮಂದಹಸಿತ ಮುಖಕಮಲದೊಳ್'. ಹೀಗೆ ಬೇಡನಾಗಿ ಬಂದ ಆ ಅತಿಥಿಯೇ ಶ್ರೀರಾಮನೆಂದು ಗುರುತಿಸಿ,

ದೊಪ್ಪನೆಯೆ
ಮುದುಕಿ ಬಿಳ್ದಪ್ಪಿದಳ್ ರಾಮನಂ: 'ದಮ್ಮಯ್ಯ,
ಸಾಕಿನ್ನು ಮರೆಮಾಡಬೇಡಯ್ಯ, ಓ ನನ್ನ
ಕಂದಯ್ಯ, ರಾಮಚಂದ್ರಯ್ಯ! ಏನಾಯ್ತಯ್ಯ
ನನ್ನ ಮಗಳಿಗೆ? ಹೇಳು! ಸೀತೆ ಎಲ್ಲಿಹಳೆಲ್ಲಿ
ಕೇಡಾಯಿತೇನಾಯಿತಯ್ಯಯ್ಯೊ, ನನ್ನ ಈ
ಪಾಳ್ಗಣ್ಗಳರಿಯಲಾರದೆ ಹೋದುದಯ್....'

ಎಂದು ರಾಮನಲ್ಲಿ ತನ್ನ ಕಳವಳವನ್ನು ತೋಡಿಕೊಳ್ಳುತ್ತ, ತನ್ನ 'ಮುಪ್ಪು ಬೆಪ್ಪ'ನ್ನು ಒಪ್ಪಿಕೊಳ್ಳುತ್ತಾಳೆ. 'ತಾಯಪ್ಪುಗೆಯ ತೊಟ್ಟಿಲೊಳ್ ಸಿಸುವಾಗುತಾ' ರಾಮನು ಶಬರಿಯ 'ತೋಳ್ಗಳಪ್ಪಿರ್ದ ತಳ್ಕೆಯೊಳ್' ಬಿಕ್ಕಿ ಬಿಕ್ಕಿ ಅಳುತ್ತ ಸೀತೆಯ ಅಪಹರಣದ ಎಲ್ಲ ವಿವರಗಳನ್ನೂ ತಿಳಿಸುತ್ತಾನೆ. ಆಗ ಕವಿ ಹೇಳುವ ಮಾತು ತುಂಬ ಗಮನಾರ್ಹವಾಗಿದೆ: 'ತಾಯ್ಮಡಿಲೊಳಾರಾದೊಡೇಂ ತಾಂ ಬರಿ ಶಿಶುಗಳ್ತೆ!' ತಾಯಂದಿರ ಇದಿರು ನಾವೆಲ್ಲರೂ ಮಕ್ಕಳಲ್ಲವೇ! ಅವಳ 'ಮಾತೃಪ್ರೇಮ'ದ ಮುಂದೆ, 'ದೇವ ಪುರುಷ'ನೆನಿಸಿಕೊಂಡ ಶ್ರೀ ರಾಮನೂ ಈ ಮಾತಿಗೆ ಹೊರತಲ್ಲ! ತಾಯ ಮಡಿಲಲ್ಲಿ ಅತ್ತಾಗಲೇ ಅವನ ದುಃಖ ಸ್ವಲ್ಪ ಶಮನವಾದಂತಿದೆ.

ರಾಮಸೇವಾ ಸಾಧನೆಗೆ ಸವೆಸಿದಳ್ ತನ್ನಾಯುವಂ

ಮನಃಶಾಂತಿ ಕೆಟ್ಟುದರಿಂದಲೂ, ದಣಿವಿನಿಂದಲೂ, ರಾಮನು ಅಸ್ವಸ್ಥತೆಯಿಂದ ಹಾಸಿಗೆ ಹಿಡಿಯುತ್ತಾನೆ. ಆಗ ಶಬರಿ, ತನ್ನುಳಿದ ಕೆಲವೇ ದಿನಗಳ ಆಯುಷ್ಯವನ್ನು, ತಾಯ್ತನದ ಹೊಣೆ ಹೊತ್ತು, ರಾಮನ ಆರೈಕೆಗೆ ಸವೆಸುತ್ತಾಳೆ. ಇಲ್ಲಿ ಅವಳ ಭಕ್ತಿಯ ಇನ್ನೊಂದು ಮುಖದ ಪರಿಚಯವಾಗುತ್ತದೆ.

....................ಕೇಳಾರೈಕೆ
ಮಾಡಿದಳೊ ತನ್ನಿಷ್ಟದೇವತಾ ಮೂರುತಿಗೆ
ಆ ತಪಸ್ವಿನಿ ಶಬರಿ. ಹಗಲೆನ್ನದಿರುಳೆನ್ನದೆಯೆ
ಮೇಣೆಚ್ಚರೆನ್ನದೆ ನಿದ್ದೆಯೆನ್ನದೆ ನಿರಂತರಂ
ರಾಮಸೇವಾ ಸಾಧನೆಗೆ ಸವೆಸಿದಳ್ ಮುದುಕಿ
ತನ್ನಾಯುವಂ....................

ಅಷ್ಟೇ ಅಲ್ಲ,

ಅಂತೆ ಸಂತೈಸುವಳು ಮನೋ
ವ್ಯಥೆಯೆಲ್ಲಮಂ ಧೈರ್ಯವಾಕ್ಯಂಗಳಿಂ....

ರಾಮನ ಕದಡಿದ ಮನಸ್ಸಿಗೆ ಶಾಂತಿ ಕೊಡುವಂತಹ ಮಾತುಗಳಿಂದ ಅವನನ್ನು ಸಂತೈಸುತ್ತಲೇ, ತನ್ನ ಬಾಳಿನ ಕತೆಯನ್ನೂ 'ಕೇಳ್ವಗೆ ಕುತೂಹಲಂ ಖೇದವನಳಿಸುವಂತೆ' ಹೇಳುತ್ತಾಳೆ. ಆದರೂ, ರಾಮನ 'ರುಜೆ' ಕಮ್ಮಿಯಾಗದೇ ಲಕ್ಷ್ಮಣನು ತುಂಬ ಶೋಕ ಪಡುತ್ತಿರುವುದನ್ನು ನೋಡಿ ಶಬರಜ್ಜಿ :

'ನಿನ್ನಣ್ಣನುಸಿರಿಗಾಂ ಹೊಣೆಗಾರ್ತಿ,
ನನ್ನ ಗುರುಕೃಪೆಯಿಂದೆ ರಾಮನ ರುಜೆಯನೆಲ್ಲಮಂ
ಹೀರಿ ಬಿಸುಡುವೆ, ನೋಡು ಬಾ!........'

ಎಂದು, ಲಕ್ಷ್ಮಣನಿಗೆ ಆಶ್ವಾಸನೆ ಕೊಡುತ್ತಾಳೆ. ಇಲ್ಲಿ 'ಹೊಣೆಗಾರ್ತಿ' ಎಂಬ ಪದ ತುಂಬ ಅರ್ಥಪೂರ್ಣವಾಗಿದೆ. ಶ್ರೀ ರಾಮನ ಆರೋಗ್ಯ ಕಾಪಾಡುವ 'ಹೊಣೆ' ಹೊತ್ತು ಶಬರಜ್ಜಿ ಲಕ್ಷ್ಮಣನಿಗೆ ಭರವಸೆ ನೀಡುತ್ತಾಳೆ. ಈ ಭರವಸೆಯ ಹಿಂದೆ ತನ್ನ 'ನೋಂಪಿ'ಯ ಬಲವಿದೆ; ಗುರುಭಕ್ತಿಯ ಶಕ್ತಿ ಮತ್ತು ತನ್ನ ಅನನ್ಯ ರಾಮ ಭಕ್ತಿಯ ಬೆಂಬಲವಿದೆ ಎಂಬ ಆತ್ಮವಿಶ್ವಾಸವಿದೆ, ಅವಳಿಗೆ. ಅಲ್ಲದೆ, ಆ ಹೊಣೆಯೇ ತನ್ನ 'ಮುಕ್ತಿ'ಗೆ ದಾರಿಯೂ ಹೌದೆಂಬ ನಂಬಿಕೆಯೂ ಅವಳಲ್ಲಿದೆ. ಲಕ್ಷ್ಮಣನಿಗೆ ಆಶ್ವಾಸನೆ ನೀಡಿ,

ಮಂತ್ರಘೋಷಂ ಗೈದು
ಕೈಮುಗಿದಳಡ್ಡಬಿದ್ದಳ್ ರಾಮನಂಘ್ರಿಯಂ ಮುಟ್ಟಿ

ಪರಮ ಭಕ್ತಿಯಿಂದ ಮಲಗಿರುವ ಶ್ರೀ ರಾಮನಿಗೆ ಪ್ರದಕ್ಷಿಣೆ ಬಂದು, ಅವನನ್ನು ಬೆರಗುಗೊಳಿಸುತ್ತಾಳೆ.

## ಹಾಸಿಗೆ ಹಿಡಿದಳು ಶಬರಜ್ಜಿ

'ಮರುದಿನಂ ಬೆಳಗಾಗಲೇನೆಂಬೆ?' ಪವಾಡವೆಂಬಂತೆ, ರಾಮನು ಗುಣಮುಖನಾಗುತ್ತಾನೆ. ಆದರೆ, 'ಹಾಸಗೆ ಹಿಡಿದಳಾ ದಿನವೆ ಶಬರಿಯಂ'. ರಾಮನು ಅವಳನ್ನು ಉಪಚರಿಸಲು ಬಂದಾಗ ಶಬರಜ್ಜಿ ಹೇಳುತ್ತಾಳೆ: 'ಮಗುವೆ, ಮರುಗದಿರೆನಗೆ, ಪಸುರೆಲೆಗೆ ವೇಳ್ಕುಮುಪಚರ್ಯೆ; ಪಣ್ಣೆಲೆಗೇಕೆ?' ಎಂದು. ಹಾಸಿಗೆಯಲ್ಲಿದ್ದೇ, ಶ್ರೀರಾಮನನ್ನು ಬಳಿಗೆ ಕರೆದು, ತಾನು ಕಂಡ ಕನಸೊಂದನ್ನು ವಿವರಿಸುತ್ತಾಳೆ:

'ಕನಸನಾಂ ಕಂಡೆ ಕೇಳ್:
ವಿತ್ತೇಶನವರಜನ ದಶಕಂಠ ರಾವಣನ
ಲಂಕೆಯುದ್ಯಾನದೊಳ್ ಸೀತೆ ಸೊರಗಿರ್ದಳಯ್
ಮರುಗಿರ್ದಳಯ್. ಕಂದ, ನಿನಗಂದು ಪೇಳ್ವೆನಾಂ

ನಿನ್ನಂತೆ ಮನೆಮಡದಿಗೆಟ್ಟು ಕೆಳೆಯರ್ವೆರಸಿ
ಕಾಡುಪಾಲಾದನಂ ಸುಗ್ರೀವನಂ.................'

ಇಲ್ಲಿ 'ಕನಸನಾಂ ಕಂಡೆ....' ಎಂದು ಹೇಳಿದುದು ಗಮನಾರ್ಹವಾಗಿದೆ. ಸೀತೆಯ ನೆಲೆಯನ್ನೂ, ಸುಗ್ರೀವನ ಪಾಡನ್ನೂ ಈ ಮುದುಕಿಯೇ ತಿಳಿಸಿದುದು ವಾಲ್ಮೀಕಿ ರಾಮಾಯಣಕ್ಕೆ ಭಿನ್ನವಾಗಿದೆ. ಶ್ರೀ ರಾಮನನ್ನು ಗುರುತು ಹಿಡಿಯಲಾರದೇ ಹೋದ ಶಬರಿಗೆ, ಸೀತೆ ಮತ್ತು ಸುಗ್ರೀವರ ಸುಳಿವು ಹೇಗೆ ತಿಳಿಯಿತು ಎಂಬ ಅನುಮಾನ ಬಂದಲ್ಲಿ, 'ಕನಸನಾಂ ಕಂಡೆ....' ಎಂದು ಹೇಳಿ ಅದನ್ನು ಕುವೆಂಪುರವರು ಬಗೆಹರಿಸಿದ್ದಾರೆ. ಅವನಂತೆಯೇ, ಹೆಂಡತಿಯನ್ನು ಕಳೆದುಕೊಂಡ ಸುಗ್ರೀವನ ವಿಚಾರವನ್ನು ತಿಳಿಸುವುದರ ಜೊತೆಗೆ, ರಾವಣನು ಸೀತೆಯನ್ನು, ಲಂಕೆಯ ಉದ್ಯಾನವನದಲ್ಲಿ ಸೆರೆಯಲ್ಲಿಟ್ಟಿದ್ದಾನೆಂಬ ಸುಳಿವನ್ನೂ ಈ ಮುದುಕಿ, ರಾಮನಿಗೆ ಕೊಡುತ್ತಾಳೆ. ಸುಗ್ರೀವನಿಗೆ ಸಹಾಯ ಮಾಡಲೆಂದು ಕಿಷ್ಕಿಂಧೆಗೆ ಹೋಗಲೂ ಅವನನ್ನು ಪ್ರೇರೇಪಿಸುತ್ತಾಳೆ. ಕಿಷ್ಕಿಂಧೆಯನ್ನು ತಲುಪುವ ವರ್ಣನೆಯನ್ನು ಬಲು ಸ್ವಾರಸ್ಯವಾಗಿ ವಿವರಿಸುತ್ತಾರೆ, ಕುವೆಂಪುರವರು. ಇದು ವಾಲ್ಮೀಕಿ ರಾಮಾಯಣದಲ್ಲಿ ಕಬಂಧನು ಶ್ರೀ ರಾಮನಿಗೆ ಪಂಪಾ ಸರೋವರ ಮತ್ತು ಮತಂಗವನವನ್ನು ವಿವರಿಸಿದ ವರ್ಣನೆಯ ನೆನಪು ತರುತ್ತದೆ. (ವಾಲ್ಮೀಕಿ ರಾಮಾಯಣದಲ್ಲಿ ವಿವರಿಸಿದ ಶಬರಿಯ ವರ್ಣನೆ ಮತ್ತು ಕಬಂಧನ ವಿವರಗಳನ್ನು ಶ್ರೀ ಎಚ್.ವೈ. ರಾಜಗೋಪಾಲರವರು ಈ ಮುಂದೆ ಕಾಣಿಸಿದ ಲೇಖನದಲ್ಲಿ ವಿಶದಪಡಿಸಿದ್ದಾರೆ.)*

'ಓ ಅಲ್ಲಿ ದಿಙ್ಮೇಖಲಾ ರೇಖೆಗಿದಿರೆದ್ದು ಕಾಣ್
ಭವ್ಯಮಾಗಿಹುದೆಂತು ಋಷ್ಯಮೂಕಂ, ದಿವ್ಯಮಾ
ಪರ್ವತಂ! ತಪ್ಪಲದಕಿರ್ಪುದು ಮತಂಗ ಮುನಿ
ಕಾನನಂ. ರಂಜಿಸುವುದದವಿಯಂಚಿಂದಲ್ಲಿ
ಪಂಪಾ ಸರೋವರಂ. ತುಂಗಭದ್ರೆಯ ಮೇಲೆ
ಬಳಿಯೊಳಿದೆ ಕಿಷ್ಕಿಂಧೆ.........................'

ಇಲ್ಲಿ 'ದಿಙ್ಮೇಖಲಾ ರೇಖೆ' ಎಂಬುದು, ನನ್ನ 'ಸಾಗರ-ಬಾನುಗಳ ಮಿಲನದಂಚಿನ ಗೆರೆ'ಯನ್ನು ಜ್ಞಾಪಿಸುವುದು. ಶಬರಿ ಹೇಳುತ್ತಾಳೆ: 'ಭವ್ಯವಾಗಿ ಮೆರೆಯುವ, ಪರ್ವತದ ಆಚೆಯ ಕಾಡಿನ ಮಧ್ಯೆ ರಂಜಿಸುತ್ತಿರುವ ಪಂಪಾ ಸರೋವರದ ತಡಿಯಲ್ಲಿರುವ ಕಿಷ್ಕಿಂಧೆಯಲ್ಲಿ, ವಾನರ ವಾಲಿಯು, ಸುಗ್ರೀವನ ಹೆಂಡತಿಯನ್ನು ಅಪಹರಿಸಿಟ್ಟಿದ್ದಾನೆ; ಸುಗ್ರೀವನು ನಿನ್ನಂತೆ ದುಃಖಿಯಾಗಿದ್ದಾನೆ. ಹೋಗು, ಅವನಿಗೆ ಸಹಾಯ ಮಾಡು; ''ದುಃಖಿಗೆ ನೆರಂ ದುಃಖಿ''; ಆದುದರಿಂದ, ಹೋಗಿ ಅವನ ಸಖ್ಯ ಬೆಳಸು' ಎಂದು.

---

*ನನ್ನ ಈ ಬರಹದ ಎಲ್ಲಾ ಹಂತಗಳಲ್ಲೂ ಅಮೂಲ್ಯ ಸಲಹೆಗಳನ್ನು ನೀಡಿದ ಶ್ರೀ ಎಚ್.ವೈ. ರಾಜಗೋಪಾಲ್ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ಕಣ್ಮುಚ್ಚಿದಳ್ ಆ ಅಮರ ಸನ್ಮಾನ್ಯೆ

ಹೀಗೆ ರಾಮ-ಲಕ್ಷ್ಮಣರಿಗೆ ಸಲಹೆ ಕೊಡುತ್ತ ಅವರು

ನೋಡುತ್ತೆ
ನೋಡುತ್ತೆ ಕಣ್ಮುಚ್ಚಿದಳ್ ಆ ಅಮರ ಸನ್ಮಾನ್ಯೆ,
ದೇವ ಸೀತಾನಾಥ ದಿವ್ಯಾಶ್ರು ತೀರ್ಥಜಲ
ಸಂಸ್ನಾತೆ, ಸಂಪೂತೆ, ಮೇಣ್ ಶಿವಕಳೇಬರೆ, ಧನ್ಯೆ!

ಹೀಗೆ ಮುಗಿಸುತ್ತಾರೆ ಕುವೆಂಪುರವರು 'ಶ್ರೀ ರಾಮಾಯಣ ದರ್ಶನಂ'ದಲ್ಲಿನ 'ಶಬರಿಗಾದನು ಅತಿಥಿ ದಾಶರಥಿ' ಎಂಬ ಅಧ್ಯಾಯವನ್ನು. ಇಲ್ಲಿ 'ದೇವ ಸೀತಾನಾಥ ದಿವ್ಯಾಶ್ರು ತೀರ್ಥಜಲ ಸಂಸ್ನಾತೆ, ಸಂಪೂತೆ....' ಎನ್ನುವುದು ಒಂದು ವಿಶೇಷ ಅರ್ಥವನ್ನು ಕೊಟ್ಟಿದೆ! ಶ್ರೀರಾಮನ ಕಣ್ಣೀರಿನಲ್ಲಿ ಸ್ನಾನ ಮಾಡಿ, ಶಾಂತಿನಿಧಿ, ತನ್ನ 'ಇಷ್ಟ ಮೂರ್ತಿ'ಯನ್ನು ಕಣ್ತುಂಬ ನೋಡುತ್ತಲೇ ಚಿರಶಾಂತಿಯನ್ನು ಪಡೆಯುತ್ತಾಳೆ, ಆ ಮುದುಕಿ, ಬೇಡಿತಿ, ಮತಂಗ ಮುನಿವರರ ಶಿಷ್ಯೆ, ಶಬರಜ್ಜಿ. ಹೀಗೆ, ಬಹುಕಾಲ 'ನೋಂಪಿ' ನಡೆಸಿದ್ದ ತನ್ನ ಭಕ್ತೆಯನ್ನು ಶ್ರೀರಾಮನು ಪಾವನಗೊಳಿಸುವ ಈ ಶಬರಿಯ ಕಥೆ, ನಾವು ಈ ಹಿಂದೆ ಕೇಳಿದ ಕಥೆಗಿಂತ ಭಿನ್ನವಾಗಿದ್ದೇ, ಓದುಗರ ಮನಸ್ಸನ್ನು ಸೆಳೆಯುತ್ತದೆ. ಶಬರಿಯು ಕೊನೆಯಲ್ಲಿ ಸಾವನ್ನಪ್ಪಿದರೂ, ಕುವೆಂಪುರವರ ಕೈಯಲ್ಲಿ ಅದು 'ಮುಕ್ತಿ'ಯಾಗುತ್ತದೆ. ಈ ದೃಷ್ಟಿಯಿಂದ, ಟೆನಿಸನ್ ತನ್ನ 'Passing of Arthur'ನ್ನು ಆಶಾದಾಯಕವಾಗಿ ಮುಗಿಸಿದಂತೆಯೇ, ತಮ್ಮ ಕಾವ್ಯವನ್ನೂ ಕುವೆಂಪುರವರು 'ದಿವ್ಯತೆ'ಯೊಂದಿಗೆ ಮುಗಿಸುತ್ತಾರೆ. ಆಶಾದಾಯಕವೆಂದು ಬಿಡಿಸಿ ಹೇಳದಿದ್ದರೂ, ಸತ್ಪ್ರತೀಕ್ಷೆಯೇ ಅಡಗಿರುವ ಈ ರೀತಿಯ ಮುಕ್ತಾಯ ನಮ್ಮ ಸಂಸ್ಕೃತಿಯಲ್ಲಡಗಿರುವ ಒಂದು ವಿಶಿಷ್ಟತೆ! ಬದುಕಿನಿಂದ ನಿರ್ಗಮನವಾದ ಮೇಲಿನ ಪ್ರತೀಕ್ಷೆಯೇ 'ಮುಕ್ತಿ'! ಆ ಮುಕ್ತಿಯೇ 'ದಿವ್ಯತೆ'! ಇದೇ ಭಾವನೆ ಇಲ್ಲಿ ಅವ್ಯಕ್ತವಾಗಿಯೇ ಮೂಡಿ ಬಂದಂತಿದೆ.

ಪು.ತಿ.ನ.ರವರು ತಮ್ಮ ಕಾವ್ಯವನ್ನು ಮುಗಿಸುವ ವಿಧಾನವೇ ಬೇರೆ. ಶಬರಿಯು, ಶ್ರೀ ರಾಮನಿಗೆ ಹಣ್ಣು-ಹಂಪಲಗಳನ್ನೂ, ಹೂಗಳನ್ನೂ ಕೊಟ್ಟು ಉಪಚರಿಸಿದ ಮೇಲೆ, ಮತಂಗ ಮುನಿವರ್ಯರು ಕೊಟ್ಟ ವರ ಸಿದ್ಧಿಯಾಯ್ತೆಂದು, 'ಗೆದ್ದೆ, ಗೆದ್ದೆ ಶುದ್ಧಳಾದೆ, ಅಗ್ನಿ ಹವಿಗೆ ಸಿದ್ಧಳಾದೆ.... ಶಾಂತಿ ಪುಷ್ಟಿ ತುಷ್ಟಿ ಶಿವಂ, ಅಗಲಯ್ಯ-ಗುರುಶರಣು' ಎಂದೆನ್ನುತ್ತ ಅಗ್ನಿಪ್ರವೇಶ ಮಾಡುತ್ತಾಳೆ. ಇಲ್ಲಿ ಶಬರಜ್ಜಿ ತನ್ನ 'ಮುಕ್ತಿ' ಮಾರ್ಗವನ್ನು ಮೊದಲೇ ನಿರ್ಧರಿಸಿಕೊಂಡಂತಿದೆ. ಆದರೆ, ಕುವೆಂಪು ವರ್ಣಿಸಿದ 'ಮುಕ್ತಿ' ಮಾರ್ಗದ ಸಂದರ್ಭವೇ ಬೇರೆ. ಗುರಿ ಒಂದೇ ಆದರೂ ('ಮುಕ್ತಿ' ಪಡೆಯುವುದು), ಅದನ್ನು ಪಡೆದ ವಿಧಾನಗಳು ಬೇರೆ. ಶ್ರೀ ರಾಮ-ಲಕ್ಷ್ಮಣರು ಅವಳ ತ್ಯಾಗಕ್ಕಾಗಿ ಮರುಗಿ, ತಮ್ಮ ಪ್ರಯಾಣವನ್ನು ಕಿಷ್ಕಿಂಧೆ ಕಡೆ ಮುಂದುವರಿಸುತ್ತಾರೆ. ಇಲ್ಲಿಯೂ, ಪು.ತಿ.ನ.ರವರ ವರ್ಣನೆ ಕುವೆಂಪುರವರ ವರ್ಣನೆಗಿಂತ ಬೇರೆಯಾಗಿದೆ. ಅವರ ಕಾವ್ಯ ನಾಟಕದಲ್ಲಿ, ಸುಗ್ರೀವನ ವಿಚಾರವನ್ನೇ

ಎತ್ತುವುದಿಲ್ಲ, ಶಬರಿ. ಕುವೆಂಪು ಚಿತ್ರಿಸಿದ ಶಬರಜ್ಜಿಗೆ, ಸುಗ್ರೀವನ ಮತ್ತು ಸೀತೆ ಲಂಕೆಯಲ್ಲಿರುವ ಸುಳಿವೂ ಇದೆ. ಪು.ತಿ.ನ.ರವರು ವರ್ಣಿಸಿದ ಶಬರಿ ಮುಖ್ಯವಾಗಿ ರಾಮನಲ್ಲಿ ಪೂಜ್ಯತೆಯನ್ನೇ ಪ್ರದರ್ಶಿಸುತ್ತಾಳೆ, ಹಣ್ಣು-ಹಂಪಲು, ಹೂಗಳನ್ನು ಅರ್ಪಿಸುತ್ತ. ಹೀಗೆ, ಹಲವು ವಿಧದಲ್ಲಿ, ಈ ಇಬ್ಬರು ದಿಗ್ಗಜರು, ಶಬರಿಯನ್ನು ಬೇರೆ ಬೇರೆ ರೀತಿಯಲ್ಲಿ ಕಂಡಿದ್ದಾರೆ. ವಾಲ್ಮೀಕಿ ರಾಮಾಯಣ ಓದಿದಾಗ, ಶಬರಿಯು 'ಮುಕ್ತಿ' ಪಡೆದುದು ತನ್ನ ತಪಸ್ಸಿನ ಬಲದಿಂದ ಎಂಬ ಅಭಿಪ್ರಾಯ ಬರುತ್ತದೆ. ಆದರೆ, ಕುವೆಂಪು ವರ್ಣಿಸಿದ 'ಮುಕ್ತಿ'ಯು ಇದಕ್ಕಿಂತ ಭಿನ್ನವಾಗಿ ಕಾಣಿಸುತ್ತದೆ. ಅವರೇ, ವೆಂಕಣ್ಣಯ್ಯನವರಿಗೆ ಮಾಡಿದ ತಮ್ಮ ಅರ್ಪಣೆಯಲ್ಲಿ 'ಪಿಂತೆ ವಾಲ್ಮೀಕಿಯುಲಿದ ಕಥೆಯಾದೊಡಂ, ಬೇರೆ ಮೈಯಾಂತಂತೆ, ಬೇರೆ ಕಥೆಯೆಂಬಂತೆ....' ಎಂದು ಹೇಳಿದುದನ್ನು ಇಲ್ಲಿ ತಿರುಗಿ ನೆನೆಸಿಕೊಳ್ಳಬಹುದು.

## ಕುವೆಂಪುರವರ ಭಾಷಾಶೈಲಿಯ ಬಗ್ಗೆ ಒಂದೆರಡು ಮಾತು

ಕೊನೆಯಲ್ಲಿ, ಕುವೆಂಪುರವರ ಈ ಮಹಾಕಾವ್ಯವನ್ನು ಓದಿದಮೇಲೆ ನನ್ನಲ್ಲಿ ಉದ್ಭವಿಸಿದ ಕೆಲವು ಅನುಭವ ಮತ್ತು ಅವರ ಭಾಷಾ ಶೈಲಿಯ ಮೇಲಿನ ನನ್ನ ವೈಯಕ್ತಿಕ ಅನಿಸಿಕೆಗಳನ್ನು ವ್ಯಕ್ತಪಡಿಸುತ್ತಲಿದ್ದೇನೆ. ಅವರ ಕೃತಿಯನ್ನು ಓದಿದ ಹಲವರು - ಕುವೆಂಪುರವರ ಸಾಹಿತ್ಯ ಜೀರ್ಣಿಸಿಕೊಳ್ಳುವುದು ಕಠಿಣವೆಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಅವರು, ತಿಳಿಗನ್ನಡ ಮತ್ತು ಹಳೆಗನ್ನಡದ ಮಧ್ಯೆ, ಸಂಸ್ಕೃತ ಪದಗಳನ್ನು ಸೇರಿಸಿ ತಮ್ಮ ಕಾವ್ಯವನ್ನು ಅಲಂಕಾರಗೊಳಿಸುತ್ತಾರೆಂದು ಹಲವರು ಹೇಳಿದ್ದಾರೆ. ಈ ಮಾತು ಪು.ತಿ.ನ.ರವರಿಗೂ ಅನ್ವಯಿಸುತ್ತದೆ. ಹಲವು ಬಾರಿ ಈ ಶೈಲಿಯು ಕಬ್ಬಿಣದ ಕಡಲೆಯಂತಾಗುತ್ತದೆ, ಸಾಮಾನ್ಯ ಓದುಗರಿಗೆ. ನಾನೊಮ್ಮೆ, ಕುವೆಂಪು ಮತ್ತು ಪು.ತಿ.ನ.ರವರ ತುಂಬು ಅಭಿಮಾನಿಗಳಾದ, ಜಿ.ಎಸ್. ಶಿವರುದ್ರಪ್ಪನವರಲ್ಲಿ ಈ ಮಾತನ್ನು ಎತ್ತಿದ್ದೆ. 'ಒಬ್ಬ ಕವಿಯು ಸಾಮಾನ್ಯರಿಗೆ ಅರ್ಥವಾಗುವಂತೆ ತನ್ನ ಕಾವ್ಯಗಳನ್ನು ರಚಿಸಬೇಕು. ಹಾಗಿರದಿದ್ದಲ್ಲಿ ಅಂಥವರ ಕೃತಿ ಬರಿಯ ಪಂಡಿತರಿಗೆ ಮಾತ್ರ ಮೀಸಲಾಗಿಡುವಂತಾಗುತ್ತದೆ' ಎಂದು ಹೇಳಿದ್ದೆ. ಶಿವರುದ್ರಪ್ಪನವರು ಅದಕ್ಕೆ ಉತ್ತರವಾಗಿ ಹೇಳಿದ ಮಾತು ಸ್ವಾರಸ್ಯವಾಗಿತ್ತು. ಅವರು, 'ಒಬ್ಬ ಕವಿಯು ಕಾವ್ಯ ರಚಿಸುವಾಗ ಕೆಲವು ಕರ್ತವ್ಯ ಬದ್ಧನಾಗಿರುತ್ತಾನೆ. ಸಾಮಾನ್ಯ ಜನರ ಸಾಹಿತ್ಯ ಮಟ್ಟವನ್ನು ಅವನು ಏರಿಸಲು ಪ್ರಯತ್ನ ಮಾಡುವುದು ಈ ಕರ್ತವ್ಯಗಳಲ್ಲೊಂದು' ಎಂದು ಹೇಳಿದ್ದರು. ಈ ಮಾತನ್ನು ನಾನು ಸಂಪೂರ್ಣ ಒಪ್ಪದಿದ್ದರೂ, ಅವರ ಮಾತಿನಲ್ಲಿರುವ ತಿರುಳನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನ ಪಡುತ್ತಿದ್ದೇನೆ. ಜನ ಸಾಮಾನ್ಯರಿಗೆ ಅರ್ಥ ಮಾಡಿಕೊಡುವ ಪ್ರಯತ್ನದಲ್ಲಿ ತಮ್ಮ ಕಾವ್ಯದ ಗುಣಮಟ್ಟಕ್ಕೆ ಲೋಪ ಬಾರದಂತೆ ಸಾಹಿತಿಯು ಎಚ್ಚರಿಕೆ ವಹಿಸಿಕೊಳ್ಳಬೇಕಾಗುತ್ತದೆ. ಅಂದರೆ, ಶಿವರುದ್ರಪ್ಪನವರ ಮಾತಿನಲ್ಲಿ - ಜನಪ್ರಿಯತೆ ಮತ್ತು ಸಾಹಿತ್ಯ ಪ್ರೌಢತೆ - ಇವೆರಡರೊಳಗೆ ವ್ಯತ್ಯಾಸಗಳಿವೆ ಎಂದು ಸಾರುವ ಸಂದೇಶ ಅಡಗಿದೆಯೋ ಏನೋ!

ನನಗಂತೂ, 'ಶ್ರೀ ರಾಮಾಯಣ ದರ್ಶನಂ' ಓದಲು ಬಹಳ ಸಮಯವೇ ತಗುಲಿತ್ತು; ಅದು ಅಷ್ಟೊಂದು ಸುಲಭವಾಗಿಯೇ ಇರಲಿಲ್ಲ! ಪೂರ್ತಿ ಅರ್ಥ ಮಾಡಿಕೊಂಡಿದ್ದೇನೆಂದು ಹೇಳಿಕೊಳ್ಳುವ ಧೈರ್ಯವಂತೂ ಖಂಡಿತವಾಗಿಯೂ ಇಲ್ಲ!

ಈ ಹಿಂದೆ ಹೇಳಿದಂತೆ, ಅವರ ಈ ಮಹಾ ಕಾವ್ಯಗಳಲ್ಲಿ ಉಲ್ಲೇಖಿಸಿರುವ ಅಧ್ಯಾಯಗಳ ಶೀರ್ಷಿಕೆಗಳಂತೂ ರಸವತ್ತಾಗಿವೆ. 'ಶಬರಿಗಾದನು ಅತಿಥಿ ದಾಶರಥಿ', 'ಅತ್ರಿಯಿಂದಗಸ್ತ್ಯಂಗೆ', 'ಸಾಗರೋಲ್ಲಂಘನಂ', 'ಪೂಣ್ಕೆನಗ್ನಿಯೆ ಸಾಕ್ಷಿ', 'ಮರಣಮಥವಾ ಶರಧಿತರಣಂ', 'ರಸಮಲ್ತೆ ರುದ್ರದೃಷ್ಟಿಗೆ ರೌದ್ರಮುಂ', 'ಮಡಿದನಿಂದ್ರಜಿತು ಐಂದ್ರಾಸ್ತ್ರದಿಂ', 'ದೈತ್ಯನೇರ್ದನ್ ಚೈತ್ಯಮಂಚಮಂ' ಇವೇ ಮೊದಲಾದ ಆಕರ್ಷಕ ಶಬ್ದ ಜೋಡಣೆಗಳೇ ಸಾಕ್ಷಿ ಈ ಮಾತನ್ನು ಪುಷ್ಟೀಕರಿಸಲು. ಹಿಂದೆ, ಕೆಲವೇ ಪಂಡಿತರು ಮತ್ತು ವೇದಪಾರಾಯಣ ಮಾಡುವವರು ಸಂಸ್ಕೃತದಲ್ಲಿ ಪಾಂಡಿತ್ಯ ಹೊಂದಿದ್ದರು. ಕುವೆಂಪುರವರು, ಈ ಕೃತಕ ನಿರ್ಮಾಣದ ಪಾಗಾರವನ್ನು ದಾಟಿ ಸಂಸ್ಕೃತ ಅಧ್ಯಯನ ಮಾಡಿ ತಮ್ಮ ಭಾಷಾಪಾಂಡಿತ್ಯವನ್ನು ಹೆಚ್ಚಿಸಿಕೊಂಡಿರುವುದು, ಅವರ ಕಾವ್ಯ ಮತ್ತು ಕವನಗಳಿಂದ ವ್ಯಕ್ತವಾಗುತ್ತದೆ. ಆದರೂ, ಅವರು ಮಧ್ಯೆ-ಮಧ್ಯೆ ಒಂದೇ ಅರ್ಥ ಬರುವ ಶಬ್ದವನ್ನು, ಒಮ್ಮೆ ತಿಳಿಗನ್ನಡ, ಸ್ವಲ್ಪ ಮುಂದೆ ಅದನ್ನೇ ಹಳೆಗನ್ನಡದಲ್ಲಿ ಪ್ರಯೋಗಿಸಿದುದನ್ನು ಗಮನಿಸಬಹುದು. ಉದಾಹರಣೆಗೆ, 'ತಾಯಪ್ಪುಗೆಯ ತೊಟ್ಟಿಲೊಳ್ ಸಿಸುವಾಗುತಾ....' ಎಂಬಲ್ಲಿ 'ಸಿಸು'ವೆಂಬ ಶಬ್ದ ಪ್ರಯೋಗವಿದೆ; ಆದರೆ, ಸ್ವಲ್ಪ ಮುಂದೆ ಬರುವ, 'ತಾಯ್ಮಡಿಲೊಳಾರಾದೊಡೇಂ ತಾಂ ಬರಿ ಶಿಶುಗಳಲ್ತೆ' ಎಂಬಲ್ಲಿ 'ಸಿಸು'ವು 'ಶಿಶು'ವಾಗಿದೆ. ಅದೇ ರೀತಿ, ಕೆಲವುಕಡೆ 'ದೃಷ್ಟಿ', ಇನ್ನು ಕೆಲವೆಡೆ 'ದಿಟ್ಟಿ'ಗಳೆಂಬ ಪ್ರಯೋಗಗಳಿವೆ. ಇಂತಹ ಹಲವು ಮಿಶ್ರಿತ ಪ್ರಯೋಗಗಳು ಅವರ ಕೃತಿಗಳಲ್ಲೆಲ್ಲ ಹರಡಿಕೊಂಡಿವೆ. ಪ್ರಸ್ತುತ, ಈ epic styleನಲ್ಲಿ ಬರೆದ ಈ ಮಹಾಕಾವ್ಯಕ್ಕೆ, ಇಂತಹ ಶೈಲಿಯೇ ಅಲಂಕಾರ ಒದಗಿಸುತ್ತದೋ ಏನೋ!

'ಶ್ರೀ ರಾಮಾಯಣ ದರ್ಶನಂ', ಒಂದು ದಾರ್ಶನಿಕ ಕಾವ್ಯ. 'ಶಬರಿಗಾದನು ಅತಿಥಿ ದಾಶರಥಿ' ಅಧ್ಯಾಯದಲ್ಲಿ, ಕುವೆಂಪು ಒಂದು ವಿಶಿಷ್ಟ ರೀತಿಯಲ್ಲಿ ಶಬರಿಯ ದರ್ಶನ ಮಾಡಿ, ನಮಗೂ ಆ ದರ್ಶನದ ಲಾಭ ಒದಗಿಸಿ ಕೊಟ್ಟಿರುತ್ತಾರೆ. ಸ್ವಲ್ಪ ಹೆಚ್ಚಿನ ಸಮಯ ತೆಗೆದುಕೊಂಡಿದ್ದರೂ, ಈ ಮಹಾಕಾವ್ಯದ ದರ್ಶನ ಪಡೆದು ನನ್ನ ಸಾಹಿತ್ಯಾಭಿಮಾನವು ಕೊಂಚ ಮಟ್ಟಿಗಾದರೂ ಕೆರಳಿದೆ ಎಂಬ ಅನಿಸಿಕೆ ನನ್ನದು.

ಈ ದೃಷ್ಟಿಯಲ್ಲಿ ಶ್ರೀ ಶಿವರುದ್ರಪ್ಪನವರು ಹೇಳಿದ ಮಾತನ್ನು ನಾನು ಒಪ್ಪಿಕೊಳ್ಳಲೇ ಬೇಕಲ್ಲವೇ!

●

# ವಾಲ್ಮೀಕಿ ರಾಮಾಯಣದಲ್ಲಿ ಶಬರಿ

## ಎಚ್.ವೈ. ರಾಜಗೋಪಾಲ್, ಪೆನ್ಸಿಲ್ವೇನಿಯ

ನಮ್ಮ ಪುರಾಣ ರಾಮಾಯಣ ಮಹಾಭಾರತಗಳ ವ್ಯಕ್ತಿಗಳಿಗೆ ಅಳಿವೆಂಬುದಿಲ್ಲ. ಅವರು ಮತ್ತೆಮತ್ತೆ ಜನ್ಮವೆತ್ತುತ್ತಲೇ ಇರುತ್ತಾರೆ, ಬೇರೆಬೇರೆ ಕಾಲಗಳಲ್ಲಿ, ಬೇರೆಬೇರೆ ಕವಿಗಳ ಮಾನಸಲೋಕದಲ್ಲಿ. ಕುವೆಂಪುರವರ "ಶ್ರೀ ರಾಮಾಯಣ ದರ್ಶನಂ" ನಲ್ಲಿಯೂ ಹಾಗೆಯೇ-

"....ಪಿಂತೆ
ವಾಲ್ಮೀಕಿಯುಲಿದ ಕಥೆಯಾದೊಡಂ, ಕನ್ನಡದಿ
ಬೇರೆ ಕಥೆಯೆಂಬಂತೆ, ಬೇರೆ ಮೈಯಾಂತಂತೆ,
ಮರುವುಟ್ಟುವಡೆವಂತೆ ಮೂಡಿದೀ ಕಾವ್ಯ...."

ದಲ್ಲಿ ಶಬರಿಯ ಪಾತ್ರ ಈ ರೀತಿಯ ಮರುವುಟ್ಟು ಪಡೆದಿದೆ.

ಕುವೆಂಪು ಶಬರಿಯ ಪಾತ್ರವನ್ನು ಹೇಗೆ ಚಿತ್ರಿಸಿದ್ದಾರೆಂದು ಐತಾಳರು ವಿಸ್ತಾರವಾಗಿ ಪರಿಶೀಲಿಸಿದ್ದಾರೆ. ಆದರೆ ಅದಕ್ಕೆ ಪೂರ್ವಭಾವಿಯಾಗಿ ಮೂಲದ ರಾಮಾಯಣದಲ್ಲಿ ಅವಳ ಪಾತ್ರ ಹೇಗಿದೆ ಎಂಬುದನ್ನೂ ಗಮನಿಸಿದರೆ, ಅಲ್ಲಿಗೂ ಕುವೆಂಪು ಚಿತ್ರಣಕ್ಕೂ ಇರುವ ಸಾಮ್ಯ-ವ್ಯತ್ಯಾಸಗಳು ಹೆಚ್ಚು ಗ್ರಾಹ್ಯವಾಗುವುದೆಂಣಿಸಿ ಈ ಚಿಕ್ಕ ಲೇಖನ ಬರೆಯುತ್ತಿದ್ದೇನೆ. ಪ್ರಾಸಂಗಿಕವಾಗಿ ರಾಮನ ವ್ಯಕ್ತಿತ್ವ ಚಿತ್ರಣದ ಬಗೆಗೂ ಕೆಲವು ಅನಿಸಿಕೆಗಳನ್ನು ಸೇರಿಸಿದ್ದೇನೆ.

ಇಲ್ಲಿ ಮೂಲವೆಂದರೆ ವಾಲ್ಮೀಕಿ ರಾಮಾಯಣ. ಡಿವಿಜಿಯವರಂಥ ಹಿರಿಯ ಸಾಹಿತಿಗಳ ಮನ್ನಣೆಗೆ ಪಾತ್ರವಾದ ವಿದ್ವಾನ್ ಶ್ರೀ ರಂಗನಾಥ ಶರ್ಮರ ಕನ್ನಡ ಭಾಷಾಂತರವನ್ನು ಆಧಾರವಾಗಿ ಬಳಸುತ್ತಿದ್ದೇನೆ. ಅರಣ್ಯಕಾಂಡದ ೭೪ನೆಯ ಸರ್ಗದಲ್ಲಿ ಶಬರಿಯ ವೃತ್ತಾಂತ ಬರುತ್ತದೆ. ಅದರ ಹಿಂದಿನ ಸರ್ಗದಲ್ಲಿ ಕಬಂಧ ರಾಮನಿಗೆ ಅವಳ ಬಗ್ಗೆ ಸೂಚನೆ ಕೊಟ್ಟಿರುತ್ತಾನೆ. ಈ ಸರ್ಗದಲ್ಲಿ ರಾಮಲಕ್ಷ್ಮಣರು ಮತಂಗಾಶ್ರಮಕ್ಕೆ ಬಂದದ್ದು, ಶಬರಿ ಅವರನ್ನು ಸತ್ಕರಿಸಿದ್ದು, ತನ್ನ ಇಷ್ಟು ದಿನದ ನಿರೀಕ್ಷಣೆ ಪೂರೈಸಿದಮೇಲೆ ಅಲ್ಲಿ ನಿಲ್ಲಲೊಪ್ಪದೆ ಅಗ್ನಿಪ್ರವೇಶಮಾಡಿ ಸ್ವರ್ಗಾರೋಹಣ ಮಾಡಿದ್ದು, ತನ್ನ ಗುರುವಿನ ಸನ್ನಿಧಿಗೆ ಮರಳಿದ್ದು - ಎಲ್ಲವೂ ಕೇವಲ ೩೫ ಶ್ಲೋಕಗಳಲ್ಲಿ ಅಡಕವಾಗಿದೆ.

ನಮ್ಮ ಸಾಮಾನ್ಯ ಜನರ ಕಲ್ಪನೆಯಲ್ಲಿ ಮೂಡಿರುವ ಶಬರಿಯ ಚಿತ್ರಕ್ಕೂ, ಮೂಲದಲ್ಲಿ ಕಾಣುವ ಅವಳ ಚಿತ್ರಕ್ಕೂ ಒಂದು ದೊಡ್ಡ ವ್ಯತ್ಯಾಸವಿದೆ. ನಮ್ಮಲ್ಲಿ ಈಗ ಪ್ರಚಲಿತವಾಗಿರುವ ಶಬರಿಯ ಚಿತ್ರದಲ್ಲಿ ಅವಳೊಬ್ಬ ಏನೂ ಅರಿಯದ ಮುಗ್ಧ ವೃದ್ಧೆ. ರಾಮನಲ್ಲಿ ಭಕ್ತಿಯೊಂದೇ

ಅವಳಿಗೆ ತಿಳಿದದ್ದು. ಬರಲಿರುವ ರಾಮನಿಗಾಗಿ ಕಾಡಿನ ಫಲಮೂಲಾದಿ ಆಹಾರವನ್ನು ಶೇಖರಿಸಿಟ್ಟಿದ್ದಳು ಎಂಬುದು ಅವಳು ಹಣ್ಣುಗಳನ್ನು ತಾನು ಕಚ್ಚಿ ತಿಂದು ಅವುಗಳಲ್ಲಿ ರುಚಿಯಾಗಿದ್ದುವನ್ನು ಮಾತ್ರ ರಾಮನಿಗಾಗಿ ಎತ್ತಿಟ್ಟಿರುತ್ತಿದ್ದಳು ಎಂಬ ಮೂಢತೆಯ ಮಟ್ಟಕ್ಕೆ ಇಳಿದಿದೆ. ವಾಲ್ಮೀಕಿಯ ಶಬರಿ ಮತಂಗಮುನಿಯ ಪರಿಚರ್ಯೆಯಲ್ಲಿ ಜೀವನವೆಲ್ಲ ತೇಯ್ದು ಸ್ವತಃ ತಪೋಧನೆ ಎನಿಸಿದ ಪೂಜ್ಯ ವ್ಯಕ್ತಿ. ವಾಲ್ಮೀಕಿ ಅವಳ ಬಗ್ಗೆ ಹೇಳುವಾಗ ಉಪಯೋಗಿಸುವ ಪದಗಳಾದರೂ ಎಂಥವು! ಅವಳು ಯೋಗಸಿದ್ಧಳು, ತಪಸ್ಸಿದ್ಧಳು, ಸಿದ್ಧಸಮ್ಮಾನ್ಯಳು! ಕಬಂಧನು ರಾಮಲಕ್ಷ್ಮಣರಿಗೆ ಮುಂದೆ ಸೀತಾನ್ವೇಷಣೆಗೆ ಹೇಗೆ ತೊಡಗಬೇಕು, ಹೇಗೆ ಸುಗ್ರೀವನ ಸಖ್ಯ ಮಾಡಬೇಕು, ಅವನ ಸಹಾಯ ಪಡೆಯಬೇಕು ಎಂದುದನ್ನೆಲ್ಲ ತಿಳಿಸುತ್ತ, ಅದಕ್ಕೆ ಮುಂಚೆ ಮತಂಗಾಶ್ರಮದಲ್ಲಿ ಉಳಿದು ಶಬರಿಯನ್ನು ಸಂದರ್ಶಿಸಿ ಅವಳ ಆತಿಥ್ಯ ಕೈಗೊಳ್ಳಬೇಕೆಂದೂ ಆದೇಶಿಸುತ್ತಾನೆ. ಅವಳು ಧರ್ಮನಿಷ್ಠಳು ಎಂದು ಹೇಳಿ, ಅವಳ ಹಿರಿಮೆಯನ್ನು ಯಥಾರ್ಥವಾಗಿ ತಿಳಿಸಿರುತ್ತಾನೆ.

ಕಬಂಧನ ಮಾತಿನಂತೆ ರಾಮಲಕ್ಷ್ಮಣರು ಪಂಪಾಸರೋವರದ ಪಶ್ಚಿಮತೀರಕ್ಕೆ ತೆರಳಿ ಅಲ್ಲಿ ಮತಂಗಾಶ್ರಮಕ್ಕೆ ಬರುತ್ತಾರೆ. ಅವರನ್ನು ಕಂಡೊಡನೆ ಶಬರಿ ಎದ್ದು ನಿಂತು ಅವರಿಗೆ ಕೈಮುಗಿದು, ಅವರ ಪಾದಗಳಿಗೆ ನಮಸ್ಕರಿಸುತ್ತಾಳೆ. ಸಾಂಗವಾಗಿ ಅತಿಥಿಸತ್ಕಾರ ನಡೆಸುತ್ತಾಳೆ. ವ್ರತನಿಷ್ಠಳಾದ ಆ ಶ್ರಮಣಿಯನ್ನು ಕುರಿತು ರಾಮ ಹೀಗೆ ಪ್ರಶ್ನಿಸುತ್ತಾನೆ:

''ಹೇ ತಪೋಧನೆ ತಪೋವಿಘ್ನಗಳಾದ ಮನೋವಿಕಾರಗಳನ್ನೆಲ್ಲ ಗೆದ್ದಿರುವೆಯಾ? ನಿನ್ನ ತಪಸ್ಸು ವರ್ಧಿಸುತ್ತಿರುವುದೇ? ಕೋಪವನ್ನು ಜಯಿಸಿರುವೆಯಾ? ಆಹಾರವನ್ನು ನಿಯಂತ್ರಿಸಿರುವೆಯಾ? ವ್ರತಗಳೆಲ್ಲವನ್ನೂ ನಡೆಸಿರುವೆಯಾ? ನಿನ್ನ ಮನಸ್ಸಿನಲ್ಲಿ ಶಾಂತಿ ನೆಲಸಿದೆಯೇ? ತಪಸ್ವಿನಿ, ನಿನ್ನ ಗುರುಶುಶ್ರೂಷೆಯು ಸಫಲವಾಯಿತೇ?''

ರಾಮನ ಈ ಮಾತುಗಳು ಸ್ವಲ್ಪ ಆಶ್ಚರ್ಯಕ್ಕೆಡೆ ಕೊಡುವಂಥವು. ನಾರುಮಡಿ ಕೃಷ್ಣಾಜಿನಗಳನ್ನುಟ್ಟು, ಜಟಾಧಾರಿಣಿಯಾಗಿದ್ದ ಹಣ್ಣುಹಣ್ಣು ಮುದುಕಿಯನ್ನು ಕುರಿತು ಅವಳಿಗಿಂತ ವಯಸ್ಸಿನಲ್ಲಿ ಬಹು ಚಿಕ್ಕವನಾದ ರಾಮ, ನಿನ್ನ ಮನೋವಿಕಾರಗಳನ್ನೆಲ್ಲ ಗೆದ್ದಿರುವೆಯಾ, ಆಹಾರವನ್ನು ನಿಯಂತ್ರಿಸಿರುವೆಯಾ ಎಂದು ಕೇಳುವುದು ರಾಮನಂಥ ವಾಕ್ಕೋವಿದನಿಗೆ ಉಚಿತವೆ ಎಂಬ ಸಂದೇಹ ಬರುತ್ತದೆ. ಮಾತಿನ ಔಚಿತ್ಯಕ್ಕೆ ರಾಮ ಹೆಸರಾದವನು. ವೃದ್ಧವೃದ್ಧೆಯರನ್ನು ಕುರಿತು ಯಾವಾಗಲೂ ಗೌರವದಿಂದ ಮಾತನಾಡಿಸುವ ರಾಮ ಈಕೆಯನ್ನು ಈ ರೀತಿ ಪ್ರಶ್ನಿಸಿದ್ದು ಸಾಧುವೇ? ಶಬರಿ ಆಗ ರಾಮನಿಗೆ ಅಭಿಮುಖವಾಗಿ ನಿಂತು, ಹೇಗೆ ರಾಮದರ್ಶನದಿಂದ ತನ್ನ ಗುರುಶುಶ್ರೂಷೆಗೆ ಉತ್ತಮವಾದ ಫಲ ದೊರೆಯಿತು, ತನ್ನ ಜನ್ಮ ಸಫಲವಾಯಿತು, ಸೌಮ್ಯನಾದ ಅವನ (ರಾಮನ) ವೀಕ್ಷಣದಿಂದ ತಾನು ಪರಿಶುದ್ಧೆಯಾದೆ ಎಂದು ಹೇಳುತ್ತಾಳೆ. ಅವಳ ಮಾತಿನಲ್ಲಿ ಒಬ್ಬ ಆತ್ಮಜ್ಞಾನಿಯ ವಿಶ್ವಾಸವಿದೆ, ಸುಸಂಸ್ಕೃತಿ ಇದೆ. ತಾನೊಬ್ಬ ಪಾಮರಳು, ಅಜ್ಞಾನಿ ಎಂಬ ಸಂಕೋಚ ಏನೂ

ಕಾಣುವುದಿಲ್ಲ. ಅವಳು ಮಾತನಾಡುವುದು ರಾಮನಿಗೆ ''ಅಭಿಮುಖವಾಗಿ ನಿಂತು,'' ಅವನ ಕಾಲಡಿಯಲ್ಲಿ ಕುಳಿತಲ್ಲ.

ಶಬರಿಗೆ ತನ್ನ ಗುರು ಮತಂಗನಲ್ಲಿ ಅಪಾರ ಭಕ್ತಿ. ರಾಮ ಚಿತ್ರಕೂಟಕ್ಕೆ ಬಂದಾಗಲೇ ಮತಂಗಮುನಿ ತನ್ನ ದೇಹತ್ಯಾಗ ಮಾಡಿ ಸ್ವರ್ಗಕ್ಕೆ ತೆರಳಿರುತ್ತಾನೆ. ಅದಕ್ಕೆ ಮುಂಚೆ ಅವನು ಶಬರಿಗೆ ಮುಂದೆ ಆ ಆಶ್ರಮಕ್ಕೆ ರಾಮನು ಲಕ್ಷ್ಮಣ ಸಹಿತನಾಗಿ ಬರುವನೆಂದೂ, ಅವನನ್ನು ಅವಳು ಅತಿಥಿಯೆಂದು ಸತ್ಕರಿಸಬೇಕೆಂದೂ ವಿಧಿಸಿರುತ್ತಾನೆ. ಶ್ರೀರಾಮನ ದರ್ಶನವಾದಮೇಲೆ ಅವಳಿಗೆ ಶಾಶ್ವತವಾದ ಸದ್ಗತಿಯು ಲಭಿಸುವುದು ಎಂದೂ ಹೇಳಿರುತ್ತಾನೆ. ಗುರುವಿನ ಮಾತಿನಂತೆ ಶಬರಿ ಅಲ್ಲಿ ರಾಮನ ಆಗಮನವನ್ನೇ ಎದುರುನೋಡುತ್ತ ಇರುತ್ತಾಳೆ. ಗುರುವಾಕ್ಯವನ್ನು ತಪ್ಪದೆ ಪಾಲಿಸುತ್ತಾಳೆ. (ರಾಮಾಯಣದ ಉದ್ದಕ್ಕೂ ವಾಕ್ಯಪರಿಪಾಲನೆಯ ಸಂದರ್ಭಗಳಿಗೆ ಏನೂ ಕೊರತೆಯಿಲ್ಲ!) ರಾಮನ ಕೋರಿಕೆಯಂತೆ ಅವನಿಗೆ ಆಶ್ರಮದ ಸುತ್ತಮುತ್ತಿನ ವನಪ್ರದೇಶವನ್ನೆಲ್ಲ ತೋರಿಸಿ, ತನ್ನ ಗುರುವಿನ ತಪೋಮಹಿಮೆಯನ್ನು ಕೊಂಡಾಡುತ್ತಾಳೆ. ಇಷ್ಟಾದಮೇಲೆ ಅವಳಿಗೆ ಅಲ್ಲಿ ಇನ್ನು ಹೆಚ್ಚು ಕಾಲ ನಿಲ್ಲುವ ಇಚ್ಛೆಯಿಲ್ಲ, ಅದು ಶ್ರೀರಾಮನ ದಿವ್ಯಸನ್ನಿಧಿಯೇ ಆದರೂ. ತನ್ನ ಗುರುವಿನ ಸನ್ನಿಧಿಗೆ ಮರಳಬೇಕೆಂಬಾಸೆ ಅವಳಲ್ಲಿ ಈಗ ಪ್ರಬಲವಾಗಿದೆ. ''ಈಗ ನನಗೆ ಅನುಜ್ಞೆಯನ್ನು ಕೊಡು; ಈ ಕಳೇಬರವನ್ನು ತ್ಯಜಿಸಬೇಕೆಂದಿದ್ದೇನೆ. ಇದು ಯಾರ ಆಶ್ರಮವೋ, ನಾನು ಯಾರ ಭಕ್ತಳಾದ ದಾಸಿಯೋ, ಅಂತಹ ಜ್ಞಾನಿಗಳಾದ ಮಹರ್ಷಿಗಳ ಸಾನ್ನಿಧ್ಯವನ್ನು ಸೇರಿಕೊಳ್ಳಬೇಕೆಂದಿದ್ದೇನೆ.'' ರಾಮಲಕ್ಷ್ಮಣರಿಗೆ ಅವಳ ಮಾತು ಕೇಳಿ ಆಶ್ಚರ್ಯವಾಗುತ್ತದೆ. ''ಆಶ್ಚರ್ಯವಿದು!'' ಎಂಬ ಸೊಲ್ಲು ಅವರ ಬಾಯಿಂದ ಹೊರಡುತ್ತದೆ. ಆ ಉದ್ಗಾರದ ಧ್ವನಿಯನ್ನು ಕುರಿತು ಚಿಂತಿಸುವುದರಲ್ಲಿ ಸ್ವಾರಸ್ಯವಿದೆ. ಅವಳ ಮಾತಿನಲ್ಲಿ ಅವಳಿಗೆ ರಾಮನಲ್ಲಿರುವ ಭಕ್ತಿಗಿಂತ ಗುರುವಿನಲ್ಲಿರುವ ಭಕ್ತಿ ಏನೂ ಕಡಿಮೆಯಲ್ಲ ಎಂಬುದನ್ನು ಗುರುತಿಸಬಹುದು. ರಾಮನನ್ನು ಕಾಣಬೇಕೆಂಬ ಸ್ವಂತ ಆಸೆಗಿಂತ ಅವಳಿಗೆ ಗುರುವಿನ ಆದೇಶವನ್ನು ಪರಿಪಾಲಿಸುವದು ಹೆಚ್ಚು ಮುಖ್ಯವಾಗಿತ್ತೆ ಎಂಬ ಪ್ರಶ್ನೆಯೂ ಬಾರದೆ ಇರದು. ರಾಮ ಆಗ ಅವಳಿಗೆ ಹೇಳುತ್ತಾನೆ: ''ಧರ್ಮಚಾರಿಣಿ, ನನ್ನನ್ನು ಭಕ್ತಿಯಿಂದ ಅರ್ಚಿಸಿದ್ದೀಯೆ. ಇಚ್ಛೆ ಬಂದಲ್ಲಿಗೆ ಸುಖವಾಗಿ ತೆರಳು.'' ವೃದ್ಧೆಯಾಗಿದ್ದ ಅವಳನ್ನು ಕುರಿತು ನನ್ನನ್ನು ಭಕ್ತಿಯಿಂದ ಅರ್ಚಿಸಿದ್ದೀಯೆ ಎಂದು ಹೇಳುವಲ್ಲಿ ರಾಮನಿಗೆ ತನ್ನ ನಾರಾಯಣತ್ವದ ಅರಿವಿತ್ತೆ ಎಂಬ ಸಂಶಯ ಬರುತ್ತದೆ. ಅವನೇನೋ ತಾನು ಕೇವಲ ನರನಷ್ಟೆ ಎಂದು ಹೇಳಿಕೊಳ್ಳುತ್ತಿದ್ದರೂ, ಅಲ್ಲಲ್ಲಿ ಅವನಿಗೆ ತನ್ನ ದೇವತ್ವದ ಅರಿವು ಸುಳಿಯುತ್ತಿರುವಂತೆ ತೋರುತ್ತದೆ. ಬಹುಶಃ ಅವಳನ್ನು ಮೊದಲು ಕಂಡಾಗ ಅವಳನ್ನು ಪ್ರಶ್ನಿಸಿದ ರೀತಿಯಲ್ಲೂ ಇದೇ ಭಾವನೆ ಇದ್ದಿರಬಹುದು. (ಬಹುಶಃ ಹೀಗೆಯೇ ವಾಲ್ಮೀಕಿಯ ಮನಸ್ಸಿನಲ್ಲೂ ಶ್ರೀರಾಮನ ನಾರಾಯಣತ್ವದ ಅರಿವು ಅಲ್ಲಲ್ಲಿ ನುಸುಳಿ ಬರುತ್ತಿತ್ತೇನೋ!)

ರಾಮಲಕ್ಷ್ಮಣರನ್ನು ಬೀಳ್ಕೊಂಡು ಶಬರಿ ಅಗ್ನಿಪ್ರವೇಶ ಮಾಡುತ್ತಾಳೆ. "ದಿವ್ಯವಾದ ಆಭರಣಗಳನ್ನು ತೊಟ್ಟು ಮಾಲ್ಯಗಳನ್ನು ಮುಡಿದು, ಚಂದನವನ್ನು ಹಚ್ಚಿಕೊಂಡು, ದಿವ್ಯವಸ್ತ್ರವನ್ನುಟ್ಟ ಶಬರಿಯು ದಿವ್ಯಸುಂದರಿಯಾಗಿ ಕಂಗೊಳಿಸಿದಳು! ಮಿಂಚುವ ಮಿಂಚಿನಂತೆ ಆ ಪ್ರದೇಶವನ್ನು ಝುಗ್ ಎಂದು ಬೆಳಗಿಸುತ್ತ ಆ ಶಬರಿಯು ಸ್ವರ್ಗವನ್ನೇರಿದಳು. ಪುಣ್ಯಾತ್ಮರಾದ ಆ ಮಹರ್ಷಿಗಳು ವಿಹರಿಸುತ್ತಿದ್ದ ಪುಣ್ಯಲೋಕವನ್ನು ತನ್ನ ತಪೋಬಲದಿಂದ ಸೇರಿದಳು" ಎಂಬಲ್ಲಿಗೆ ಶಬರಿಯ ವೃತ್ತಾಂತ ಮುಗಿಯುತ್ತದೆ.

ಇಂಥ ಜ್ಞಾನಿ, ಯೋಗಿನಿ ಬರುಬರುತ್ತ ನಮ್ಮ ಕಲ್ಪನೆಯಲ್ಲಿ ಒಬ್ಬ ಕೇವಲ ಪಾಮರ ಭಕ್ತೆ ಹೇಗಾದಳು? ಇಂಥ ಪ್ರಶ್ನೆಗಳಿಗೆ ಸೂಕ್ತ ಸಮಾಧಾನ ಕೊಡುವುದು ಕಷ್ಟದ ಕೆಲಸ. ಇಲ್ಲಿ ಯಾವುದು ಸರಿ, ಯಾವುದು ತಪ್ಪು ಎಂದು ವಿಮರ್ಶಿಸುತ್ತಿಲ್ಲ. ಈ ರೂಪಾಂತರ ಹೇಗಾಗಿರಬಹುದು ಎಂಬುದನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದೇನೆ. ಶಬರಿ ಹಣ್ಣಿನ ರುಚಿಯನ್ನು ತಾನು ಮೊದಲು ನೋಡಿ ಒಳ್ಳೆಯದನ್ನು ಮಾತ್ರವೇ ರಾಮನಿಗಾಗಿ ಇಟ್ಟಿರುತ್ತಿದ್ದಳೆಂಬ ಕಥೆ ತತ್ವಸಂಗ್ರಹ ರಾಮಾಯಣದಲ್ಲಿ ಬರುತ್ತದೆ ಎಂದು ಭಾರತ ದರ್ಶನ ಪ್ರಕಾಶನದ ವಾಲ್ಮೀಕಿ ರಾಮಾಯಣ ಅನುವಾದ ತಿಳಿಸುತ್ತದೆ. ಇದೇ ಗ್ರಂಥ ವಾಲ್ಮೀಕಿ ರಾಮಾಯಣದಲ್ಲಿ ಹೊರತಾಗಿ ಅಧ್ಯಾತ್ಮರಾಮಾಯಣ, ತುಲಸೀದಾಸ ರಾಮಾಯಣ, ಮತ್ತು ತತ್ವಸಂಗ್ರಹ ರಾಮಾಯಣಗಳಲ್ಲಿ ರಾಮನು ಶಬರಿಗೆ ಒಂಬತ್ತು ವಿಧವಾದ ಭಕ್ತಿಗಳನ್ನು ಉಪದೇಶಿಸಿದ ಎಂಬ ಮಾತನ್ನೂ ತಿಳಿಸುತ್ತದೆ. ಈ ರೂಪಾಂತರಕ್ಕೆ ಹಲವಾರು ಕಾರಣಗಳಿರಬಹುದು. ಪುರುಷಾಭಿಮಾನ ಪ್ರಧಾನವಾದ ನಮ್ಮ ಸಂಸ್ಕೃತಿಯಲ್ಲಿ ಹೀಗಾಗುವುದು ಸಾಧ್ಯ. ಶಬರಿ ಒಬ್ಬ ಬೇಡಿತಿ, ಮತಂಗಮುನಿಯ ಪರಿಚರ್ಯೆ ಶುಶ್ರೂಷೆ ಹೊತ್ತಿದ್ದವಳು. ಅಂಥ ಒಬ್ಬ ಹೆಂಗಸಿಗೆ ಜ್ಞಾನಿಯ ಪಟ್ಟ ಕೊಡುವುದು ನಮ್ಮ ಸಂಪ್ರದಾಯಸ್ಥರಿಗೆ ಬರುಬರುತ್ತ ಮುಜುಗರವಾಗಿರಬೇಕು. ಅಲ್ಲದೆ, ಮುದುಕಿ, ಅಜ್ಜಿ ಎಂದರೆ ನಮ್ಮಲ್ಲಿ ಅವಳೊಂದು ಮಮತೆಯ ಮುದ್ದೆ. ಅವಳಿಗೆ ತಿಳಿದುದು ಪ್ರೀತಿಯೊಂದೇ. ಅವಳ ಮಾತು, ಕೆಲಸಗಳೆಲ್ಲ ಮಮತೆಯಿಂದಲೇ ಬರುವವು, ಜ್ಞಾನದಿಂದಲ್ಲ, ವಿವೇಕದಿಂದಲ್ಲ. (ಇದನ್ನು ನಮ್ಮಲ್ಲಿ ಕೆಲವರು ವಿಶ್ವಪ್ರೇಮದ ಸಂಕೇತ ಎಂದೂ ವಾದಿಸಬಹುದು.) ಅಂಥ ವ್ಯಕ್ತಿತ್ವವನ್ನು ಶಬರಿಗೂ ನಮ್ಮ ಜನ ಆರೋಪಿಸಿರಬಹುದು. ಇದರ ಮೇಲೆ, ಭಾರತದಲ್ಲಿ ಭಕ್ತಿಯ ಮಹಾಪೂರ ಬಂದು, ಇಂಥ ಎಷ್ಟೋ ವ್ಯಕ್ತಿಗಳನ್ನು ಜ್ಞಾನಿಗಳ ಸ್ಥಾನದಿಂದ ಭಕ್ತರ ಸ್ಥಾನಕ್ಕೆ ಒಯ್ದಿರಬಹುದು. ವಿಷ್ಣುಪಾರಮ್ಯ ಬೆಳೆದಂತೆ, ತುಲಸೀದಾಸ ರಾಮಾಯಣದಂಥ ಗ್ರಂಥಗಳ ಪ್ರಚಂಡ ಶಕ್ತಿ ಜನರ ಮನಸ್ಸನ್ನು ಆವರಿಸುತ್ತ ಬಂದಂತೆ, ತಾನು ಮತಂಗನ ಭಕ್ತೆ, ದಾಸಿ ಎಂದು ಹೇಳಿಕೊಂಡಿದ್ದರೂ ಜನ ಅವಳನ್ನು ರಾಮನ ಭಕ್ತೆ ದಾಸಿ ಮಾಡಿರಬಹುದು. ಶಬರಿಯ ಪ್ರಸಂಗ ಈ ದೃಷ್ಟಿಕೋನದಿಂದ ತುಂಬ ಗಮನಾರ್ಹ ಎನಿಸುತ್ತದೆ. ವಾಲ್ಮೀಕಿಯಲ್ಲಿ ಕಾಣುವ ಈ ಪ್ರಸಂಗದಲ್ಲಿ ರಾಮನ ವ್ಯಕ್ತಿತ್ವ

ಚಿತ್ರಣಕ್ಕಿಂತ ಶಬರಿಯದು ಹೆಚ್ಚು ಸಮರ್ಥವಾಗಿದೆ ಎಂದೂ ಅನ್ನಿಸುತ್ತದೆ. ಪಾತ್ರಗಳ ವ್ಯಕ್ತಿತ್ವ ಎಷ್ಟು ರೂಪಾಂತರ ಹೊಂದಿದರೂ ಪ್ರತಿಭಾವಂತ ಕವಿಗಳ ಕೈಯಲ್ಲಿ ಆ ಪಾತ್ರಗಳು ಜೀವಂತವಾಗಿ ಶೋಭಿಸುತ್ತವೆ, ನಮ್ಮ ಬುದ್ಧಿ ಕಲ್ಪನೆಗಳನ್ನು, ಬಾಳು ಬದುಕುಗಳನ್ನು ಉದ್ದೀಪಿಸುತ್ತವೆ.

●

# ದಾಶರಥಿಯ ಸೆರೆ ಹಿಡಿದು, ಸೀತೆಗೊಪ್ಪಿಸಿದ ದಶಶಿರ

ನಾಗ ಐತಾಳ, ಕ್ಯಾಲಿಫೋರ್ನಿಯ

'ರವಿ ಕಾಣದನ್ನು ಕವಿ ಕಂಡ' ಎಂಬ ನಾಣ್ನುಡಿಯೊಂದಿದೆ. ಹಾಗೆಯೇ ವಾಲ್ಮೀಕಿ ರಾಮಾಯಣವು ಕುವೆಂಪುರವರ ಲೇಖನಿಯಲ್ಲಿ 'ಮರವುಟ್ಟು' ಪಡೆದು 'ಶ್ರೀ ರಾಮಾಯಣ ದರ್ಶನಂ' ಎಂಬ ಹೊಸ ರೂಪ ತಾಳಿ, ಹೊಸ ವೈಭವದಲ್ಲಿ ವಿಜೃಂಭಿಸಿದೆ. ಈ ಲೇಖನದ ಶೀರ್ಷಿಕೆಯನ್ನು ನೋಡಿ ಓದುಗರಿಗೆ ಆಶ್ಚರ್ಯವೆನ್ನಿಸಬಹುದು. ಕಾರಣ, ನಾವೆಲ್ಲ ಕೇಳಿ, ಓದಿ, ನಮ್ಮಲ್ಲಿ ರಕ್ತಗತವಾದ ರಾಮಾಯಣದಲ್ಲಿನ ವಿವರಕ್ಕೂ ಈ ಲೇಖನದ ಶೀರ್ಷಿಕೆಗೂ ಏನೂ ಹೊಂದಾಣಿಕೆ ಕಾಣುವುದಿಲ್ಲ. ಶ್ರೀರಾಮ ರಾವಣನನ್ನು ಸಂಹಾರ ಮಾಡಿದ ಎಂದರೆ ನಾವು ಒಪ್ಪಿಕೊಳ್ಳಬಹುದು. ಆದರೆ, ರಾವಣನೆ ರಾಮನನ್ನು ಸೆರೆಹಿಡಿದ ಎಂದಾಗ, ಇದು ಯಾವ ಸೀಮೆಯ ರಾಮಾಯಣವೆಂದು ಅಚ್ಚರಿಪಡುವುದು ವಿಶೇಷವೇನಲ್ಲ! ಕುವೆಂಪುರವರ ಲೇಖನಿಯ ಚಮತ್ಕಾರ ಅದು! ಖಳನಾದ ರಾವಣನನ್ನು ಅನುಕಂಪದಿಂದ ನೋಡಿ, ಅವನಲ್ಲೂ ಮಾನವೀಯತೆ ಇದೆ, ಮಾರ್ದವತೆ ಇದೆ ಎಂಬ ರೀತಿಯಲ್ಲಿ ನಿರೂಪಿಸಿದ್ದಾರೆ; ತನ್ನದೆ ರೀತಿಯಲ್ಲಿ, ತನ್ನ ಶೌರ್ಯಕ್ಕೆ ಭಂಗ ಬಾರದಂತೆ ಅಪಹರಿಸಿಕೊಂಡು ಬಂದ ಸೀತೆಯನ್ನು ರಾಮನಿಗೊಪ್ಪಿಸಿ, ಅವರಿಬ್ಬರನ್ನು ಒಂದುಗೂಡಿಸಬೇಕೆಂಬ ಮನಸ್ಸು ಅವನಲ್ಲಿದೆ. ಕುವೆಂಪುರವರು ಚಿತ್ರಿಸಿದ ಈ ರಾವಣನ ಕಥೆಯನ್ನು ಓದಿದ ಯಾವ ಸಹೃದಯಿ ಓದುಗನಿಗೂ ಕಣ್ಣು ಮಂಜಾದೀತು! ಬಲುದಿನದ ಆಸೆಯಾದ, ಸೀತೆಯನ್ನು ಒಲಿಸಿಕೊಳ್ಳುವ ಹೋರಾಟದಲ್ಲಿ ಸೋಲನ್ನೊಪ್ಪಿ, ಯುದ್ಧದಲ್ಲಿ ರಾಮನನ್ನು ಸೋಲಿಸಿ, ಅವನನ್ನೇ ಸೀತೆಗೆ 'ಕಪ್ಪ'ವಾಗಿ ಒಪ್ಪಿಸಿದ ರಾವಣನ ಭ್ರಾಂತಿಯನ್ನು ವಿವರಿಸುವ ಕಥೆ ಇದು. ಕುವೆಂಪುರವರು ಹೇಳಿದ '....ಕನ್ನಡದಿ ಬೇರೆ ಕಥೆಯೆಂಬಂತೆ, ಬೇರೆ ಮೈಯಾಂತಂತೆ ಮರುವುಟ್ಟು...' ಪಡೆದ ಕಾವ್ಯದ ವಿವರವನ್ನು ಸಂಕ್ಷಿಪ್ತವಾಗಿ ತಿಳಿಸುವ ಪ್ರಯತ್ನವೇ ಈ ಲೇಖನದ ಗುರಿ. ತನ್ನ ಬಲುದಿನದ ಹೋರಾಟದಲ್ಲಿ ಸೋಲನ್ನೊಪ್ಪುವ, ಆ ಸೋಲಿನಲ್ಲೇ 'ವಿಜಯ'ವನ್ನು ಕಾಣುವ ಒಂದು ವಿಶಿಷ್ಟ ಕಥೆಯನ್ನು ಕುವೆಂಪು ಇಲ್ಲಿ ಹೆಣೆದಿದ್ದಾರೆ.

ಕಾಳಗದಲ್ಲಿ ವಿಜಯ ಪಡೆಯಲೆಂದು ಶಿವಮಂದಿರದಲ್ಲಿ ಮಹಾಕಾಳಿಯ ಮುಂದೆ ರಾವಣನು ತಪಸ್ಸು ಮಾಡುತ್ತಿದ್ದಾಗ ಖಿನ್ನಮುಖದ 'ಲಂಕಾಲಕ್ಷ್ಮಿ' ಪ್ರತ್ಯಕ್ಷಳಾಗುತ್ತಾಳೆ. ರಾವಣನು ತನ್ನ ಛಲ ತೀರಿಸಿಕೊಳ್ಳಲು ಎಸಗಿದ ಯುದ್ಧದ ಪರಿಣಾಮವಾಗಿ ಸಹಸ್ರಾರು ನಿರಪರಾಧಿ ಪ್ರಜೆಗಳ ಸಂಹಾರವಾಗುತ್ತಿರುವುದನ್ನು ಪ್ರಸ್ತಾಪಿಸುತ್ತ,

ಅಹಂಕಾರಕ್ಕೆ
ಬಲಿಗೊಡುವೆಯೇನ್ ಲಂಕಾಪ್ರಜಾಸಂಖ್ಯೆಯಂ
ಸಾಲದೇನಾದ ಬಲಿ?.................
......................... ನಿನ್ನ ಬಿಂಕಕ್ಕೆ
ಬೆಳೆಯವೇಳ್ಕುವೆ ವಿಧವೆಯರ ಸಂಖ್ಯೆ? ಮಕ್ಕಳ
ಕಳೆದುಕೊಳ್ವಬ್ಬೆಯರ ಸಂಖ್ಯೆ? ಕೂಳ್ಕೊಡುವರಂ
ಬಲಿಗೊಡುವನಾಥ ಶಿಶು ಸಂಖ್ಯೆ?

ಎಂದು ರಾವಣನಿಗೆ ಬುದ್ಧಿ ಹೇಳಲು ಆ ದೇವಿಯು ಪ್ರಯತ್ನಪಡುತ್ತಾಳೆ. ಅಸಂಖ್ಯಾತ ಪ್ರಜೆಗಳ ಸಾವಿನಿಂದಾಗಿ ವಿಧವೆಯರು ಮತ್ತು ಅನಾಥ ಮಕ್ಕಳ ಸಂಖ್ಯೆಯೂ ಹೆಚ್ಚುತ್ತಿರುವುದನ್ನು ಆ ದೇವಿ, ರಾವಣನಿಗೆ ಮನವರಿಕೆ ಮಾಡುತ್ತಾಳೆ. ಇದು ರಾವಣನ ಹೃದಯವನ್ನು ಮುಟ್ಟಿದಂತಿತ್ತು! ಮರುದಿನ ತಾನೊಬ್ಬನೆ ಯುದ್ಧರಂಗದಲ್ಲಿ ಹೋರಾಡಿ, ತನ್ನ ಪ್ರಜೆಗಳ ಬಲಿದಾನವಾಗದಂತೆ ನೋಡಿಕೊಳ್ಳುವೆನೆಂಬ ಆಶ್ವಾಸನೆ ಆ ದೇವಿಗೆ ನೀಡುತ್ತಾನೆ. ಅಲ್ಲದೆ, ದೇವಿಯಲ್ಲಿ ತನ್ನ ಇಷ್ಟವನ್ನು ಪೂರೈಸುವಂತೆ ಪ್ರಾರ್ಥನೆ ಮಾಡುತ್ತಾನೆ. ಅವನು ಬಯಸಿದ ಎರಡು ಮುಖ್ಯ ಬೇಡಿಕೆಗಳು ಹೀಗಿವೆ:

'ದಶರಥಸುತಂ
ರಣದಿ ಸೋಲ್ವಂತೆನಗೆ ಮಾಡು ಕೃಪೆಯನ್'

ಮತ್ತು

'ಸೀತೆ ವಶವಪ್ಪಂತೆ'

ದೇವಿಯು ಅವನ ಇಷ್ಟಕ್ಕೆಲ್ಲ 'ತಥಾಸ್ತು' ಎಂದು ಅಭಯ ಕೊಡುತ್ತಾಳೆ. ರಾವಣನ ಸಂತೋಷಕ್ಕೆ ಪಾರವೇ ಇಲ್ಲ! ತನ್ನ ಜಯಕ್ಕೆ ದೇವಿಯ ಆಶೀರ್ವಾದ ದೊರೆತುದು ಅವನ ಆಸೆಯನ್ನು ಗಗನಕ್ಕೇರಿಸುತ್ತದೆ. ಆದರೆ, ದೇವಿಯ ಆಶೀರ್ವಾದ ಫಲಿಸುವುದು ಈ ಜನ್ಮದಲ್ಲಲ್ಲ ಎಂಬ ಮಾತು ಅವನಿಗೆ ಆಶ್ಚರ್ಯವನ್ನುಂಟುಮಾಡಿರಬೇಕು. ಅವಳು,

ಸೀತೆಯಾಲಿಂಗಿಪಳ್ ಚುಂಬಿಸೆರ್ದೆಗೊತ್ತುವಳ್;
ರಣದಿ ರಾಮನ ಸೋಲಿಪಯ್, ಪುನರ್ಜನ್ಮದೊಳ್!
ಕಾಣ್ ತೋರ್ಪುದಂ;

ಎಂದು ಅದೃಶ್ಯಳಾಗುತ್ತಾಳೆ. ರಾವಣನಿಗೆ ಆಗೊಂದು 'ಸ್ವಪ್ನಸಿದ್ಧಿ'ಯಾಗುತ್ತದೆ. ಮುಂದಿನ ಜನ್ಮದಲ್ಲುಂಟಾಗುವ ಘಟನೆಯನ್ನು ಕುವೆಂಪುರವರು ಚಮತ್ಕಾರವಾಗಿ ಈ ಸ್ವಪ್ನಾವಸ್ಥೆಯಲ್ಲಿ ಕಂಡಂತೆ ವಿವರಿಸುತ್ತಾರೆ. ಇದು ಕುವೆಂಪುರವರ ಕಲ್ಪನಾ ಶಕ್ತಿಯನ್ನು ವ್ಯಕ್ತಪಡಿಸುತ್ತದೆ. ಇಂತಹದೇ ಸನ್ನಿವೇಶಗಳನ್ನು ತಮ್ಮ ಮಹಾಕಾವ್ಯ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದಲ್ಲಿ ಕನಸಿನ ಮೂಲಕ ವಿವರಿಸಿದುದನ್ನು ನೋಡಬಹುದು. ಇಂತಹ

ಅಪೂರ್ವ ಶೈಲಿ ಕುವೆಂಪುರವರ ಲೇಖನಿಯಿಂದ ಮೂಡಿಬಂದು, ಸಿದ್ಧಿ ಪಡೆದಿದೆ. ಇಲ್ಲಿ ರಾವಣನಿಗೆ ಕಾಣಿಸಿದುದು, ಅಥವಾ ಕಂಡಂತೆ ಭ್ರಮೆಯಾದುದು ಸಂಕ್ಷಿಪ್ತವಾಗಿ ಈ ರೀತಿಯಲ್ಲಿದೆ:

ಅಶ್ವವೊಂದು ಸೊಕ್ಕಿನಿಂದ ಕೆನೆಯುತ್ತಿತ್ತು. ಆಕಾಶದಲ್ಲಿ ಖಡ್ಗವೊಂದು ಝಳಪಿಸುತ್ತಿತ್ತು. ರಾವಣನು ಭಯದಿಂದ ನೋಡುತ್ತಿದ್ದಾನೆ. ಆ ಕುದುರೆಯ ಕೊರಳಿಗೆ ಖಡ್ಗ ಬಂದು ಬಿದ್ದು, ಅದರ ರುಂಡವನ್ನು ಬೇರ್ಪಡಿಸುತ್ತದೆ. ಪರಿಣಾಮವಾಗಿ, ರಕ್ತ ಧಾರೆಯಾಗಿ ಹರಿಯುತ್ತದೆ. ಭಯದಿಂದ ರಾವಣನು ಹತ್ತಿರದ ನದಿದಡದಲ್ಲಿದ್ದ ದೋಣಿಯೊಂದನ್ನು ಹತ್ತುವನು. ಕುದುರೆಯ ರುಂಡವು ಕುಪ್ಪಳಿಸಿ, ಕುಪ್ಪಳಿಸಿ ಆ ನದಿಗೆ ಬಿದ್ದು ಇಡೀ ನದಿಯನ್ನೇ ರಕ್ತಮಯ ಮಾಡುತ್ತದೆ. ಆಗ, ರಾವಣನಿರುವ ದೋಣಿ ಮಗುಚಿ ಅವನು ಆ ರಕ್ತಪ್ರವಾಹದಲ್ಲಿ ತೇಲಾಡುವಂತಾಗುತ್ತದೆ. ಹಾಗೆ ತೇಲಾಡುತ್ತಿರುವುದು ತಾನೊಬ್ಬನೆ ಅಲ್ಲದೆ ತನ್ನ ತಮ್ಮ ಕುಂಭಕರ್ಣನೂ ಇರುವುದು ದಶಶಿರನ ಗಮನಕ್ಕೆ ಬರುತ್ತದೆ. ಜೀವದಾಸೆಯಿಂದ ಇಬ್ಬರೂ ತೇಲಾಡಿ, ತೇಲಾಡಿ ಹೇಗೋ ದಡ ತಲುಪುತ್ತಾರೆ. ಆದರೆ, ದಡ ಮುಟ್ಟಿದಾಗ ಅವರಿಬ್ಬರೂ ಶಿಶುಗಳಾಗಿದ್ದಾರೆ. ಅಲ್ಲೊಂದು ಆಶ್ರಮ. ಆಗ, ರಾವಣನ ಆತ್ಮವು ಹಿಂದೆ ನಡೆದುದೆಲ್ಲವನ್ನೂ ಮರೆತು, ಒಂದು ವಿಧದ ಶಾಂತಿಯನ್ನು ಅನುಭವಿಸುತ್ತದೆ. ಶಿಶುವಿನ ರೂಪದಲ್ಲಿದ್ದ ತಮ್ಮ ಕುಂಭಕರ್ಣನು ಅಳುತ್ತಿರುವುದನ್ನು ಗಮನಿಸಿ, ರಾವಣನು ತಾನೂ ಶಿಶುವಿನಂತೆ ಅಳಲು ಪ್ರಾರಂಭಿಸುತ್ತಾನೆ. ಆಗ,

ಬಂದಳಲ್ಲಿಗದೊ
ಸೀತೆ! ಮಕ್ಕಳನೆತ್ತಿ ಮುದ್ದಾಡಿದಳ್! ಪಾಡಿ
ಮೊಲೆಯೂಡಿದಳ್! ತೊಡೆಯನೇರಿಸಿದಳೆರ್ದೆಗಪ್ಪಿ
ಲಲ್ಲಯ್ಯಿದಳು ತನ್ನವಳಿಮಕ್ಕಳಂ. ತಮ್ಮನಂ
ಕುಂಭಕರ್ಣನನಂತೆ ತನ್ನನುಂ!

ಸೀತೆ ತಮ್ಮಿಬ್ಬರನ್ನು ಮುದ್ದಾಡಿಸುತ್ತಿರುವುದನ್ನು ನೋಡಿದ, (ಅಲ್ಲ ಭ್ರಮಿಸಿದ) ದಶಶಿರನು ಬೆಚ್ಚಿ ಎಚ್ಚೆತ್ತು 'ಮಂಡೋದರೀ! ಮಯಾತ್ಮಜೇ! ಪ್ರಿಯೇ! ರಕ್ಷಿಸೆನ್ನನ್!' ಎಂದು ಕಿರುಚುತ್ತಾನೆ.

ಪೂಜೆಯ ಮನೆಯಲ್ಲಿದ್ದ ಮಂಡೋದರಿ ಆ ಕೂಗಿಗೆ ಓಗೊಟ್ಟು ಓಡಿ ಬಂದು, ತನ್ನ ಪತಿ ದುಃಸ್ವಪ್ನ ಕಾಣುತ್ತಿದ್ದಾನೆಂದು ಅವನನ್ನು ಸಂತೈಸುತ್ತಾಳೆ. ಆ ಪತಿವ್ರತಾ ಶಿರೋಮಣಿ ತನ್ನ ಗಂಡನನ್ನು ತೊಡೆಯಮೇಲೇರಿಸಿಕೊಂಡು ಬೆವರುತ್ತಿದ್ದ ಅವನ ಮೈ ಒರಸಿ, ಗಾಳಿ ಹಾಕಿ ಉಪಚರಿಸುತ್ತಾಳೆ.

ಈ ಮೇಲಿನ ಸನ್ನಿವೇಶ, ಹಿಂದೆ ಹೇಳಿದಂತೆ ಕುವೆಂಪುರವರ ವಿಶಿಷ್ಟ ನಿರೂಪಣೆಯ ಚಮತ್ಕಾರವನ್ನು ವ್ಯಕ್ತಪಡಿಸುತ್ತದೆ. ಮುಂದಾಗುವ ಸಂಗತಿಯನ್ನು ರಾವಣನಿಗೆ ಅರಿವು

ಮಾಡಿಕೊಡುವಂತಿದೆ, ಇದು. ರಾವಣನ ಛಲ ಮತ್ತು ಸೊಕ್ಕಿನ ಸ್ವಭಾವಗಳು ಇಲ್ಲಿ ಅಶ್ವವಾಗಿ ರೂಪಿತವಾಗಿದೆ. ಮುಂದೆ ಲವ-ಕುಶರಾಗಿ ಸೀತೆಯ ಗರ್ಭದಲ್ಲಿ ಹುಟ್ಟಿ ತಂದೆ ಶ್ರೀರಾಮನೊಡನೆ ಯುದ್ಧ ಮಾಡಿ ಅವನನ್ನು ಸೋಲಿಸಿ ಜಯ ಪಡೆದ ಸನ್ನಿವೇಶವನ್ನು ರಾವಣನು ಅನುಭವಿಸುತ್ತಿದ್ದ ಭ್ರಾಂತಿಯ ಮೂಲಕ ಕವಿ ಇಲ್ಲಿ ವಿವರಿಸಿದ್ದಾರೆ. ದೇವಿ 'ತಥಾಸ್ತು' ಎಂದು ಹೇಳಿದುದಕ್ಕೆ ಅರ್ಥಗರ್ಭಿತ ವಿವರಣೆ ಇಲ್ಲಿ ದೊರಕಿದೆ. ಸೀತೆ ಶಿಶುಗಳನ್ನು ಮುದ್ದಿಸುವ ವಿಚಾರವೂ ಗಮನಾರ್ಹವಾಗಿದೆ. ರಾವಣನ ಸುಪ್ತ ಆಸೆಗಳು ನೆರವೇರುವುದು ಈ ಜನ್ಮದಲ್ಲಲ್ಲ; ಮುಂದಿನ ಜನ್ಮದಲ್ಲಿ. ಪತಿವ್ರತೆಯಾದ ಸೀತೆಯ ಒಲವನ್ನು ಗಳಿಸಿಕೊಳ್ಳುವ ಅವನ ಹೋರಾಟಕ್ಕೆ ಜಯ ಸಿಕ್ಕುವುದು ಮುಂದಿನ ಜನ್ಮದಲ್ಲಿ. ಈ ಜನ್ಮದಲ್ಲಿನ ಇನ್ನೊಬ್ಬ ಮಹಾಪತಿವ್ರತೆ, ಮಂಡೋದರಿಯು ಅವನನ್ನು ತೊಡೆಯಮೇಲೇರಿಸಿ, ಉಪಚರಿಸುತ್ತ ಮುದ್ದಿಸುತ್ತಿರುವಾಗಲೇ ರಾವಣನು ತನ್ನ ಭ್ರಮೆಯಿಂದ ಎಚ್ಚರವಾಗುವುದೂ ಅರ್ಥಗರ್ಭಿತವಾಗಿದೆ! ಇಲ್ಲಿ, ಮಹಾಸತಿ ಸೀತಾದೇವಿ ಮತ್ತು ಮಹಾಪತಿವ್ರತೆ ಮಂಡೋದರಿ ಇವರಿಬ್ಬರಿಗೂ ಸಮ-ಸ್ಥಾನವನ್ನು ಕೊಟ್ಟಿರುತ್ತಾರೆ, ಕವಿ.

ಮಂಡೋದರಿಯ ಉಪಚಾರದಿಂದ ಎಚ್ಚೆತ್ತ ರಾವಣನು, 'ನಾನಾರ್? ಇಹೆನೆಲ್ಲಿ?' ಎಂಬ ಪ್ರಶ್ನೆಗೆ, 'ದಶಗ್ರೀವನಸುರೇಶ್ವರಂ! ಮತ್ತೆ ಮಂಡೋದರೀ ಜೀವಿತೇಶ್ವರಂ!' ಎಂಬ ಮಂಡೋದರಿಯ ಉತ್ತರದಲ್ಲಿ ಅವಳ ಅನನ್ಯ ಪತಿಭಕ್ತಿಯನ್ನು ನಾವು ಗುರುತಿಸಬಹುದು. ಮಂಡೋದರಿ ತನ್ನ ಗಂಡನು ಕನಸು ಕಂಡೆನೆಂದು ಸಮಾಧಾನ ಮಾಡಿದಾಗ 'ಅದು ಕನಸಲ್ಲ; ಒಂದು ಅಪೂರ್ವ ಅನುಭವ'ವೆಂದು, ಆ ಅನುಭವವನ್ನು ಅವಳೊಡನೆ ಹಂಚಿಕೊಳ್ಳುತ್ತಾನೆ.

ಸೀತೆಯೊಳ್ ನಿನಗೀಗಳಿರ್ಪೊಂದು ಸಾತ್ವಿಕದ
ಭಾವಶುದ್ಧಿಯೆ ದಿಟಂ ಪ್ರತಿಮೆಯಂ ಪಡೆದುದಾ
ಸ್ವಪ್ನದೊಳ್

ಎಂದು ಮಂಡೋದರಿ ತನ್ನ ಗಂಡನ ಸ್ವಪ್ನಕ್ಕೆ ಒಂದು ವಿಶಿಷ್ಟ ಅರ್ಥಕೊಡುತ್ತಾಳೆ. ತನ್ನನ್ನು ಉದ್ಧರಿಸುವ ಪುಣ್ಯಾತ್ಮೆ 'ನೀನೊಬ್ಬಳೆ' ಎಂದು ಹೇಳುತ್ತ, ತನ್ನನ್ನು ರಕ್ಷಿಸಲು ಮಡದಿಯನ್ನು ಬೇಡಿಕೊಳ್ಳುತ್ತಾನೆ. ರಾವಣನ ಈ ಅವಸ್ಥೆಯನ್ನು ನೋಡಿ ಮಂಡೋದರಿ ದುಃಖದಿಂದ ಕಣ್ಣೀರಿಡುತ್ತ, ಗಂಡನ ಕಾಲ ಮೇಲೆ ಬೀಳುತ್ತಾಳೆ. ಪಾಪ! ಮತ್ತಿನ್ನೇನನ್ನು ಮಾಡಿಯಾಳು! ಅವಳನ್ನು ಎತ್ತಿ

ನಿನಗಿಂ ಮಿಗಿಲ್ ಸೀತೆ
ನನಗೆ ದೇವತೆ, ಮಾತೆ! ಶ್ರದ್ಧೆಗೆಟ್ಟಿರ್ದೆನಗೆ
ಶ್ರದ್ಧೆಯಂ ಮರುಕೊಳಿಸುತಾತ್ಮದುದ್ಧಾರಮಂ
ತಂದ ದೇವತೆ, ಪುಣ್ಯಮಾತೆ!

ಎಂಬ ರಾವಣನ ಮಾತಿನಲ್ಲಿ ಸೀತೆಯ ಮೇಲಿದ್ದ ಪೂಜ್ಯ ಭಾವನೆಯು ವ್ಯಕ್ತವಾಗುವುದು. ಆಗ ಮಂಡೋದರಿಯು ಹೇಳಿದ ಮಾತೂ ತುಂಬ ಗಮನಾರ್ಹವಾದುದು:

ನಾಂ ಧನ್ಯೆ ದಲ್!
ಬಾಳ್ ಸಾರ್ಥಕಂ! ಸಾವೊ ಬದುಕೊ? ಇನ್ನೆನೆಗಿಂದು
ವ್ಯಥೆ ತಿಳಿದೋಡಿಡೀ ನಿನ್ನ ಹೃದಯಂ, ತ್ರಿಮೂರ್ತಿಗಳ್
ಬಂದು ಮೀಯರೇ ಅಲ್ಲಿ?

ಅವನ ಹೃದಯದಿಂದ ಪಾಪವೆಂಬ ಕಶ್ಮಲಗಳೆಲ್ಲ ತೊಳೆದು ಹೋಗಿ ನಿರ್ಮಲವಾದುದು ಅವಳನ್ನು ಧನ್ಯೆಯನ್ನಾಗಿ ಮಾಡಿತು! ತ್ರಿಮೂರ್ತಿಗಳೇ ಅವನ ಹೃದಯದಲ್ಲಿ ಸ್ನಾನ ಮಾಡಲಾರರೇ? ಎಂದು ಆಶ್ಚರ್ಯ ಪಡುತ್ತಾಳೆ; ಗಂಡನ ಹೃದಯ ಅಷ್ಟೊಂದು ಪವಿತ್ರವಾಗಿರುವುದನ್ನು ಗುರುತಿಸುತ್ತಾಳೆ. ಅವನಲ್ಲಾದ ಪರಿವರ್ತನೆಯನ್ನು ನಂಬಬೇಕೆಂದು ರಾವಣನು ಅವಳನ್ನು ಬೇಡಿಕೊಂಡಾಗ, 'ಪಣವಿಟ್ಟು ನಂಬಿಪೆಂ ನನ್ನ ಮಾಂಗಲ್ಯಮಂ' ಎಂದು ತನ್ನ ಪತಿಗೆ ಅಭಯ ಕೊಡುತ್ತಾಳೆ. ಈ ಮಾತುಗಳೂ ಅವಳ ಪಾತಿವ್ರತ್ಯವನ್ನು ಪ್ರದರ್ಶಿಸುತ್ತದೆ. ತನ್ನ 'ಮನಃಶುದ್ಧಿ'ಯ ಪರಿಚಯವಾಗಬೇಕಾದುದು ತನ್ನ ಮಡದಿಯೊಬ್ಬಳಿಗೆ ಮಾತ್ರ; ಇನ್ಯಾರೂ ನಂಬಲಿ ಬಿಡಲಿ, ಅದು ಅವನನ್ನು ಯಾವ ರೀತಿಯಲ್ಲೂ ಬಾಧಿಸುವುದಿಲ್ಲ! ಮುಂದೆ ಅವರಿಬ್ಬರೊಳಗಿನ ಸಂಭಾಷಣೆಯನ್ನು ಗಮನಿಸಿ:

'ಆರ ನಂಬಿಸಿ ನಿನಗೆ ಆಗ ಬೇಕಾದುದೇನ್
ಲಂಕೇಶ್ವರಿಗೆ?'

'ಸ್ವಾರ್ಥ ಸಾಧನೆಗೆ! ರಕ್ಷಿಸಲ್
ನನ್ನ ಮಾಂಗಲ್ಯಮಂ!

'ಕೈಲಾಸ ಸುಸ್ಥಿರಂ
ಮಾಂಗಲ್ಯಮೇಗಳುಂ ನಿನಗೆ!!'

ಈ ಮಾತುಗಳು ರಾವಣ-ಮಂಡೋದರಿಯರೊಳಗಿನ ಪ್ರೀತಿ, ವಿಶ್ವಾಸಗಳನ್ನು ವ್ಯಕ್ತಪಡಿಸುವುದಿಲ್ಲವೇ?

ಮುಂದೆ ರಾವಣನು ಹೇಳಿದ ಮಾತುಗಳು ಬಹಳ ಮುಖ್ಯವಾದುವು, ಹಾಗೂ ಗಮನೀಯವಾದುವು. ಅದು ಕುವೆಂಪುರವರ ಕಲ್ಪನೆಯಿಂದ ಚಿಮ್ಮಿ ಬಂದ ಮಾತುಗಳು!

ರಾಮನರ್ಧಾಂಗಿಯಂ ನಾನೆ ಕಪ್ಪಂಗೊಟ್ಟು
ತಪ್ಪೊಪ್ಪಿಕೊಳ್ವೆನ್ ಕ್ಷಮಾಭಿಕ್ಷೆಯಂ ಬೇಡಿ

ಈ ಕಪ್ಪ ಕೊಡುವ ಬಗೆ ಹೇಗೆ? ರಾಮನನ್ನು ಯುದ್ಧದಲ್ಲಿ ಸೋಲಿಸಿ, ಸೆರೆ ಹಿಡಿದು, ಸೀತೆಯನ್ನು ಈ ಜನ್ಮದಲ್ಲಿ ಒಲಿಸಿಕೊಳ್ಳುವ ಹೋರಾಟದಲ್ಲಿ ಪಡೆದ ಅಪಜಯವನ್ನು

ಒಪ್ಪಿಕೊಂಡು, ಸೆರೆ ಹಿಡಿದ ರಾಮನನ್ನು ಸೀತೆಗೆ ಕಪ್ಪ-ಕಾಣಿಕೆಯಾಗಿ ಕೊಟ್ಟು ಶರಣಾಗತನಾಗುವುದೇ ಮುಂದಿನ ಒಳಿತಾದ ದಾರಿ - ಎಂಬ ವಿವೇಕ ರಾವಣನಲ್ಲಿ ಮೂಡುತ್ತದೆ. ಎಂತಹ ಪಶ್ಚಾತ್ತಾಪ ವ್ಯಕ್ತಪಡಿಸುವ ವಿಧಾನವಿದು! ಇದು ಎಷ್ಟೊಂದು ಚಮತ್ಕಾರವಾಗಿ ಕವಿಯ ಲೇಖನಿಯಿಂದ ಮೂಡಿ ಬಂದಿದೆ!

ಮುಂದೆ ರಾವಣನು ಮಂಡೋದರಿಯಲ್ಲಿ ಹಂಚಿಕೊಂಡ ಮಾತೂ ಬಹಳ ಗಮನಾರ್ಹವಾದುದು.

ಮಹಾರಾಜ್ಞಿ, ಯಾಚಿಸುವೆನೊಂದನಾಂ
ನಿನ್ನನೀ ನನ್ನ ಪೂಣ್ಕೆಯನಾರ್ಗಮೊರೆಯದಿರು:
ಹೃದಯ ಗಹ್ವರದಲ್ಲಿ ಭವ್ಯಕೃತಿಯಾಗಿರಲಿ
ನನ್ನ ನಿನ್ನೀ ದಿವ್ಯಗುಹ್ಯಂ

ಈ ಮಾತು ಕವಿಯ ಅಪ್ರತಿಮ ಕುಶಲತೆಯನ್ನು ವ್ಯಕ್ತಪಡಿಸುತ್ತದೆ. ರಾವಣನ ಪರಿವರ್ತನೆಯೆಂಬ ಗುಟ್ಟು ಸತಿ-ಪತಿಯರಲ್ಲೆ 'ಭವ್ಯಕೃತಿ'ಯಾಗಿರಲಿ ಎಂಬ ಮಾತು ಎಷ್ಟೊಂದು ಅರ್ಥಪೂರ್ಣವಾಗಿದೆ!

ಆಗ ತಾನೇ ಉದಯಿಸುತ್ತಿರುವ ದಿನಕರನ ವೈಭವವನ್ನು ಅನುಭವಿಸುತ್ತ, ಅವನಿಗೆ ನಮಿಸಿ, ಮರುದಿನ ತಾನೊಬ್ಬನೆ ಏಕಾಂಗಿಯಾಗಿ ಯುದ್ಧಕ್ಕೆ ಹೊರಡುತ್ತಾನೆ. ಅಂದಿನ ಸೂರ್ಯೋದಯ ರಾವಣನಿಗೆ ವಿಶಿಷ್ಟ ಪ್ರಾಮುಖ್ಯತೆಯನ್ನು ಕೊಟ್ಟಿತ್ತು; ಅದು ಅವನು ಜೀವಂತವಾಗಿ ನೋಡುವ ಕೊನೆಯ ಸೂರ್ಯೋದಯ! ಅದನ್ನು ವೀಕ್ಷಿಸುತ್ತ,

ಪಾಲ್ವೊನಲ್
ನಾಳನಾಳದಿ ಪರಿಸುತಿರ್ಪುದಮೃತತ್ವಮಂ,
ಶಾಂತಿಯಂ ವೀರ್ಯಮಂ, ಶಕ್ತಿಯಂ, ತೇಜಮಂ,
ನಿಧನ ನಿಧುವನ ಮಧುರ ಚೈತನ್ಯಮಂ!

ಎಂದು ತನ್ನಲ್ಲೆ ಹೇಳಿಕೊಳ್ಳುತ್ತಾನೆ. ಯುದ್ಧಕ್ಕೆ ಹೊರಟ ಪತಿಗೆ

ಮುಡಿಯನಡಿಗಿಟ್ಟು ನಮಿಸಿದಳ್
ಶಿರದೊಳಾಂತಳು ಪತಿ ಚರಣ ಧೂಳಿಯಂ. ''ಗೆಲ್ಗೆ
ನಿನ್ನೀ ಪವಿತ್ರಮ ವಿಜಯಯಾತ್ರಾ ರಣಂ!''

ಎಂದು ವಿಜಯವನ್ನು ಹಾರೈಸುತ್ತ ಕಳುಹಿಸಿಕೊಡುವಳು. ಅವಳ ಪಾಲಿಗಂತೂ, ಗಂಡನ ಹೃದಯ ಪರಿವರ್ತನೆಗಿಂತ ಮುಖ್ಯವಾದ 'ವಿಜಯ' ಬೇರೊಂದಿಲ್ಲದಿರಬಹುದು!

ಮುಂದೆ ನಡೆದ ಕಾಳಗದ ವರ್ಣನೆಯೆಲ್ಲ ಹೆಚ್ಚು-ಕಡಿಮೆ ವಾಲ್ಮೀಕಿ ರಾಮಾಯಣದಲ್ಲಿ ನಿರೂಪಿಸಿದ ಹಾಗೆಯೇ ಕುವೆಂಪು ವರ್ಣಿಸಿದ್ದಾರೆ. ಲಕ್ಷ್ಮಣ ಮೂರ್ಛೆ

ಹೋದ ವಿವರವೂ ವರ್ಣಿತವಾಗಿದೆ. ಆದರೆ, ರಾವಣನ ಅವಸಾನವನ್ನು ಕವಿ ಸ್ವಲ್ಪ ಬೇರೆಯಾಗಿಯೇ ವರ್ಣಿಸಿದ್ದಾರೆ. ರಾಮನನ್ನು ಸೆರೆ ಹಿಡಿಯಬೇಕೆಂಬುದೇ ರಾವಣನ ಪರಮ ಇಚ್ಛೆ! ಸೆರೆ ಹಿಡಿದ ಅವನನ್ನು ಸೀತೆಗೊಪ್ಪಿಸಿದರೆ, ತನ್ನ ಸೋಲನ್ನೊಪ್ಪುವ ಜೊತೆಯಲ್ಲೆ ತನಗೆ 'ಮುಕ್ತಿ'ಯೂ ದೊರೆಯಬಹುದು ಎಂಬ ನಂಬಿಕೆಯೂ ಅವನಲ್ಲಿ ಮೂಡಿರಬೇಕು. ಯುದ್ಧದಲ್ಲಿ ಪರಾಕ್ರಮದಿಂದ ಹೋರಾಡಿ, ಕೊನೆಯಲ್ಲಿ ಶ್ರೀರಾಮನ 'ಬ್ರಹ್ಮಾಸ್ತ್ರ' ರಾವಣನ ಎದೆಗೆ ಆಳವಾಗಿ ನಾಟಿದಾಗ ಅವನಲ್ಲಿ ಇನ್ನೊಂದು ಭ್ರಮೆ ಮೂಡುತ್ತದೆ. ತನ್ನ ಎದೆಗೆ ನಾಟಿದ ಆ ಬ್ರಹ್ಮಾಸ್ತ್ರವನ್ನು ಕೈಯಲ್ಲಿ ಬಿಗಿದಪ್ಪಿ ಅವನು ತನ್ನ ಕೋಟೆಯ ಕಡೆಗೆ ಧಾವಿಸುತ್ತಾನೆ. ಶ್ರೀರಾಮನನ್ನು ತನ್ನ ಹೃದಯದಲ್ಲಿ ಬಂಧಿಸಿ, ಮುಷ್ಟಿಯಲ್ಲಿ ಹಿಡಿದಿದ್ದೇನೆಂಬ ಭ್ರಮೆ ಆತನದು. ಈ ಭ್ರಮೆ ಕುವೆಂಪುರವರ ಕಲ್ಪನೆಯ ಪರಿಣಾಮ!

ಕೋಟೆಗೆ ಮರಳಿದಾಗ, ಪತಿಯ ದುಃಸ್ಥಿತಿತನ್ನು ನೋಡಿ ಮಂಡೋದರಿಯ ಹೃದಯ ಒಡೆದು ಹೋದಂತಾಗುತ್ತದೆ.

ಕಾಣುತಾ
ಪ್ರಿಯನ ನೆತ್ತರ್ ಸೂರ್ವ ಗಾತ್ರದಾ ರಣರುದ್ರ
ಭಂಗಿಯಂ, ಬ್ರಹ್ಮ ಶರ ಸಂಗಿಯಂ, 'ಹಾ ಸ್ವಾಮಿ,
ಪೂಣ್ಕೆ ಸಂದುದೆ ? ತೋರು ತೋರೆನೆಗೆ ಸೆರೆವಿಡಿದ
ಮೈಥಿಲೀ ನಾಥನಂ!'

ಎಂದು ಅಳುತ್ತಲೆ ಪತಿಯ ಉಪಚಾರಕ್ಕೆ ತೊಡಗುತ್ತಾಳೆ. ರಾವಣನಿಗೆ, ತಪ್ಪಿದ ಪ್ರಜ್ಞೆ ತಿರುಗಿ ಬಂದಾಗ, ನೋವಿಂದ ನರಳುತ್ತಿದ್ದರೂ ಮುಖದಲ್ಲಿ ಶಾಂತಿ ಮೂಡಿ ಬಂದುದು ಅವನ ಕಣ್ಣಲ್ಲಿ ಹೊಳೆಯುತ್ತಿರುವ ಕಾಂತಿಯೇ ಸಾರಿ ಹೇಳುತ್ತಿತ್ತು. ಮಂಡೋದರಿಯನ್ನುದ್ದೇಶಿಸಿ,

ಸಿಂಗರಿಸವೇಳಮ್ಮ ಪುರವನಿತೆಯಂ, ರಾಜ್ಞಿ
.................. ಲಂಕಾ
ಲತಾಂಗಿಯರ್ ಸಂಗೀತದಿಂದುಲಿಯಲೀ ಮಹಾ
ರಾವಣ ವಿಜಯ ಕಥಾ ಕಾವ್ಯಮಂ! ಗೆದ್ದೆನಾ
ರಾಮನಂ! ಸೆರೆವಿಡಿದೆ ತಂದಿಹೆನ್!

ತನ್ನ ಬಲುದಿನದ ಆಸೆ ಪೂರೈಸಿತು ಎಂಬ ಸಮಾಧಾನ, ಅವನಿಗೆ. ತನ್ನ ಈ 'ಸಾಧನೆ'ಯನ್ನು ಪತ್ನಿಗೆ ತಿಳಿಸುತ್ತ

ನೋಡಿಲ್ಲಿ! ಭದ್ರ ಮುಷ್ಟಿಯೊಳೆಂತು ಪಿಡಿದಿಹೆನ್
ಭುವನೈಕ ವೀರನಂ! ಕೊಳ್ಳಿದಂ ಕಪ್ಪಮಂ.
ಕಾಣ್ಕೆಗೊಡು ಮಾತೆ ಸೀತೆಗೆ 'ನಿನಗೆ ಸೋಲ್ತಲ್ಲವಂ
ನಿನಗೆ ತಾನೆಯೆ ಸೋಲ್ತು, ನೀಂ ಸೋಲಾತ್ತನಂ
ಗೆಲ್ದೊಪ್ಪಿಸಿಹನದಕೆ ತಪ್ಪಂ ಕ್ಷಮಿಪು'ದೆಂದು

ಎಂದು ಎದೆಗೆ ನಾಟಿದ್ದ ಬ್ರಹ್ಮಾಸ್ತ್ರವನ್ನು ಭದ್ರವಾಗಿ ಬಿಗಿದ ಮುಷ್ಟಿಯಲ್ಲಿ ಅಪ್ಪಿಕೊಂಡು, ತನ್ನ ರಾಣಿಗೆ ಅದನ್ನು ತೋರಿಸುತ್ತಾನೆ.

ನೀಂ ಪಡಿದುದು ಬಾಣಪುಂಖಂ, ಮಹಾಮತಿ;
ರಘೋತ್ತಮನ ಗಾತ್ರವೆಂಬೀ ಭ್ರಾಂತಿಯಿಂ ಬರಿದೆ
ಕೀಳ್ತೆಸೆಯಲರ್ಹವಾದುದನಿಂತು ಬಿಗಿದಪ್ಪಿ
ತಪ್ಪುತಿರ್ಪಯ್

ಎಂದು ಮಂಡೋದರಿ ತನ್ನ ಗಂಡನಿಗೆ ಅವನ ಭ್ರಾಂತಿಯನ್ನು ಮನವರಿಕೆ ಮಾಡಲು ಪ್ರಯತ್ನ ಪಟ್ಟಾಗಲೂ, ರಾವಣನು

ರಾಮನಂ
ಪ್ರಾಣರೂಪದಿನಿಲ್ಲಿ ಪಡೆದಿಹೆನ್ ಪೂರ್ಣಮಂ
..................................
ನೀಂ ಪತಿವ್ರತೆಯಪ್ಪೊಡೆನ್ನೆಂದುದಂ ಮಾಡು!
ನನ್ನ ವಕ್ಷದಿನೆಳೆದು ತೆಗೆಯಿದಂ. ಸೀತೆ ಮೇಣ್
ನೀನಲ್ಲದನ್ಯರಿಂದಾಗದೀ ರಾಮನ ಮಹಾನ್
ಶರಶರೀರಮಂ ಸ್ಪರ್ಶಿಸಲ್ಕೆ

ಎಂಬ ಮಾತು ಮಂಡೋದರಿ ಪಡೆದ ಸ್ಥಾನವನ್ನು ವ್ಯಕ್ತಪಡಿಸುತ್ತದೆ. ಅವಳು ಶಿವಭಕ್ತೆ; ಮಹಾ ಪತಿವ್ರತೆ, ಸೀತೆಯಂತೆ. ಇವರಿಬ್ಬರು ಮಾತ್ರ (ಶ್ರೀರಾಮನೆಂದು ಭ್ರಮಿಸಿದ) ಆ ಬ್ರಹ್ಮಾಸ್ತ್ರವನ್ನು ಮುಟ್ಟಲು ಯೋಗ್ಯತೆ ಪಡೆದವರು! ಅಲ್ಲದೆ ಈ ಮಾತುಗಳು ರಾವಣನು ತನ್ನ ಪತ್ನಿಯ ಮೇಲಿಟ್ಟ ಗೌರವ ಭಾವವನ್ನೂ ವ್ಯಕ್ತಪಡಿಸುತ್ತದೆ.

ಗಂಡನ ಮಾತನ್ನು ಮೀರಲಾರದೆ, ರಾವಣನ ಮುಷ್ಟಿಯನ್ನು ಸಡಿಲಿಸಿ ಆ ಬ್ರಹ್ಮಾಸ್ತ್ರವನ್ನು ಕೀಳುತ್ತಾಳೆ. ಒಡನೆಯೆ,

ವಕ್ಷಮೋಕರಿಸಿದುದೆ ತಡಂ
ತನ್ನನಾ ಬ್ರಹ್ಮಬಾಣಂ ರಾವಣಪ್ರಾಣಮಂ
ಪೀರ್ದು ಪಡೆದುದು ಮೋಕ್ಷಮಂ ರಾಮನಾತ್ಮದಲಿ

ಹೀಗೆ, ರಾವಣನ ಆತ್ಮವು ಶ್ರೀರಾಮನಲ್ಲಿ ಐಕ್ಯವಾಗಿ, ಮೋಕ್ಷ ಪಡೆಯಿತು. ಈ ಎಲ್ಲ ವೃತ್ತಾಂತವನ್ನು ಕುವೆಂಪುರವರು 'ದೈತ್ಯನೇರ್ದಂ ಚೈತ್ಯಮಂಚಮಂ' ಎಂಬ ಅಧ್ಯಾಯದಲ್ಲಿ ಹೃದಯಂಗಮವಾಗಿ ವಿವರಿಸಿದ್ದಾರೆ. ಛಲದಿಂದ ಸಾರಿದ ಹೋರಾಟದಲ್ಲಿ ಅವನು ತನ್ನದೆ ಆದ 'ಜಯ'ವನ್ನು ಮುಕ್ತಿ ರೂಪದಲ್ಲಿ ಪಡೆಯುತ್ತಾನೆ. ರಾವಣನ ಸಂಹಾರವನ್ನೂ 'ಮುಕ್ತಿ' ಎಂಬಂತೆ ವರ್ಣಿಸಿದ್ದಾರೆ, ಕುವೆಂಪು! ಅವರ ಕಾವ್ಯದೃಷ್ಟಿಯಲ್ಲಿ ವಾಲಿ, ಕಬಂಧ, ಶೂರ್ಪನಖಿ, ಮತ್ತಿತರ 'ದುಷ್ಟ'ರ ಸಂಹಾರವೆಲ್ಲವೂ 'ಮೋಕ್ಷ'ವಾಗಿ ಪರಿಣಮಿಸುತ್ತದೆ.

'ಪಾಪಿ'ಗಳೆಂದು ಕರೆಯಿಸಿಕೊಂಡ ಇವರಲ್ಲಿ ಒಂದಲ್ಲ ಒಂದು ಸುಗುಣವನ್ನು ಗುರುತಿಸಿ, ಎತ್ತಿ ತೋರಿಸಿದ್ದಾರೆ, ಕುವೆಂಪು. ಅದು ಅವರ ವಿಶಿಷ್ಟ ಕಾವ್ಯದೃಷ್ಟಿ!

ಕವಿಯ ಇಂತಹ ವರ್ಣನೆ ಎಂತಹರನ್ನೂ ಬೆರಗುಗೊಳಿಸುವಂತಹದೆ! ಮಹಾ ಶಿವಭಕ್ತನಾದ ರಾವಣನು, ಅದೇನೋ ಚಪಲತೆಯಿಂದ ಸೀತಾಪಹರಣ ಮಾಡಿ, ಶ್ರೀರಾಮನ ಅವತಾರ ಪೂರ್ಣತೆಗೆ ಕಾರಣನಾಗುತ್ತಾನೆ. ಅವನ ಸಾವಿನಲ್ಲೂ ಚೈತನ್ಯ ಮೂಡಿ ಬಂತು ಎಂಬಂತೆ ಕವಿ ಇಲ್ಲಿ ನಿರೂಪಿಸಿದ್ದಾರೆ. ಜಡದಲ್ಲೂ ಚೈತನ್ಯ! ನಡೆದ ತಪ್ಪನ್ನು ಸರಿಪಡಿಸಿದಾಗ ಉತ್ಪನ್ನವಾದ ಚೈತನ್ಯವಿದು! ರಾವಣನೊಬ್ಬ ಛಲಗಾರ; ಏನೋ ಚಾಪಲ್ಯದಿಂದ ಸೀತಾಪಹರಣವೆಂಬ ತಪ್ಪನ್ನು ಮಾಡಿದ್ದಾನೆ. ಮಾಡಿದ ತಪ್ಪಿನ ಅರಿವಿದ್ದರೂ ಅದನ್ನು ಯಾರೊಡನೆಯೂ ಒಪ್ಪಿಕೊಳ್ಳುವ ಸ್ವಭಾವ ಅವನದಲ್ಲ. ಆದರೆ, ಸೀತಾದೇವಿಗೆ ಆದ ಅನ್ಯಾಯದ ಪರಿಹಾರಕ್ಕೆ ದಾರಿ ಏನು? ರಾಮನಿಗೆ ಶರಣಾಗತನಾಗುವುದು ಅವನ ಸಮಸ್ಯೆಗೊಂದು ಪರಿಹಾರ; ಆದರೆ, ಹಾಗೆ ಮಾಡುವುದು ಅವನ ಸ್ವಭಾವಕ್ಕೆ ವಿರೋಧ. ಈ ಸಮಸ್ಯೆಗೆ ಕುವೆಂಪು ಬಳಸಿದ ಪರಿಹಾರ ವಿಶಿಷ್ಟವಾದುದು. ಶ್ರೀರಾಮನನ್ನು ಸೆರೆ ಹಿಡಿದೆನೆಂಬ ಭ್ರಾಂತಿಯನ್ನು ರಾವಣನಲ್ಲಿ ಹುಟ್ಟಿಸಿ, ಸೀತಾದೇವಿಯಲ್ಲಿ ಮಾತ್ರ ತನ್ನ ತಪ್ಪನ್ನು ಒಪ್ಪಿಕೊಂಡು, ಆ ತಪ್ಪಿಗೆ 'ಕಪ್ಪ'ವಾಗಿ ಸೆರೆಹಿಡಿದ ಶ್ರೀರಾಮನನ್ನು ಅವಳಿಗೆ ಒಪ್ಪಿಸಿ, ತನ್ನ ಹೃದಯವನ್ನು ಹಗುರ ಮಾಡಿಕೊಳ್ಳುವ ಮಾರ್ಗವನ್ನು ಇಲ್ಲಿ ಹೆಣೆದಿದ್ದಾರೆ, ಕುವೆಂಪು. ಈ ಪರಿಹಾರವೇ ರಾವಣನನ್ನು 'ಚೈತ್ಯ'ಮಂಚಕ್ಕೆ ಏರಿಸುತ್ತದೆ; ಅವನಿಗೆ ಮೋಕ್ಷವನ್ನೂ ದೊರಕಿಸುತ್ತದೆ.

ಈ ರೀತಿಯಲ್ಲಿ ರಾವಣನನ್ನು ಚಿತ್ರಿಸಿರುವುದು ನನಗೆ ಬಹಳ ಆಕರ್ಷಕವಾಗಿ ಕಂಡಿತು. ಇಲ್ಲಿ ಕುವೆಂಪುರವರು ಬಳಸಿದ ಸನ್ನಿವೇಶಕ್ಕೆ ವಿಶಿಷ್ಟ ಅರ್ಥ ದೊರಕುವುದು. ಎಲ್ಲರಲ್ಲೂ ಸರಿ-ತಪ್ಪು, ಒಳಿತು-ಕೆಟ್ಟದರ ಮಿಶ್ರಣಗಳನ್ನು ನಾವು ನೋಡಬಹುದು. ಅತಿ ದುಃಖದ ಮಧ್ಯೆಯೂ ಸುಖವೆಂಬ ಆಶಾಕಿರಣ ಮೂಡುತ್ತಿರುತ್ತದೆ. ಗಾಂಧೀಜಿ ಹೇಳಿದ ಹಾಗೆ ಸುಳ್ಳಿನ ಮಧ್ಯದಲ್ಲೂ ಸತ್ಯ ಮನೆ ಮಾಡಿರುತ್ತದೆ. ಹಾಗೆಯೇ, ಕೆಟ್ಟುದರಲ್ಲಿಯೂ ಎಲ್ಲೋ 'ಒಳ್ಳೆಯತನ' ಅಡಗಿರುತ್ತದೆ. ಎಲ್ಲರೂ ಓದಿ ತಿಳಿದಂತೆ, ರಾವಣ ಛಲಗಾರನಿರಬಹುದು; ಸೀತೆಯನ್ನು ಅಪಹರಿಸಿದಂತಹ ತಪ್ಪನ್ನು ಮಾಡಿರಬಹುದು. ಆದರೆ, ಅವನೊಬ್ಬ ಅನನ್ಯ ಶಿವಭಕ್ತ! ಅವನಲ್ಲೂ ವಿವೇಕದ ಸುಳಿವನ್ನು ಕಂಡು, ಕುವೆಂಪುರವರು ಅದನ್ನು ಎತ್ತಿ ತೋರಿಸಿದ್ದಾರೆ. ಅವನ ಪಾಪಕಾರ್ಯಕ್ಕೆ ಮುಕ್ತಿ ದೊರಕಿಸಿದ್ದಾರೆ ತಮ್ಮ ಮಹಾಕಾವ್ಯ 'ಶ್ರೀ ರಾಮಾಯಣ ದರ್ಶನಂ'ನಲ್ಲಿ. 'ಒಳ್ಳೆಯತನ', 'ಕೆಟ್ಟತನ' ಎಂಬುದು ಬಹಳ ಸಂಕೀರ್ಣವಾದುದು; ಕ್ಲಿಷ್ಟವಾದುದು. ಅವು ಬೇರೆ ಬೇರೆ ಸಂದರ್ಭದಲ್ಲಿ ಬೇರೆ ಬೇರೆ ರೀತಿಯಲ್ಲಿ ಅರ್ಥೈಸಿಕೊಳ್ಳಬಹುದಾದ ಪದಗಳು. ಇವನ್ನೆಲ್ಲ ರಾವಣನ ಅಂತ್ಯದ ಘಟನಾವಳಿಯಲ್ಲಿ ಹೃದಯಸ್ಪರ್ಶಿಯಾಗಿ ಮೂಡಿಸಿದ್ದಾರೆ, ಕುವೆಂಪು ತಮ್ಮ ಕಾವ್ಯದಲ್ಲಿ.

'ಶ್ರೀ ರಾಮಾಯಣ ದರ್ಶನಂ' ಕಾವ್ಯದಲ್ಲಿ ಹಲವಾರು 'ಪತಿತ'ರು ಪಾವನರಾಗಿದ್ದಾರೆ; ಧನ್ಯರಾಗಿದ್ದಾರೆ. ಇಂತಹ ದಾರ್ಶನಿಕ ಕಾವ್ಯವನ್ನು ರಚಿಸಿ ನಮ್ಮನ್ನೂ ಧನ್ಯರನ್ನಾಗಿ ಮಾಡಿರುತ್ತಾರೆ, ಕುವೆಂಪು. ಈ ಅಪೂರ್ವ 'ದರ್ಶನಂ' ನೀಡಿದ ರಸಋಷಿಗೆ ನಾವೆಲ್ಲರೂ ಕೃತಜ್ಞರೆ!



## ಈ ಪುಸ್ತಕದ ಅಮೆರಿಕನ್ನಡಿಗ ಲೇಖಕರ ಕಿರುಪರಿಚಯ

(ಈ ಗ್ರಂಥದಲ್ಲಿ ಪ್ರಕಟವಾದ ಲೇಖನಗಳನ್ನು ಬರೆದ ಎಲ್ಲ ಲೇಖಕರ ಕಿರು ಪರಿಚಯವನ್ನು ಈ ಕೆಳಗೆ ಕೊಡಲಾಗಿದೆ. ಹೆಸರುಗಳ ಕೊನೆಯಲ್ಲಿ ಕಾಣಿಸಿದ ಸಂಖ್ಯೆಗಳು ಗ್ರಂಥದ ಅನುಕ್ರಮಣಿಕೆಯಲ್ಲಿ ಸೂಚಿಸಿದ ಲೇಖನಗಳ ಸಂಖ್ಯೆಗಳಾಗಿರುತ್ತವೆ. ಗ್ರಂಥ ಪ್ರಕಟವಾದ ಸಮಯದಲ್ಲಿ (ಮೇ ೨೦೦೪) ನಮಗೆ ದೊರೆತ ಲೇಖಕರ ವಿಳಾಸ ಕೆಳಗೆ ಕಾಣಿಸಿದಂತಿದೆ.)

### ಆಹಿತಾನಲ / ನಾಗ ಐತಾಳ (೪.೨ ಮತ್ತು ೪.೪)

ಹುಟ್ಟೂರು ಕರ್ನಾಟಕದ ಕರಾವಳಿಯ ಕೋಟ. ಬೆಂಗಳೂರಿನಲ್ಲಿ ಓದು-ಬರಹ. ಅಲ್ಲಿಯ ಸೇಂಟ್ ಜೋಸೆಫ್ಸ್ ಕಾಲೇಜಿನಲ್ಲಿ ಓದಿ ಬಿ.ಎಸ್‌ಸಿ. ಪದವಿ ಪಡೆದ ಮೇಲೆ ಬನಾರಸ್ ಹಿಂದೂ ಯುನಿವರ್ಸಿಟಿಯಿಂದ ಬಿ. ಫಾರ್ಮ್ ಡಿಗ್ರಿ ಪಡೆದರು. ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಸೈನ್ಸ್‌ನಿಂದ ಎಂ.ಎಸ್‌ಸಿ. ಮತ್ತು ಪಿಎಚ್.ಡಿ (ಬಯೋಕೆಮಿಸ್ಟ್ರಿ) ಡಿಗ್ರಿ ಪಡೆದ ನಂತರ ಅರವತ್ತರ ದಶಕದ ಕೊನೆಯಲ್ಲಿ ಅಮೆರಿಕಕ್ಕೆ ವಲಸೆ ಬಂದರು. ಮೊದಲಿಗೆ ಲಾಸ್ ಏಂಜಲಿಸ್‌ನ USC School of Medicine ನಲ್ಲಿ ಬಯೋಕೆಮಿಸ್ಟ್ರಿ ವಿಭಾಗದಲ್ಲಿ ಕೆಲಸ ಮಾಡಿ, ಮತ್ತೆ ಸ್ವಲ್ಪ ಸಮಯ ಕ್ಯಾನಡದಲ್ಲೂ ಕೆಲಸ ಮಾಡಿದರು. ೧೯೭೫ ರಿಂದ ೨೫ ವರ್ಷ ಕಾಲ ಷಿಕಾಗೋ ಯೂನಿವರ್ಸಿಟಿಯಲ್ಲಿ ಕೆಲಸ ಮಾಡಿ, ೨೦೦೧ ರಲ್ಲಿ ನಿವೃತ್ತರಾದರು. ತಮ್ಮ ನಿವೃತ್ತ ಜೀವನವನ್ನು ಸ್ವಲ್ಪ ದಿನ ಮಗಳು ಅನುರಾಧಳ ಮನೆ (ಲಾಸ್ ಏಂಜಲಿಸ್ ಬಳಿಯ ಆರ್ಕೇಡಿಯ)ಯಲ್ಲೂ, ಸ್ವಲ್ಪ ಸಮಯ ಮಗ ಅರವಿಂದನ ಮನೆ (ನ್ಯೂಜರ್ಸಿ)ಯಲ್ಲೂ ಧರ್ಮಪತ್ನಿ ಲಕ್ಷ್ಮಿಯ ಜೊತೆ ಆರಾಮವಾಗಿ ಕಳೆಯುತ್ತಿದ್ದಾರೆ.

ಸಂಪರ್ಕ :
816, Othello Street
Arcadia, california 91006
E-mail : nagaaithal@yahoo.com

### ಶಶಿಕಲಾ ಕುಲಕರ್ಣಿ (೩.೬)

ಶ್ರೀಮತಿ ಶಶಿಕಲಾ ಕುಲಕರ್ಣಿಯವರು ಮೂಲತಃ ಹಂಪಿ ಸಮೀಪದ ಕೊಪ್ಪಳ ಜಿಲ್ಲೆಯವರು. ೧೯೯೧ರಲ್ಲಿ ಇವರು ಅಮೆರಿಕಕ್ಕೆ ವಲಸೆ ಬಂದವರು. ಸಾಹಿತ್ಯ ಮತ್ತು

ಸಂಗೀತದಲ್ಲಿ ಬಹಳ ಆಸಕ್ತಿಯುಳ್ಳವರು. ತಂದೆ-ತಾಯಿಯರ ಉತ್ತೇಜನದಿಂದಲೇ ಹಲವು ಕವನಗಳನ್ನು 'ಪ್ರಪಂಚ', 'ಉತ್ಥಾನ', 'ಮಲ್ಲಿಗೆ' ಮುಂತಾದ ಪತ್ರಿಕೆಗಳಲ್ಲಿ ಪ್ರಕಟಿಸಿದ್ದಾರೆ. ಹತ್ತಿರದ ಒಂದು Pre-Schoolನಲ್ಲಿ ಕೆಲಸ ಮಾಡಿಕೊಂಡು, ತಮ್ಮ ಪತಿ, ಶ್ರೀ ಪ್ರದೀಪ್ ಕುಲಕರ್ಣಿ (ಸಾಫ್ಟ್‌ವೇರ್ ಇಂಜಿನೀಯರ್), ಮಕ್ಕಳು ಸೂರಜ್ ಮತ್ತು ಸಂತೋಷ್‌ರ ಜೊತೆಗೆ ವರ್ಜೀನಿಯದ ಹೆರ್ನ್‌ಡನ್‌ನಲ್ಲಿ ವಾಸವಾಗಿರುತ್ತಾರೆ.

ಸಂಪರ್ಕ :
1562, Kingsstream Circle,
Herrdon, Virginia 20170
E-mail : shashikalap@netzero.com

## ಲಕ್ಷ್ಮೀನಾರಾಯಣ ಗಣಪತಿ (೧.೬)

ದಕ್ಷಿಣ ಕನ್ನಡದವರಾದ ಇವರು ಹುಟ್ಟಿದ್ದು ತಮಿಳುನಾಡಿನ ಕೊಯಮತ್ತೂರಿನಲ್ಲಿ; ಪ್ರಾಥಮಿಕ, ಹೈಸ್ಕೂಲು ವಿದ್ಯಾಭ್ಯಾಸ ಸೂರತ್ಕಲ್ಲಿನಲ್ಲಿ. ಸಾಲಿಡ್ ಸ್ಟೇಟ್ ಕೆಮಿಸ್ಟ್ರಿಯಲ್ಲಿ ಪಿ.ಎಚ್.ಡಿ. (I.I.Sc., Bangalore) ಪಡೆದು, ಸಂಶೋಧಕ ಪ್ರೋಗ್ರಾಮರ್ ಆಗಿ ವೃತ್ತಿ ನಡೆಸುತ್ತಿದ್ದಾರೆ. ಆದರೆ, ಸಾಹಿತ್ಯದಲ್ಲಿ ಬಹಳ ಆಸಕ್ತರಾಗಿದ್ದಾರೆ. ೧೯೮೮ ರಲ್ಲಿ ಅಮೆರಿಕಕ್ಕೆ ವಲಸೆ ಬಂದು ನಾರ್ತ್ ಕ್ಯಾರೊಲಿನದಲ್ಲಿ ಮೊದಲಿಗೆ State University ಯಲ್ಲೂ, ರ್‍ಯಾಲಿಯಲ್ಲಿನ St. Agustine's Collegeನಲ್ಲೂ ಬೋಧಿಸಿ, ಈಗ RTI International, Research Triangle Park, NCದಲ್ಲಿ Research Programer and Analyst ಆಗಿ ಕೆಲಸ ಮಾಡುತ್ತಿದ್ದಾರೆ.

ಸಂಪರ್ಕ :
125, Beasley Court,
Cary, North Carolina, 27513
E-mail : akash2000@yahoo.com

## ರಮೇಶ್ ಎ.ಎಮ್. ಗೌಡ (೩.೨)

ಶ್ರೀ ರಮೇಶ ಗೌಡರು ಹಾಸನ ಜಿಲ್ಲೆಯ ಅವರೆಕಾಡಿನವರು; ಅಚ್ಚ ಮಲೆನಾಡಿಗರು. ಮಲೆನಾಡಿನ ಹಲವು ಚಟುವಟಿಕೆಗಳಲ್ಲಿ ಬಹಳ ಆಸಕ್ತರಾಗಿರುವವರು. ತಾರುಣ್ಯದಲ್ಲಿ ಬೇಟೆಯಾಡುವುದು ಇವರ ಹವ್ಯಾಸದಲ್ಲೊಂದಾಗಿತ್ತು. ಶ್ರೀ ಗೌಡರು ವೃತ್ತಿಯಲ್ಲಿ ದಂತ ವೈದ್ಯರು; ಬೆಂಗಳೂರು ಡೆಂಟಲ್ ಕಾಲೇಜಿನಲ್ಲಿ ವ್ಯಾಸಂಗ ಮಾಡಿ ಡೆಂಟಿಸ್ಟ್ರಿಯಲ್ಲಿ ಪದವೀಧರರಾದರು. ಕನ್ನಡ ಸಾಹಿತ್ಯ ಸಂಸ್ಕೃತಿಗಳ ಮಧ್ಯೆ ಬೆಳೆದುಬಂದ ಇವರಿಗೆ ಅದು ಸಾಹಿತ್ಯಾಭಿಲಾಶೆಯನ್ನು ಹೆಚ್ಚಿಸಿಕೊಳ್ಳುವುದಕ್ಕೆ ತುಂಬ ಅವಕಾಶ ನೀಡಿತು. ೧೯೭೬ರಲ್ಲಿ

ಅಮೆರಿಕಕ್ಕೆ ವಲಸೆ ಬಂದ ಶ್ರೀ ಗೌಡರು ಮಡದಿ ಗೀತ ಮತ್ತು ಮಕ್ಕಳೊಂದಿಗೆ ಪ್ರಸ್ತುತ ಲಾಸ್ ಏಂಜಲೀಸ್ ಸಮೀಪದ ಡೈಮಂಡ್ ಬಾರ್‌ನಲ್ಲಿ ವಾಸವಾಗಿದ್ದಾರೆ.

ಸಂಪರ್ಕ :
1634, Summitridge Drive,
Diamond bar, California 91765
E-mail : avarekad@@aol.com

## ಗುಂಡುಶಂಕರ (೩.೭)

ಶ್ರೀ ಗುಂಡುಶಂಕರರು ಹುಟ್ಟಿದ್ದು ಚಿತ್ರದುರ್ಗದಲ್ಲಿ. ಆದರೆ, ಅವರ ತಂದೆಯವರ ಉದ್ಯೋಗದಿಂದಾಗಿ ಬೆಳೆದದ್ದು ಹೆಚ್ಚಾಗಿ ಕರ್ನಾಟಕದಿಂದ ಹೊರಗೆ. ಹಾಗಾಗಿ ಅವರಿಗೆ ಶಾಸ್ತ್ರೋಕ್ತ ಕನ್ನಡ ಅಧ್ಯಯನವಾಗಿಲ್ಲ. ಆದರೂ ಕನ್ನಡದಲ್ಲಿ ಮತ್ತು ಕನ್ನಡ ಸಾಹಿತ್ಯದಲ್ಲಿ ಬಹಳ ಆಸಕ್ತಿಯುಳ್ಳವರು. ಅವರ ಮನೆಯಲ್ಲಿರುವ ನೂರಾರು ಪುಸ್ತಕಗಳನ್ನು ಆಸಕ್ತಿಯಿಂದ ಓದಿ, ಕನ್ನಡದಲ್ಲಿ ಅಭಿಮಾನ ಹುಟ್ಟಿಸಿಕೊಂಡರು. Indian Institute of Science ನಿಂದ B.E. ಡಿಗ್ರಿ ಪಡೆದ ಮೇಲೆ ಕಲ್ಕತ್ತದ Indian Institute of Management ನಿಂದ MBA ಡಿಗ್ರಿ ಪಡೆದರು. ಗುಂಡುಶಂಕರರು ಅಮೆರಿಕಕ್ಕೆ ವಲಸೆ ಬಂದು ಇಪ್ಪತ್ತು ವರ್ಷಕ್ಕೂ ಮೇಲಾಗಿದೆ. ಐಟಿ. ಕನ್ಸಲ್ಟೆಂಟ್ ಆಗಿ ಹಲವು ವರ್ಷ ಕೆಲಸ ಮಾಡಿದ ಮೇಲೆ, ಈಗ ಪೆನ್ಸಿಲ್ವೇನಿಯದ ಪ್ರಸಿದ್ಧ ಫಾರ್ಮಾಸ್ಯೂಟಿಕಲ್ ಕಂಪನಿಯೊಂದರಲ್ಲಿ ಉದ್ಯೋಗ ನಡೆಸುತ್ತಿದ್ದಾರೆ. ನ್ಯೂಜರ್ಸಿಯ ಫ್ರೀಹೋಲ್ಡ್ ಎಂಬಲ್ಲಿ ಈಗ ವಾಸಮಾಡುತ್ತಿದ್ದಾರೆ.

ಸಂಪರ್ಕ :
194, Schank Road,
Freehold, new Jersey 07728
E-mail : gundu_shankar@hotmail.com

## ಎಚ್.ಕೆ. ಚಂದ್ರಶೇಖರ್ (೩.೩)

ನ್ಯೂಯಾರ್ಕ್‌ನಲ್ಲಿ ಹೆಸರಾಂತ E.N.T. ವೈದ್ಯರಾದ ಇವರು ಬಹುಮುಖ ಮೇಧಾವಿಗಳು. ತಮ್ಮ ವೈದ್ಯಕೀಯ ಕೆಲಸವನ್ನು ಹಲವು ಸಂಸ್ಥೆಗಳಲ್ಲಿ ಮಾಡುವುದಲ್ಲದೆ, N.Y. School of Medicine ನಲ್ಲಿ Ottolaryngology ವಿಭಾಗದಲ್ಲಿ Associate Professor ಆಗಿಯೂ ಕೆಲಸ ಮಾಡುತ್ತಿದ್ದಾರೆ. ನ್ಯೂಯಾರ್ಕ್ ಮೇಯರ್ ಮತ್ತು ಗೌರ್ನರ್‌ರು ಸ್ಥಾಪಿಸಿದ ಹಲವು ಸಮಿತಿಗಳಲ್ಲಿ ಸದಸ್ಯರಾಗಿ ನೇಮಕಗೊಂಡು ಸಾರ್ವಜನಿಕ ಕೆಲಸವನ್ನೂ ಮಾಡುತ್ತಿದ್ದಾರೆ. ನ್ಯೂಯಾರ್ಕ್ ಪ್ರದೇಶದ ಭಾರತೀಯ ಜನಾಂಗದ ಪ್ರಮುಖರಲ್ಲೊಬ್ಬರಾಗಿದ್ದು, ಅನೇಕ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಬಹುಮುಖ್ಯ ಪಾತ್ರ

ವಹಿಸುತ್ತಿದ್ದಾರೆ. ಅಮೆರಿಕದ ಈಶಾನ್ಯ ವಲಯದ ಕನ್ನಡ ಸಮ್ಮೇಳನ ಆರಂಭಿಸಿದವರು ಇವರು. ಚಂದ್ರಶೇಖರರು, ನ್ಯೂಯಾರ್ಕ್‌ನಲ್ಲಿ ಗಾಂಧೀ ಪ್ರತಿಮೆಯ ಸ್ಥಾಪನೆಗೆ ಕಾರಣರಾದ ಗಾಂಧೀಭಕ್ತರೂ ಹೌದು, ಒಬ್ಬ ಪ್ರಮುಖ ಅಮೆರಿಕನ್ನಡಿಗರೂ ಹೌದು. 'ಸುದ್ದಿ ಸಾರಂಗಿ' ಎಂಬ ಕೈಬರಹದ ಕನ್ನಡ ವಾರ್ತಾ ಸಂಚಿಕೆಯನ್ನೂ ಪ್ರಾರಂಭಿಸಿದವರು. ಕನ್ನಡ ಸಾಹಿತ್ಯದಲ್ಲೂ ಸಂಸ್ಕೃತಿಯಲ್ಲೂ ಅತ್ಯಂತ ಆಸಕ್ತಿಯುಳ್ಳವರು. ಇತ್ತೀಚೆಗೆ (೨೦೦೨) 'ಭಾರತದ ಬೃಹತ್ ಬೇಲಿ' ಎಂಬ ಅಪೂರ್ವ ಗ್ರಂಥವನ್ನು ಚಂದ್ರಶೇಖರ್ ಪ್ರಕಟಿಸಿದ್ದಾರೆ. ಕನ್ನಡ ಸಾಹಿತ್ಯದಲ್ಲೂ ಸಂಸ್ಕೃತಿಯಲ್ಲೂ ತಮ್ಮಂತೆಯೇ ಅಭಿಲಾಷೆಯುಳ್ಳ ಮಡದಿ ಶ್ರೀದೇವಿ ಜೊತೆ ನ್ಯೂಯಾರ್ಕ್‌ನಲ್ಲಿ ಪ್ರಸ್ತುತ ವಾಸವಾಗಿದ್ದಾರೆ.

ಸಂಪರ್ಕ :
630, First Avenue, # 6B
New York, NY 10016
E-mail : hkcs@worldnet.att.net

## ಶಶಿಕಲಾ ಚಂದ್ರಶೇಖರ್ (೨.೭)

ಕನ್ನಡ ಸಂಸ್ಕೃತಿ ಮತ್ತು ಸಾಹಿತ್ಯದಲ್ಲಿ ಅತ್ಯಂತ ಆಸಕ್ತಿಯುಳ್ಳ ಶ್ರೀಮತಿ ಶಶಿಕಲಾ ಅವರು ಬಹಳಷ್ಟು ಲೇಖನಗಳನ್ನು ಬರೆದಿದ್ದಾರೆ. ಇವರ ಲೇಖನಗಳೂ, ಕತೆಗಳೂ, ಕವನಗಳೂ ಭಾರತದ ಅನೇಕ ಪತ್ರಿಕೆಗಳಲ್ಲಿ- ಪ್ರಜಾವಾಣಿ, ತುಷಾರ, ವಿಜಯಕರ್ನಾಟಕ, ಮಯೂರ, ಕನ್ನಡಪ್ರಭ (ದಿನಪತ್ರಿಕೆ ಮತ್ತು ದೀಪಾವಳಿ ಸಂಚಿಕೆ), ಲಂಕೇಶ ಪತ್ರಿಕೆ, ಇತ್ಯಾದಿ, ಹಾಗೂ ಕನ್ನಡ ಅಂತರ್ಜಾಲ ಪತ್ರಿಕೆ ದಟ್ಸ್ ಕನ್ನಡದಲ್ಲೂ ಪ್ರಕಟವಾಗಿದೆ. ವಾಷಿಂಗ್‌ಟನ್ ಡಿ.ಸಿ. ಪ್ರದೇಶದ ಕನ್ನಡ ಕೂಟ, 'ಕಾವೇರಿ'ಯ ಚಟುವಟಿಕೆಗಳಲ್ಲಿ ಅತ್ಯಂತ ಆಸಕ್ತಿಯಿಂದ ಭಾಗವಹಿಸುತ್ತಿರುವುದಲ್ಲದೆ ಅಧ್ಯಕ್ಷಿಣಿಯಾಗಿಯೂ ತಮ್ಮ ಸೇವೆ ಸಲ್ಲಿಸಿರುತ್ತಾರೆ. 'ಅಮೆರಿಕ ಅಮೆರಿಕ', 'ನನ್ನ ಪ್ರೀತಿಯ ಹುಡುಗಿ' ಮತ್ತು 'ಪ್ಯಾರೀಸ್ ಪ್ರಣಯ' ಚಲನಚಿತ್ರಗಳಿಗೆ ಕಥೆ, ಸಂಭಾಷಣೆ ಮತ್ತು ಹಾಡುಗಳನ್ನೂ ಇವರು ಒದಗಿಸಿದ್ದಾರೆ. ಶಿಕಾಗೋದಲ್ಲಿ ಕೆಲವುವರ್ಷ ವಾಸವಾಗಿದ್ದು ಈಗ ಮೇರಿಲ್ಯಾಂಡ್‌ನ ಬಾಯ್‌ಡ್ಸ್ ಎಂಬಲ್ಲಿ ವಿಜ್ಞಾನಿ ಪತಿ ಚಂದ್ರಶೇಖರ್‌ರೊಡನೆ ವಾಸವಾಗಿದ್ದಾರೆ.

ಸಂಪರ್ಕ :
18450, Broad Leaf Road,
Boyds, Maryland 20841
E-mail : shashic@hotmail.com

## ಶ್ರೀವತ್ಸ ಜೋಶಿ (೧.೩)

ಮೂಲತಃ ಉಡುಪಿ ಜಿಲ್ಲೆಯ ಕಾರ್ಕಳದವರಾದ ಶ್ರೀವತ್ಸ ಜೋಶಿಯವರು, ಕಂಪ್ಯೂಟರ್ ವಿಭಾಗದಲ್ಲಿ ತಾಂತ್ರಿಕ ಶಿಕ್ಷಣ ಪಡೆದು ದೆಹಲಿ, ಹೈದರಾಬಾದು, ಬೆಂಗಳೂರು ಮುಂತಾದ ಕಡೆ ಉದ್ಯೋಗದ ನಂತರ ಈಗ ಅಮೆರಿಕಕ್ಕೆ ವಲಸೆ ಬಂದು ವೃತ್ತಿ ಜೀವನ ನಡೆಸುತ್ತಿದ್ದಾರೆ. ಪ್ರಸ್ತುತ ಮೇರೀಲ್ಯಾಂಡ್‌ನಲ್ಲಿನ ಬಯೋಟೆಕ್ ಕಂಪನಿಯೊಂದರ ಕಂಪ್ಯೂಟರ್ ವಿಭಾಗದಲ್ಲಿ ಉದ್ಯೋಗಿಯಾಗಿದ್ದಾರೆ. ಕನ್ನಡ ನಾಡು-ನುಡಿ-ಭಾಷೆ-ಸಂಸ್ಕೃತಿಯ ಬಗ್ಗೆ ಅಭಿಮಾನವಷ್ಟೇ ಅಲ್ಲದೆ ಪತ್ರಿಕಾರಂಗದ ಬಗ್ಗೆಯೂ ಆಸಕ್ತಿಯಿರುವ ಇವರು 'ದಟ್ಸ್‌ಕನ್ನಡ ಡಾಟ್ ಕಾಂ' ಅಂತರ್ಜಾಲ ಕನ್ನಡ ಪತ್ರಿಕೆಯಲ್ಲಿ 'ವಿಚಿತ್ರಾನ್ನ'ವೆಂಬ ಶೀರ್ಷಿಕೆಯ ಸಾಪ್ತಾಹಿಕ ಅಂಕಣದಲ್ಲಿ ಲೇಖನ ಪ್ರಕಟಿಸುತ್ತಿದ್ದಾರೆ. ಇವರ ಹಲವು ಲೇಖನಗಳು, ಲಘುಬರಹಗಳು ಕನ್ನಡ ದಿನಪತ್ರಿಕೆಗಳಲ್ಲೂ, ಸಂಚಿಕೆಗಳಲ್ಲೂ ಪ್ರಕಟವಾಗಿವೆ. ಇತ್ತೀಚೆಗೆ ವಾಷಿಂಗ್‌ಟನ್ ಪ್ರದೇಶದ ಕನ್ನಡ ಕೂಟ, 'ಕಾವೇರಿ'ಯ ಚಟುವಟಿಕೆಗಳಲ್ಲಿ ಅತ್ಯಂತ ಆಸಕ್ತಿಯಿಂದ ಭಾಗವಹಿಸಿದಲ್ಲದೆ, 'ಭಾವನದಿ' ಎಂಬ ವಾರ್ಷಿಕ ಸಂಚಿಕೆಯ ಸಂಪಾದಕರಾಗಿಯೂ ಸೇವೆ ಸಲ್ಲಿಸಿದ್ದಾರೆ.

ಸಂಪರ್ಕ :
18357, Lost Knife Circle,
Gaithasburg, MD 20886
E-mail : srivatsajoshi@yahoo.com

## ಎಮ್.ಆರ್. ದತ್ತಾತ್ರಿ (೨.೧)

ಶ್ರೀ ದತ್ತಾತ್ರಿಯವರು ಚಿಕ್ಕಮಗಳೂರಿನವರು. ಮೈಸೂರು ವಿಶ್ವವಿದ್ಯಾಲಯದಿಂದ ಕಂಪ್ಯೂಟರ್ ವಿಜ್ಞಾನದಲ್ಲಿ ಪದವಿ ಪಡೆದು, ಪ್ರಸ್ತುತ ಕ್ಯಾಲಿಫೋರ್ನಿಯದ ಫ್ಞಾಸ್ಟರ್ ಸಿಟಿಯಲ್ಲಿ ನೆಲೆಸಿ, ಅಲ್ಲಿಯ Oracle Corporation ನಲ್ಲಿ ಉದ್ಯೋಗದಲ್ಲಿದ್ದಾರೆ. ಇಂಜಿನೀಯರಿಂಗ್‌ನಲ್ಲಿ ಶಿಕ್ಷಣ ಪಡೆದಿದ್ದರೂ, ಕನ್ನಡ ಸಾಹಿತ್ಯದಲ್ಲಿ ಇವರಿಗೆ ತುಂಬ ಆಸಕ್ತಿ. ಇವರ 'ಅಲೆಮಾರಿ ಕನಸುಗಳು' ಎಂಬ ಕವನ ಸಂಕಲನ 'ಶೃಂಗಾರ ಪ್ರಕಾಶನ'ದಿಂದ ಪ್ರಕಟವಾಗಿದೆ. ಉತ್ತರ ಕ್ಯಾಲಿಫೋರ್ನಿಯ ಕನ್ನಡ ಕೂಟದ ಚಟುವಟಿಕೆಗಳಲ್ಲಿ ಅತ್ಯಂತ ಆಸಕ್ತಿಯಿಂದ ಭಾಗವಹಿಸುತ್ತಿದ್ದಾರೆ. ಇದೇ ಕನ್ನಡ ಕೂಟದ ೨೦೦೨ರ ಸಾಲಿನ 'ಸ್ವರ್ಣಸೇತು' ಎಂಬ ವಾರ್ಷಿಕ ಸಂಚಿಕೆಯ ಸಂಪಾದಕತ್ವವನ್ನು ದಕ್ಷತೆಯಿಂದ ನಿರ್ವಹಿಸಿರುತ್ತಾರೆ. ಇಂಟರ್‌ನೆಟ್‌ನಲ್ಲಿ ಪ್ರಕಟವಾಗುವ ದಟ್ಸ್‌ಕನ್ನಡ.ಕಾಂನಲ್ಲಿ ಪ್ರಕಟವಾಗುವ ಜನಪ್ರಿಯ ಕನ್ನಡ ಅಂತರ್ಜಾಲ ಪತ್ರಿಕೆಯಲ್ಲಿ 'ಪೂರ್ವ ಪಶ್ಚಿಮ' ಎಂಬ ಅಂಕಣವನ್ನು ಶ್ರೀ ದತ್ತಾತ್ರಿಯವರು ಬರೆಯುತ್ತಿದ್ದಾರೆ.

ಸಂಪರ್ಕ :
807, Shell Blvd.
Foster city, California 94404
E-mail : dattatri_m_r@yahoo.com

## ಮೈ.ಶ್ರೀ. ನಟರಾಜ (೧.೨)

ಶ್ರೀ ನಟರಾಜರವರು ವೃತ್ತಿಯಿಂದ ಇಂಜಿನಿಯರ್; ಆದರೆ, ಕನ್ನಡ ಸಾಹಿತ್ಯ ಅವರ ಉಪವೃತ್ತಿಯೆಂದರೂ ಸರಿಯೆ! ಅಮೆರಿಕ ಕೇಂದ್ರ ಸರ್ಕಾರ ಅಣುನಿಯಂತ್ರಣ (Atomic Energy) ಸಂಸ್ಥೆಯ Geotechnical Engineer And Rock Mechanic ವಿಭಾಗದಲ್ಲಿ ತಾಂತ್ರಿಕ ನಿಪುಣರಾಗಿ ಅಂತಃರಾಷ್ಟ್ರೀಯ ಖ್ಯಾತಿ ಪಡೆದಿದ್ದಾರೆ. ಇವರು ಕನ್ನಡದಲ್ಲಿ 'ಮೀನಿನ ಹೆಜ್ಜೆ ಮತ್ತು ನೇಣು' ಮತ್ತು 'ಪರದೇಶಿಗಳ ಪಾರ್ಟಿ ಮತ್ತು ಇತರ ಮೂರು ನಾಟಕಗಳು' ಎಂಬ ಎರಡು ನಾಟಕ ಸಂಕಲನಗಳನ್ನೂ, 'ನಾನೂ ಅಮೆರಿಕನ್ ಆಗಿಬಿಟ್ಟೆ' ಮತ್ತು 'ಮಧುಚಂದ್ರ - ಸಿರಿಕೇಂದ್ರ' ಎಂಬ ಎರಡು ಕವನ ಸಂಕಲನಗಳನ್ನೂ ಪ್ರಕಟಿಸಿರುತ್ತಾರೆ. ಇವರ ಇತ್ತೀಚಿನ ಕವನ ಸಂಕಲನ 'ಮಧುಚಂದ್ರ - ಸಿರಿಕೇಂದ್ರ'ಕ್ಕೆ ಗೊರೂರು ಪ್ರತಿಷ್ಠಾನದ ಪ್ರಶಸ್ತಿ ದೊರಕಿದೆ. ದಟ್ಸ್‌ಕನ್ನಡ ಎಂಬ ಅಂತರ್ಜಾಲ ಪತ್ರಿಕೆಯಲ್ಲಿ 'ಜಾಲತರಂಗ' ಎಂಬ ಅಂಕಣದಲ್ಲಿ ಲೇಖನಗಳನ್ನು ಬರೆಯುತ್ತಿದ್ದಾರೆ. 'ಕಾವೇರಿ' ಕನ್ನಡ ಕೂಟದ ಹಿರಿಯ ಸದಸ್ಯರು, ಶ್ರೀ ನಟರಾಜರವರು. ಪ್ರಸ್ತುತ, ಪತ್ನಿ ಗೀತಾ ಮತ್ತು ಮಕ್ಕಳೊಂದಿಗೆ ವಾಷಿಂಗ್‌ಟನ್ ಡಿ.ಸಿ. ಸಮೀಪದ ಗೈತಸ್‌ಬರ್ಗ್‌ನಲ್ಲಿ ವಾಸವಾಗಿದ್ದಾರೆ.

ಸಂಪರ್ಕ :
20017, Doolittle Street,
Montgomery Vilalge, Maryland 20886
E-mail : mysreena@aolcom

## ನಳಿನಿ ಮೈಯ (೨.೨)

ಶ್ರೀಮತಿ ನಳಿನಿ ಮೈಯರು ಶಿಕಾಗೋ ವಲಯದ ಜನಪ್ರಿಯ ಅಮೆರಿಕನ್ನಡಿತಿ. ಅಲ್ಲಿಯ 'ವಿದ್ಯಾರಣ್ಯ' ಕನ್ನಡ ಕೂಟದ ಚಟುವಟಿಕೆಗಳಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದಾರೆ. ವಿದ್ಯಾರಣ್ಯ ಕನ್ನಡ ಕೂಟ ಪ್ರಕಟಿಸುತ್ತಿರುವ 'ಸಂಗಮ'ವೆಂಬ ಸಂಚಿಕೆಯ ಪ್ರಧಾನ ಸಂಪಾದಕರಾಗಿ ದುಡಿದಿದ್ದಾರಲ್ಲದೆ, ಕಾರ್ಯಕಾರಿ ಸಮಿತಿಯ ಸದಸ್ಯರಾಗಿಯೂ ತಮ್ಮ ಸೇವೆ ಸಲ್ಲಿಸಿದ್ದಾರೆ. ಅಲ್ಲದೆ, ೨೦೦೦ ರಲ್ಲಿ ಪ್ರಕಟವಾದ 'ಕಾರಂತ ಚಿಂತನ - ಕಡಲಾಚೆಯ ಕನ್ನಡಿಗರಿಂದ' ಎಂಬ ಗ್ರಂಥದ ಸಹಸಂಪಾದಕಿಯಾಗಿದ್ದರು. ಇವರ ಕಥೆ, ಕವನ ಮತ್ತಿತರ ಲೇಖನಗಳು 'ಅಮೆರಿಕನ್ನಡ', 'ಕನ್ನಡಪ್ರಭ', 'ಉದಯವಾಣಿ', 'ಪ್ರಜಾವಾಣಿ', ಶಿಕಾಗೋ ವಲಯದ 'ಸಂಗಮ', ಮುಂತಾದ ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಇತ್ತೀಚೆಗೆ (೨೦೦೨ರಲ್ಲಿ)

'ಮರೀಚಿಕೆ ಮತ್ತು ಇತರ ಕಥೆಗಳು' ಎಂಬ ಕಥಾ ಸಂಕಲನವನ್ನು ಪ್ರಕಟಿಸಿದ್ದಾರೆ. ಪ್ರಸ್ತುತ, ಶಿಕಾಗೋ ಸಮೀಪದ ಬಡಾವಣೆ, ಡೇರಿಯನ್‌ನಲ್ಲಿ ಪತಿ ಶ್ರೀ ಸುಬ್ರಾಯ ಮೈಯರ ಜೊತೆ ವಾಸವಾಗಿರುತ್ತಾರೆ.

ಸಂಪರ್ಕ :
18W 194, Holly Avenue,
Darien, Illinois 60561
E-mail : nmaiaya@hotmail.com

## ವೈ.ಆರ್. ಮೋಹನ್ (೩.೧)

ಶ್ರೀ ಮೋಹನ್‌ರವರು ಸಮಾಜ ಶಾಸ್ತ್ರದಲ್ಲಿ ಪ್ರಧ್ಯಾಪಕರಾಗಿದ್ದು, ಈಗ ನಿವೃತ್ತರಾಗಿ ಟಸ್ಕಲೂಸ, ಅಲಬಾಮದಲ್ಲಿ ನೆಲೆಸಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ಹೆಚ್ಚಿನ ಆಸಕ್ತಿಯುಳ್ಳವರು. ಅಲಬಾಮ, ಟೆನೆಸ್ಸೀ, ಮಿಸ್ಸಿಸಿಪ್ಪಿ ವಲಯಗಳನ್ನೊಳಗೊಂಡ 'ಸಹ್ಯಾದ್ರಿ ಕನ್ನಡ ಕೂಟ'ವನ್ನು ಸ್ಥಾಪಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಇವರ ಹಲವು ಲೇಖನಗಳೂ, ಕವನಗಳೂ 'ಪ್ರಜಾವಾಣಿ', 'ತರಂಗ', ಮುಂತಾದ ಪತ್ರಿಕೆಗಳಲ್ಲೂ, ವಿಶ್ವ ಸಮ್ಮೇಳನ ಸಂಚಿಕೆಗಳಲ್ಲೂ ಪ್ರಕಟವಾಗಿವೆ. ಇವರ 'ನೆನಪುಗಳು' ಎಂಬ ಗ್ರಂಥಕ್ಕೆ ಕರ್ಣಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ದೊರಕಿದೆ. ಇದಲ್ಲದೆ, ಇವರು 'ಪಾರ್ಕಿನ್ಸನ್ ಖಾಯಿಲೆಯಿಂದ ನಾನೇನು ಕಲಿತೆ?' ಎಂಬ ಅಪೂರ್ವ ಅನುಭವ ಗ್ರಂಥವನ್ನೂ ಪ್ರಕಟಿಸಿದ್ದಾರೆ. ಇತ್ತೀಚೆಗೆ (೨೦೦೩) 'ಅಮೆರಿಕಾಯಣ'ವೆಂಬ ಒಂದು ಬೃಹತ್ ಗ್ರಂಥವನ್ನೂ ರಚಿಸಿ, ಪ್ರಕಟಿಸಿದ್ದಾರೆ. ಖಾಯಿಲೆಗೊಳಗಾಗಿದ್ದರೂ, ಸಾಹಿತ್ಯದಲ್ಲಿ ಇವರ ಅಭಿರುಚಿ ಎಳ್ಳಷ್ಟೂ ಕಡಿಮೆಯಾಗದೆ ಇನ್ನೂ ಕೆಲವು ಗ್ರಂಥಗಳ ರಚನೆಯಲ್ಲಿ ತೊಡಗಿದ್ದಾರೆ. ಮಡದಿ ನಂದಾ ಇವರಿಗೆ ಸದಾ ಪ್ರೋತ್ಸಾಹ ಒದಗಿಸುತ್ತಿದ್ದಾರೆ.

ಸಂಪರ್ಕ :
1826, 37th Street, NE
Tascaloosa, Alabama 35406
E-mail : yrmohan@worldnet.att.net

## ಎಚ್.ವಿ. ರಂಗಾಚಾರ್ (೨.೪)

ಶ್ರೀ ರಂಗಾಚಾರ್ಯರು ಬೆಂಗಳೂರು ಇಂಜಿನಿಯರಿಂಗ್ ಕಾಲೇಜಿನಿಂದ ಬಿ.ಇ. ಡಿಗ್ರಿ ಪಡೆದ ಮೇಲೆ ಅಮೆರಿಕದಲ್ಲಿ ಎಮ್.ಎಸ್., ಮತ್ತು ಪಿಎಚ್.ಡಿ. ಡಿಗ್ರಿಗಳನ್ನು ಗಳಿಸಿದರು. RCA ಕಾರ್ಪೊರೇಶನ್ ಮತ್ತು Bell Laboratories ನಲ್ಲಿ ಹಲವು ವರ್ಷ ಕೆಲಸ ಮಾಡಿ ಈಗ ನಿವೃತ್ತ ಜೀವನ ನಡೆಸುತ್ತಿದ್ದಾರೆ. ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ಇವರ ಆಸಕ್ತಿ ತುಂಬ. 'ನಾಡ ಕೆರೆ' ಎಂಬ ಕವನಸಂಕಲನ, ಗ್ರೀಕ್ ಚರಿತ್ರೆಕಾರ Herodotusರ ಪ್ರಾಚೀನ

ಗ್ರೀಕ್ ಚರಿತ್ರೆಯ ಅನುವಾದ ಗ್ರಂಥ, ಪು.ತಿ.ನ.ರವರ 'ಮಲೆ ದೇಗುಲ'ದ ಅನುವಾದ 'Hill Temple' (ಕೇಂದ್ರ ಸಾಹಿತ್ಯ ಅಕಾಡೆಮಿ), ಇವೇ ಮುಂತಾದುವು ಇವರ ಸಾಹಿತ್ಯಕ ಕೊಡುಗೆ. ಸದ್ಯದಲ್ಲೆ ಇವರ 'ತರಗೆಲೆಯ ಹಾರಾಟ' ಎಂಬ ಪ್ರಬಂಧ ಸಂಕಲನ, ಸಾಹಿತ್ಯ ಭಂಡಾರದ ಮೂಲಕ ಪ್ರಕಟವಾಗಲಿದೆ. (ಇವರ ಪತ್ನಿ ಶ್ರೀಮತಿ ಪದ್ಮಾ ಪ್ರಸಿದ್ಧ ಕವಿ ಪುತಿನರವರ ಮಗಳು.) ಪ್ರಸ್ತುತ ನ್ಯೂಜರ್ಸಿಯ ಮಿಲ್‌ಸ್ಟೋನ್‌ನಲ್ಲಿ ವಾಸವಾಗಿರುತ್ತಾರೆ.

ಸಂಪರ್ಕ :
6, Somer Court,
English Town, New Jersey 07726
E-mail : padmaranga3@aol.com

## ಸಂಧ್ಯಾ ರವೀಂದ್ರನಾಥ್ (೨.೮)

ಉತ್ತರ ಕ್ಯಾಲಿಫೋರ್ನಿಯದಲ್ಲಿ 'ಇಂಟೆಲ್ ಕಾರ್ಪೊರೇಶನ್' ಸಂಸ್ಥೆಯಲ್ಲಿ ಇಂಜಿನಿಯರಾಗಿ ಉದ್ಯೋಗ ಮಾಡುತ್ತಿರುವ ಶ್ರೀಮತಿ ಸಂಧ್ಯಾ ರವೀಂದ್ರನಾಥರು ಕನ್ನಡ ಸಾಹಿತ್ಯದಲ್ಲಿ ಬಹಳ ಅಭಿರುಚಿಯುಳ್ಳವರು. ಅಲ್ಲಿನ ಕನ್ನಡ ಕೂಟದ ಕಾರ್ಯಕಾರಿ ಸಮಿತಿಯಲ್ಲಲ್ಲದೆ ಸ್ಮರಣ ಸಂಚಿಕೆಯಲ್ಲೂ ಸಂಪಾದಕಿಯಾಗಿ ಸೇವೆ ಸಲ್ಲಿಸಿರುತ್ತಾರೆ. ೨೦೦೨ರಲ್ಲಿ ಜರುಗಿದ ವಿಶ್ವಕನ್ನಡ ಸಮ್ಮೇಳನದ ಸಂಪಾದಕ ಮಂಡಳಿಯಲ್ಲೂ ಇವರು ಕಾರ್ಯ ನಿರ್ವಹಿಸಿದ್ದಾರೆ. ಇವರು ಹಲವು ನಾಟಕಗಳನ್ನು ರಚಿಸಿ, ನಿರ್ದೇಶಿಸಿದ್ದಾರೆ. ಜನಪ್ರಿಯ ಚಲನಚಿತ್ರ, 'ಅಮೆರಿಕ, ಅಮೆರಿಕ'ದ ಕಥಾಮಂಡಳಿಯ ಸದಸ್ಯಯಾಗಲ್ಲದೆ, ಚಿತ್ರದಲ್ಲಿ ಪ್ರಮುಖ ಪಾತ್ರವನ್ನೂ ಶ್ರೀಮತಿ ಸಂಧ್ಯಾ ವಹಿಸಿದ್ದರು. ಇತ್ತೀಚೆಗೆ (೨೦೦೩) 'ಮರಳಿ ಬರುವೆ ನಾ ಮತ್ತು ಇತರ ಕಥೆಗಳು' ಎಂಬ ಕಥಾ ಸಂಕಲನವನ್ನು ಪ್ರಕಟಿಸಿದ್ದಾರೆ. ಇವರ ಅನೇಕ ಕಥೆ, ಕವನ, ನಾಟಕ, ಹಾಗೂ ಅಮೆರಿಕನ್ನಡ ಗಾದೆಗಳು ವಿವಿಧ ಪತ್ರಿಕೆಗಳಲ್ಲಿಯೂ, ಕನ್ನಡ ಪ್ರಮುಖ ಅಂತರ್ಜಾಲ ಪತ್ರಿಕೆಗಳಲ್ಲಿಯೂ ಪ್ರಕಟವಾಗಿರುತ್ತದೆ. ಪತಿ ರವೀಂದ್ರನಾಥರ ಸಂಗೀತ ನಿರ್ದೇಶನದಲ್ಲಿ, ಎರಡು C.D. – 'ಸಂಧ್ಯಾ' ಮತ್ತು 'ದಿವ್ಯ' – ಗಳನ್ನೂ ಪ್ರಕಟಿಸಿದ್ದಾರೆ. ಸದ್ಯದಲ್ಲೆ ತೆರೆಗೆ ಬರಲಿರುವ ಎಮ್.ಕೆ. ಇಂದಿರಾ ಅವರ 'ಪೂರ್ವಾಪರ' ಚಿತ್ರಕ್ಕೆ ಇವರು ಗೀತೆಗಳನ್ನು ರಚಿಸಿದ್ದಾರೆ. ಪತಿ ಮತ್ತು ಮಕ್ಕಳು ದಿವ್ಯಾಸ್ವರೂಪ್ ಮತ್ತು ಕೃತಿ ಇವರೊಡನೆ ಸ್ಯಾನ್‌ಫ್ರಾನ್ಸಿಸ್ಕೊ ಸಮೀಪದ ಮಿಲ್ಪಿಟಾಸ್‌ನಲ್ಲಿ ವಾಸವಾಗಿದ್ದಾರೆ.

ಸಂಪರ್ಕ :
874, Strickroth Drive,
Milpitas, California 95035
E-mail : divyakrithi@hotmail.ocm

## ಎಚ್.ವೈ. ರಾಜಗೋಪಾಲ್ (೨.೬ ಮತ್ತು ೪.೩)

ಮೈಸೂರಿನಲ್ಲಿ ಹುಟ್ಟಿ ಬೆಳೆದವರು. ಚಿಕ್ಕಂದಿನಿಂದಲೂ ಸಾಹಿತ್ಯ ಸಂಗೀತಗಳಲ್ಲಿ, ರೇಡಿಯೋ ಮತ್ತು ರಂಗನಾಟಕಗಳಲ್ಲಿ ಆಸಕ್ತಿ, ಪರಿಶ್ರಮ. ಕಳೆದ ೩೫ ವರ್ಷಗಳಿಂದ ಫಿಲಡೆಲ್ಫಿಯ ಬಳಿ ವಾಸಿಸುತ್ತಿರುವ ಇವರು ತಮ್ಮ ಪತ್ನಿ ವಿಮಲ ರಾಜಗೋಪಾಲರೊಂದಿಗೆ ಇಲ್ಲಿನ ಅನೇಕ ಪ್ರಮುಖ ಸಂಸ್ಥೆಗಳೊಂದಿಗೆ ನಿಕಟ ಸಂಪರ್ಕವಿಟ್ಟುಕೊಂಡಿದ್ದು ಅವುಗಳಲ್ಲಿ ಭಾರತೀಯ ಸಂಸ್ಕೃತಿಗೆ ಸಂಬಂಧಿಸಿದಂತೆ ಅನೇಕ ಕಾರ್ಯಕ್ರಮಗಳನ್ನು ನೀಡಿದ್ದಾರೆ. ಈ ಪ್ರದೇಶದ ಹಲವಾರು ಭಾರತೀಯ ಸಂಸ್ಥೆಗಳ ಸ್ಥಾಪಕರು, ಕಾರ್ಯನಿರ್ವಾಹಕರು. ಇವರ ಅನೇಕ ಲೇಖನಗಳು ಪತ್ರಿಕೆಗಳಲ್ಲಿ, ವಿಶೇಷ ಗ್ರಂಥಗಳಲ್ಲಿ, ಇಲ್ಲಿಯೂ ಮತ್ತು ಭಾರತದಲ್ಲೂ ಪ್ರಕಟವಾಗಿವೆ. ಸಾಹಿತ್ಯ ಮತ್ತು ಕಲಾವಿಷಯಗಳಿಗೆ ಮೀಸಲಾದ ಪ್ರಸ್ತಾಪ ಎಂಬ ವಿಚಾರ ವೇದಿಕೆ ನಡೆಸುತ್ತಿದ್ದಾರೆ. ಮೈಸೂರಿನ NIE (B.E.), ಬೆಂಗಳೂರಿನ IISc (M.E.), ಮತ್ತು ಅಮೆರಿಕದ Pennsylvania State University (Ph.D.) ಗಳಲ್ಲಿ ವಿದ್ಯಾಭ್ಯಾಸ. ವೃತ್ತಿಯಿಂದ ಇಂಜಿನಿಯರ್.

ಸಂಪರ್ಕ :
604, Autumn Lane,
Media, Pensylvania 19063
E-mail è hyr1195@aol.com

## ವಿಮಲಾ ರಾಜಗೋಪಾಲ್ (೩.೪)

ಕನ್ನಡದ ಪ್ರಸಿದ್ಧ ಸಾಹಿತಿ ಶ್ರೀ ಎಲ್. ಗುಂಡಪ್ಪನವರ ಮಗಳು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷ್ ಸಾಹಿತ್ಯದಲ್ಲಿ B.A. (Hons) ಪದವಿ ಗಳಿಸಿದರು. ಗುರುವರೇಣ್ಯರಾದ ಜಿ.ಪಿ. ರಾಜರತ್ನಂ, ಎ.ಎನ್. ಮೂರ್ತಿರಾವ್, ಕೆ. ಅನಂತರಾಮಯ್ಯನವರ ಶಿಷ್ಯೆ. ಮುಂದೆ ಹಲವಾರು ವರ್ಷ ಆಕಾಶವಾಣಿಯಲ್ಲಿ ಕೆಲಸ. ಕನ್ನಡ ಜಾನಪದ ಸಂಗೀತದಲ್ಲಿ ಇವರೂ, ಇವರ ಸಹೋದರಿಯರಾದ ಡಾ. ಎಲ್.ಜಿ. ಸುಮಿತ್ರ ಮತ್ತು ಶ್ರೀಮತಿ ಕಮಲ ಎಂ.ಎಸ್. ಬಾಲುರವರೂ ತಮ್ಮ ಶಾಲಾಕಾಲೇಜು ದಿನಗಳಿಂದಲೂ ಪ್ರಸಿದ್ಧಿ ಪಡೆದವರು. ಪುತಿನ ಅವರ ಗೋಕುಲ ನಿರ್ಗಮನವನ್ನು ಸ್ವತಃ ಅವರಿಂದಲೇ ಕಲಿತು ಜನಪ್ರಿಯಗೊಳಿಸಿದರು. ರೇಡಿಯೋ ಮತ್ತು ಇತರ ವೇದಿಕೆಗಳ ಮೇಲೆ ಅಸಂಖ್ಯಾತ ಕಾರ್ಯಕ್ರಮಗಳನ್ನು ಕೊಟ್ಟಿದ್ದಾರೆ. ಕಳೆದ ೩೫ ವರ್ಷಗಳಿಂದ ಫಿಲಡೆಲ್ಫಿಯ ಬಳಿ ವಾಸಿಸುತ್ತಿರುವ ಇವರು ಆ ಸುತ್ತಮುತ್ತಲಿನ ಅನೇಕ ಗಣ್ಯ ಸಂಸ್ಥೆಗಳಲ್ಲಿ ಭಾರತೀಯ ಸಂಸ್ಕೃತಿ ಮತ್ತು ಕನ್ನಡ ಜಾನಪದ ಸಾಹಿತ್ಯದ ಬಗ್ಗೆ ಕಾರ್ಯಕ್ರಮಗಳನ್ನು ನೀಡಿದ್ದಾರೆ. Elwyn Inc. ಎಂಬಲ್ಲಿ Music and Recreation Therapist ಆಗಿ ಕೆಲಸಮಾಡುತ್ತಿರುವ ಇವರು, University of Pennsylvaniaದ South Asia

Studies Department ನಲ್ಲಿ ಕಳೆದ ಹಲವಾರು ವರ್ಷಗಳಿಂದ ಕನ್ನಡ ಕಲಿಸುತ್ತಿದ್ದಾರೆ. Peace Corps ನಲ್ಲಿಯೂ ಕನ್ನಡ ಶಿಕ್ಷಕಿಯಾಗಿ ಕೆಲಸ ಮಾಡಿದ್ದಾರೆ. ಅಂತರ್ಜಾಲದ ಮೂಲಕ ಕನ್ನಡ ಕಲಿಸುವ ಎರಡು ಯೋಜನೆಗಳನ್ನು ಕೈಗೊಂಡಿದ್ದಾರೆ. ಹಲವಾರು ಕತೆ, ಲೇಖನಗಳನ್ನೂ, ತುಂಟರ ತೇರು ಎಂಬ ಮಕ್ಕಳ ಪುಸ್ತಕವನ್ನೂ, ಕನ್ನಡ ಜಾನಪದ ಸಂಗೀತದ ಧ್ವನಿಮುದ್ರಿಕೆ (CD) ಯನ್ನೂ ಹೊರತಂದಿದ್ದಾರೆ.

ಸಂಪರ್ಕ :
604, Autumn Lane
Media, Pensylvania 19063
E-mail : hyr1195@aol.com

## ಎನ್. ಲಕ್ಷ್ಮೀಪತಿ (೪.೧)

ಅಮೆರಿಕದ ಮಧ್ಯವಲಯ ವಿಶ್ವವಿದ್ಯಾಲಯದಲ್ಲಿ ಬಯೋಕೆಮಿಸ್ಟ್ರಿಯಲ್ಲಿ ಹಲವು ವರ್ಷ ವಿಜ್ಞಾನ ಸಂಶೋಧಕರಾಗಿ ಕೆಲಸ ಮಾಡಿ, ಶ್ರೀ ಲಕ್ಷ್ಮೀಪತಿಯವರು ಈಗ ನಿವೃತ್ತರಾಗಿದ್ದಾರೆ. ಪ್ರಸ್ತುತ ನ್ಯೂಜರ್ಸಿಯಲ್ಲಿ ಪಿಸ್ಕ್ಯಾಟವೇ (ಪಿಸ್ಕಟಾವೇ ಎಂದೂ ಉಚ್ಚರಿಸುತ್ತಾರೆ) ನಲ್ಲಿ ವಾಸವಾಗಿರುತ್ತಾರೆ. ಕನ್ನಡ ಸಂಸ್ಕೃತಿ ಮತ್ತು ಭಾಷೆಗಳಲ್ಲಿ ಅತ್ಯಂತ ಆಸಕ್ತಿಯುಳ್ಳವರಾಗಿದ್ದಾರೆ. ಇವರು ಹಲವು ಲೇಖನಗಳನ್ನು ವಿವಿಧ ಪತ್ರಿಕೆಗಳಲ್ಲಿಯೂ, ಅಂತರ್ಜಾಲ ಪತ್ರಿಕೆಗಳಲ್ಲೂ ಪ್ರಕಟಿಸಿದ್ದಾರೆ.

ಸಂಪರ್ಕ :
31, Ballas Lane,
Piscataway, New Jersey 08854

## ಕೆ. ತ್ರಿವೇಣಿ ಶ್ರೀನಿವಾಸರಾವ್ (೨.೩)

ಶ್ರೀಮತಿ ತ್ರಿವೇಣಿಯವರು ಹುಟ್ಟಿದ್ದು ಚಿಕ್ಕಮಗಳೂರಿನ ಕಡೂರಿನಲ್ಲಿ; ವಿದ್ಯಾಭ್ಯಾಸ ಬೀರೂರಿನಲ್ಲಿ. ಬಿ.ಎ. ಡಿಗ್ರಿ ಪಡೆದ ಮೇಲೆ, ಕೆಲ ಸಮಯ ಸಂಸ್ಕೃತ ಪಾಠ ಹೇಳಿಕೊಡುತ್ತಿದ್ದರು. ಅಮೆರಿಕಕ್ಕೆ ೨೦೦೦ ದಲ್ಲಿ ವಲಸೆ ಬಂದರು. ಸಾಹಿತ್ಯದಲ್ಲಿ ತುಂಬ ಆಸಕ್ತರಾದ ಇವರು ಭಾರತದಲ್ಲಿ 'ಲಂಕೇಶ್ ಪತ್ರಿಕೆ'ಯಲ್ಲಿ ಹಲವು ಸಣ್ಣ ಸಣ್ಣ ಕವನಗಳನ್ನು ಪ್ರಕಟಿಸಿದ್ದಾರೆ. ಅಲ್ಲದೆ, 'ಮಯೂರ', 'ತುಷಾರ' ಪತ್ರಿಕೆಗಳಲ್ಲೂ ಇವರ ಲೇಖನಗಳು ಪ್ರಕಟವಾಗಿವೆ. ಭದ್ರಾವತಿ ಆಕಾಶವಾಣಿಯಲ್ಲಿ ಹಲವು ಕಥೆ, ಕವನಗಳು ಪ್ರಸಾರವಾಗಿರುವುದಲ್ಲದೆ, ಬೆಂಗಳೂರು ದೂರದರ್ಶನದಲ್ಲಿ ಇವರ 'ದಯಾ ಮರಣ'ವೆಂಬ ಕಥೆಯು ಕಿರು ಚಿತ್ರವಾಗಿ ಪ್ರಸಾರವಾಗಿರುತ್ತದೆ. ಈಚೆಗೆ ಇವರ ಕವನ ಮತ್ತು ಲೇಖನಗಳು ದಟ್ಸ್‌ಕನ್ನಡ ಅಂತರ್ಜಾಲ ಪತ್ರಿಕೆಯಲ್ಲೂ ಪ್ರಕಟವಾಗುತ್ತಿವೆ. ಪ್ರಸ್ತುತ,

University of Illinoisನಲ್ಲಿ ಕಂಪ್ಯೂಟರ್ ತಜ್ಞರಾಗಿರುವ ಪತಿ ಶ್ರೀನಿವಾಸರಾವ್, ಮಕ್ಕಳು ಸುರಭಿ ಮತ್ತು ಸುವ್ರತರೊಡನೆ ಶಿಕಾಗೋ ಸಮೀಪದ ಬಡಾವಣೆ ಹ್ಯಾನೋವರ್ ಪಾರ್ಕ್‌ನಲ್ಲಿ ವಾಸವಾಗಿರುತ್ತಾರೆ.

ಸಂಪರ್ಕ :
1762, St. Ann Drive,
Hannover Park, Illinois 60133
E-mail : venivas@hotmail.com

## ಮಾಯಾ ಹರಪನಹಳ್ಳಿ (೨.೫)

ಶ್ರೀಮತಿ ಮಾಯಾ ಹರಪನಹಳ್ಳಿ ಮೂಲತಃ ಗದಗಿನವರು. ೨೦೦೨ರಲ್ಲಿ ಅಮೆರಿಕಕ್ಕೆ ವಲಸೆ ಬಂದವರು ಮೇರಿಲ್ಯಾಂಡಿನ ಸಿಲ್ವರ್ ಸ್ಪ್ರಿಂಗ್‌ನಲ್ಲಿ ಪ್ರಸ್ತುತ ತಮ್ಮ ಪತಿ ಶ್ರೀ ರವಿ ಹರಪನಹಳ್ಳಿಯವರೊಡನೆ ವಾಸವಾಗಿದ್ದಾರೆ, ಮೊದಲಿನಿಂದಲೂ ಕನ್ನಡ ಸಾಹಿತ್ಯದಲ್ಲಿ ಬಹಳ ಅಭಿಲಾಶೆಯುಳ್ಳವರು. ಓದು-ಬರೆಹ ಮಾಯಾರವರ ಹವ್ಯಾಸಗಳಲ್ಲೊಂದಾಗಿದೆ. ಅಮೆರಿಕದಲ್ಲಿಯೂ ಅದನ್ನು ಮುಂದುವರಿಸಿಕೊಂಡು ಬರುತ್ತಿದ್ದಾರೆ. ಇವರ ಹಲವು ಕವನಗಳು ಅಂತರ್ಜಾಲ ಪತ್ರಿಕೆಗಳಲ್ಲೂ, ಕನ್ನಡ ಕೂಟದ ಸಂಚಿಕೆಗಳಲ್ಲೂ ಪ್ರಕಟವಾಗಿವೆ.

ಸಂಪರ್ಕ :
2106, Bluknob Terrace,
Silver Springs, MD 20906
E-mail : ravih@erols.com

## ಪ್ರಕಾಶ್ ಹೇಮಾವತಿ (೧.೩)

ಬೆಂಗಳೂರಿನ ವಿಶ್ವೇಶ್ವರಯ್ಯ ಇಂಜನೀಯರಿಂಗ್ ಕಾಲೇಜಿನಲ್ಲಿ ಇಂಜಿನಿಯರಿಂಗ್ ಶಿಕ್ಷಣ ಪಡೆದ ಶ್ರೀ ಪ್ರಕಾಶ್ ಹೇಮಾವತಿಯವರು ಈಗ ಶಿಕಾಗೋ ಸಮೀಪದ ಬಡಾವಣೆ, ನೇಪರ್‌ವಿಲ್‌ನ ನಿವಾಸಿಗಳಾಗಿದ್ದಾರೆ. ಆರ್ಕಿಟಕ್ಚರ್ ಇವರು ಅವಲಂಬಿಸಿದ ವೃತ್ತಿ. ಶಿಕಾಗೋ ಪಬ್ಲಿಕ್ ಸ್ಕೂಲ್ ಮತ್ತು ಶಿಕಾಗೋ ವಲಯದ ರಾಮ ದೇವಾಲಯಗಳಿಗೆ ವಾಸ್ತುಶಿಲ್ಪ ವಿನ್ಯಾಸವನ್ನು ಒದಗಿಸಿದ್ದಾರೆ. ಚಿಕ್ಕಂದಿನಿಂದಲೂ ಕನ್ನಡ ಸಾಹಿತ್ಯ, ಕನ್ನಡ ಚರಿತ್ರೆ ಹಾಗೂ ಕನ್ನಡ ರಾಜಮನೆತನಗಳ ಬಗ್ಗೆ ಆಸಕ್ತಿ ವಹಿಸಿದ್ದ ಪ್ರಕಾಶ್‌ರವರು, ಕಳೆದ ಹಲವು ವರ್ಷಗಳಿಂದ ಕಥೆ, ಕವನ, ಹಾಗೂ ಕರ್ಣಾಟಕ ಚರಿತ್ರೆಯ ಬಗ್ಗೆ ಹಲವು ಲೇಖನಗಳನ್ನು ಬರೆದಿದ್ದಾರೆ. ಶಿಕಾಗೋ ವಲಯದ 'ವಿದ್ಯಾರಣ್ಯ' ಕನ್ನಡ ಕೂಟದ 'ಸಂಗಮ' ಪತ್ರಿಕೆಯಲ್ಲಿ ಶಾಲಿವಾಹನ ಮನೆತನದಿಂದ ಮೈಸೂರು ಅರಸು ಮನೆತನದ ವರೆಗೂ ಕನ್ನಡ ರಾಜಮನೆತನಗಳ ಚರಿತ್ರೆಯನ್ನು ಪ್ರಕಟಿಸಿದ್ದಾರೆ. ಎಲ್ಲ ಕನ್ನಡಿಗರಿಗೂ ತಮ್ಮ ಚರಿತ್ರೆಯ

ಶ್ರೀಮಂತಿಕೆ, ವೈಭವಗಳ ಪರಿಚಯವಾಗಲಿ ಎಂಬುದೇ ಪ್ರಕಾಶ್ ಹೇಮಾವತಿಯವರ ಸವಿನಯ ಆಶಯ.

ಸಂಪರ್ಕ :
525, Peacock Court,
Naperville, Illinois 60565
E-mail : phemavathi@hotmail.com

## ವಿಶ್ವನಾಥ್ ಹುಲಿಕಲ್ (೩.೫)

ಶ್ರೀ ವಿಶ್ವನಾಥ್ ಹುಲಿಕಲ್‌ರವರು ಬೆಂಗಳೂರಿನ I.I.Sc.ನಿಂದ B.E. ಮತ್ತು ಖರಗ್‌ಪುರದ I.I.T.ಯಿಂದ M. Tech. ಡಿಗ್ರಿಗಳನ್ನು ಪಡೆದವರು. ವೃತ್ತಿಯಿಂದ ಸಾಫ್ಟ್‌ವೇರ್ ಇಂಜಿನಿಯರ್ ಆದರೂ, ಕನ್ನಡ ಸಾಹಿತ್ಯದಲ್ಲಿ ತುಂಬ ಆಸಕ್ತರಾದವರು. ಇವರ ಹಲವು ಲೇಖನಗಳು 'ಕಸ್ತೂರಿ', 'ಅಮೆರಿಕನ್ನಡ', ವಿಶ್ವ ಕನ್ನಡ ಸಮ್ಮೇಳನಗಳ ಸಂಚಿಕೆಗಳು ಮತ್ತು ಉತ್ತರ ಕ್ಯಾಲಿಫೋರ್ನಿಯ ಕನ್ನಡ ಕೂಟದ ವಾರ್ಷಿಕ ಸಂಚಿಕೆಗಳಲ್ಲಿ ಪ್ರಕಟವಾಗಿದೆ. ಪತ್ನಿ ಅನ್ನಪೂರ್ಣರವರ ಜೊತೆ 'ಸೌರಭ' ಎಂಬ ಸಣ್ಣ ಕಥೆಗಳ ಸಂಕಲನ ಮತ್ತು 'ಮಂಥನ' ಎಂಬ ಅನುವಾದಿತ ಲೇಖನಗಳ ಸಂಕಲನವನ್ನು ಪ್ರಕಟಿಸಿದ್ದಾರೆ. ಇತ್ತೀಚೆಗೆ (೨೦೦೩) 'ಹೃದಯ' ಎಂಬ ಇವರ ಸಣ್ಣ ಕಥೆಗಳ ಸಂಕಲನವನ್ನು ಮನೋಹರ ಗ್ರಂಥಮಾಲೆ (ಧಾರವಾಡ), ಪ್ರಕಟಿಸಿದ್ದಾರೆ. ಇವರು ಉತ್ತರ ಕ್ಯಾಲಿಫೋರ್ನಿಯ ಕನ್ನಡ ಕೂಟದ ಚಟುವಟಿಕೆಗಳಲ್ಲಿ ಅತ್ಯಂತ ಆಸಕ್ತಿಯಿಂದ ಭಾಗವಹಿಸಿ ಸೇವೆ ಸಲ್ಲಿಸುತ್ತಿದ್ದಾರೆ. ಅಲ್ಲಿಯ 'ವಿಷು' ವಾರ್ಷಿಕ ಸಾಹಿತ್ಯ ಸಂಚಿಕೆಯ ಸಂಪಾದಕರಾಗಿಯೂ ಸೇವೆ ಸಲ್ಲಿಸಿದ್ದಾರೆ. ಇತ್ತೀಚೆಗೆ ಜಯಂತ ಕಾಯ್ಕಿಣಿಯವರ 'ಅಮೃತಬಳ್ಳಿ ಕಷಾಯ' ಎಂಬ ಕಥಾಸಂಕಲನವನ್ನು ತಮ್ಮ ಸಂಪಾದಕತ್ವದಲ್ಲಿ ಭಾಷಾಂತರ ಮಾಡುತ್ತಿದ್ದಾರೆ. ಉತ್ತರ ಕ್ಯಾಲಿಫೋರ್ನಿಯದ 'ಸಾಹಿತ್ಯ ಗೋಷ್ಠಿ'ಯ ಸಂಚಾಲಕರು ಶ್ರೀ ಹುಲಿಕಲ್ ಅವರು. 'America and Americans' ಎಂಬ ಇಂಗ್ಲಿಷ್ ಪ್ರಬಂಧಗಳನ್ನು ಕನ್ನಡಕ್ಕೆ ಇವರು ಇತ್ತೀಚೆಗೆ ಅನುವಾದ ಮಾಡುತ್ತಿದ್ದಾರೆ.

ಸಂಪರ್ಕ :
1177, Gardenside Lane,
Cupertino, California 95014
E-mail : vhulikal@yahoo.com

●

# ಕುವೆಂಪು ಸಾಹಿತ್ಯ ಸಮೀಕ್ಷೆ

ಅಮೆರಿಕದ 'ಕನ್ನಡ ಸಾಹಿತ್ಯರಂಗ'ದಿಂದ ಅರ್ಪಿತ

ತಮ್ಮ ಅದೃಷ್ಟವನ್ನರಸಿಕೊಂಡು, ಯಾವತ್ತಿನಿಂದಲೋ ಅಮೆರಿಕಾಕ್ಕೆ ಬಂದು ನೆಲಸಿರುವ ಕನ್ನಡಿಗರು, ಬೇರೊಂದು ಸಾಂಸ್ಕೃತಿಕ ಸಂದರ್ಭದಲ್ಲಿ ಬದುಕಬೇಕಾಗಿ ಬಂದಿರುವುದರಿಂದ, ಲೌಕಿಕವಾಗಿ ಅತ್ಯಂತ ಆಕರ್ಷಕವೂ ಪ್ರಬಲವೂ ಆದ ಜೀವನಕ್ರಮದೊಂದಿಗೆ ಮುಖಾಮುಖಿಯಾಗುವ ಅನಿವಾರ್ಯತೆ ಅವರಿಗೆ ಒದಗಿದೆ; ಅಮೆರಿಕದಲ್ಲಿದ್ದೂ ತಮ್ಮ ಕನ್ನಡ ವ್ಯಕ್ತಿತ್ವವನ್ನು ಉಳಿಸಿಕೊಳ್ಳುವ ಸಂರಕ್ಷಕ ಕವಚಗಳನ್ನು ಕಂಡುಕೊಳ್ಳುವುದು ಅವರಿಗೆ ಅಗತ್ಯವಾಗಿದೆ. ಆದರೆ ಈ ಕಾರ್ಯದಲ್ಲಿ ಒಂದು ಬಗೆಯ ಧೀರೋದಾತ್ತತೆ ಮತ್ತು ಸಂತೋಷ ಇದೆಯೆಂಬುದನ್ನು ಬಹುಮಂದಿ ಕಂಡುಕೊಂಡಿದ್ದಾರೆ. ಅದರ ಪರಿಣಾಮವಾಗಿ ಕಡಲಾಚೆಯ ಈ ಕನ್ನಡಿಗರು ತಮ್ಮ ಕನ್ನಡ-ಭಾರತದ ಪ್ರಾದೇಶಿಕ ಸಾಂಸ್ಕೃತಿಕ ಸ್ಮರಣೆಗಳನ್ನು ಪುನರಭಿಯಿಸುವ ಹಾಡು, ಕುಣಿತ, ಕತೆ, ಕವಿತೆ ನಾಟಕ, ಹಬ್ಬ ಇತ್ಯಾದಿ ಬಹುಮುಖೀ ಚಟುವಟಿಕೆಗಳ ಮೂಲಕ ತಮ್ಮೊಳಗಿನ ಕನ್ನಡತನವನ್ನು ತುಕ್ಕು ಹಿಡಿಯದಂತೆ ಕಾಪಾಡಿಕೊಂಡಿದ್ದಾರೆ. ಅದರ ಒಂದು ಸಂಕೇತ ಈ 'ಕುವೆಂಪು ಸಾಹಿತ್ಯ ಸಮೀಕ್ಷೆ.

ಈ ಗ್ರಂಥದ ಲೇಖಕರು ತಮ್ಮ ನೆನಪುಗಳಲ್ಲಿ ಮನೆ ಮಾಡಿಕೊಂಡಿರಬಹುದಾದ ಕುವೆಂಪು ಅವರ ಸಾಹಿತ್ಯಕ ವ್ಯಕ್ತಿತ್ವವನ್ನು ಕುರಿತು ತಕ್ಕ ಪ್ರೀತಿ ಗೌರವ ಶ್ರದ್ಧೆಗಳಿಂದಲೇ ತಮ್ಮ ಕ್ರಿಯೆ-ಪ್ರತಿಕ್ರಿಯೆಗಳನ್ನು ದಾಖಲಿಸಿದ್ದಾರೆ. ಒಟ್ಟಾರೆಯಾಗಿ ಕುವೆಂಪು ಸಾಹಿತ್ಯ ನಿರ್ಮಿತಿಯನ್ನು ಕುರಿತ ಒಂದು ಒಳ್ಳೆಯ 'ಸಮೀಕ್ಷೆ' ಇದು.

–ಜಿ. ಎಸ್. ಶಿವರುದ್ರಪ್ಪ